ಸುದರ್ಶನ ಕಾದಂಬರಿ ಸುದರ್ಶನ ಪ್ರಕಟಣೆ

# ಹಕಲ್ ಬೆರಿ ಫಿನ್ನನ ಸಾಹಸಗಳು

ಅನು - ಕೆ. ಯಸ್. ನರಸಿಂಹಸ್ವಾಮಿ

ಮಾರ್ಕ್‌ಟ್ವೈನ್‌ರವರ ಹೆಸರಾಂತ
ವಿಶ್ವವಿಖ್ಯಾತ ಕಾದಂಬರಿ

ಸುದರ್ಶನ ಪ್ರಕಾಶನ
ತಾರಾನಿವಾಸ : : ತಿಪಟೂರು

ಸುದರ್ಶನ ಕಾದಂಬರಿ  ಸುದರ್ಶನ ಪ್ರಕಟಣೆ

# ಹಕಲ್ ಬೆರಿ ಫಿನ್ನನ ಸಾಹಸಗಳು

ಅನು-ಕೆ. ಯಸ್. ನರಸಿಂಹಸ್ವಾಮಿ

ಮಾರ್ಕ್‌ಟ್ವೇನ್‌ರವರ ಹೆಸರಾಂತ
ವಿಶ್ವವಿಖ್ಯಾತ ಕಾದಂಬರಿ

ಸುದರ್ಶನ ಪ್ರಕಾಶನ

ತಾರಾನಿವಾಸ : : ತಿಪಟೂರು

ಸುದರ್ಶನ ಪ್ರಕಟನೆ ೧೭೦
ಸುದರ್ಶನ ಕಾದಂಬರಿ ೧೧೧

ಮೊದಲ ಮುದ್ರಣ ೧೯೬೯


ಹೊದಿಕೆ ಚಿತ್ರ ವಿನ್ಯಾಸ:
ಸುದರ್ಶನ ಕಲಾಶಾಖೆ

ಬೆಲೆ : ೮-೦೦
ಎಂಟು ರೂಪಾಯಿ

ಮುದ್ರಕರು :
ಶ್ರೀ ಸತ್ಯನಾರಾಯಣ ಪ್ರೆಸ್
ಕಾಟನ್‌ಪೇಟೆ, ಬೆಂಗಳೂರು-೨ ಎ.

ಪ್ರಕಾಶಕರು :
ತಾ. ರಾ. ನಾಗರಾಜ, ಶಕುಂತಲ ನಾಗರಾಜ
ತಾರಾನಿವಾಸ—ತಿಪಟೂರು.

# ಇವರು ಯಾರು ?

ಸಾಮ್ಯುಯೆಲ್ ಎಲ್. ಕ್ಲೆಮೆನ್—ಮಾರ್ಕ್‌ಟ್ವೈನ್ ಹುಟ್ಟಿದ್ದು 1835, ನವೆಂಬರ್ 30ರಲ್ಲಿ. ಮಿಸ್ಸೌರಿಯ ಮನ್ರೋ ಕೌಂಟಿಯಲ್ಲಿ, ಆಗಿನ್ನೂ ಪ್ರಸಿದ್ಧವಾಗದ ಫ್ಲಾರಿಡಾ ಗ್ರಾಮದಲ್ಲಿ, ತಂದೆ ಜಾನ್ ಮಾರ್ಷಲಾ ಕ್ಲೆಮೆನ್ಸ್. ತಾಯಿ ಜೇನ್ ಲ್ಯಾಂಪಟನ್. ವಿದ್ಯಾರ್ಥಿಯಾಗಿ ಆಂಗ್ಲಭಾಷಾ ಪ್ರಭುತ್ವ ಸಾಧಿಸಿ ಮನಬಂದ ಯಾವುದೋ ವೃತ್ತಿ ಹಿಡಿದು ನಡೆದರೂ, ಸದಾ ಕಣ್ತೆರೆದು ಕಿವಿಗೊಟ್ಟು ತನ್ನ ಜಗತ್ತನ್ನು ಕಾಣುತ್ತಿದ್ದವನಾದುದರಿಂದ ಪತ್ರಿಕಾ ಜಗತ್ತು ಆಕರ್ಷಿಸಿತು. ಅಲ್ಲಿಂದ ಮಾರ್ಕ್‌ಟ್ವೈನ್ ಬರೆದುದು ಸಾಗರದಷ್ಟು. ಸಾಹಿತಿಯಾಗಿ ಎಷ್ಟು ಬರೆದನೋ ಎಷ್ಟು ಬಿಟ್ಟನೋ ಅದಕ್ಕೆ ಅಂತ್ಯವಿಲ್ಲ.

ಮಾರ್ಕ್‌ಟ್ವೈನ್ 1910ರಲ್ಲಿ ಕಾಲಯಾಗುವ ವೇಳೆಗೆ ಆತನ ಕಾಲದಲ್ಲಿ ಅತ್ಯಂತ ಪ್ರಮುಖ ಮತ್ತು ಮಾದರಿಯ ಸಾಹಿತಿಯೆಂಬ ಸ್ಥಾನ ಆಕ್ರಮಿಸಿಯಾಗಿತ್ತು. ಮೆಚ್ಚುಗರು ಅಪಾರ. ಓದುಗರು ಅಸಂಖ್ಯಾತ, ಇಂದು ಅಮೇರಿಕದಿಂದ ಉನ್ನತ ಮತ್ತು ಪ್ರಾತಿನಿಧಿಕ ಸಾಹಿತಿಯೆಂದು ಈ ಹೆಸರು ಪ್ರಖ್ಯಾತವಾಗಿದೆ. ಈತನೆಂದರೆ ರಾಷ್ಟ್ರೀಯ ಹೆಗ್ಗುರುತಾಗಿದೆ.

ಮಾರ್ಕ್‌ಟ್ವೈನ್ ವೈಯುಕ್ತಿಕವಾಗಿ ಕೀರ್ತಿಶಾಲಿ, ಸಣ್ಣಕತೆಗಾರನಾಗಿ ಉನ್ನತ ಶಿಖರವೇರಿದನು, ಕಾದಂಬರಿಗಾರನಾಗಿ ತನ್ನ ಕಾದಂಬರಿಗಳ ವಸ್ತು, ಚಿತ್ರಣ ಮತ್ತು ತನ್ನದೇ ಆದ ವಿಚಿತ್ರ ಶೈಲಿಯಿಂದ ಜನತೆಯನ್ನು ವಿಸ್ಮಯಗೊಳಿಸಿದನು. ರಚಿಸಿದ ಪ್ರವಾಸ ಸಾಹಿತ್ಯವೆಂದರೋ ಮಿಸಿಸಿಪ್ಪಿ ಹರಿದಂತೆ.

ಪಶ್ಚಿಮದ ಸಾಹಿತಿಗಳ ಪ್ರಥಮ ಶ್ರೇಣಿಯಲ್ಲಿ ನಿಂತ ಯಾರ ಕೃತಿಗಳನ್ನೇ ತೆಗೆದುಕೊಳ್ಳೋಣ. ಜಾಯ್ಸ್, ಮ್ಯಾನ್, ಜೇಮ್ಸ್, ಹೆಮಿಂಗ್‌ವೇ, ಕಾಫ್ಕಾ, ಲಾರೆನ್ಸ್– ಅವರಾರೇ ಆಗಲಿ, ಅವರ ಕೃತಿಗಳಲ್ಲಿ ಇದು ಉತ್ತಮ, ಇದು ಸುಮಾರಾಗಿದೆ ಎನ್ನಬಹುದು. ಇದು ಕಲ್ಪನೆಯ ಮೂಸೆಯಲ್ಲಿ ರೂಪುಗೊಂಡುದು, ಇದು ಸತ್ಯವಿಚಾರ ಎಂಬುದನ್ನು ತಕ್ಕಮಟ್ಟಿಗೆ ಹೇಳಬಹುದು. ಆದರೆ ಮಾರ್ಕ್‌ಟ್ವೈನನ ಕೃತಿಗಳ ವಿಚಾರ ಹಾಗಲ್ಲ, ಈ ಜೀನಿಯಸ್ ಸಾಹಿತಿ ಯಾವ ಸಾಹಿತ್ಯ ಸಂಪ್ರದಾಯಕ್ಕೂ ಮಣಿಯಲಿಲ್ಲ

ರೂಪದ ಬಾಲ ಹಿಡಿದು ದಿಕ್ಕೆಡಲಿಲ್ಲ. ಸಾಹಿತ್ಯದಲ್ಲಿ ಕಲೆಯನ್ನು ತಂದರೆ ಸಹಜತೆಗೆ ಅನ್ಯರೂಪ ಬಂದುಬಿಡುತ್ತದೆ, ಸತ್ಯದ ನಿಯಂತ್ರಣ ತಲೆಹಾಕುತ್ತದೆ. ಆದುದರಿಂದಲೇ ಅಂತಹ ರೂಪಬದ್ಧ ರಚನೆ ಮಾಡುವ ಮನಸ್ಸು ಈತನಿಗೆ ಬರಲಿಲ್ಲ ಕತೆಯೆಂದರೇ ನೆಂದು ಗೊತ್ತಿತ್ತು, ಅದು ಯಾಕೆ ಎಂದು ತಿಳಿದಿತು. ಅದು ಅರ್ಥವಾಗುವಂತೆ ಹೇಳುವ ಕೆಲಸವನ್ನಷ್ಟೇ ಈತನು ಮಾಡಿದುದು ಬಣ್ಣ ಕಟ್ಟಲಿಲ್ಲ, ಆಕಾರ ಕತ್ತರಿಸಲಿಲ್ಲ, ತನ್ನ ಓದುಗರಿಗೆ ಅವರ ಪ್ರಕೃತಿಗೆ ತಕ್ಕಂತೆ ಬರೆಯುವುದೇ ತನ್ನ ಕೆಲಸವೆಂದು ಬರೆದನು. ಬಹುಶಃ ಇದೇ ಜಗತ್ಪ್ರಖ್ಯಾತಿಯನ್ನು ತಂದಿತೇನೋ !

ಮಾರ್ಕ್‌ಟ್ವೈನ್ ತನ್ನ ನಿಜಜೀವನದಲ್ಲಿ ಮನಸ್ಸಿನ ಮೇಲೆ ಮುದ್ರೆಯೊತ್ತಿದ್ದ ಪಾತ್ರಗಳು ಮತ್ತು ಪ್ರಸಂಗಗಳನ್ನು ಇಟ್ಟುಕೊಂಡು ಅನೇಕ ವರ್ಷಗಳ ಅವಧಿಯಲ್ಲಿ ಮನಸ್ಸು ಬಂದಾಗ ಬರೆದ ಕಾದಂಬರಿ ಹಕಲ್‌ಬೆರಿಫಿನ್, ಮೂಡ್ ಬಂದಾಗ ಬರೆದದು ದಿನಕ್ಕೆ ಮೂರು ನಾಲ್ಕು ಸಾವಿರ ಪದಗಳು. ಡಿಸೆಂಬರ್ 1884ರಲ್ಲಿ ಇಂಗ್ಲೆಂಡ್‌ನಲ್ಲಿಯೂ, ಫಿಬ್ರವರಿ 1885ರಲ್ಲಿ ಸ್ವದೇಶದಲ್ಲಿಯೂ ಪ್ರಕಟವಾಯಿತು. ಅತ್ಯುತ್ತಮ ಕೃತಿಯಾಗಿ ಹುಟ್ಟಿತೆಂದು ಆಗ ಯಾರಿಗೂ ತಿಳಿಯಲ್ಲಿಲ್ಲ. ಸ್ವದೇಶದ ವಿಮರ್ಶೆಗಳಾದರೂ ಪ್ರೋತ್ಸಾಹಪರವಾಗಿರಲಿಲ್ಲ, ಅದು ಆ ಕೃತಿಯನ್ನು ಓದಿದವರು ಪೂರ್ವಾಗ್ರಹ ಪೀಡಿತರಾಗಿ ಓದಿರಬೇಕು, ಇಲ್ಲದಿದ್ದರೆ ಅಮೇರಿಕನ್ ಸಾಹಿತ್ಯದಲ್ಲಿಯೇ ಎಂದೂ ಮೂಡಿಬರದ ಪಾತ್ರಗಳ ಪಂಪರೆ ಮತ್ತು ಚಿತ್ರಗಳ ಗ್ಯಾಲರಿ ಗೋಚರವಾಗದೆ ಹೋಗುತ್ತಿತ್ತೆ ? ಹಾಸ್ಯ ಮತ್ತು ವ್ಯಂಗ್ಯವನ್ನೇ ಪ್ರಧಾನವಾಗಿಟ್ಟುಕೊಂಡು ಮಾನವ ಜೀವನದ ಕತೆ ಹೇಳಿದ ಸಾಹಿತಿಯು ಕೃತಿಯಲ್ಲಿ ಅದನ್ನು ಬಿಟ್ಟು ಓದಿದರೆ ಅಮೂಲ್ಯವಾದದು ಬೇರೆ ಏನಿದ್ದೀತು ? ಇರಬೇಕಾದುದಾದರೂ ಬೇರೆ ಏನು ?

ಮಾರ್ಕ್‌ಟ್ವೈನನ ಭಾವನೆಗಳಿಗೆ ಪರಿಪೂರ್ಣವಾಗಿ ವ್ಯಕ್ತತೆ ಕೊಡುತ್ತಿದ್ದ ಪ್ರವಾಸ ಪ್ರತಿಮಾ ಪದ್ಧತಿ ಹಕಲ್‌ಭೆರಿಫಿನ್ ಕೃತಿಗೆ ಪ್ರಾಮುಖ್ಯತೆ ತಂದಿತು, ಬುದ್ಧಿವಂತನಾದ ಆದರೆ ಭಾವಗೊಂದಲಗಳಿಗೆ ಸಿಕ್ಕಿದ ಬಾಲಕನೊಬ್ಬನಿಗೆ ಆದ ಜಗತ್ ದರ್ಶನದ ಕತೆ ಹೇಳುವ ಕಾದಂಬರಿಯಿದು. ಯಶಸ್ವಿಯಾದ ರೋಮಾಂಚಕರ ಕಾದಂಬರಿಗೆ ಬೇಕಾದ ಪ್ರಥಮ ಪುರುಷ ನಿರೂಪಣೆಯ ಪಾತ್ರ ಎದ್ದು ನಿಂತಿದೆ, ಉಳಿದವರನ್ನೂ ಎತ್ತಿ ನಿಲ್ಲಿಸಿದೆ. ಆ ಪಾತ್ರ ಏನೆಲ್ಲಾ ಕಂಡಿತೋ—ಕ್ರೌರ್ಯ, ಹೇಡಿತನ, ಕುಟಿಲತೆ, ಗುಣ, ಅವಗುಣ, ವಿಧೇಯತೆ ಮತ್ತು ಧೈರ್ಯ ಎಲ್ಲರನ್ನೂ ನಿರ್ಗುಣವಾಗಿ ಸಮಾಧಾನವಾಗಿ ಗೊಣಗದೆ ಹಿಂದೆ ತತ್ವವನ್ನು ಕಟ್ಟದೆ ಹೇಳುತ್ತದೆ. ಅದ್ಭುತ ಮತ್ತು ರಮ್ಯ ಹಾಗಲ್ಲದಿದ್ದರೆ ಹೆಮಿಂಗ್‌ವೇಯಂತಹ ಸಾಹಿತಿ ಹಕಲ್‌ಬೆರಿಫಿನ್ ಕೃತಿಯಿಂದ ಅಮೆರಿಕನ್ ಸಾಹಿತ್ಯ ಪ್ರಾರಂಭವಾಗುತ್ತದೆ ಎಂದು ಉತ್ಪ್ರೇಕ್ಷಿಸುತ್ತಿರಲಿಲ್ಲ.

ಅಂದು 'ಮೈಸೂರು ಮಲ್ಲಿಗೆ'ಯಿಂದ ಮನೆಮಾತಾಗಿರುವ ಕೆ. ಎಸ್. ನರಸಿಂಹ ಸ್ವಾಮಿಯವರು ಇಂದು 'ಹಕಲ್‌ಬೆರಿಫಿನ್' ಕಾದಂಬರಿಯ ಅನುವಾದದಿಂದ ಮಾರ್ಕ್ ಟ್ವೈನನನ್ನು ಕನ್ನಡದಮನೆ ಮಾತಾಗಿಸಲಿದ್ದಾರೆ, ಇವರ ಚೊಕ್ಕವಾದ ಮತ್ತು ಸರಳ ವಾದ ಕನ್ನಡ ಮಾರ್ಕ್‌ಟ್ವೈನನ ಭಾಷೆಯಲ್ಲಿರುವ ಸ್ವತಂತ್ರ ಪದ ಮತ್ತು ಶೈಲಿಯ ಓಲಾಟಕ್ಕೆ ಸುಂದರವಾದ ತೂಗಂಕೊಟ್ಟಿದೆ.

ಇದು ಬೃಹತ್ ಕೃತಿ. ಪ್ರಕಟಣೆ ಮಹಾಸಾಹಸ ಸುದರ್ಶನ ಪ್ರಕಾಶನದ ತಾ. ರಾ. ನಾಗರಾಜರಿಗೆ ಎಂಟೆದೆಯೆ? ಹಾಗಿದ್ದರೂ ಆಶ್ಚರ್ಯವಿಲ್ಲ !

—ಹೆಚ್. ವಿ. ನಾರಾಯಣ್

Adventures of Huckle Berry Finn
A world famous novel written by
The great author Mark Twain
Kannada translation by
**Sri K. S. Narasimhaswami,** author of
MYSORE MALLIGE (ಮೈಸೂರು ಮಲ್ಲಿಗೆ)
Which has gone on more than twelve edition·

Adventures of Huckle Berry Finn(ಹಕಲ್‌ಬೆರಿಫಿನ್ನನ ಸಾಹಸಗಳು)
Kannada translation published by
Tara Nagaraja under his Sudarshana Prakashana
Tara Nivasa, Tiptur.

PRICE : Rs. 8-00

# ಹಕಲ್ ಬೆರಿ ಫಿನ್ನನ ಸಾಹಸಗಳು

ಸುದರ್ಶನ ಕಾದಂಬರಿ

## ಎಚ್ಚರಿಕೆ

ಈ ಕಥೆಯಲ್ಲಿ ಒಂದು ಉದ್ದೇಶವನ್ನು ಕಂಡು ಹಿಡಿಯತೊಡಗುವವರನ್ನು ಶಿಕ್ಷೆಗೆ ಗುರಿಪಡಿಸಲಾಗುವುದು ;

ಇದರಲ್ಲೊಂದು ನೀತಿಯನ್ನು ಕಂಡು ಹಿಡಿಯತೊಡಗುವವರನ್ನು ಗಡಿಪಾರು ಮಾಡಲಾಗುತ್ತದೆ ;

ಇದರಲ್ಲೊಂದು ಸಂವಿಧಾನವನ್ನು ಕಂಡು ಹಿಡಿಯತೊಡಗುವವರನ್ನು ಗುಂಡಿಟ್ಟು ವಧಿಸಲಾಗುತ್ತದೆ.

ಗ್ರಂಥಕರ್ತನ ಅಪ್ಪಣೆಗನುಸಾರವಾಗಿ
ಫಿರಂಗಿ ದಳಗಳ ಮುಖ್ಯಾಧಿಕಾರಿ ಜಿ. ಜಿ. ಅವರ ಪರವಾಗಿ.

ಕೆ. ಯಸ್. ನರಸಿಂಹಸ್ವಾಮಿಯವರಿಂದ - ಅನುವಾದಿತ

# ಹಕಲ್‌ಬೆರಿ ಫಿನ್‌ನ ಸಾಹಸಗಳು

## ೧

ಟಾಮ್ ಸಾಯರ್‌ನ ಸಾಹಸ ಕಾರ್ಯಗಳೆಂಬ ಹೆಸರಿನ ಪುಸ್ತಕವೊಂದನ್ನು ಓದದೆಯೆ ನಿಮಗೆ ನನ್ನ ವಿಷಯ ತಿಳಿಯದು ;-ಆದರೂ ಪರವಾಯಿಲ್ಲ. ಆ ಪುಸ್ತಕ ವನ್ನು ರಚಿಸಿದವನು ಮಿ. ಮಾರ್ಕ್‌ಟ್ವೇಯ್ನ್ ; ಅವನು ಪ್ರಧಾನವಾಗಿ ಸತ್ಯವಾದಿ. ಅವನು ಉತ್ಪ್ರೇಕ್ಷಿಸಿದ ವಿಷಯುಗಳೂ ಇದ್ದವು, ಆದರೂ ಪ್ರಧಾನವಾಗಿ ಸತ್ಯವನ್ನು ನುಡಿದನು. ಅದೊಂದು ವಿಷಯವೇ ಅಲ್ಲ. ಒಂದಲ್ಲ ಒಂದು ಕಾಲದಲ್ಲಿ ಸುಳ್ಳು ಹೇಳದಿರುವ ಯಾರನ್ನೂ ನಾನು ಎಂದೂ ಕಾಣೆ ಹಾಗಿದ್ದವರು ಎಂದರೆ ಚಿಕ್ಕಮ್ಮ ಪಾಲಿ, ಅಥವಾ ಆ ವಿಧವೆ, ಮತ್ತು ಪ್ರಾಯಶಃ ಮೇರಿ. ಚಿಕ್ಕಮ್ಮ ಪಾಲಿ-ಟಾಮನ ಚಿಕ್ಕಮ್ಮ ಪಾಲಿ ಅವಳು-ಮತ್ತು ಮೇರಿ, ಮತ್ತು ವಿಧವೆ ಡಗ್ಲಾಸ್ ಇವರ ವಿಷಯು ಗಳೆಲ್ಲವೂ ಆ ಪುಸ್ತಕದಲ್ಲಿ, ನಾನು ಹಿಂದೆ ಹೇಳಿದಂತೆ ಬಹುಮಟ್ಟಿಗೆ ಸತ್ಯವಾದ ಆ ಪುಸ್ತಕದಲ್ಲಿ ಬಂದಿವೆ.

ಆ ಪುಸ್ತಕ ಸಮಾಪ್ತಿಗೊಳ್ಳುವುದು ಹೀಗೆ : ಕಳ್ಳರು ಗುಹೆಯಲ್ಲಿ ಬಚ್ಚಿಟ್ಟಿದ್ದ ಹಣ ನನಗೂ ಟಾಮನಿಗೂ ಸಿಕ್ಕಿತು, ನಾವು ಅದರಿಂದ ಸಿರಿವಂತರಾದೆವು. ಆರು ಸಾವಿರ ಡಾಲರುಗಳು ಉಃಡೆಯಾಗಿ ನಮಗೆ ಸಿಕ್ಕಿದವು—ಅಷ್ಟೂ ಚಿನ್ನ. ಆ ಹಣದ ರಾಶಿಯು ನೋಟ ದಿಗಲು ಹುಟ್ಟಿಸುತ್ತಿತ್ತು. ನ್ಯಾಯಾಧೀಶ ಥ್ಯಾಚರ್ ಅದನ್ನು ಕೊಂಡು ಹೋಗಿ ಬಡ್ಡಿಗೆ ಹಾಕಿದನು ; ಆದರಿಂದ ನಮಗೆ ವರುಷದುದ್ದಕ್ಕೂ ಪ್ರತಿ ದಿನವೂ ಒಂದೊಂದು ಡಾಲರ್ ಉಂಡೆಯಾಗಿ ಗಿಟ್ಟುತ್ತಿತ್ತು. ಅದನ್ನು ಬಳಸುವುದು ಹೇಗೆಂಬುದನ್ನು ಹೇಳಲೂ ಯಾರಿಗೂ ಕಷ್ಟವಾಗಿತ್ತು. ವಿಧವೆ ಡಗ್ಲಾಸ್ ನನ್ನನ್ನು ತನ್ನ ಮಗನೆಂದೇ ಭಾವಿಸಿದಳು, ಮತ್ತು ನನ್ನನ್ನು ನಾಗರಿಕನನ್ನಾಗಿ ಮಾಡಲು ಯೋಚಿಸಿದಳು,

ಆದರೆ ಅವಳು ಎಷ್ಟು ದಂಗುಡ ತುಂಬಿದ ಕ್ರಮಾನುಸರಣೆಯಿಂದಲೂ ಒಪ್ಪದಿಂದಲೂ ನಡೆದುಕೊಳ್ಳುತ್ತಿದ್ದಳೆಂಬುದನ್ನು ಗಮನಿಸಿದರೆ, ಸದಾಕಾಲವೂ ಆ ಮನೆಯೊಳಗೇ ಇದ್ದು ಬದುಕುವುದು ನನಗೆ ಕಷ್ಟಕರವಾಗಿತ್ತು. ಈ ಪರಿಸ್ಥಿತಿಯನ್ನು ಇನ್ನು ತಡೆಯುವುದು ಅಸಾಧ್ಯವೆನಿಸಿದಾಗ, ನಾನು ಅಲ್ಲಿಂದ ಹೊರಬಿದ್ದೆ. ನನ್ನ ಹಳೆಯ ಚಿಂದಿ ಬಟ್ಟೆಗಳನ್ನೂ, ನನ್ನ ಮುದ್ದು 'ಎನ್‌ಜಿನ್ ಡ್ರೈವರಿನ ಟೋಪಿ'ಯನ್ನೂ ಮತ್ತೆ ಧರಿಸಿದೆ, ಬಿಡುಗಡೆ ಹೊಂದಿದೆ. ನೆಮ್ಮದಿಯಾಯಿತು. ಟಾಮ್ ಸಾಯರ್ ನನ್ನನ್ನು ಹುಡುಕಿಕೊಂಡು ಬಂದನು ; ತಾನೊಂದು ಕಳ್ಳರ ಗುಂಪನ್ನು ಕಟ್ಟುವುದಾಗಿಯೂ ನಾನು ಮತ್ತೆ ವಿಧವೆಯ ಮನೆಗೆ ಹಿಂದಿರುಗಿ ಮರ್ಯಾದೆಯಿಂದ ಇರುವುದಾದರೆ, ನನ್ನನ್ನು ಸೇರಿಸಿಕೊಳ್ಳಬಹುದೆಂದೂ ಹೇಳಿದನು. ಅಂತೆಯೇ ನಾನು ಹಿಂದಿರುಗಿದೆ.

ವಿಧವೆ ನನ್ನನ್ನು ಕಂಡು ಗೋಳಾಡಿದಳು, 'ಕೈಬಿಟ್ಟು ಹೋಗಿದ್ದ ಬಡ ಕುರಿಮರಿಯೆ' ಎಂದು ಕರೆದಳು. ನನ್ನನ್ನು ಇನ್ನೆಷ್ಟೋ ಹೆಸರುಗಳಿಂದ ಕರೆದಳು ; ಅದರಲ್ಲಿ ನನಗೆ ಕೆಡುಕಾಗಲಿ ಎನ್ನುವ ಉದ್ದೇಶವೇ ಅವಳಿಗಿರಲಿಲ್ಲ. ಮತ್ತೆ ನನಗೆ ಹೊಸ ಬಟ್ಟೆಗಳನ್ನು ಉಡಿಸಿದಳು, ಆದರಿಂದ ನನಗೆ ಅಸಾಧ್ಯವಾಗಿ ಮೈ ಬೆವರಿತು, ಉಸಿರು ಕಟ್ಟಿಹೋಯಿತು ಎಂದುಕೊಂಡೆ. ಆ ಮೇಲೆ ಹಳೆಯ ರೀತಿಯೇ ಮತ್ತೆ ಮರುಕಳಿಸಿತು. ಅವಳು ಊಟಕ್ಕೆ ಬಾ ಎಂದು ಗಂಟೆ ಬಾಜಿಸಿದ ಒಡನೆಯೇ ನೀವು ಕಾಲಕ್ಕೆ ಸರಿಯಾಗಿ ಊಟಕ್ಕೆ ಹೋಗಿ ಕೂರಬೇಕು. ಮೇಜಿನ ಮುಂದೆ ಹೋಗಿ ಕೂತಿರಿ, ನೇರ ತಿನ್ನಲು ಮೊದಲು ಮಾಡಬಾರದು. ಆ ವಿಧವೆ ತಿಂಡಿ ತೀರ್ಥಗಳ ಮೇಲೆ ತಲೆ ಬಾಗಿ ಒಂದಿಷ್ಟು ಏನನ್ನೋ ಗೊಣಗುವ ತನಕ ಕಾದಿರಬೇಕು. ವಾಸ್ತವವಾಗಿ ಅವುಗಳಲ್ಲಿ ಪ್ರಮಾದಕರವಾದುದೇನೂ ಇರುತ್ತಿರಲಿಲ್ಲ,—ಅಂದರೆ, ಎಲ್ಲ ಉಣಿಸೂ ತನ್ನಲ್ಲಿರುವಷ್ಟು ದ್ರವದಿಂದಲೇ ಪಕ್ವವಾಗಿರುತ್ತಿತ್ತು. ಚೂರು ಪಾರುಗಳಿಂದ ತುಂಬಿದ ಪಾತ್ರೆಯಲ್ಲಾದರೆ ಆ ಪರಿಸ್ಥಿತಿ ಬೇರೆ ; ಅವು ಬೆರೆತುಕೊಳ್ಳುತ್ತವೆ, ಒಂದು ತರಹ ರಸ ಒಳಗೆಲ್ಲಾ ಹರಡಿಕೊಳ್ಳುತ್ತದೆ ; ಪದಾರ್ಥಗಳು ಹೆಚ್ಚು ರುಚಿಯಾಗಿರುತ್ತವೆ.

ಭೋಜನದ ತರುವಾಯ ಅವಳು ತನ್ನ ಪುಸ್ತಕವನ್ನು ಹೊರತೆಗೆದು ನನಗೆ 'ಮೋಸೆಸ್ ಮತ್ತು ಬುಲ್-ರಷರ್ಸ್' ವಿಷಯದಲ್ಲಿ ತಿಳಿವಳಿಕೆ ಕೊಟ್ಟಳು. ಅವನ ವಿಷಯವೆಲ್ಲವನ್ನೂ ಗ್ರಹಿಸುವುದು ಆಯಾಸಕರವಾಗಿ, ನನ್ನ ಮೈ ಬೆವರಿಡುತ್ತಿತ್ತು. ಆದರೂ ಪ್ರಸಂಗತ್ವೇನ ಅವಳು ಮೋಸೆಸ್ ಅತಿ ದೀರ್ಘ ಕಾಲದ ಹಿಂದೆಯೇ ಮೃತನಾದನೆಂದು ತಿಳಿಸಿದ್ದರಿಂದ, ನನಗೆ ಅವನ ವಿಷಯದಲ್ಲಿ ಎಷ್ಟೂ ಆಸಕ್ತಿ ಉಂಟಾಗಲಿಲ್ಲ. ಏಕೆಂದರೆ, ಸತ್ತವರ ವಿವರಗಳ ಪಟ್ಟಿ ಮಾಡುವ ಮನುಷ್ಯನಲ್ಲ ನಾನು

ಸ್ವಲ್ಪ ಕಾಲದ ಮೇಲೆ ನನಗೆ ಹೊಗೆ ಸೇದುವ ಅಪೇಕ್ಷೆಯಾಯಿತು. ಅದಕ್ಕೆ ಅನುಮತಿ ಕೊಡೆಂದು ನಾನು ವಿಧವೆಯನ್ನು ಕೇಳಿಕೊಂಡೆ. ಅವಳು ಕೊಡಳು ; ಅದು ದುರಭ್ಯಾಸವೆಂದೂ ಅಶುಚಿಯಾದುದೆಂದೂ ಇನ್ನು ಮುಂದೆ ಹಾಗೆ ಮಾಡಬಾರದೆಂದೂ

ನನಗೆ ಬೋಧಿಸಿದಳು. ಕೆಲವರ ಸ್ವಭಾವವೇ ಹೀಗೆ : ಅದರ ವಿಷಯ ತಮಗೇನೂ ತಿಳಿಯದಿದ್ದರೂ ಅದರ ಮೇಲೆ ಸಿಡಿದೇರಗುತ್ತಾರೆ. ಹೀಗೆ ಮಾಡಿ ಅವಳು ತನ್ನ ರಕ್ತ ಸಂಬಂಧಿಯಲ್ಲದ, ಎಂದೋ ಆಗಿ ಹೋಗಿ ಈಗ ಯಾರಿಗೂ ಕೆಲಸಕ್ಕೆ ಬಾರದ ಆ ಮೋಸೆಸ್ಸಿನ ವಿಷಯುವನ್ನು ತಲೆಗೆ ಹಚ್ಚಿಕೊಂಡು ಒಂದಿಷ್ಟು ಒಳ್ಳೆಯ ಫಲವಿರುವ ಈ ಧೂಮಪಾನವನ್ನು ನಾನು ಮಾಡುವುದರಲ್ಲಿ ಕೆಡಕನ್ನು ಕಂಡು ಹಿಡಿದಳು. ಅವಳು ನಸ್ಯ ಹಾಕುತ್ತಿದ್ದಳು ; ಆದರೆ ಅದನ್ನು ಮಾಡುತ್ತಿದ್ದವಳು ತಾನಾದ್ದರಿಂದ, ಅದರಲ್ಲಿ ದೋಷವೂ ಅವಳಿಗೆ ತೋರಲಿಲ್ಲ.

ಹೀಗಿರುವಲ್ಲಿ ಅವಳ ಸೋದರಿ ಮಿಸ್ ವ್ಯಾಟ್ಸನ್ ಅವಳೊಂದಿಗೆ ಇರಲು ಬಂದಳು. ಸುಮಾರು ತೆಳ್ಳಗಿರುವ ಮುದಿಹೆಣ್ಣು ಇವಳು ; ಒಣ್ಣದ ಕನ್ನಡಕವನ್ನು ಹಾಕಿಕೊಳ್ಳುತ್ತಿದ್ದಳು. ಪದಗಳ ಉಚ್ಚಾರಣೆಯ ಪುಸ್ತಕವೊಂದನ್ನು ಹಿಡಿದು ಬಂದು ನನಗೆ ತಗುಲಿಕೊಂಡಳು. ಸುಮಾರು ಒಂದು ಗಂಟೆಯ ಕಾಲ ಅವಳು ನನ್ನೊಂದಿಗೆ ಹೆಣಗಿದಳು. ಅನಂತರ ವಿಧವೆ ಅವಳಿಗೆ ಬಿಡುವು ಕೊಟ್ಟಳು ನನಗಂತೂ ಅದನ್ನು ಇನ್ನೊಂದು ನಿಮಿಷವೂ ಸಹಿಸುವುದು ಸಾಧ್ಯವಿರಲಿಲ್ಲ. ಆ ಮೇಲೆ ಒಂದು ಗಂಟೆಯ ಕಾಲ ಅದು ತುಂಬಾ ಬೇಸರ ತಂದಿತು. ನನಗೆ ಮೈ ಪರಚಿಕೊಳ್ಳುವಂತಾಗಿತ್ತು. ಮಿಸ್ ವ್ಯಾಟ್ಸನ್ ಹೇಳುತ್ತಿದ್ದುದೋ—"ಹಕಲ್‌ಬೆರಿ, ನಿನ್ನ ಕಾಲುಗಳನ್ನು ಅಲ್ಲಿಟ್ಟು ಕೊಳ್ಳಬೇಡ : ಹಕಲ್‌ಬೆರಿ, ಹಾಗೆ ಮುದುರಿಕೊಳ್ಳಬೇಡ,—ನೆಟ್ಟಗೆ ಕೂರು." ಅವಳು ಇನ್ನೇನು ಹೇಳುವುದರಲ್ಲಿದ್ದಳು—"ನೀನು ಹಾಗೆಲ್ಲ ಕಾಲು ಚಾಚಬಾರದು,— ನೀನೇಕೆ ಯೋಗ್ಯ ರೀತಿಯಲ್ಲಿ ನಡೆದುಕೊಳ್ಳಲು ಯತ್ನಿಸುತ್ತಿಲ್ಲ ?" ಬಳಿಕ ಅವಳು ಕೆಟ್ಟವರು ಹೋಗುವ ಲೋಕ'ದ ವಿಷಯುಗಳನ್ನೆಲ್ಲಾ ವರ್ಣಿಸಿದಳು. ನಾನು ಅಲ್ಲಿದ್ದರೇ ಚೆನ್ನಾಗಿತ್ತು ಎನ್ನಿಸಿತು ನನಗೆ. ಅವಳಿಗೆ ತುಂಬಾ ಸಿಟ್ಟು ಬಂತು. ನನ್ನ ಉದ್ದೇಶ ಅವಳ ಮನಸ್ಸಿಗೆ ನೋವನ್ನು ತರುವುದಲ್ಲ. ನನಗೆ ಬೇಕಾಗಿದ್ದುದು ಒಂದೇ—ಎಲ್ಲಿ ಗಾದರೂ ಓಡಿ ಬಿಡುವುದು ; ನನಗೆ ಬೇಕಾಗಿದ್ದುದು ಒಂದೇ—ಇಲ್ಲಿಂದ ಕದಲು ವುದು, ಎಲ್ಲಿಗಾದರೂ ಸರಿಯೇ. ನಾನು ಹಾಗೆ ಹೇಳುವುದು ದುಷ್ಟತನವೆಂದೂ, ಇಡೀ ಪ್ರಪಂಚದ ಸಲುವಾಗಿ ಕೂಡ ತಾನು ಆ ಮಾತನ್ನು ಆಡಲು ಇಷ್ಟಪಡುವುದಿಲ್ಲವೆಂದೂ, ಒಳ್ಳೆಯವರು ಹೋಗುವ ಲೋಕಕ್ಕೆ ಸಲ್ಲುವ ರೀತಿಯಲ್ಲಿ ತಾನು ಬಾಳುವುದಾಗಿಯೂ ಅವಳು ವಾದಿಸಿದಳು. ಅವಳು ಹೋಗಲಿರುವ ಸ್ಥಳಕ್ಕೇ ನಾನು ಹೋಗುವುದರಲ್ಲಿ ನನಗೆ ಯಾವ ಲಾಭವೂ ಕಂಡುಬಾರದೆ, ನಾನು ಅದಕ್ಕಾಗಿ ಪ್ರಯತ್ನಿಸುವುದಿಲ್ಲವೆಂದು ನಿಶ್ಚಯಿಸಿದೆನು. ಆದರೆ ಮಾತ್ರ ನಾನು ಹಾಗೆ ಹೇಳಲಿಲ್ಲ ; ಏಕೆಂದರೆ ಅದರಿಂದ ತೊಂದರೆಯಾಗುತ್ತಿತ್ತೇ ಹೊರತು ಒಳ್ಳೆಯದಾಗುತ್ತಿರಲಿಲ್ಲ.

ಈಗ ಅವಳಿಗೆ ಹೆಜ್ಜೆಯೂರಲು ಸ್ಥಳ ಸಿಕ್ಕಿತು. ಆ ಶುಭಲೋಕದ ಎಲ್ಲವನ್ನೂ ವರ್ಣಿಸತೊಡಗಿದಳು. ಅಲ್ಲಿ ಯಾರೇ ಆಗಲಿ ಇಡೀದಿನ ಹಾರ್ಪ್–ವಾದ್ಯವನ್ನು ನುಡಿ

ಸುತ್ತಾ, ಹಾಡುತ್ತಾ ಅನಂತಕಾಲವೂ ಅಡ್ಡಾಡುತ್ತಿರಬಹುದು – ಅಲ್ಲಿ ಮಾಡಬೇಕಾದ ಕೆಲಸವಿಷ್ಟೇ ಎಂದಳು. ಆದ್ದರಿಂದ ಆ ಸ್ಥಳದ ವಿಷಯದಲ್ಲಿ ನನಗೆ ಹೆಚ್ಚು ಗೌರವ ಪುಂಟಾಗಲಿಲ್ಲ. ನಾನು ಅವಳಿಗೆ ಹೇಳಲಿಲ್ಲ ಹಾಗೆ. "ಅಲ್ಲಿಗೆ ಟಾಮ್ ಸಾಯರ್ ಹೋಗಲಾದೀತೆ?" ಎಂದು ಅವಳನ್ನು ಕೇಳಿದೆ. "ಅದು ಸಾಧ್ಯವೆಂದು ತೋರುವುದಿಲ್ಲ" ಎಂದಳವಳು. ಅವಳ ಉತ್ತರದಿಂದ ನನಗೆ ಸಂತೋಷವೇ ಆಯಿತು, ಏಕೆಂದರೆ ನಾನೂ ಅವನೂ ಒಂದಿಗಿರಬೇಕೆಂಬುದೇ ನನ್ನ ಅಪೇಕ್ಷೆ.

ಮಿಸ್ ವ್ಯಾಟ್ಸನ್ ನನ್ನನ್ನು ಕುಕ್ಕುತ್ತಲೇ ಇದ್ದಳು. ಇದರಿಂದ ನನಗೆ ಬೇಸರವಾಯಿತು. ನನ್ನ ಒಂಟಿತನವನ್ನು ನಾನು ತಾಳಲಾರದೆ ಹೋದೆ. ಮೇಲಿಂದ ಮೇಲೆ ಅವಳು ನೀಗ್ರೋಗಳನ್ನು ಮನೆಗೆ ಕರೆತರುತ್ತಿದ್ದಳು; ಪ್ರಾರ್ಥನೆಗಳು ನಡೆಯುತ್ತಿದ್ದವು; ಬಳಿಕ ಎಲ್ಲರೂ ಹಾಸುಗೆಗಳಿಗೆ ಹಾರಿ ಮಲಗುತ್ತಿದ್ದರು. ನಾನು ಒಂದು ಚೂರು ಮೋಂಬತ್ತಿಯನ್ನು ಹಚ್ಚಿ ಹಿಡಿದುಕೊಂಡು ನನ್ನ ಕೋಣೆಗೆ ಹೋದೆ; ಅದನ್ನು ಮೇಜಿನ ಮೇಲಿರಿಸಿದೆ. ಕುರ್ಚಿಯಲ್ಲಿ ಹಾಯಾಗಿ ಕುಳಿತು ಕಿಟಕಿಯಾಚೆಗೆ ನೋಡುತ್ತಾ ಹರ್ಷದಾಯಕವಾದ ಏನನ್ನೋ ಕುರಿತು ಯೋಚಿಸುತ್ತಿದ್ದೆ. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ನಾನು ಸತ್ತಿದ್ದರೆ ಚೆನ್ನಾಗಿತ್ತು ಎನ್ನುವಷ್ಟು ಬೇಸರವಾಯಿತು ನನಗೆ, ನನ್ನೊಂಟಿತನದಿಂದ. ನಕ್ಷತ್ರಗಳು ಹೊಳೆಯುತ್ತಿದ್ದವು. ಅಳುವಂತೆ ತೋರುತ್ತಿದ್ದ ತೋಪುಗಳಲ್ಲಿ ಎಲೆಗಳು ಮರ್ಮರಿಸುತ್ತಿದ್ದವು. ದೂರದಲ್ಲೆಲ್ಲಿಯೋ ಒಂದು ಗೂಬೆ ಸತ್ತ ಯಾರಿಗಾಗಿಯೋ ಘೂಗುಟ್ಟುತ್ತಿತ್ತು, ಮತ್ತು ಇನ್ನೆಲ್ಲಿಯೋ ಒಂದು ನರಿಯೂ ನಾಯಿಯೂ ಇನ್ನೇನು ಸಾಯಲಿರುವ ಯಾರಿಗಾಗಿಯೋ ರೋದಿಸುತ್ತಿದ್ದವು. ನಾನು ಅದನ್ನು ಕೇಳಿದೆ. ಗಾಳಿ ನನ್ನ ಕಿವಿಯಲ್ಲಿ ಏನನ್ನೋ ಪಿಸುಗುಟ್ಟುತ್ತಿತ್ತು. ಅದರ ಅರ್ಥವೇ ನನಗೆ ತಿಳಿಯಲಿಲ್ಲ. ನನಗೋ ಮೈತುಂಬ ಚಳಿ, ನಡುಕ. ತನ್ನ ಮನಸ್ಸಿನಲ್ಲಿರುವುದನ್ನು ಇನ್ನಾರಿಗೋ ತಿಳಿಸಲಪೇಕ್ಷಿಸಿ ಆದರೆ ವಿಫಲವಾಗಿ ಸೋತ ದೆವ್ವವೊಂದು ತನ್ನ ಗೋರಿಯಲ್ಲಿ ತಾನು ನೆಮ್ಮದಿಯಿಂದಿರಲಾರದೆ ಇರುಳಿರುಳೂ ದುಃಖಿಸುತ್ತಾ ಅಲೆದಾಡುವಾಗ ಎಬ್ಬಿಸಿದ ಸದ್ದು ಅತಿದೂರದ ಕಾಡಿನಿಂದ ನನ್ನ ಕಿವಿಗೆ ಬಿತ್ತು. ನನ್ನೆದೆ ಕುಗ್ಗಿಹೋಯಿತು, ನನಗೆ ತುಂಬಾ ಭಯವಾಯಿತು, ನನ್ನ ಜತೆಗೆ ಯಾರಾದರೂ ಇದ್ದಿದ್ದರಾಗಿತ್ತು ಎನ್ನಿಸಿತು. ಸ್ವಲ್ಪ ಹೊತ್ತಿನಮೇಲೆ ಒಂದು ಜೇಡ ನನ್ನ ಹೆಗಲ ಮೇಲೆ ಹರಿದುಕೊಂಡು ಬಂದಿತು. ನಾನದನ್ನು ಬೀಸಿ ಎಸೆದೆ. ಅದು ಮೋಂಬತ್ತಿಯ ಉರಿಗೆ ಸಿಕ್ಕಿ ನಾನು ಏಳುವುದರೊಳಗಾಗಿ ಸತ್ತು ಮುದುರಿತ್ತು. ಅದೊಂದು ಭಯಂಕರ ದುಶ್ಶಕುನವೆಂದೂ, ನನಗೆ ದುರದೃಷ್ಟ ಕಾದಿದೆಯೆಂದೂ ಯಾರೂ ನನಗೆ ಹೇಳುವ ಅಗತ್ಯವಿರಲಿಲ್ಲ; ನನಗೆ ಬಲು ಭಯವಾಯಿತು. ನನ್ನ ಬಟ್ಟೆಗಳನ್ನೆಲ್ಲಾ ಝಾಡಿಸಿ ಕೊಡವಿದೆ. ಎದ್ದು ಮೂರುಸಲ ಇಲ್ಲಿಂದಲ್ಲಿಗೆ ತಿರುಗಾಡಿ, ಪ್ರತಿಸಲವೂ ನನ್ನೆದೆಯಮೇಲೆ ಶಿಲುಬೆಯನ್ನು ಕೈ ಬೆರಳಿನಿಂದ ಗುರುತಿಸಿಕೊಂಡೆ. ಆಮೇಲೆ ನನ್ನ ತಲೆಗೂದಲಿನ

ಒಂದು ಸಣ್ಣ ಕಟ್ಟಿಗೆ ದಾರವನ್ನು ಕಟ್ಟಿ ಮಂತ್ರಗಾರ್ತಿಯರನ್ನು ದೂರವಿಡಲು ಸಿದ್ಧವಾದೆ. ಆದರೆ ನನಗೆ ನಂಬಿಕೆ ಬರಲಿಲ್ಲ, ನಿಮಗೊಂದು ಕುದುರೆಯ ಲಾಳ ಸಿಕ್ಕಿತು ಎನ್ನಿ, ಅದನ್ನು ಬಾಗಿಲಿಗೆ ಹೊಡೆಯುವುದನ್ನು ಮರೆತು ಕಳೆದುಕೊಂಡಿರಿ ಎನ್ನಿ. ಆಗ ನೀವು ಹಾಗೆ ಮಾಡುವಿರಿ. ಆದರೆ ಜೇಡನನ್ನು ಕೊಂದ ನೀವು ಹಾಗೆ ಮಾಡುವುದರಿಂದಲೇ ದುರ್ವಿಧಿಯನ್ನು ತಡೆಗಟ್ಟಬಹುದೆಂದು ನಾನು ಯಾರ ಬಾಯಿಂದಲೂ ಕೇಳಿರಲಿಲ್ಲ.

ನಾನು ಮತ್ತೆ ಹಾಗೆಯೇ ಕುಳಿತುಕೊಂಡೆ. ಮೈಯೆಲ್ಲ ಥರಥರ ನಡುಗುತ್ತಿತ್ತು. ಧೂಮಪಾನಮಾಡುವ ಉದ್ದೇಶದಿಂದ ನನ್ನ ಸೇದುಗೊಳವೆಯನ್ನು ಈಚೆಗೆ ತೆಗೆದೆ. ಏಕೆಂದರೆ ಈಗ ಮನೆ ಸಾವಿನಷ್ಟು ನಿಶ್ಶಬ್ದವಾಗಿತ್ತು. ನಾನು ಧೂಮಪಾನಮಾಡುವುದು ವಿಧವೆಗೆ ಗೊತ್ತಾಗುತ್ತಿರಲಿಲ್ಲ. ಸರಿ, ಇದಾದ ಬಲು ಹೊತ್ತಿನಮೇಲೆ ದೂರದಲ್ಲಿ ನಗರದ ಗಡಿಯಾರ ಹನ್ನೆರಡು ಬಾರಿ 'ಬೂಂ-ಬೂಂ-ಬೂಂ' ಎಂದು ಧ್ವನಿಮಾಡಿದುದು ನನಗೆ ಕೇಳಿಸಿತು; ಮತ್ತೆ ಎಲ್ಲವೂ ನೀರವ, ನೀರವತರ. ಸ್ವಲ್ಪ ಹೊತ್ತಿನಲ್ಲಿ ಮರಗಳ ನಡುವಣ ಕತ್ತಲೆಯಲ್ಲಿ ಟೊಂಗೆಯೊಂದು ಮುರಿದು ಬಿದ್ದ ಸದ್ದು ಕೇಳಿಸಿತು,—ಏನೋ ಚಲಿಸುತ್ತಿತ್ತು. ನಾನು ನೆಟ್ಟಗೆ ಕುಳಿತು ಕೇಳಿದೆ. ಅಲ್ಲಿ ಕೆಳಗಿನಿಂದ 'ಮಿಯೋವ್-ಮಿಯೋವ್' ಎನ್ನುವ ಸದ್ದು ಮಾತ್ರ ನನ್ನ ಕಿವಿಗೆ ಬಿತ್ತು. ಒಳ್ಳೆಯದು ಅದು ! ನಾನೂ ಮೃದುವಾಗಿ 'ಮಿಯೋವ್-ಮಿಯೋವ್' ಎಂದೆ. ದೀಪವನ್ನು ಆರಿಸಿದೆ, ಕಿಟಕಿಯಾಚೆಗೆತೂರಿ ಆ ಕೆಳಗಿನ ಜೋಪಡಿಯ ಮೇಲಿಳಿದು ಅಲ್ಲಿಂದ ನೆಲಕ್ಕೆ ಧುಮುಕಿದೆ; ಮರಗಳ ನಡುವೆ ತೆವಳುತ್ತ ಹೋದೆ. ಏಕೆಂದರೆ, ಅಲ್ಲಿ ಟಾಮ್ ಸಾಯರ್ ನನಗಾಗಿ ಕಾದಿರುವನೆಂಬುದು ನನಗೆ ಸಾಕಷ್ಟು ದೃಢವಾಗಿತ್ತು.

## ೨

ನಾವು ಮರಗಳ ನಡುವಣ ಹಾದಿಯೊಂದರುದ್ದಕ್ಕೂ ಮೆಟ್ಟುಂಗಾಲಿಡುತ್ತ, ಕೊಂಬೆಗಳು ತಲೆಗೆ ತಗುಲಿ ಗಾಯಗೊಳಿಸದಂತೆ ತಗ್ಗಿ ನಡೆಯುತ್ತ, ವಿಧವೆಯ ತೋಟದ ಕೊನೆಗೆ ಸಾಗಿದೆವು. ಅಡುಗೆ-ಮನೆಯ ಪಕ್ಕದಲ್ಲಿ ಹಾದು ಹೋಗುತ್ತಿದ್ದಾಗ ನಾನು ಮರದ ಬುಡವೊಂದರ ಮೇಲೆ ಎಡವಿ ಬಿದ್ದೆ, ಸ್ವಲ್ಪ ಸದ್ದು ಮಾಡಿದೆ. ನಾವು ಅಲ್ಲಿಯೇ ಅಲುಗಾಡದಂತೆ ಬಿದ್ದುಕೊಂಡೆವು. ಮಿಸ್ ವ್ಯಾಟ್ಸನ್ನಳ ಕಡೆಯ ಧಾಂಡಿಗ ನೀಗ್ರೋ, ಜಿಮ್, ಅಡುಗೆ-ಮನೆಯ ಬಾಗಿಲನ್ನು ಹಾಕುತ್ತಿದ್ದ. ಅವನ ಹಿಂದೆ ದೀಪ ಉರಿಯುತ್ತಿದ್ದುದರಿಂದ ನಾವು ಅವನನ್ನು ಬಹುಸ್ಪಷ್ಟವಾಗಿ ಕಾಣಬಹುದಿತ್ತು. ಅವನು ನಿಮಿರಿನಿಂತು ಒಂದು ನಿಮಿಷ ತನ್ನ ಕತ್ತನ್ನು ಹೊರಚಾಚಿ ಆಲಿಸಿದ;ಕೂಗಿದ:

'ಯಾರದು ?'

ಅವನು ಇನ್ನಷ್ಟು ಆಲಿಸಿದ; ಬಳಿಕ ಮೆಟ್ಟಂಗಾಲಿಡುತ್ತ ಬಂದು ನಮ್ಮಿಬ್ಬರ ನಡುವೆಯೇ ನಿಂತ; ಅವನು ಎಷ್ಟು ಹತ್ತಿರಕ್ಕೆ ಬಂದಿದ್ದನೆಂದರೆ, ನಾವು ಅವನನ್ನು ಮುಟ್ಟಬಹುದಾಗಿತ್ತು. ಎಷ್ಟೋ ನಿಮಿಷಗಳು ಕಳೆದಿರಬೇಕು; ಒಂದೂ ಸದ್ದಿಲ್ಲ. ನಾವು ಮೂವರೂ ಅಲ್ಲೇ ಬಲು ಹತ್ತಿರದಲ್ಲಿ ಇದ್ದೆವು. ನನ್ನ ಪಾದದ ಕೀಲಿನ ಬಳಿ ಎಂಥದೋ ನವೆ ಮೊದಲಾಯಿತು. ನನಗೆ ಅದನ್ನು ಕೆರೆಯುವ ಧೈರ್ಯ ಮಾತ್ರ ಬರಲಿಲ್ಲ. ಆಮೇಲೆ ನವೆ ನನ್ನ ಕಿವಿಗೆ ಬಂತು; ಅನಂತರ ನನ್ನ ಹೆಗಲೆರಡರ ನಡುವೆ, ಬೆನ್ನಮೇಲೆ, ಕೆರೆದುಕೊಳ್ಳದಿದ್ದರೆ ಇನ್ನೇನು ಸತ್ತುಹೋಗುವೆನೆಂದೇ ನನಗೆ ತೋರಿತು. ಅಲ್ಲಿಂದೀಚೆಗೆ ಕೂಡ, ನನಗೆ ಈ ಬಗೆಯ ಅನುಭವ ಹಲವೇಳೆ ಆಗಿದೆ. ಅದನ್ನು ನಾನು ಬಲ್ಲೆ. ನಿಮ್ಮ ಸ್ವಭಾವವೇ ಹಾಗಿದ್ದರೆ, ಇಲ್ಲವೇ–ನೀವು ಯಾವುದಾದರೂ ಶವ ಸಂಸ್ಕಾರಕ್ಕೆ ಹೋಗಿರುವ ವೇಳೆಯಲ್ಲಿಯೋ ಅಥವ ನಿಮಗೆ ನಿಜವಾಗಿಯೂ ನಿದ್ದೆ ಬರದಿದ್ದಾಗಲೋ ನಿದ್ದೆಮಾಡಲು ಪ್ರಯತ್ನಿಸುತ್ತಿದ್ದರೆ,— ಮೈ ಕೆರೆದುಕೊಳ್ಳುವುದರಿಂದ ಒಳ್ಳೆಯದಾಗದೆಂಬ ಯೋಚನೆ ಬರುವ ಯಾವುದಾದರೂ ಸ್ಥಿತಿಯಲ್ಲಿ ನೀವಿದ್ದರೆ ನಿಮ್ಮ ಮೈಮೇಲೆ ಸಾವಿರಾರು ಸ್ಥಳಗಳಲ್ಲಿ ನವೆ ಮೊದಲಾಗುತ್ತದೆ. ಬಲುಬೇಗ ಜಿಮ್ ಕೂಗಿದ:

'ಏ,–ಯಾರು ನೀನು ? ಏನು ನೀನು ? ನನ್ನ ಕಿವಿಯಲ್ಲಿ ಯಾವುದೋ ಸದ್ದು ಬೀಳುತ್ತಿಲ್ಲವೆನ್ನುವುದಾದರೆ ನಾನು ಹೆಡ್ಡನಾದೇನು! ಸರಿಯೆ, ನಾನು ಮಾಡಲಿರುವುದು ನನಗೆ ಗೊತ್ತು. ಆ ಸದ್ದು ಮತ್ತೊಮ್ಮೆ ಕೇಳಿಸುವ ತನಕ ನಾನು ಇಲ್ಲಿಯೇ ಕುಳಿತುಬಿಡುತ್ತೇನೆ.'

ಹೀಗೆ ಹೇಳಿ ಅವನು ಟಾಮನಿಗೂ ನನಗೂ ನಡುವೆ ನೆಲದಮೇಲೆ ಕುಳಿತನು. ಅಲ್ಲಿದ್ದ ವೃಕ್ಷವನ್ನು ಒರಗಿ ಕುಳಿತು, ಇನ್ನೇನು ನನ್ನ ಹೆಜ್ಜೆಗಳಿಗೆ ತಗುಲಿತು ಎನ್ನುವ ತನಕ ಕಾಲು ಚಾಚಿದನು. ಆಗ ನನ್ನ ಮೂಗಿನಲ್ಲಿ ನವೆ ಮೊದಲಾಯಿತು, ನನ್ನ ಕಣ್ಣುಗಳಲ್ಲಿ ನೀರಾಡಿತು. ಆದರೆ ಕೆರೆದುಕೊಳ್ಳುವ ಧೈರ್ಯವೇ ನನಗಿರಲಿಲ್ಲ. ಬಳಿಕ ನವೆ ಒಳಮುಖವಾಯಿತು. ನನ್ನ ಕೆಳ ಬೆನ್ನಿನಲ್ಲೂ ಆ ಮೇಲೆ ನವೆ ಮೊದಲಾಯಿತು. ನಾನು ಅಚಲವಾಗಿ ಕುಳಿತಿರುವುದು ಹೇಗೆನ್ನುವುದೇ ತಿಳಿಯಲಿಲ್ಲ. ಈ ಶನಿ ಆರೇಳು ನಿಮಿಷಗಳ ಕಾಲ ಕಾಡಿತು, ಆ ಅವಧಿಯೇ ದೀರ್ಘಕಾಲದಂತೆ ತೋರಿತು. ಹನ್ನೊಂದು ಬೇರೆ ಬೇರೆ ಸ್ಥಳಗಳಲ್ಲಿ ನವೆ ಹುಟ್ಟಿತು. ನನಗೆ ಇನ್ನೊಂದು ನಿಮಿಷವನ್ನೂ ಹೀಗೆ ಕಳೆಯುವುದು ಅಸಾಧ್ಯವೆಂದು ತೋರಿತು. ನಾನು ನನ್ನ ಹಲ್ಲುಗಳನ್ನು ಗಟ್ಟಿಯಾಗಿ ಕೂಡಿಸಿ ನನ್ನ ಕೈಲಾದುದನ್ನು ಮಾಡತೊಡಗಿದೆ. ಆಗಲೆ ಜಿಮ್ ಜೋರಾಗಿ ಉಸಿರಾಡುತ್ತಿದ್ದನು, ಬಳಿಕ ಗೊರಕೆ ಹೊಡೆಯಲು ಮೊದಲು ಮಾಡಿದನು. ಆಗ ನನಗೆ ಹಾಯೆನಿಸಿತು.

ಟಾಮ್ ತನ್ನ ಬಾಯಿಂದ ಸಣ್ಣಗೆ ಸದ್ದು ಮಾಡಿ ನನಗೆ ಸನ್ನೆ ಮಾಡಿದನು. ನಾವು ಅಂಬೆಗಾಲಿಡುತ್ತ ಮುಂದೆ ಸರಿದೆವು. ಹತ್ತು ಹೆಜ್ಜೆ ಸರಿದ ಮೇಲೆ ಟಾಮ್ ನನ್ನ ಕಿವಿಯಲ್ಲಿ ಪಿಸುಗುಟ್ಟಿದ. ಜಿಮ್ಮನ್ನು ತಮಾಷೆಗಾಗಿ ಮರಕ್ಕೆ ಕಟ್ಟಿ ಹಾಕುವ ಅಪೇಕ್ಷೆಯಾಯಿತು ಅವನಿಗೆ. ನಾನು ಅದನ್ನು ವಿರೋಧಿಸಿದೆ : ಅವನು ಎಚ್ಚರಗೊಂಡು ಗದ್ದಲ ಮಾಡಬಹುದು, ನಾನು ಮನೆಯೊಳಗಿಲ್ಲದಿರುವುದು ಅವರಿಗೆ ತಿಳಿದು ಹೋಗಬಹುದು ಎಂದು ಅಂಜಿದೆ, ಆಗ ತನ್ನ ಬಳಿ ಸಾಕಷ್ಟು ಮೋಂಬತ್ತಿಗಳಿಲ್ಲವೆಂದೂ. ತಾನು ಅಡುಗೆ–ಮನೆಗೆ ನುಗ್ಗಿ ಇನ್ನಷ್ಟನ್ನು ತರುವುದಾಗಿಯೂ ಟಾಮ್ ಹೇಳಿದ; ಅವನು ಈ ಕೆಲಸಕ್ಕೆ ತೊಡಗುವುದೂ ನನಗೆ ಇಷ್ಟವಿಲ್ಲ. ನಾನು ಹೇಳಿದೆ, ಜಿಮ್, ಎಚ್ಚರಗೊಂಡು ಬಂದು ಬಿಟ್ಟಾನು, ಎಂದು. ಆದರೆ ಟಾಮ್ ಆದದ್ದಾಗಲಿ, ಎಂದ, ನಾವು ಅಲ್ಲಿಗೆ ನುಸುಳಿಕೊಂಡು ಹೋಗಿ ಮೂರು ಮೋಂಬತ್ತಿಗಳನ್ನು ಸಂಪಾದಿಸಿದೆವು : ಟಾಮ್ ಅವುಗಳ ಬೆಲೆಯಾದ ಐದು ಸೆಂಟುಗಳನ್ನು ಮೇಜಿನ ಮೇಲೆ ಇರಿಸಿದ. ಈಚೆಗೆ ಬಂದೆವು ; ಓಡಿ ಹೋಗುವ ಅವಸರದಲ್ಲಿ ನನ್ನ ಮೈ ಬೆವರಿತು. ಟಾಮನೋ ಹಟಗಾರ : ಜಿಮ್ಮನ ಬಳಿಗೆ ತೆವಳಿಕೊಂಡು ಹೋಗಿ ಅವನನ್ನು ಯಾವುದಾದರೂ ಚೇಷ್ಟೆಗೆ ಗುರಿಪಡಿಸುವುದು ಅವನ ಹಂಚಿಕೆ. ನಾನು ಬಲು ಹೊತ್ತು ಕಾದು ನಿಂತೆ : ಎಲ್ಲವೂ ಬಲು ನೀರವವಾಗಿದ್ದು ನನ್ನ ಒಂಟಿತನ ಎದ್ದು ಕಾಣುವಂತಿತ್ತು.

ಟಾಮ್ ಹಿಂದಿರುಗಿದ ಕೂಡಲೆ ನಾವು ತೋಟದ ಬೇಲಿಯನ್ನನುಸರಿಸಿ ಹಾದು ಹೋಗುವ ಮಾರ್ಗವನ್ನು ಹಿಡಿದೆವು. ಸ್ವಲ್ಪ ಕಾಲದಲ್ಲೇ ಮನೆಯ ಆಚೆಯ ಪಕ್ಕದ ಗುಡ್ಡದ ಕಡಿದಾದ ನೆತ್ತಿಯನ್ನು ಸೇರಿದೆವು. ಜಿಮ್ಮನ ಟೋಪಿಯನ್ನು ಅವನ ತಲೆಯಿಂದ ತೆಗೆದು ಅಲ್ಲಿಯೇ ಮೇಲಿದ್ದ ಮೋಟು ಕೊಂಬೆಗೆ ತಗುಲಿಸಿದುದಾಗಿಯೂ, ಅವನು ಸ್ವಲ್ಪ ಅಲುಗಿದನೇ ಹೊರತು ಎಚ್ಚರಗೊಳ್ಳಲಿಲ್ಲವೆಂದೂ ಟಾಮ್ ಹೇಳಿದನು. ಆ ಮೇಲೆ ಜಿಮ್ ಎಲ್ಲರಿಗೂ ಹೇಳಿದ್ದೇನೆಂದರೆ : ಮಂತ್ರಗಾರ್ತಿಯರು ನನಗೆ ಮಂತ್ರ ಹಾಕಿ ಪ್ರಜ್ಞೆ ತಪ್ಪಿಸಿ ನನ್ನ ಹೆಗಲೇರಿ ಸೀಮೆಯ ಮೇಲೆಲ್ಲಾ ಸುತ್ತಾಡಿಸಿ, ಕಡೆಗೆ ನನ್ನನ್ನು ಗಿಡಗಳ ಕೆಳಗೆ ತಂದು ಕೂರಿಸಿ, ಯಾರು ಈ ಕೆಲಸವನ್ನು ಮಾಡಿದರು ಎಂಬುದಕ್ಕೆ ಸಾಕ್ಷಿಯಾಗಿ ನನ್ನ ಟೋಪಿಯನ್ನು ಹಾಗೆ ಮೋಟು ಕೊಂಬೆಗೆ ತಗುಲಿಸಿದರು. ಜಿಮ್ ಇನ್ನೊಂದು ಸಲ ಹೇಳಿದನಂತೆ: ಅವರು ತನ್ನನ್ನು ಏರಿಕೊಂಡು ನ್ಯೂ ಆರ್ಲಿಯನ್ಸ್ ನಗರಕ್ಕೆ ಹೋಗಿದ್ದರು ಎಂದು ; ಆಮೇಲಾಮೇಲೆ ಸಲಸಲಕ್ಕೂ /ಈ ವರ್ಣನೆ ವಿಸ್ತಾರವಾಗುತ್ತ ಬಂತು. ಅದು ಎಲ್ಲಿಯ ತನಕ ಎಂದರೆ, ಅವರು ಪ್ರಪಂಚದ ಮೇಲೆಲ್ಲಾ ತನ್ನನ್ನು ಓಡಾಡಿಸಿದರು, ತನ್ನ ಬೆನ್ನೆಲ್ಲ ಜೀನು-ಹಣ್ಣುಗಳಿಂದ ತುಂಬಿ ಹೋಗಿದೆ ಎನ್ನುವ ತನಕ. ಈ ಪ್ರಸಂಗದಿಂದ ಜಿಮ್ಮನಿಗೆ ಅತಿ ಹೆಮ್ಮೆಯಾಯಿತು. ಉಳಿದ ನೀಗ್ರೋಗಳು ಅವನ ಕಣ್ಣಿಗೇ ಬೀಳದವರಾದರು. ಈ ಸಂಗತಿಯನ್ನು ಕೇಳಲು ದೂರದೂರುಗಳಿಂದ ನೀಗ್ರೋಗಳು ಜಿಮ್ಮನ ಬಳಿಗೆ ಬರತೊಡಗಿದರು. ಸೀಮೆಯಲ್ಲಿ

ರುವ ಯಾವ ನೀಗ್ರೋಗಿಂತಲೂ ಹೆಚ್ಚಿನ ಗೌರವ ಇವನಿಗೆ ಸಲ್ಲುತ್ತಿತ್ತು. ಇವನೊಂದು ಆಶ್ಚರ್ಯ ವಸ್ತುವೆಂಬಂತೆ ನೀಗ್ರೋಗಳು ಇವನ ಮುಂದೆ ಬೆರಗಾಗಿ ಬಾಯಿ ಕಳೆದು ನಿಂತು ಕೆಳಗೂ ಮೇಲೂ ನೋಡುತ್ತಿದ್ದರು. ಸಾಮಾನ್ಯವಾಗಿ ನೀಗ್ರೋಗಳು ಅಡುಗೆಯ ಮನೆಯ ಬೆಂಕಿಯ ಪಕ್ಕದಲ್ಲಿ ಕುಳಿತು, ಕತ್ತಲೆಯಲ್ಲಿ ಅಡಗಿರುವ ಮಂತ್ರಗಾರ್ತಿಯರ ವಿಷಯವಾಗಿ ಮಾತಾಡುತ್ತಾರೆ. ಆದರೆ ಯಾವನಾದರೂ ಆ ಸದ್ದಿ ಎತ್ತಿ ಮಾತಾಡ ತೊಡಗಿದರೆ, ಜಿಮ್ ನಡುವೆ ಬಾಯಿ ಹಾಕಿ 'ಹಂ, ಏನೆಂದೆ ? ಮಂತ್ರಗಾರ್ತಿಯರ ವಿಷಯ ನಿನಗೇನು ಗೊತ್ತು ?' ಎಂದು ಪ್ರಶ್ನಿಸಿ ಆ ನೀಗ್ರೋ ಬಾಯಿ ಮುಚ್ಚಿಕೊಂಡು ಹಿಂದಿನ ಸಾಲಿಗೆ ಹೋಗಿ ಕೂರುವಂತೆ ಮಾಡುತ್ತಿದ್ದ. ಆ ಐದು ಸೆಂಟುಗಳ ನಾಣ್ಯ ವನ್ನು ದೆವ್ವ ಅದರ ಕೈಗಳಿಂದಲೇ–ತನಗೆ ರಕ್ಷೆಯಾಗಿರಲೆಂದು–ಕೊಟ್ಟಿತೆಂದೂ, ಅದರಿಂದ ಸಕಲ ರೋಗಗಳನ್ನೂ ಪರಿಹರಿಸಬಹುದೆಂದೂ, ಮತ್ತು ಅದನ್ನು ಕುರಿತು ತಾನು ಒಂದು ರಹಸ್ಯೋಕ್ತಿಯನ್ನು ನುಡಿಯುವಷ್ಟರಿಂದಲೇ ತನಗೆ ಬೇಕಾದಾಗ ಮಂತ್ರಗಾರ್ತಿಯರನ್ನು ಕರೆಸಿಕೊಳ್ಳಬಹುದೆಂದೂ ಜಿಮ್ ಹೇಳುತ್ತಿದ್ದನು. ಆ ನಾಣ್ಯಕ್ಕೆ ಒಂದು ತಂತಿಯನ್ನು ತೂರಿಸಿ ತಾಯತಿ ಮಾಡಿಕೊಂಡು ಅದನ್ನು ಸದಾ ತನ್ನ ಕೊರಳಲ್ಲಿ ಧರಿಸುತ್ತಿದ್ದನು. ಇಷ್ಟಾದರೂ ತಾನು ಅದನ್ನುದ್ದೇಶಿಸಿ ಹೇಳುತ್ತಿದ್ದ ರಹಸ್ಯೋಕ್ತಿ ಯಾವುದೆಂಬುದನ್ನು ಮಾತ್ರ ಅವನು ಎಂದೂ ಹೇಳಲಿಲ್ಲ. ಸುತ್ತ ಮುತ್ತಣ ಪ್ರದೇಶಗಳಿಂದ ನೀಗ್ರೋಗಳು ಜಿಮ್ಮನ ಬಳಿಗೆ ಬರುವುದೂ, ಆ ಐದು ಸೆಂಟುಗಳ ನಾಣ್ಯದ ಕೇವಲ ದರ್ಶನಕ್ಕಾಗಿ ತಮ್ಮಲ್ಲಿದ್ದುದನ್ನು ಅವನಿಗೆ ಕೊಟ್ಟು ಬಿಡುವುದೂ ವಾಡಿಕೆಯಾಗಿತ್ತು. ಆದರೆ ಮಾತ್ರ ಅವರು ಅದನ್ನು ಮುಟ್ಟುತ್ತಿರಲಿಲ್ಲ ; ಏಕೆಂದರೆ ದೆವ್ವ ಅದನ್ನು ಮುಟ್ಟಿ ಹೋಗಿತ್ತು. ದೆವ್ವವನ್ನು ನೋಡಿದವನಾದ್ದರಿಂದಲೂ, ಮಂತ್ರಗಾರ್ತಿಯರ ವಾಹನವಾಗಿದ್ದುದ ರಿಂದಲೂ ಜಿಮ್ ಈ ಅದ್ಭುತದಲ್ಲೇ ಸಿಕ್ಕಿಕೊಂಡನು ; ಮನೆಯಾಳಿನಂತೆ ದುಡಿಯು ವುದು ಅವನಿಗೆ ಇನ್ನು ಸಾಧ್ಯವಾಗಲಿಲ್ಲ.

ನಾನೂ ಟಾಮನೂ ಬೆಟ್ಟದ ನೆತ್ತಿಯ ಅಂಚಿಗೆ ಬಂದೆವು ; ತಲೆಬಾಗಿ ಹಳ್ಳಿ ಯತ್ತ ಕಣ್ಣು ಹಾಯಿಸಿದೆವು; ಅಲ್ಲಿ ಮೂರೋ ನಾಲ್ಕೋ ದೀಪಗಳು ಮಿಣುಗುಟ್ಟು ತ್ತಿರುವುದು ನಮ್ಮ ಕಣ್ಣಿಗೆ ಬಿತ್ತು : ಅಲ್ಲಿ ರೋಗಿಗಳಿದ್ದಿರಬಹುದು, ನಮ್ಮ ನೆತ್ತಿಯ ಮೇಲೆ ನಕ್ಷತ್ರಗಳು ಅತಿರಮ್ಯವಾಗಿ ಮೆರೆಯುತ್ತಿದ್ದವು. ಆ ಕೆಳಗೆ ಹಳ್ಳಿಯ ಅಂಚಿನಲ್ಲಿ ಒಂದು ಇಡೀ ಮೈಲಿಯಗಲದ ನದಿ ಅತಿ ನೀರವವಾಗಿ, ಆದರೆ ವೈಭವದಿಂದ, ಹರಿಯು ತ್ತಿತ್ತು. ನಾವು ಗುಡ್ಡವನ್ನು ಇಳಿದೆವು ; ಅಲ್ಲೊಂದು ಹಳೆಯ ಚರ್ಮಶಾಲೆಯಲ್ಲಿ ಜೋ ಹಾರ್ಪರ್, ಬೆನ್ ರೋಜರ್ಸ್, ಮತ್ತು ಇನ್ನೂ ಇಬ್ಬರು ಮೂವರು ಹುಡುಗರು ಅಡಗಿಕೊಂಡಿರುವುದನ್ನು ಪತ್ತೆ ಹಚ್ಚಿದೆವು. ಅಲ್ಲಿದ್ದ ಸಣ್ಣ ದೋಣಿಯೊಂದನ್ನು ಬಿಚ್ಚಿಕೊಂಡು ನದಿಯಲ್ಲಿ ಎರಡುವರೆ ಮೈಲಿ ದೂರ ಪ್ರಯಾಣಮಾಡಿ ಗುಡ್ಡ ತಪ್ಪಲಿನ

ದೊಡ್ಡ ಮಚ್ಚೆಯಂತಿದ್ದ ಒಂದು ಸ್ಥಳವನ್ನು ತಲುಪಿ, ದೋಣಿಯಿಂದಿಳಿದು, ದಡದ ಮೇಲೆ ನಡೆದು ಹೋದೆವು.

ಅಲ್ಲಿ ಕುರುಚಲುಗಿಡಗಳ ಮೆಳೆಯೊಂದರ ಬಳಿಗೆ ಸಾಗಿದೆವು. ಟಾಮ್ 'ಈ ರಹಸ್ಯವನ್ನು ಯಾರಿಗೂ ಬಾಯಿಬಿಡುವುದಿಲ್ಲ' ಎಂಬ ವಾಗ್ದಾನವನ್ನು ನಮ್ಮಿಂದ ಪಡೆದು ಆ ಕುರುಚಲುಗಿಡಗಳು ಅತಿ ದಟ್ಟವಾಗಿದ್ದ ಭಾಗದಲ್ಲಿ ಗುಡ್ಡದೊಳಗೊಂದು ಪೊಟ್ಟರೆ ಯಿರುವುದನ್ನು ತೋರಿಸಿದನು. ಮೋಂಬತ್ತಿಗಳನ್ನು ಹಚ್ಚಿ ಅಂಬೆಗಾಲಿಡುತ್ತ ಸಾಗಿದೆವು. ಸುಮಾರು ಇನ್ನೂರು ಗಜದೂರ ಮುಂಬರಿದಮೇಲೆ ಗುಹೆ ಬಾಯ್ತೆರೆಯಿತು. ಟಾಮ್ ದಾರಿಯ ಎಡಬಲಗಳನ್ನು ಕೋಲಿನಿಂದ ಕುಟ್ಟುತ್ತ ನಡೆದು ಗೋಡೆಯೊಂದರ ಕೆಳಗೆ ತೂರಿದನು. ಆ ಗೋಡೆಯಲ್ಲೊಂದು ಸುರಂಗವಿರುವುದನ್ನು ನೀವು ಗುರ್ತಿಸುವುದು ಸಾಧ್ಯವೇ ಇರಲಿಲ್ಲ. ನಾವು ಇಕ್ಕಟ್ಟಾದ ಒಂದು ಸ್ಥಳದ ಮಾರ್ಗವಾಗಿ ಒಂದುರೀತಿಯ ಕೊಠಡಿಯನ್ನು ತಲುಪಿದೆವು. ಅದು ಸುತ್ತಲೂ ತೇವದಿಂದ ಕೂಡಿತ್ತು; ನಮಗೆ ಚಳಿ. ಮೈ ಬೆವರುತ್ತಿತ್ತು. ನಾವಲ್ಲಿ ನಿಂತೆವು. ಟಾಮ್ ಹೇಳಿದ: 'ಈಗ ನಾವು ಕಳ್ಳರ ಗುಂಪನ್ನು ಪ್ರಾರಂಭಿಸುತ್ತೇವೆ; ಮತ್ತು ಇದನ್ನು ಟಾಮ್ ಸಾಯರನ ತಂಡ ಎಂದು ಕರೆಯುತ್ತೇವೆ. ಇದಕ್ಕೆ ಸೇರುವ ಪ್ರತಿಯೊಬ್ಬನೂ ಒಂದು ಪ್ರತಿಜ್ಞೆಯನ್ನು ಮಾಡ ಬೇಕು, ಮತ್ತು ತನ್ನ ಹೆಸರನ್ನು ರಕ್ತದಲ್ಲಿ ಬರೆಯಬೇಕು."

ಎಲ್ಲರೂ ಒಪ್ಪಿದರು. ನನಗೆ ಟಾಮ್ ತಾನು ಪ್ರತಿಜ್ಞಾವಚನವನ್ನು ಬರೆದಿದ್ದ ಒಂದು ಕಾಗದದ ಹಾಳೆಯನ್ನು ಈಚೆಗೆ ತೆಗೆದು ಓದಿದನು. 'ತಂಡಕ್ಕೆ ಯಾವಾಗಲೂ ಅಂಟಿಕೊಂಡಿರುತ್ತೇನೆ; ರಹಸ್ಯವಾವುದನ್ನೂ ಪ್ರಕಟಿಸುವುದಿಲ್ಲ; ತಂಡಕ್ಕೆ ಸೇರಿದ ಯಾವ ಹುಡುಗನಿಗಾಗಲಿ ಯಾರಿಂದಲೇ ಆಗಲಿ ತೊಂದರೆಯಾದಲ್ಲಿ, ಅಂಥ ಮನುಷ್ಯನನ್ನು ಅವನ ಸಂಸಾರವನ್ನೂ ಕೊಂದುಬಿಡೆಂದು ಹೇಳಿದರೆ, ಅದನ್ನು ಖಂಡಿತವಾಗಿ ಮಾಡು ತ್ತೇನೆ; ಅವರನ್ನು ಕೊಂದು ಅವರ ಎದೆಯಮೇಲೆ ಶಿಲುಬೆಯ ಗುರುತನ್ನು ಕೊರೆದು ಬರುವ ತನಕ ನಾನು ಆಹಾರವನ್ನೂ ನಿದ್ರೆಯನ್ನು ತ್ಯಜಿಸುತ್ತೇನೆ–ಇದೇ ಆ ಪ್ರತಿಜ್ಞೆಯ ವಿವರ. ತಂಡಕ್ಕೆ ಸಂಬಂಧ ಪಡದವರು ಯಾರೂ ಆ ಗುರುತನ್ನು ಬಳಸಬಾರದು; ಬಳಸಿದರೆ ಅಂಥವನಮೇಲೆ ವ್ಯಾಜ್ಯಮಾಡಬೇಕು; ಅವನು ಮತ್ತೆಹಾಗೆಯೇ ಮಾಡಿದರೆ ಅವನನ್ನು ಕೊಂದುಬಿಡಬೇಕು. ತಂಡಕ್ಕೆ ಸೇರಿದ ಯಾವನೇ ಆಗಲಿ ರಹಸ್ಯಗಳನ್ನು ಹೊರಗೆಡಹಿದರೆ ಅವನ ಕತ್ತನ್ನು ಕತ್ತರಿಸಬೇಕು; ಅವನ ಶವವನ್ನು ಸುಟ್ಟು, ಬೂದಿ ಯನ್ನು ಸುತ್ತಲೂ ಹರಡಬೇಕು. ಅವನ ಹೆಸರನ್ನು ತಂಡರ ಪಟ್ಟಿಯಿಂದ ತೊಡೆದು ಹಾಕಬೇಕು; ರಕ್ತದಿಂದ ತಂಡದಲ್ಲಿ ಯಾರೂ ಆ ಹೆಸರನ್ನು ಮತ್ತೆ ಎತ್ತಬಾರದು. ಅದನ್ನು ಪೀಡೆಯೆಂದು ಶಪಿಸಿ ಎಲ್ಲಕಾಲಕ್ಕೂ ಮರೆತುಬಿಡಬೇಕು. ಅದು ನಿಜ ವಾಗಿಯೂ ಬಲು ಸೊಗಸಾದ ಪ್ರತಿಜ್ಞೆಯೆಂದು ಎಲ್ಲರೂ ಹೇಳಿದರು. ಮತ್ತು 'ಇದು ಹುಟ್ಟಿದುದು ನಿನ್ನ ಸ್ವಂತಬುದ್ಧಿಯಲ್ಲಿ?' ಎಂದು ಟಾಮನನ್ನು ಪ್ರಶ್ನಿಸಿದರು. ಇದರಲ್ಲಿ

ಸ್ವಲ್ಪಭಾಗ ತನ್ನ ಸ್ವಂತಬುದ್ಧಿಯಿಂದ ಬಂತೆಂದೂ, ಉಳಿದದ್ದು ಕಡಲುಕಳ್ಳರ ಮತ್ತು ಕಳ್ಳರ ಗ್ರಂಥಗಳಿಂದ ಬಂತೆಂದೂ ಶ್ರೇಷ್ಠ ವರ್ಗದ ಎಲ್ಲ ತಂಡಗಳಲ್ಲೂ ಈ ಪ್ರತಿಜ್ಞೆ ರೂಢಿಯಲ್ಲಿರುವುದೆಂದೂ ಅವನು ಉತ್ತರಕೊಟ್ಟನು.

ಅಂತೆಯೇ ರಹಸ್ಯಗಳನ್ನು ಹೊರಗೆಡಹಿದ ತಂಡದ ಹುಡುಗರ ಮನೆಯವರನ್ನೂ ಕೊಂದುಬಿಡುವುದು ಒಳ್ಳೆಯದೆಂದು ಕೆಲವರಿಗೆ ಅನ್ನಿಸಿತು. ಅದು ಒಳ್ಳೆಯ ಆಲೋಚನೆಯೆಂದು ಟಾಮ್ ಒಪ್ಪಿಕೊಂಡ. ಪೆನ್‌ಸಿಲಿನಿಂದ ಆ ಪಂಕ್ತಿಯನ್ನು ಬರೆದು ಸೇರಿಸಿದ. ಆಗ ಬೆನ್ ರೋಜರ್ಸ್ ಕೇಳಿದ :

'ಹಕ್‌ಫಿನ್ ಇದ್ದಾನಲ್ಲ ಇಲ್ಲಿ ; ಅವನ ವಿಷಯದಲ್ಲಿ ಏನುಮಾಡುತ್ತೀರಿ?'

'ಅವನ ತಂದೆ ಇಲ್ಲವೆ ?' ಎಂದ ಟಾಮ್‌ಸಾಯರ್.

'ಹೌದು ಅವನ ತಂದೆ ಇದ್ದಾರೆ. ಆದರೆ, ಇತ್ತೀಚೆಗೆ ಅವನೇಕೋ ನಿಮ್ಮಗೆಂದೂ ಸಿಕ್ಕುತ್ತಿಲ್ಲ, ಅವನು ಪಟ್ಟಾಗಿ ಕುಡಿದು ಚರ್ಮಶಾಲೆಯಲ್ಲಿ ಹಂದಿಗಳೊಂದಿಗೆ ಬಿದ್ದಿರುತ್ತಿದ್ದ. ಈ ಸೀಮೆಯಲ್ಲಿ ಅವನ ತಲೆಯನ್ನು ಕಂಡಂತೂ ವರುಷದಮೇಲಾಯಿತು.'

ಎಲ್ಲರೂ ಮಾತಾಡಿಕೊಂಡರು. ಪ್ರತಿಯೊಬ್ಬ ಹುಡುಗನಿಗೂ ತನ್ನಿಂದ ಕೊಲ್ಲಿಸಿಕೊಳ್ಳಲು ಒಂದು ಸಂಸಾರವಾಗಲಿ, ಅಥವಾ ಯಾರಾದರೊಬ್ಬ ವ್ಯಕ್ತಿಯಾಗಲಿ ಇರಲೇಬೇಕಾಗಿದ್ದುದರಿಂದ ಅವರು ನನ್ನನ್ನು ಇನ್ನೇನು ಹೊರಹಾಕುವುದರಲ್ಲಿದ್ದರು; ಇಲ್ಲವಾದರೆ ಆ ಸೂತ್ರ ಉಳಿದವರಿಗೆ ಗ್ರಾಹ್ಯವೂ ಸಮ್ಮತವೂ ಆಗುತ್ತಿರಲಿಲ್ಲ. ಯಾರಿಗೂ ಬೇರೆ ಯೋಚನೆ ಶಕ್ಯವಿರಲಿಲ್ಲ ಎಲ್ಲರೂ ಕೊರಡಿನಂತೆ, ಮಾತಿಲ್ಲದೆ, ಕುಕ್ಕರಿಸಿದರು. ನಾನು ಅಳತೊಡಗಿದೆ; ಆದರೆ ಇದಕ್ಕಿದ್ದಂತೆ ನನಗೊಂದು ದಾರಿ ಹೊಳೆಯಿತು. ನಾನು ಅವರಿಗೆ ಅಂಥ ಸಂದರ್ಭ ಬಂದಲ್ಲಿ, ಮಿಸ್ ವ್ಯಾಟ್‌ಸನ್ನನ್ನು ಅರ್ಪಿಸುವುದಾಗಿ ತಿಳಿಸಿದೆ–ಅವರು ಅವಳನ್ನು ಕೊಲ್ಲಬಹುದಿತ್ತು, ಅಲ್ಲಿದ್ದವರೆಲ್ಲರೂ ದನಿಯೆತ್ತಿದರು.

'ಓ, ಅವಳು ಸಾಕು. ಅದು ಸರಿಯಾಗಿದೆ. ಹಕ್ ನಮ್ಮ ತಂಡಕ್ಕೆ ಸೇರಬಹುದು.'

ಎಲ್ಲರೂ ಗುಂಡುಸೂಜಿಯಿಂದ ತಮ್ಮ ಬೆರಳುಗಳನ್ನು ಚುಚ್ಚಿಕೊಂಡು ಸಹಿಯಾಗಿ ರಕ್ತತೆಗೆದರು: ನಾನೂ ಆ ಕಾಗದದಮೇಲೆ ನನ್ನ ಗುರುತನ್ನು ಹಾಕಿದೆ.

'ಈಗ ಈ ತಂಡದ ಕಾರ್ಯಕ್ರಮವೇನು?' ಎಂದ ಬೆನ್‌ರೋಜರ್ಸ್.

'ದರೋಡೆ ಮತ್ತು ಕೊಲೆ' ಎಂದ ಟಾಮ್.

'ಆದರೆ ನಾವು ದರೋಡೆ ಮಾಡುವುದು ಏನನ್ನು ?—ಮನೆಗಳನ್ನೆ ? ಅಥವಾ ದನಗಳನ್ನೆ? ಅಥವಾ—'

'ಮಣ್ಣು ! ದನ ಮುಂತಾದುವನ್ನು ಕದಿಯುವುದು ದರೋಡೆಯಲ್ಲ; ಕನ್ನಗಳವು' ಎಂದ ಟಾಮ್‌ಸಾಯರ್: 'ನಾವು ಕನ್ನಗಳ್ಳರಲ್ಲ. ಅದು ಯುಕ್ತರೀತಿಯೇ ಅಲ್ಲ. ನಾವು

ಹಾದಿ ಬಡಕರು. ಮೊಗವಾಡಧರಿಸಿ ದಾರಿಯಂ ಬಂಡಿಗಳನ್ನೂ ತಡೆಯುತ್ತೇವೆ. ಜನರನ್ನು ಕೊಲ್ಲುತ್ತೇವೆ; ಅವರ ಗಡಿಯಾರಗಳನ್ನೂ ಹಣವನ್ನೂ ದೋಚಿಕೊಳ್ಳುತ್ತೇವೆ.'

'ನಾವು ಯಾವಾಗಲೂ ಜನರನ್ನು ಕೊಲ್ಲಲೇ ಬೇಕೆ?'

'ಓ, ಖಂಡಿತವಾಗಿ, ಅದೇ ಉತ್ತಮಮಾರ್ಗ. ಕೆಲವು ಶಾಸ್ತ್ರಜ್ಞರು ಈ ವಿಷಯ ದಲ್ಲಿ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೂ ಕೊಲ್ಲುವುದೇ ಉತ್ತಮ ಮಾರ್ಗವೆಂದು ಬಹುಮಟ್ಟಿಗೆ ಭಾವಿಸಲಾಗಿದೆ. ಸೆರೆಸಿಕ್ಕಿದವರಲ್ಲಿ ಕೆಲವರನ್ನು ಈ ಗುಹೆಗೆ ಸಾಗಿಸಿಕೊಂಡು ಬಂದು ಅವರ ಕಡೆಯವರು ನಮಗೆ 'ಬಿಡುಗಡೆ ಹಣ'ವನ್ನು ತೆತ್ತು ಬಿಡಿಸಿಕೊಂಡುಹೋಗುವ ತನಕ ಅವರನ್ನು ಉಳಿಸಿಕೊಳ್ಳಬೇಕಾಗಿ ಬರುವ ಸಂದರ್ಭ ಗಳಲ್ಲಿ ಮಾತ್ರ ಕೊಲೆ ಅನಗತ್ಯ.'

"ಬಿಡುಗಡೆ ಹಣಕ್ಕಾಗಿ? ಹಾಗೆಂದರೇನು?"

'ನನಗೆ ತಿಳಿಯದು ಎಲ್ಲರೂ ಮಾಡುವುದು ಹಾಗೆಯೇ; ಅದನ್ನು ನಾನು ಗ್ರಂಥ ಗಳಲ್ಲಿ ಕಂಡಿದ್ದೇನೆ. ನಾವೂ ಹಾಗೆ ಮಾಡಬೇಕಾಗಿದೆ.' 'ಅದೇನೆಂಬುದೇ ತಿಳಿಯ ದಿದ್ದರೆ ನಾವದನ್ನು ಹೇಗೆ ಮಾಡಬಲ್ಲೆವು.' 'ಅದನ್ನೆಲ್ಲ ನಿಂದಿಸುವುದೇಕೆ? ನಾವು ಅದನ್ನು ಮಾಡಲೇಬೇಕಾಗಿದೆ, ಅದು ಗ್ರಂಥಗಳಲ್ಲಿದೆ ಎಂದು ನಾನು ಹೇಳುತ್ತಿಲ್ಲವೆ? ಗ್ರಂಥಗಳಲ್ಲಿ ನಿರೂಪಿತವಾಗಿರುವುದಕ್ಕಿಂತ ಬೇರೆಯುವನ್ನು ನೀನು ಮಾಡಬಯಸುವೆಯಾ ಸಮಸ್ಯೆಗಳುದ್ಭವಿಸುವಂತೆ ಮಾಡುವೆಯಾ?'

'ಓ, ಅದೆಲ್ಲ ಹೇಳುವುದಕ್ಕೆ ಬಲುಸೊಗಸು, ಟಾಮ್‌ಸಾಯರ್. ಆದರೆ ನಮಗೆ ಆ ವ್ಯಕ್ತಿಗಳನ್ನು ಅಪಹರಿಸಿ ಬಚ್ಚಿಡುವುದು ಹೇಗೆಂಬುದೇ ತಿಳಿಯದಿದ್ದರೆ, ಈ ರಾಷ್ಟ್ರ ದಲ್ಲಿ ಬಿಡುಗಡೆ-ಹಣವನ್ನು ಸಲ್ಲಿಸಿ ಬಂಧಿತ ವ್ಯಕ್ತಿಗಳನ್ನು ಹೇಗೆ ಬಿಡಿಸಿಕೊಂಡು ಹೋಗು ತ್ತಾರೆ? ನನಗೆ ಸ್ಪಷ್ಟವಾಗಿ ತಿಳಿಯಬೇಕಾಗಿರುವ ಅಂಶ ಇದು, ನಿನ್ನೆಣಿಕೆ ಏನು?'

'ನನಗೆ ತಿಳಿಯದು. ಬಿಡುಗಡೆ-ಹಣ ಬರುವತನಕ ನಾವು ಅವರನ್ನು ಇಟ್ಟು ಕೊಂಡಿರುತ್ತೇವೆ ಎನ್ನುವುದರ ಅರ್ಥ, ಅವರು ಸಾಯುವ ತನಕ ನಾವು ಅವರನ್ನು ಇಟ್ಟುಕೊಂಡಿರುತ್ತೇವೆ ಎಂದಾದರೂ ಆಗಬಹುದು.'

'ಈಗ ಆಡಿದ ಮಾತು ಸುಮಾರಾಗಿದೆ. ನನ್ನ ಪ್ರಶ್ನೆಗೆ ಉತ್ತರ ಅಲ್ಲಿದೆ. ನೀನದನ್ನು ಮೊದಲೇ ಏಕೆ ಹೇಳಲಿಲ್ಲ? ಅವರು ಸಾಯುವ ತನಕ ನಾವು ಅವರನ್ನು ಬಿಡುಗಡೆ-ಹಣದ ನಿರೀಕ್ಷೆಯಲ್ಲಿ ಹಿಡಿದಿರುತ್ತೇವೆ. ಅವರು ಇಲ್ಲಿ ಇರುವುದನ್ನೆಲ್ಲ ತಿಂದು ಹಾಕುತ್ತಾ ಬಂದು, ತಪ್ಪಿಸಿಕೊಂಡು ಹೋಗಲು ಯಾವಾಗಲೂ ಪ್ರಯತ್ನಿಸುತ್ತಾ ಇದ್ದು ನಮಗೆ ತಾಪತ್ರಯದ ಹೊರೆಯಾಗುತ್ತಾರೆ.'

'ಯಾವ ಸೀಮೆಯ ಮಾತಿದು, ಬೆನ್ ರೋಜರ್ಸ್! ಅವರು ಒಂದು ಗೂಟ ವನ್ನು ಅಲುಗಿಸಿದರೂ ಅವರನ್ನು ಗುಂಡಿಟ್ಟು ಕೊಲ್ಲಲು ಸಿದ್ಧವಾಗಿರುವ ಕಾವಲು ಗಾರರನ್ನು ಅವರ ಮೇಲೆ ಹಾಕಿರುವಾಗ, ಅವರು ಹೇಗೆ ಓಡಿ ಹೋಗಬಲ್ಲರು?'

'ಕಾವಲುಗಾರ. ಅವರನ್ನು ಕಾಯುವುದಕ್ಕಾಗಿ ಒಬ್ಬ ಮನುಷ್ಯ ನಿದ್ದೆಗೆಟ್ಟು ರಾತ್ರಿಯುದ್ದಕ್ಕೂ ಕುಳಿತಿರಬೇಕು, ಅದು ತಿಳಿಗೇಡಿತನವೆಂದು ನನ್ನ ಭಾವನೆ. ಅವರನ್ನು ಈ ಬಳಿಗೆ ತಂದಕೂಡಲೇ ಯಾವನಾದರೊಬ್ಬ ದೊಣ್ಣೆಯೆತ್ತಿ ಅವರನ್ನು ಮುಗಿಸಿ ಬಿಡುಗಡೆ ಮಾಡಬಾರದು ಏಕೆ ?'

'ಹಾಗೆ ಮಾಡಬೇಕೆಂದು ಗ್ರಂಥಗಳಲ್ಲಿ ಹೇಳಿಲ್ಲ–ಆದ್ದರಿಂದ, ಬೆನ್ ರೋಜರ್ಸ್, ಯೋಗ್ಯ ರೀತಿಯಲ್ಲಿ ಕೆಲಸ ಮಾಡಬೇಕೆಂದು ನೀನು ಬಯಸುವೆಯೋ, ಇಲ್ಲವೊ ?— ಅದೀಗ ವಿಷಯ. ಪುಸ್ತಕಗಳನ್ನು ಬರೆದವರು ಯೋಗ್ಯವಾದ ಕೆಲಸ ಯಾವುದು ಎಂಬುದನ್ನು ಚೆನ್ನಾಗಿ ಬಲ್ಲರೆಂದು ನಿನಗೆ ಅನ್ನಿಸುವುದಿಲ್ಲವೆ ? ನೀನವರಿಗೆ ಕಲಿಸಬಹುದಾದ ಯಾವ ವಿಷಯವಾಗಲಿ ಎಷ್ಟಿರಬಹುದು ? ಹೆಚ್ಚೇನೂ ಇರಲಾರದು. ಇಲ್ಲ ಸ್ವಾಮಿ, ನಾವು ಕ್ರಮವಾದ ರೀತಿಯಲ್ಲಿ ನಡೆದು ಬಿಡುಗಡೆ–ಹಣದ ಸಲುವಾಗಿ ಅವರನ್ನು ಅಪಹರಿಸುವೆವು.'

'ಆಗಬಹುದು, ನನ್ನಿಂದ ಅಡ್ಡಿಯಿಲ್ಲ. ಅದು ಏನಾಗಲಿ, ಮೂರ್ಖನ ಮಾರ್ಗ ಎಂದು ನನ್ನ ಭಾವನೆ. ಹೋಗಲಿ ; ನಾವು ಹೆಂಗಸರನ್ನೂ ಕೊಲ್ಲುತ್ತೇವೆಯೋ ?'

'ಸರಿಯೆ, ಬೆನ್‌ರೋಜರ್ಸ್, ನಾನು ನಿನ್ನಷ್ಟು ಅಜ್ಞಾನಿಯಾಗಿದ್ದರೆ ಉಳಿಯುತ್ತಲೇ ಇರಲಿಲ್ಲ. ಹೆಂಗಸರನ್ನು ಕೊಲ್ಲುವುದೆ ? ಕೂಡದು. ಗ್ರಂಥಗಳಲ್ಲಿ ಹಾಗೆ ಹೇಳಿರುವುದು ಯಾರ ಕಣ್ಣಿಗೂ ಬಿದ್ದಿಲ್ಲ ನೀವು ಅವರನ್ನು ಈ ಗುಹೆಗೆ ಅಪಹರಿಸಿ ತರುತ್ತೀರಿ. ಅವರ ಬಗ್ಗೆ ನೀವು ಅತಿಶಯ ವಿನಯದಿಂದ ನಡೆದುಕೊಳ್ಳುತ್ತೀರಿ. ಕಾಲಕ್ರಮದಲ್ಲಿ ಅವರು ನಿಮ್ಮನ್ನು ಪ್ರೀತಿಸತೊಡಗುತ್ತಾರೆ. ಮನೆಗೆ ಹೋಗುವ ಅಪೇಕ್ಷೆಯೇ ಅವರಿಗೆ ಇನ್ನಿಲ್ಲವಾಗುತ್ತದೆ.'

'ಹಾಗಾದರೇನೋ ನಾನು ಒಪ್ಪುತ್ತೇನೆ ; ಆದರೆ ಅದರಲ್ಲಿ ಭಾಗಿಯಾಗಲಾರೆ. ಅಂಥ ಹೆಂಗಸರಿಂದಲೂ, ಬಿಡುಗಡೆಯ ನಿರೀಕ್ಷೆಯಲ್ಲಿರುವ ವ್ಯಕ್ತಿಗಳಿಂದಲೂ ಈ ಗುಹೆ ಬಲು ಬೇಗ ತುಂಬಿ ಹೋಗುತ್ತದೆ. ದರೋಡೆಕಾರರಿಗೇ ಅಲ್ಲಿ ಸ್ಥಳವಿರುವುದಿಲ್ಲ. ಹೇಳು ಮುಂದೆ, ನಾನೇನನ್ನೂ ಹೇಳಲಾರೆ.'

ಪುಟ್ಟ ಟಾಮಿ ಬಾರ್ನೆಸ್ ನಿದ್ದೆ ಮಾಡುತ್ತಿದ್ದ. ಅವರು ಅವನನ್ನು ಎಬ್ಬಿಸಿದಾಗ ಅವನಿಗೆ ಬಲು ಅಂಜಿಕೆಯಾಯಿತು ; ಅತ್ತು ಬಿಟ್ಟ. 'ನಾನು ಮನೆಗೆ ಹೋಗಬೇಕು ಅಮ್ಮನ ಬಳಿಗೆ ಹೋಗಬೇಕು, ಇನ್ನು ಮುಂದೆ ದರೋಡೆಕಾರನಾಗಿರಲು ನನಗೆ ಇಷ್ಟವಿಲ್ಲ' ಎಂದ. ಎಲ್ಲರೂ ಅವನನ್ನು ಗೇಲಿ ಮಾಡಿದರು. 'ಅಳು ಮಗು' ಎಂದು ಕರೆದರು. ಅವನಿಗೆ ರೇಗಿ ಹೋಯಿತು. ತಾನು ನೇರ ಹೊರಟು ಹೋಗಿ ಎಲ್ಲ ರಹಸ್ಯಗಳನ್ನೂ ಬಯಲು ಮಾಡುವುದಾಗಿ ಹೇಳಿದ. ಅವನನ್ನು ಸುಮ್ಮನಾಗಿಸಲು ಟಾಮ್ ಐದು ಸೆಂಟುಗಳನ್ನು ಕೈಗೆ ಹಾಕಿದ ; ನಾವೆಲ್ಲರೂ ಮನೆಗೆ ಹೋಗೋಣ, ಮುಂದಿನ

ವಾರ ಮತ್ತೆ ಸೇರಿ ಯಾರನ್ನಾದರೂ ದರೋಡೆಮಾಡಿ ಕೆಲವು ಜನರನ್ನು ಕೊಲ್ಲೋಣ ! ಎಂದ.

ಉಳಿದ ದಿನಗಳಲ್ಲಿ ತಾನು ಹೊರಗೆ ಬರುವುದು ಕಷ್ಟವಾಗುವುದೆಂದೂ, ಭಾನು ವಾರವೇ ಅನುಕೂಲವೆಂದೂ, ಅದಕ್ಕಾಗಿ ಮುಂದಿನ ಭಾನುವಾರದಿಂದ ತಂಡದ ವ್ಯವ ಹಾರಗಳನ್ನು ಪ್ರಾರಂಭಿಸಲು ತಾನು ಅಪೇಕ್ಷಿಸುವುದಾಗಿಯೂ ಬೆನ್ ರೋಜರ್ಸ್ ಹೇಳಿದ. ಆದರೆ ಹುಡುಗರೆಲ್ಲರೂ ಭಾನುವಾರದ ದಿವಸ ಇಂಥ ಕೆಲಸವನ್ನು ಪ್ರಾರಂಭಿ ಸುವುದು ಕೆಟ್ಟುದೆಂದರು. ಈ ಮಾತು ಎಲ್ಲವನ್ನೂ ಇತ್ಯರ್ಥಪಡಿಸಿತು. ಎಲ್ಲರೂ ಒಟ್ಟು ಸೇರಿ ಆದಷ್ಟು ಬೇಗ ಒಂದು ದಿನವನ್ನು ಗೊತ್ತುಮಾಡಲು ಒಪ್ಪಿದರು ಟಾಮ್ ಸಾಯರನನ್ನು ತಂಡದ ಪ್ರಥಮ ನಾಯಕನನ್ನಾಗಿಯೂ, ಜೋ ಹಾರ್ಪರ್‌ನನ್ನು ದ್ವಿತೀಯ ನಾಯಕನನ್ನಾಗಿಯೂ ಚುನಾಯಿಸಿದೆವು. ಮನೆಯ ಕಡೆ ಹೊರಟೆವು.

ಬೆಳಕು ಮೂಡುವುದರೊಳಗಾಗಿ ನಾನು ಜೋಪಡಿಯನ್ನು ಹತ್ತಿ ನನ್ನ ಕಿಟಕಿಯ ಮೂಲಕ ತೂರಿ ಮನೆಯನ್ನು ಸೇರಿಕೊಂಡೆ. ನನ್ನ ಬಟ್ಟೆಬರೆಗಳು ಮಣ್ಣಿನಿಂದಲೂ ಚರಬಿಯಿಂದಲೂ ಕೊಳೆಯಾಗಿದ್ದವು. ನನಗೆ ವಿಪರೀತ ಆಯಾಸವಾಗಿತ್ತು.

## ೩

ಬೆಳಗಾಗುತ್ತಲೆ ಮುದುಕಿ ಮಿಸ್ ವ್ಯಾಟ್‌ಸನ್ ನನ್ನ ಬಟ್ಟೆಬರೆಗಳ ಸ್ಥಿತಿಯನ್ನು ಕಂಡು ನನ್ನನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡಳು. ವಿಧವೆ ನನ್ನನ್ನು ಬಯ್ಯಲಿಲ್ಲ. ನನ್ನ ಬಟ್ಟೆಗಳನ್ನು ಅವುಗಳಿಗೆ ಅಂಟಿಕೊಂಡಿದ್ದ ಮಣ್ಣೂ ಚರಬಿಯೂ ಹೋಗುವಂತೆ ಚೆನ್ನಾಗಿ ತೊಳೆದಳು. ಅವಳು ಬಲು ನೊಂದು ಕೊಂಡಂತೆ ನನಗೆ ತೋರಿತು. ನನಗೂ ಸಾಧ್ಯವಾದಲ್ಲಿ ಕೆಲಕಾಲ ಯೋಗ್ಯರೀತಿಯಲ್ಲಿ ನಡೆದುಕೊಳ್ಳಬೇಕೆನ್ನಿಸಿತು, ಬಳಿಕ ಮಿಸ್. ವ್ಯಾಟ್‌ಸನ್ ನನ್ನನ್ನು ಒಳಕೋಣೆಗೆ ಕರೆದುಕೊಂಡುಹೋಗಿ ದೇವರಿಗೆ ಪ್ರಾರ್ಥನೆ ಸಲ್ಲಿಸಿದಳು. ಅದರಿಂದ ಏನೂ ಆಗಲಿಲ್ಲ. ಪ್ರತಿ ದಿನವೂ ಪ್ರಾರ್ಥನೆಮಾಡೆಂದೂ, ಅದರಿಂದ ನೀನು ಬಯಸಿದ್ದು ಲಭಿಸುತ್ತದೆಂದೂ ಅವಳು ನನಗೆ ಹೇಳಿದಳು. ಯಾವುದೂ ಹಾಗೆ ನಡೆಯಲಿಲ್ಲ. ನಾನು ಪ್ರಯತ್ನಿಸಿದೆ. ಒಂದು ಸಲ ನನಗೆ ಮೀನಿನ ಗಾಳವೇನೋ ಸಿಕ್ಕಿತು, ಕೊಂಡಿಗಳು ಸಿಕ್ಕಲಿಲ್ಲ. ಕೊಂಡಿಗಳಿಲ್ಲದೆ ಅದರಿಂದ ನನಗೆ ಏನೂ ಪ್ರಯೋ ಜನವಾಗಲಿಲ್ಲ. ಕೊಂಡಿಗಳಿಗಾಗಿ ನಾನು ಮೂರು ನಾಲ್ಕು ಸಲ ಪ್ರಯತ್ನಮಾಡಿದೆ. ಆದರೆ ಏಕೋ ಏನೋ ಶ್ರಮ ನಿಷ್ಫಲವಾಯಿತು. ಹಾಗೆಯೇ ಒಂದು ದಿನ ನನ್ನ ಸಲು ವಾಗಿ ಪ್ರಾರ್ಥನೆಮಾಡೆಂದು ಮಿಸ್. ವ್ಯಾಟ್‌ಸನ್ನಳನ್ನು ಕೇಳಿಕೊಂಡೆ. ಅದಕ್ಕವಳು

'ನೀನೊಬ್ಬ ಮೂರ್ಖ' ಎಂದಳು; ಅದಕ್ಕೆ ಕಾರಣವನ್ನೇನೂ ಕೊಡಲಿಲ್ಲ. ಹೇಗೆ ಯೋಚಿಸಿದರೂ ನನಗೆ ಅದರ ಅರ್ಥವೇ ಹೊಳೆಯಲಿಲ್ಲ.

ನಾನು ಮತ್ತೆ ಕಾಡಿಗೆ ಹಿಂದಿರುಗಿ ಸ್ವಲ್ಪ ಹೊತ್ತು ಆ ವಿಷಯವಾಗಿ ದೀರ್ಘಾಲೋಚನೆಮಾಡಿದೆ ಯಾವನಿಗಾದರೂ ತಾನು ಪ್ರಾರ್ಥಿಸಿಕೊಂಡದ್ದೆಲ್ಲ ಹೀಗೆ ಸಿಕ್ಕುವುದಾದರೆ ಧರ್ಮಾಧಿಕಾರಿ ವಿನ್ನನಿಗೇಕೆ ಅವನು ಹಂದಿಯ ಮಾಂಸದ ವ್ಯಾಪಾರದಲ್ಲಿ ಕಳೆದುಕೊಂಡ ಹಣ ಹಿಂದಿರುಗಲಿಲ್ಲ ? ಯಾರೋ ಕದ್ದ ತನ್ನ ಬೆಳ್ಳಿಯ ನಸ್ಯದ ಡಬ್ಬಿಯನ್ನೇಕೆ ಆ ವಿಧವೆ ಮರಳಿಪಡೆಯಲಿಲ್ಲ ? ಮಿಸ್ ವ್ಯಾಟ್‌ಸನ್ನಳೇಕೆ ದಪ್ಪಗಾಗಲಿಲ್ಲ ? ಅದರಲ್ಲಿ ಏನೂ ಮಹತ್ವವಿಲ್ಲ ಎಂದುಕೊಂಡೆ. ನಾನು ಹೋಗಿ ವಿಧವೆಗೆ ಈ ವಿಷಯವನ್ನು ತಿಳಿಸಿದೆ. ಅದಕ್ಕವಳು ಪ್ರಾರ್ಥನೆಮಾಡುವುದರಿಂದ ಆಧ್ಯಾತ್ಮಿಕ ಕೊಡುಗೆಗಳು ಮಾತ್ರ ಲಭಿಸುವುವೆಂದು ಉತ್ತರಕೊಟ್ಟಳು. ಇದು ನನಗೆ ಮೀರಿದ ವಿಷಯವಾಯಿತು. ಆದರೆ ಹಾಗೆ ಹೇಳುವಾಗ ಅವಳು ತನ್ನ ಮನಸ್ಸಿನಲ್ಲಿ ಏನಿತ್ತೆಂಬುದನ್ನೂ ನನಗೆ ತಿಳಿಸಿದಳು : ನಾನು ಇತರರಿಗೆ ನೆರವಾಗಬೇಕು; ನನ್ನ ಕೈಲಾದ ಮಟ್ಟಿಗೆ ಇತರರಿಗಾಗಿ ಎಲ್ಲ ನೆರವನ್ನೂ ನೀಡಬೇಕು; ಅಂಥವರಿಗಾಗಿ ಸದಾಕಾಲವೂ ಎದುರುನೋಡುತ್ತಿರಬೇಕು; ನನ್ನ ಸ್ವಂತ ವಿಷಯವನ್ನು ಯೋಚಿಸುತ್ತಿರಬಾರದು; ಈ ಇತರರಲ್ಲಿ ಮಿಸ್. ವ್ಯಾಟಸನ್ನಳೂ ಸೇರುವಳೆಂದು ನಾನು ಅರ್ಥಮಾಡಿಕೊಂಡೆ. ಮತ್ತೆ ಕಾಡಿಗೆ ಹೋಗಿ ಇದೇ ವಿಷಯುವನ್ನು ನನ್ನ ಮನಸ್ಸಿನಲ್ಲಿ ತಿರುವಿಹಾಕಿದೆ. ನನಗೆ ಇದರಲ್ಲಿ ಯಾವ ಪ್ರಯೋಜನವೂ ಕಂಡುಬರಲಿಲ್ಲ. ಪ್ರಯೋಜನವೇನಿದ್ದರೂ ಅರು ನನ್ನಿಂದ ಇತರರಿಗೆ. ಆದ್ದರಿಂದ ಕೊನೆಗೆ ಇನ್ನು ಮುಂದೆ ಇದಕ್ಕಾಗಿ ನಾನು ತಲೆ ಕೆಡಿಸಿಕೊಳ್ಳುವುದಿಲ್ಲವೆಂದು ತೀರ್ಮಾನಿಸಿ, ಅಲ್ಲಿಗೇ ಬಿಟ್ಟೆ. ಕೆಲವು ಸಲ ವಿಧವೆ ನನ್ನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ ದೇವರ ವಿಷಯದಲ್ಲಿ ಭಾಷಣಕೊಡುತ್ತಿದ್ದಳು. ಅವಳ ಮಾತಿನ ರೀತಿಗೆ ಎಂಥವನ ಬಾಯಲ್ಲೂ ನೀರು ಊರುತ್ತಿತ್ತು. ಮರುದಿನವೇ ಮಿಸ್ ವ್ಯಾಟ್ಸನ್ ಬಂದು ಅದನ್ನೆಲ್ಲಾ ನಾಶಮಾಡುತ್ತಿದ್ದಳು. ಇಬ್ಬರು ದೇವರುಗಳಿರುವುದನ್ನು ಇಲ್ಲಿ ಕಾಣಬಲ್ಲೆನೆಂಬ ತೀರ್ಮಾನಕ್ಕೆ ನಾನು ಬಂದೆ. ಬಡ ಹುಡುಗನಾದವನು ಆ ವಿಧವೆಯ ಆಡಂಬರದ ದೇವರನ್ನು ಹಾಗೂ ಹೀಗೂ ತಾಳಿಕೊಳ್ಳಬಲ್ಲನಾದರೂ, ಮಿಸ್. ವ್ಯಾಟ್‌ಸನ್ನಳ ದೇವರು ಅವನನ್ನು ಹಿಡಿದುಕೊಂಡನೆಂದರೆ ಯಾರೂ ಸಹಾಯ ಮಾಡಲಾರರು. ನಾನು ಇದನ್ನೆಲ್ಲ ಚೆನ್ನಾಗಿ ಆಲೋಚಿಸಿ ಆ ವಿಧವೆಯ ದೇವರ ಕಡೆಗೇ ಅವನು ಒಂದು ವೇಳೆ ಅಪೇಕ್ಷೆ ಪಟ್ಟೆಲ್ಲ—ಸೇರುತ್ತೇನೆ ಎಂದುಕೊಂಡೆ, ಆದರೂ ಅವನು ತಾನು ಹಿಂದೆ ಇದ್ದುದಕ್ಕಿಂತ, ಇಷ್ಟು ಅಜ್ಞಾನಿಯೂ ಒಂದು ರೀತಿಯಲ್ಲಿ ಕೆಳ ಮಟ್ಟದವನೂ ಸಾಮಾನ್ಯ ಮನುಷ್ಯನೂ ಆದ ನನ್ನ ಸ್ಥಿತಿಯನ್ನು ನೋಡಿ, ಹೇಗೆ ಹೆಚ್ಚು ಉತ್ತಮನಾಗುತ್ತಾನೆ ಎಂಬುದು ನನಗೆ ತಿಳಿಯದಾಯಿತು.

ಸುಮಾರು ಒಂದು ವರ್ಷದ ಮೇಲಾಗಿತ್ತು. ಅಪ್ಪ ಈ ಪ್ರಾಂತದಲ್ಲಿ ಕಾಣಿಸಿಕೊಂಡು. ನಾನು ನೆಮ್ಮದಿಯಿಂದಿದ್ದೆ. ಅವನನ್ನು ನೋಡುವ ಇಷ್ಟವೇ ನನಗಿರಲಿಲ್ಲ. ತನ್ನ ಬುದ್ಧಿ ನೆಟ್ಟಗಿದ್ದಾಗ ಅವನು ನನ್ನನ್ನು ಚೆನ್ನಾಗಿ ಥಳಿಸುತ್ತಿದ್ದನು. ನನ್ನ ಮೇಲೆ ಕೈಮಾಡಬಲ್ಲವನಾಗಿದ್ದನು. ಅವನು ನಾನಿರುವೆಡೆಗೆ ಸಮೀಪದಲ್ಲಿದ್ದಾನೆ ಎಂದಾಗೆಲ್ಲ ನಾನು ಕಾಡಿಗೆ ಓಡಿಹೋಗಿ ಹೆಚ್ಚು ಕಾಲವನ್ನು ಅಲ್ಲಿಯೇ ಕಳೆಯುತ್ತಿದ್ದೆ. ಸುಮಾರು ಇದೇ ಸಮಯದಲ್ಲಿ ಊರಿಗೆ ಎಲ್ಲೋ ಹನ್ನೆರಡು ಮೈಲಿ ದೂರದಲ್ಲಿ ಅವನು ನದಿಯಲ್ಲಿ ಮುಳುಗಿ ಹೋಗಿದ್ದುದು ಪತ್ತೆಯಾಯಿತೆಂದು ಜನ ಮಾತಾಡಿಕೊಂಡರು ಅದು ಅವನೇ. ಅನುಮಾನವಿಲ್ಲ ಎಂದು ತೀರ್ಮಾನಿಸಿದರು. ಇದಕ್ಕೆ ಕಾರಣ: ಈ ಮುಳುಗಿ ಸತ್ತ ಮನುಷ್ಯ ಗಾತ್ರದಲ್ಲಿ ಅಪ್ಪನಷ್ಟೇ ಇದ್ದ; ಅಂಥದೇ ಚಿಂದಿ ಬಟ್ಟೆಗಳನ್ನು ಧರಿಸಿದ್ದ; ಅಪ್ಪನಿಗಿದ್ದಂಥ ವಿಚಿತ್ರವಾದ ನೀಳ್ಗೂದಲು ಅವನಿಗೂ ಇತ್ತು. ಈ ವಿವರಗಳಲ್ಲಿ ಅವನು ಅಪ್ಪನನ್ನೇ ಹೋಲುತ್ತಿದ್ದರೂ ಅವನ ಮುಖದಿಂದ ಮಾತ್ರ ಏನನ್ನು ನಿರ್ಧರಿಸುವುದೂ ಕಷ್ಟವಾಗಿತ್ತು, ಏಕೆಂದರೆ ಹೆಣ ದೀರ್ಘಕಾಲ ನೀರಿನೊಳಗೇ ಇದ್ದುದರಿಂದ ಅದು ಮುಖದಂತೆಯೇ ತೋರುತ್ತಿರಲಿಲ್ಲ. ಅವನು ನೀರಿಗೆ ಬೆನ್ನು ಕೊಟ್ಟು ತೇಲುತ್ತಿದ್ದನಂತೆ. ಅವನನ್ನು ಹೊತ್ತುಕೊಂಡು ಹೋಗಿ ದಡದ ಮೇಲೊಂದು ಬಳಿ ಹೂಳಿದರು. ಆದರೂ ನನ್ನ ಮನಸ್ಸು ಬಹುಕಾಲ ನೆಮ್ಮದಿಯಿಂದಿರಲಿಲ್ಲ. ನಾನು ಏನನ್ನೋ ಆಲೋಚಿಸುತ್ತಿದ್ದೆ. ನೀರಿನಲ್ಲಿ ಮುಳುಗಿದವನು ನೀರಿಗೆ ಬೆನ್ನುಕೊಟ್ಟು ತೇಲುವುದಿಲ್ಲ, ಅವನ ಮುಖ ನೀರಿನ ಕಡೆಗಿರುತ್ತದೆ ಎಂಬುದು ನನಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಈ ಮನುಷ್ಯ ಅಪ್ಪನಲ್ಲವೆಂದೂ ಗಂಡಸಿನ ಬಟ್ಟೆಗಳನ್ನು ಉಡಿಸಿದ ಹೆಂಗಸೆಂದೂ ನಾನು ಅರಿತುಕೊಂಡೆ. ಆದ್ದರಿಂದ ನಾನು ಮತ್ತೆ ಅಸ್ವಸ್ಥನಾದೆ. ಆ ಮುದುಕ ಮತ್ತೆ ಬಂದು ನನ್ನನ್ನು ಕಾಣುವುದು ನನಗೆ ಇಷ್ಟವಿಲ್ಲವಾದರೂ, ಎಂದಾದರೊಂದು ದಿನ ಅವನು ಬಂದು ಬಿಡಬಹುದೆಂಬುದು ದೃಢವಾಯಿತು.

ಆಮೇಲೆ ಸುಮಾರು ಒಂದು ತಿಂಗಳ ಕಾಲ ನಾವು ಆಗೊಮ್ಮೆ ಈಗೊಮ್ಮೆ ದರೋಡೆಗಾರರ ಪಾತ್ರವನ್ನು ಧರಿಸುತ್ತಿದ್ದೆವು. ಆಮೇಲೆ ನಾನು ರಾಜೀನಾಮೆಯಿತ್ತೆ. ಎಲ್ಲ ಹುಡುಗರೂ ಹಾಗೆಯೇ ಮಾಡಿದರು. ನಾವು ಯಾರನ್ನೂ ದರೋಡೆ ಮಾಡಿರಲಿಲ್ಲ, ಕೊಂದಿರಲಿಲ್ಲ; ಸುಮ್ಮನೆ ಹಾಗೆ ನಟಿಸಿದೆವು ಅಷ್ಟೆ. ಕಾಡಿನೊಳಗೆ ಹುದುಗಿಕೊಂಡಿದ್ದು, ಹಂದಿಗಳನ್ನು ಅಟ್ಟಿಸಿಕೊಂಡು ಹೋಗುತ್ತಿದ್ದವರ ಮೇಲೂ, ತೋಟದ ಬೆಳಸನ್ನು ಬಂಡಿಗಳಲ್ಲಿ ಮಾರುಕಟ್ಟೆಗೆ ಸಾಗಿಸುತ್ತಿದ್ದ ಹೆಂಗಸರ ಮೇಲೂ ಸುಮ್ಮನೆ ಧಾಳಿ ಮಾಡುತ್ತಿದ್ದೆವೇ ಹೊರತು ಯಾರಿಗೂ ಮುತ್ತಿಗೆ ಹಾಕಲಿಲ್ಲ. ಹಂದಿಗಳನ್ನು 'ಚಿನ್ನದ ಗಟ್ಟಿ'ಗಳೆಂದೂ ಗೆಡ್ಡೆಗೆಣಸುಗಳನ್ನು 'ರತ್ನ'ಗಳೆಂದೂ ಟಾಮ್ ಸಾಯರ್ ಕರೆಯುತ್ತಿದ್ದನು. ಗುಹೆಗೆ ಹಿಂದಿರುಗಿ ನಾವು ನಾವು ಮಾಡಿದ ಕೆಲಸವನ್ನು–ಇಷ್ಟು ಜನರನ್ನು

ಕೊಂದೆವು, ಇಂಥವರನ್ನು ಮನಸ್ಸಿನಲ್ಲಿ ಗುರುತು ಹಾಕಿಕೊಂಡೆವು ಎಂಬುದನ್ನು–ಕುರಿತು ಬಡಾಯಿ–ಕೊಚ್ಚಿಕೊಳ್ಳುತ್ತಿದ್ದೆವು. ನನಗೆ ಇದರಿಂದ ಯಾವ ಲಾಭವೂ ತೋರಲಿಲ್ಲ. ಒಂದು ಸಲ ಟಾಮ್ ಪಂಜುಹಿಡಿದು ಊರೊಳಗೆಲ್ಲ ಓಡಾಡಿಬರಲು (ತಂಡದವರೆಲ್ಲರೂ ಒಟ್ಟು ಸೇರಬೇಕೆಂಬುದನ್ನು ಸೂಚಿಸಲು ಬಳಸುತ್ತಿದ್ದ ನಿಶಾನೆ ಇದು) ಒಬ್ಬ ಹುಡುಗ ನನ್ನು ಕಳಿಸಿದನು. ಅನಂತರ, ಮರುದಿನವೇ ಸ್ಪಾನಿಷ್ ವರ್ತಕರ ಮತ್ತು ಶ್ರೀಮಂತ ಅರಬ್ಬರ ಗುಂಪೊಂದು ಇನ್ನೂರು ಆನೆ ಆರ್ನೂರು ಒಂಟೆ ಮತ್ತು ಸಾವಿರಕ್ಕೂ ಮೀರಿ ಹೇಸರಕತ್ತೆಗಳ ಮೇಲೆ ವಜ್ರಗಳನ್ನು ಹೇರಿಕೊಂಡು ಕೇವ್ ಹಾಲೋ ಬಳಿಗೆ ಬರುವು ದಾಗಿಯೂ ಅವರೊಂದಿಗೆ ನಾಲ್ಕುನೂರು ಸಿಪಾಯಿಗಳ ಕಾವಲು ಇರುವುದಿಲ್ಲವೆಂದೂ ರಹಸ್ಯವಾರ್ತೆಯೊಂದು ತನ್ನ ಗೂಢಚಾರರ ಮೂಲಕ ಬಂದಿದೆಯೆಂದು ಅವನು ಹೇಳಿ ದನು. ಆದ್ದರಿಂದ ನಾವು ಹೊಂಚು ಹಾಕಿ–ಅವನು ಇದನ್ನು ಹಾಗೆ ಕರೆಯುತ್ತಿದ್ದನು– ಎಲ್ಲರನ್ನೂ ಕೊಂದು ಎಲ್ಲವನ್ನೂ ದೋಚಿಕೊಳ್ಳಬೇಕೆಂದೂ, ಕತ್ತಿಗಳನ್ನೂ ಬಂದೂಕ ಗಳನ್ನೂ ತೊಳೆದಿಟ್ಟು–ಕೊಂಡು ನಾವು ಸಿದ್ಧರಾಗಿರಬೇಕೆಂದೂ ಹೇಳಿದ. ಒಂದು ಗೆಣಸಿನ ಗಾಡಿಯನ್ನು ಕೂಡ ಬೆನ್ನಟ್ಟಿಹೋದವನಲ್ಲ ಅವನು. ಆದರೂ ಅವನಿಗೆ ಮಸೆದ ಕತ್ತಿ ತೊಳೆದ ಬಂದೂಕಗಳ ಅಗತ್ಯವಿತ್ತು. ನಮ್ಮಲ್ಲಿ ದೊಣ್ಣೆಗಳು, ಪೊರಕೆಗಳು ಮಾತ್ರ ಇದ್ದವು. ನೀವು ಕೊಳೆಯುವ ತನಕ ಅವುಗಳನ್ನು ಉಜ್ಜಬಹುದು, ಅವೇನು ಸಮಯುವಂಥವಲ್ಲ. ಅವುಗಳ ಬೆಲೆ ಒಂದು ಬಾಯಳತೆ ಬೂದಿಗಿಂತ ಹೆಚ್ಚಲ್ಲ. ಸ್ಪಾನಿಷ್ ಜನರ ಮತ್ತು ಅರಬ್ಬರ ಅಂಥಾ ಗುಂಪನ್ನು ನಾವು ಮುಗಿಸಿಬಿಡಬಹುದೆಂದು ನಾನು ನಂಬಲಿಲ್ಲ ಆದರೂ ನನಗೆ ಒಂಟೆಗಳನ್ನೂ ಆನೆಗಳನ್ನೂ ನೋಡುವ ಅಪೇಕ್ಷೆ ಯಾದ್ದರಿಂದ ಮರುದಿನ, ಎಂದರೆ ಶನಿವಾರ, ನಾನು ಅವರ ಹೊಂಚಿನಲ್ಲಿ ಸೇರಿಕೊಂಡೆ. ನಮಗೆ ಸೂಚನೆ ಬಂದ ಕೂಡಲೆ ನಾವು ಕಾಡಿನೊಳಗಿಂದ ಹೊರಬಿದ್ದು ಗುಡ್ಡವಿಳಿದು ನುಗ್ಗಿದೆವು. ಅಲ್ಲಿ ಸ್ಪಾನಿಷ್ ಜನರಾಗಲಿ ಅರಬ್ಬರಾಗಲಿ ಒಂಟೆ ಆನೆಗಳಾಗಲಿ ಇರಲಿಲ್ಲ, ಅಲ್ಲಿ ನಡೆಯುತ್ತಿದ್ದುದು ಕೇವಲ ಒಂದು 'ಭಾನುವಾರದ ಶಾಲೆ'ಯ, ಅದರಲ್ಲೂ ಪ್ರಾಥಮಿಕ ತರಗತಿಯೊಂದರ ಮಕ್ಕಳ ವನ ಭೋಜನ. ನಾವು ಆ ಕೂಟವನ್ನು ಚೆದುರಿಸಿದೆವು; ಗುಹೆಯತ್ತ ಅಟ್ಟಿಸಿಕೊಂಡು ಹೋದೆವು ನಮಗೆ ಬೂಂದಿ ಮತ್ತು ಮೊರಬ್ಬ ಹೊರತು ಇನ್ನೇನೂ ಸಿಕ್ಕಲಿಲ್ಲ. ಬೆನ್ ರೋಜರಿಗೆ ಒಂದು ಬಟ್ಟೆ ಬೊಂಬೆಯೂ, ಜೋ ಹಾರ್ಪರಿಗೆ ಒಂದು ಗೀತಾವಳಿಯೂ ಇನ್ನೊಂದು ಚಿಕ್ಕಪುಸ್ತಕವೂ ಸಿಕ್ಕಿದವು. ಆ ಸಮಯಕ್ಕೆ ಆ ಮಕ್ಕಳ ಶಿಕ್ಷಕ ನಮ್ಮ ಮೇಲೆ ನುಗ್ಗಿ ಬಂದ. ನಾವು ಎಲ್ಲವನ್ನೂ ಅಲ್ಲಿಯೇ ಕೆಡವಿ ಕಂಬಿಕಿತ್ತೆವು. ಅಲ್ಲಿ ಯಾವ ವಜ್ರಗಳನ್ನೂ ನಾನು ನೋಡಲಿಲ್ಲ. ಹಾಗೆಂದು ಟಾಮುಸಾಯರಿಗೆ ನಾನು ಹೇಳಿದೆ. ಆದರೂ ಅವನು ಅಲ್ಲಿ ಮೂಟೆಗಟ್ಟಲೆ ಅವು ಇದ್ದವೆಂದೂ, ಅರಬ್ಬರು, ಆನೆಗಳು, ಇತರ ವಸ್ತುಗಳ ಕೂಡ ಇದ್ದವೆಂದೂ, ಹೇಳಿದ. ಹಾಗಾದರೆ ಅವು ನಮ್ಮ ಕಣ್ಣಿಗೆ ಏಕೆ ಬೀಳಲಿಲ್ಲ ಎಂದೆ ನಾನು. ನಾನು

ಅಷ್ಟು ದಡ್ಡನಾಗಿರದೆ, ಡಾನ್ ಕ್ವಿಕ್ಸೋಟ್ ಎಂಬ ಹೆಸರಿನ ಪುಸ್ತಕವನ್ನು ಓದಿದ್ದರೆ, ಪ್ರಶ್ನೆಯೆತ್ತದೆ ಎಲ್ಲವನ್ನೂ ಅರಿಯಬಹುದಾಗಿತ್ತು ಎಂದನವನು ; ಅದೆಲ್ಲವೂ ಮಾಯಾ ನಿರ್ಮಿತವೆಂದೂ ಹೇಳಿದನು. ಅಲ್ಲಿ ಸಹಸ್ರಾರು ಸಿಪಾಯಿಗಳು ಆನೆಗಳು ರತ್ನಭಂಡಾರ ಮುಂತಾದವು ಇದ್ದವೆಂದೂ, ಆದರೆ ನಮ್ಮನ್ನು ಕಂಡರಾಗದ ಮಂತ್ರವಾದಿಗಳು ಹೊಟ್ಟೆ ಕಿಚ್ಚಿನಿಂದ ಸಮಸ್ತವನ್ನೂ ಚಿಕ್ಕಮಕ್ಕಳ ಭಾನುವಾರದ ಶಾಲೆಯನ್ನಾಗಿ ಮಾರ್ಪಡಿಸಿದ ರೆಂದೂ ಅವನು ಹೇಳಿದನು. ಸರಿ, ಎಂದೆ ನಾನು : ನಮ್ಮ ಮುಂದಿನ ಕೆಲಸ ಮಂತ್ರ ವಾದಿಗಳನ್ನು ಹುಡುಕುವುದು ತಾನೆ, ಎಂದೆ. ನೀನೊಂದು ಮೆದುಳಿಲ್ಲದ ಬುರುಡೆ ಎಂದ ಟಾಮ್ ಸಾಯರ್,

"ಏಕೆ ಎನ್ನುವೆಯು, ನೀನೊಂದು ಸಲ 'ಜಾಕ್ ರಾಬಿನ್ಸನ್' ಎನ್ನುವುದರೊಳ ಗಾಗಿ ಒಬ್ಬ ಮಂತ್ರವಾದಿ ಹಲವು ಭೂತಗಳನ್ನು ಆಹ್ವಾನಿಸಬಲ್ಲನು. ಅವು ನಿನ್ನನ್ನು ಸಣ್ಣ ಸಣ್ಣ ತುಂಡುಗಳಾಗಿ ಕಡಿದುಹಾಕಬಲ್ಲವು" ಎಂದ.

"ಹಾಗಾದರೆ, ನಾವೂ ಕೆಲವು ಭೂತಗಳನ್ನು ನಮ್ಮ ಸಹಾಯಕ್ಕೆ ಒದಗಿಸಿಕೊಂಡಲ್ಲಿ, ಅವರ ಭೂತಗಳನ್ನು ಧ್ವಂಸಮಾಡಲಾರವೆ ?" ಎಂದೆ ನಾನು.

"ನೀನು ಅವುಗಳನ್ನು ಹೇಗೆ ತರಬಲ್ಲೆ ?"

"ನನಗೆ ತಿಳಿಯದು ; ಅವರು ಹೇಗೆ ಅವುಗಳನ್ನು ಪಡೆಯುವರು ?"

"ಹೇಗೆನ್ನುವಿಯು, ಅವರು ಒಂದು ಹಳೆಯ ತಗಡಿನ ಲಾಂದ್ರವನ್ನೋ ಕಬ್ಬಿಣದ ಉಂಗುರವನ್ನೋ ಉಜ್ಜುತ್ತಾರೆ. ಆಗ ಸಿಡಿಲು ಮಿಂಚುಗಳನ್ನು ಸುತ್ತಲೂ ಎರಚುತ್ತಾ ಹೊಗೆಯನ್ನುರುಳಿಸುತ್ತಾ ಭೂತಗಳು ನುಗ್ಗಿ ಬರುತ್ತವೆ. ಯಾವ ಕೆಲಸವನ್ನು ಮಾಡ ಬೇಕೆಂದರೂ ಅವು ಮಾಡಿಬಿಡುತ್ತವೆ. ಬಲು ಎತ್ತರದ ರಕ್ಷಣಾಗೋಪುರವನ್ನು ಬುಡ ಸಹಿತ ಕಿತ್ತೆಸೆಯುವುದಕ್ಕಾಗಲಿ, ಭಾನುವಾರದ ಶಾಲೆಯ ಮೇಲ್ವಿಚಾರಕನ ಅಥವಾ ಇನ್ನಾರಾದರೂ ವ್ಯಕ್ತಿಯ ತಲೆಯಮೇಲೆ ಘಂಟೆಯಿಂದ ಹೊಡೆಯುವುದಕ್ಕಾಗಲಿ ಅವು ಹಿಂದೆ ಮುಂದೆ ನೋಡುವುದಿಲ್ಲ.

"ಅವು ಹಾಗೆಲ್ಲ ಎಸಗುವಂತೆ ಮಾಡುವವರು ಯಾರು ?"

"ಏಕೆ, ಯಾರು ಲಾಂದ್ರವನ್ನಾಗಲಿ ಉಂಗುರವನ್ನಾಗಲಿ ಉಜ್ಜುತಾನೆಯೋ ಅವನು. ಲಾಂದ್ರವನ್ನೊ ಉಂಗುರವನ್ನೋ ಉಜ್ಜಿದವನಿಗೆ ಅವು ಅಧೀನ. ಅವನು ಏನು ಹೇಳಿದರೂ ಅವು ಮಾಡಲೇಬೇಕು. ಒಂದು ವೇಳೆ ನಿನಗಾಗಿ ನಲವತ್ತು ಮೈಲಿ ಗಳುದ್ದದ ಅರಮನೆಯೊಂದನ್ನು ವಜ್ರಗಳಿಂದಲೇ ಕಟ್ಟಿ ಅದರಲ್ಲಿ ಜಗಿಯುವ ಮಿಠಾಯನ್ನಾಗಲೀ ನಿನಗೆ ಇಷ್ಟವಾದ ಇನ್ನಾವ ವಸ್ತುವನ್ನಾಗಲಿ ತಂದು ತುಂಬಬೇಕು, ಮದುವೆಯಾಗಲು ನಿನಗೆ ಚೀಣದಿಂದ ಚಕ್ರವರ್ತಿಯ ಮಗಳನ್ನು ತಂದುಕೊಡಬೇಕು ; ಮತ್ತು ಮಾರುದಿನ ಸೂರ್ಯೋದಯದೊಳಗಾಗಿ ಆ ಕೆಲಸಗಳನ್ನು ಮಾಡಿ ಮುಗಿಸಿರಬೇಕು,

ಇನ್ನೂ ಒಂದನ್ನು ನೀನು ತಿಳಿಯಬೇಕು : ನೀನು ದೇಶದ ಯಾವ ಭಾಗಕ್ಕೆ ಆ ಅರಮನೆಯನ್ನು ಹೊತ್ತು ಕುಣಿಯುತ್ತ ತಂದಿಡಬೇಕೆಂದರೆ ಅವು ಅದನ್ನು ತಂದಿಡಲೇಬೇಕು.

"ಹಾಗೋ ! ಅವೊಂದು ದಡ್ಡರ ಪಡೆ ಎಂದು ನಾನು ತಿಳಿಯುತ್ತೇನೆ. ಹಾಗಲ್ಲದಿದ್ದರೆ ಅವು ಅಷ್ಟನ್ನೆಲ್ಲಾ ನೀಗಿಕೊಳ್ಳದೆ ಆ ಅರಮನೆಯನ್ನು ತಮಗಾಗಿಯೆ ಇಟ್ಟುಕೊಳ್ಳುತ್ತಿದ್ದವು. ಇದಕ್ಕೂ ಹೆಚ್ಚಿನ ವಿಷಯವೆಂದರೆ : ನಾನು ಅವುಗಳಲ್ಲಿ ಒಬ್ಬನಾಗಿದ್ದರೆ ನನ್ನ ಕೆಲಸಕಾರ್ಯಗಳನ್ನು ಕೈ ಬಿಡುವ ಮೊದಲು ಹಳೆಯ ತಗಡಿನ ಲಾಂದ್ರವೊಂದನ್ನು ಉಜ್ಜುವಷ್ಟರಿಂದಲೇ ಜೆರಿಕೋದಲ್ಲಿರುವ ಮನುಷ್ಯನೊಬ್ಬನನ್ನು ನೋಡಬಹುದಿತ್ತು" ಎಂದೆ ನಾನು.

"ನಿನ್ನ ಮಾತೋ ನೀನೋ, ಹಕ್‌ಫಿನ್ ! ಅವನು ಅದನ್ನು ಉಜ್ಜಿದಾಗ ನೀನು, ನಿನಗೆ ಇಷ್ಟವಿರಲಿ ಇಲ್ಲದಿರಲಿ, ಅವನ ಬಳಿಗೆ ಬರುವುದು ತಪ್ಪದು."

"ಹನು ! ವೃಕ್ಷದಂತೆ ಎತ್ತರವಾಗಿರುವ, ಚರ್ಚಿನಷ್ಟು ದೊಡ್ಡದಾಗಿರುವ ನಾನು ? ಹಾಗಾದರೆ ಸರಿ : ನಾನು ಬರುತ್ತೇನೆ, ನಿಜ ನಾನು ಮಲಗುತ್ತೇನೆ. ಈ ಸೀಮೆಯಲ್ಲಿರುವ ಅತ್ಯುನ್ನತ ವೃಕ್ಷವನ್ನು ಅವನು ಹತ್ತುವಂತೆ ಮಾಡುವಂತೆ ಮಾಡುತ್ತೇನೆ"

ಮಣ್ಣು ! ನಿನ್ನೊಂದಿಗೆ ಮಾತಾಡಿ ಪ್ರಯೋಜನವಿಲ್ಲ ಹಕ್‌ಫಿನ್. ನಿನಗೆ ಯಾವುದೂ ತಿಳಿದಂತೆ ತೋರುವುದಿಲ್ಲ. ಬಹು ಮಟ್ಟಿಗೆ ನಿನ್ನದು ಪೂರ್ತಿ ಕತ್ತೆ-ತಲೆ."

ಎರಡು ಮೂರು ದಿನದವರೆಗೆ ನಾನು ಇದನ್ನೆಲ್ಲಾ ಪರ್ಯಾಲೋಚಿಸಿದೆ. ಇದರಲ್ಲಿ ಏನಾದರೂ ಇದೆಯೇ, ನೋಡಿಬಿಡೋಣ ಎಂದು ಮಾಡಿಕೊಂಡೆ. ಹಳೆಯ ತಗಡಿನ ಲಾಂದ್ರವನ್ನೂ ಕಬ್ಬಿಣದ ಉಂಗುರವನ್ನೂ ಸಂಪಾದಿಸಿದೆ : ಕಾಡಿಗೆ ಹೋಗಿ ಕುಳಿತು ರೆಡ್ ಇಂಡಿಯನ್ನಿನಂತೆ ನನ್ನ ಮೈ ಬೆವರುಹರಿವ ತನಕ ಪಟ್ಟಾಗಿ ಎಡೆಬಿಡದೆ ಉಜ್ಜಿದೆ, ಅರಮನೆಯನ್ನು ಕಟ್ಟಿ ಮಾರಿಬಿಡುವುದಾಗಿ ನಿರ್ಧರಿಸಿದೆ. ಅದು ನಿಷ್ಪ್ರಯೋಜಕವಾಯಿತು. ಯಾವ ಭೂತವು ಬರಲಿಲ್ಲ. ಈ ಕಲ್ಪನೆ ಟಾಮ್ ಸಾಯರನ ಸುಳ್ಳಿನ ಕಂತೆಯಿಂದ ಮಾತ್ರ ಬಂದದ್ದೆಂದು ತೀರ್ಮಾನಿಸಿದೆ. ಅರಬ್ಬರೂ ಆನೆಗಳೂ ಅಲ್ಲಿರುವುದಾಗಿ ಅವನ ನಂಬಿಕೆ ಎಂದು ಕೊಂಡೆ. ನನ್ನ ಅನುಭವ ಮಟ್ಟಿಗೆ ಬೇರೆಯದಾಗಿತ್ತು. ಭಾನುವಾರದ ಶಾಲೆಯ ಲಕ್ಷಣಗಳಷ್ಟೂ ಅಲ್ಲಿದ್ದವು.

## ೪

ಮೂರು ನಾಲ್ಕು ತಿಂಗಳು ಉರುಳಿದವು ; ಚಳಿಗಾಲ ಬಂತು. ಈ ಅವಧಿಯಲ್ಲಿ ನಾನು ತಪ್ಪದೆ ಶಾಲೆಗೆ ಹೋಗುತ್ತಿದ್ದೆ. ಪದಗಳ ಅಕ್ಷರಗಳನ್ನು ಬಿಡಿಸಿ ಹೇಳುವುದನ್ನೂ, ಅಲ್ಪ ಸ್ವಲ್ಪ ಓದು ಬರಹವನ್ನೂ ಕಲಿತಿದ್ದೆ. ಆರು ಏಳಲ ಮೂವತ್ತೈದು ಎನುವ ತನಕ

ಮಗ್ಗಿಯೂ ಬರುತ್ತಿತ್ತು. ನಾನು ನಿಡುಗಾಲ ಬದುಕಿದ್ದರೂ ಅದಕ್ಕಿಂತ ಮುಂದೆ ಹೋಗುತ್ತಿರಲಿಲ್ಲವೆಂದೆ ನನ್ನೆಣಿಕೆ. ಏನಾಗಲಿ ಗಣಿತಶಾಸ್ತ್ರವೆಂದರೆ ನನಗೆ ಅಷ್ಟಕ್ಕಷ್ಟೆ.

ಮೊದಲು ನನಗೆ ಶಾಲೆ ಎಂದರೆ ಆಗುತ್ತಿರಲಿಲ್ಲ. ಕಾಲಕ್ರಮೇಣ ನಾನು ಅದನ್ನು ಸಹಿಸಬಲ್ಲವನಾದೆ. ಅತಿಯಾಗಿ ಬೇಸರವಾದಾಗ ನಾನು ಶಾಲೆಗೆ ಚಕ್ಕರ್ ಹೊಡೆಯು ತ್ತಿದ್ದೆ. ಎಷ್ಟು ಕಾಲ ಶಾಲೆಗೆ ಹೋಗುತ್ತಿದ್ದರೆ ನನಗೆ ಅಷ್ಟೂ ಕ್ಷೇಮವೆನಿಸಿತ್ತು. ಹಾಗೂ ಹೀಗೂ ನಾನು ವಿಧವೆಯ ರೀತಿ ನೀತಿಗಳಿಗೆ ಹೊಂದಿಕೊಳ್ಳುತ್ತಿದೆ. ನನ್ನ ಮಟ್ಟಿಗೆ ಅವು ಒರಟಾಗಿರಲಿಲ್ಲ. ಆದರೆ ಮನೆಯೊಳಗೆ ಬಾಳುವುದೂ, ಹಾಸುಗೆಯ ಮೇಲೆ ಮಲಗುವುದೂ ನನಗೆ ಅತಿ ಕಷ್ಟವಾಯಿತು. ಚಳಿಗಾಲ ಬರುವುದರೊಳಗಾಗಿ ನಾನು ಮನೆಯಿಂದ ನುಣುಚಿಕೊಂಡು ಹೋಗಿ ಹಲವೇಳೆ ಕಾಡಿನಲ್ಲಿ ಮಲಗುತ್ತಿದ್ದೆ. ಹಾಗೆ ಮಾಡುವುದರಿಂದ ನನಗೆ ನೆಮ್ಮದಿಯಾಗುತ್ತಿತ್ತು. ಹಳೆಯ ನಡವಳಿಕೆಗಳೇ ನನಗೆ ಅತಿ ಮೆಚ್ಚು. ಆದರೆ ಹೊಸ ವಿಧಾನಗಳಲ್ಲೂ ನನಗೆ ಒಂದಿಷ್ಟು ಆಸಕ್ತಿ ಹುಟ್ಟಿತು 'ಇವನು ನಿಧಾನವಾಗಿ, ಆದರೂ ದೃಢವಾಗಿ ದಾರಿಗೆ ಬರುತ್ತಿದ್ದಾನೆ'ಂದೂ, 'ಈ ಮಾರ್ಪಾಡು ತುಂಬಾ ತೃಪ್ತಿಕರ'ವೆಂದೂ ವಿಧವೆ ಅಂದುಕೊಂಡಳು: ನನಗಾಗಿ ತಾನು ತಲೆತಗ್ಗಿಸಲು ಇನ್ನು ಎಡೆಯಿಲ್ಲವೆಂದಳು.

ಒಂದು ದಿನ ಬೆಳಗಿನ ಉಪಹಾರವನ್ನು ತೆಗೆದುಕೊಳ್ಳುತ್ತಿದ್ದಾಗ ನಾನು ಕೈತಪ್ಪಿ ಉಪ್ಪಿನ ಬೋಗುಣಿಯನ್ನು ಉರುಳಿಸಿದೆ. ಚೆಲ್ಲಿಹೋದ ಉಪ್ಪಿನಲ್ಲಿ ಒಂದಿಷ್ಟನ್ನು ಪಕ್ಕನೆ ಕೈಗೆ ತುಂಬಿಕೊಂಡು ನನ್ನ ಎಡ–ಹೆಗಲಾಚೆಗೆ ಸುರಿದು ದುರ್ದೈವದಿಂದ ತಪ್ಪಿಸಿ ಕೊಳ್ಳಲು ಪ್ರಯತ್ನಿಸಿದೆ. ಆದರೆ ಮಿಸ್ ವಾಟ್ಸನ್ ನನಗಿಂತ ಮೊದಲೆ ನನ್ನ ತಪ್ಪನ್ನು ಕಂಡು ಕೊಂಡಿದ್ದಳು. 'ನಿನ್ನ ಕೈಗಳನ್ನು ಆಚೆಗೆ ತೆಗೆ, ಹಕಲ್‌ಬರಿ ; ನೀನು ಎಂದೂ ಇಂಥ ಹೊಲಸನ್ನೇ ಮಾಡುವುದು' ಎಂದಳು. ವಿಧವೆಯೇನೋ ಒಂದು ಒಳ್ಳೆಯ ಮಾತನ್ನೇ ಆಡಿದಳು. ಆದರೆ ಅಷ್ಟರಿಂದಲೇ ದುರ್ದೈವದಿಂದ ತಪ್ಪಿಸಿಕೊಳ್ಳು ವುದು ಸಾಧ್ಯವಲ್ಲವೆಂಬುದು ನನಗೆ ಖಚಿತವಾಗಿತ್ತು. ಉಪಹಾರವಾದ ಮೇಲೆ ನಾನು ಖೇದಗೊಂಡು ನಡುಗುತ್ತಾ, ಇದರ ಪರಿಣಾಮವೇನಾಗುವುದೋ ಎಂದು ತವಕ ಪಡುತ್ತಾ ಮನೆಯಿಂದ ಹೊರಬಿದ್ದೆ. ದುರ್ದೈವವನ್ನು ನಿವಾರಿಸಲು ಮಾರ್ಗಗಳೇನೋ ಇವೆ. ಆದರೆ ಇದು ಆ ಬಗೆಯದಲ್ಲ. ಆದ್ದರಿಂದ ನಾನು ಏನನ್ನೂ ಮಾಡತೊಡಗ ಲಿಲ್ಲ. ಆದರೆ ದುಗುಡದಿಂದ ಏನಾಗುವುದೋ ಎಂದು ನಿರೀಕ್ಷಿಸುತ್ತಾ ನಡೆದೆ.

ನಾನು ಮುಂಭಾಗದ ತೋಟದ ದಾರಿಯನ್ನು ಹಿಡಿದೆ ; ಎತ್ತರವಾಗಿದ್ದ ಬೇಲಿ ಯಲ್ಲಿ ಹತ್ತಿಹೋಗಲು ಕಟ್ಟಿದ್ದ ಮೆಟ್ಟಿಲುಗಳನ್ನು ತುಳಿದು, ಆಚೆಗೆ ಇಳಿದೆ. ನೆಲದ ಮೇಲೆ ಒಂದಿಂಚು ಮಂದದ ಹೊಸ ಹಿಮ ಬಿದ್ದಿತ್ತು. ಅದರ ಮೇಲೆ ಯಾರದೋ ಹೆಜ್ಜೆ ಗುರುತಿರುವುದನ್ನು ಕಂಡೆ. ಅವು ಕೆಳಗಿನ ಹಳ್ಳವೊಂದರಿಂದ ಏರಿ ಬಂದು ತೋಟದ ಬೇಲಿಯ ಮೆಟ್ಟಿಲುಗಳ ಮೇಲೆ ಸ್ವಲ್ಪ ಹೊತ್ತು ನಿಂತು, ಅನಂತರ ಬೇಲಿಯ

ಸುತ್ತ ಬಳಸಿ ಹೋದಂತಿತ್ತು. ಇಲ್ಲಿಗೆ ಬಂದೂ ಅವು ಒಳಕ್ಕೆ ಬಾರದಿರುವುದು ವಿಚಿತ್ರ ವೆನಿಸಿತು. ನನಗೆ ಇದು ಅರ್ಥವೇ ಆಗಲಿಲ್ಲ; ಒಂದು ರೀತಿಯಲ್ಲಿ ಕುತೂಹಲಕರ ವಾಗಿತ್ತು. ನಾನು ಅದನ್ನೇ ಅನುಸರಿಸಿ ಹೋಗಬೇಕೆಂದಿದ್ದೆ. ಅದಕ್ಕೆ ಮುನ್ನ ಆ ಹೆಜ್ಜೆಗಳನ್ನು ಇನ್ನಷ್ಟು ಚೆನ್ನಾಗಿ ನೋಡೋಣವೆಂದು ಬಗ್ಗಿದೆ. ಮೊದಲು ನನಗೇನೂ ಹೊಳೆಯಲಿಲ್ಲ; ಆ ಮೇಲೆ ವಿಷಯ ಸ್ಪಷ್ಟವಾಯಿತು. ಎಡಗಾಲಿನ ಪಾದರಕ್ಷೆಯ ಹಿಮ್ಮಡಿಯ ಗುರುತಿನ ಮೇಲೆ, ಭೂತ ನಿವಾರಣೆಗಾಗಿ, ದೊಡ್ಡ ಮೊಳೆಯಿಂದ ಕೆತ್ತಿದ ಒಂದು ಶಿಲುಬೆಯಿತ್ತು.

ನಾನು ಕ್ಷಣಾರ್ಧ ನೆಟ್ಟಗೆ ಅಲ್ಲೇ ನಿಂತು, ಬಳಿಕ ಗುಡ್ಡದ ಇಳಿಜಾರನ್ನು ಇಳಿಯುತ್ತ ಲಿದ್ದೆ. ಆಗಾಗ ನನ್ನ ಬೆನ್ನ ಹಿಂದಕ್ಕೆ ಕಣ್ಣು ಹಾಯಿಸುತ್ತಿದ್ದೆ. ಯಾರೂ ಕಂಡುಬರ ಲಿಲ್ಲ, ಬೇಗ ಬೇಗ ನಾನು ನ್ಯಾಯಾಧೀಶ ಥ್ಯಾಚೆರನ ಮನೆಗೆ ತಲಪಿದೆ.

ಆತ "ಏನು ಮಗು, ನಿನ್ನ ಉಸಿರು ಉಡುಗಿದಂತಿದೆ, ನಿನ್ನ ಬಡ್ಡಿಯ ಹಣಕ್ಕಾಗಿ ಇಲ್ಲಿಗೆ ಬಂದೆಯ ?" ಎಂದನು.

ನಾನು "ಇಲ್ಲ, ಸ್ವಾಮಿ. ನನಗೆ ಬಡ್ಡಿಯ ಹಣ ಬರುವುದಿದೆಯೆ ?" ಎಂದೆ. "ಓ, ಹೌದು. ಒಂದು ನೂರೈವತ್ತು ಡಾಲರುಗಳಷ್ಟು ಅರ್ಧವಾರ್ಷಿಕ ಬಡ್ಡಿಯ ಹಣ ಕಳೆದ ರಾತ್ರಿಯೇ ಕೈಗೆ ಬಂತು. ನಿನಗೆ ಅದು ಅನಿರೀಕ್ಷಿತ ಲಾಭ-ವೆಂದು ತೋರಬೇಕು. ನೀನು ಅದನ್ನು ತೆಗೆದುಕೊಂಡು ಹೋದರೆ ಸುಮ್ಮನೆ ವೆಚ್ಚಮಾಡುತ್ತೀಯ. ಆದ್ದ ರಿಂದ ನಿನ್ನದಾಗಿರುವ ಆರುಸಾವಿರ ಅಸಲಿನ ಜತೆಗೆ ಅದನ್ನೂ ಬಡ್ಡಿಗೆ ಹಾಕಲು ನನಗೆ ಅವಕಾಶ ಕೊಟ್ಟರೆ, ನಿನಗೇ ಒಳ್ಳೆಯದು".

"ಇಲ್ಲ ಸ್ವಾಮಿ; ನನಗೆ ಅದನ್ನು ವೆಚ್ಚಮಾಡುವ ಇಷ್ಟವಿಲ್ಲ. ನನಗೆ ಅದಾಗಲಿ, ಆರು ಸಾವಿರವಾಗಲೀ ಬೇಡವೇ ಬೇಡ, ಅದನ್ನು ನೀವೇ ತೆಗೆದುಕೊಳ್ಳಬೇಕೆನ್ನುವುದು ನನ್ನ ಅಪೇಕ್ಷೆ. ನಾನು ನಿಮಗೆ ಅಷ್ಟನ್ನೂ ಕೊಡಬಯಸುತ್ತೇನೆ." ಎಂದೆ ನಾನು.

ಅವನಿಗೆ ದಿಗ್‌ಭ್ರಮೆಯಾಯಿತು; ಇದರ ಅರ್ಥ ಅವನಿಗೆ ಹೊಳೆಯಲಿಲ್ಲ. ಅವನು ಕೇಳಿದ :

"ಏನೆಂದೆ ? ನೀನು ಹೇಳುವುದರ ಅರ್ಥವೇನು, ಮಗು ?"

"ದಯವಿಟ್ಟು ಆ ವಿಷಯವಾಗಿ ನನಗೆ ಯಾವ ಪ್ರಶ್ನೆಯನ್ನೂ ಹಾಕಬೇಡಿ; ನೀವು ಅದನ್ನು ತೆಗೆದುಕೊಳ್ಳುವಿರಿ ತಾನೆ ?" ಎಂದೆ ನಾನು.

ಅವನು ಹೇಳಿದ :

"ಚೆನ್ನಾಯ್ತು. ಇದು ನನಗೆ ಸಮಸ್ಯೆಯಾಗಿದೆ. ಏನು ವಿಚಾರ ?"

"ದಯವಿಟ್ಟು ಇದನ್ನು ತೆಗೆದುಕೊಳ್ಳಿ ; ನನ್ನನ್ನು ಪ್ರಶ್ನೆಗಳಿಗೆ ಒಡ್ಡಬೇಡಿ; ನೀವು ಹಾಗೆ ಮಾಡಿದರೆ ಮಾತ್ರ ನನಗೆ ಸುಳ್ಳು ಹೇಳಲು ಅವಕಾಶವಿರುವುದಿಲ್ಲ" ಎಂದೆ ನಾನು.

ಸ್ವಲ್ಪ ಹೊತ್ತು ಆಲೋಚಿಸಿ ಅವನು ಹೇಳಿದ;

"ಓ ಹೋ – ನನಗೆ ಈಗ ತಿಳಿಯಿತು. ನಿನ್ನ ಆಸ್ತಿಯೆಲ್ಲವನ್ನೂ ನನಗೆ ಮಾರಿ ಬಿಡಲು – ಸುಮ್ಮನೆ ಕೊಟ್ಟು ಬಿಡಲು, ಅಲ್ಲ–ನೀನು ಇಷ್ಟ-ಪಡುತ್ತೀಯ. ಅದೀಗ ಸರಿಯಾದ ಭಾವನೆ"

ಆ ಮೇಲೆ ಅವನು ಕಾಗದದದ ಮೇಲೆ ಏನನ್ನೋ ಬರೆದು ಓದಿದನು.

"ಇಲ್ಲಿದೆ. ಈ ಕಾಗದದಲ್ಲಿ 'ಒಂದು ಪ್ರತಿಫಲಕ್ಕಾಗಿ' ಎಂಬ ಮಾತಿದೆ. ಇದರ ಅರ್ಥ ನಾನು 'ಅದನ್ನು ನಿನ್ನಿಂದ ಕೊಂಡಿದ್ದೇನೆ, ನಿನಗೆ ಅದಕ್ಕಾಗಿ ಹಣಕೊಟ್ಟಿದ್ದೇನೆ' ಎಂದು. ಇಲ್ಲೊಂದು ಡಾಲರ್ ಇದೆ ನಿನಗಾಗಿ. ತೆಗೆದುಕೋ. ಈ ಪತ್ರಕ್ಕೆ ರುಜು ಹಾಕು," ಎಂದನು.

ನಾನು ಪತ್ರಕ್ಕೆ ರುಜು ಹಾಕಿ ಅಲ್ಲಿಂದ ಹೊರಟೆ,

ಮಿಸ್ ವ್ಯಾಟ್ಸನ್ನಳ ನೀಗ್ರೋ ಸೇವಕನಾದ ಜಿಮ್ಮನ ಬಳಿ ನಿಮ್ಮ ಮುಷ್ಟಿಯ ಗಾತ್ರದ 'ಕೂದಲಿನ ಚಂಡೊ'ಂದಿತ್ತು. ಅದನ್ನು ಎತ್ತೊಂದರ ನಾಲ್ಕನೆಯ ಹೊಟ್ಟೆಯಿಂದ ತೆಗೆಯಲಾಗಿತ್ತು. ಅವನು ಅದನ್ನು ಮಂತ್ರ ಹಾಕುವುದಕ್ಕಾಗಿ ಉಪಯೋಗಿಸುತ್ತಿದ್ದನು; ಅದರೊಳಗೊಂದು ಅದೃಶ್ಯ ಶಕ್ತಿ ನೆಲಸಿದೆ, ಅದಕ್ಕೆ ಎಲ್ಲವೂ ತಿಳಿಯುತ್ತದೆ ಎನ್ನುತ್ತಿದ್ದನು. ಈ ಕಾರಣದಿಂದ ನಾನು ಆ ರಾತ್ರಿ ಅವನಲ್ಲಿಗೆ ಹೋದೆ. ಅಪ್ಪ ಮತ್ತೆ ಬಂದಿರುವುದಾಗಿಯೂ, ಹಿಮದ ಮೇಲೆ ಅವನ ಹೆಜ್ಜೆ ಗುರುತನ್ನು ನಾನು ನೋಡಿದುದಾಗಿಯೂ ಹೇಳಿದೆ, ಅಪ್ಪ ಏನು ಮಾಡುತ್ತಾನೆ, ಇಲ್ಲೇ ನಿಲ್ಲುತ್ತಾನೆಯೆ ?— ಇವನ್ನೆಲ್ಲ ನಾನು ತಿಳಿದುಕೊಳ್ಳಬೇಕಾಗಿತ್ತು. ಜಿಮ್ ತನ್ನ ಕೂದಲಿನ ಚೆಂಡನ್ನು ಈಚೆಗೆ ತೆಗೆದ ; ಅದರ ಮೇಲೆ ಏನನ್ನೋ ಪಠಿಸಿ ಮೇಲೆತ್ತಿ ನೆಲಕ್ಕೆ ಬೀಳಿಸಿದ. ಅದು ದೊಪ್ಪೆಂದು ಕೆಳಗೆ ಬಿದ್ದು ಒಂದಿಂಚು ದೂರ ಜರುಗಿತು. ಜಿಮ್ ಮತ್ತೆ ಪ್ರಯತ್ನಿಸಿದ, ಆ ಸಲವೂ ಅದು ಹಾಗೆಯೇ ಮಾಡಿತು. ಜಿಮ್ ಅದರ ಮುಂದೆ ಮಂಡಿಯೂರಿ ಕುಳಿತು ಕಿವಿಗೊಟ್ಟು ಅದರ ಉತ್ತರವನ್ನು ಕೇಳ ಬಯಸಿದ. ಅದರಿಂದ ಏನೂ ಆಗಲಿಲ್ಲ. ಅದು ಮಾತನಾಡಲೊಲ್ಲದು ಎಂದನವನು. ಹಣ ಕೊಡದಿದ್ದರೆ ಅದು ಕೆಲವೇಳೆ ಮಾತನಾಡುವುದಿಲ್ಲ ಎಂದನು." ನನ್ನ ಬಳಿ ಒಂದೇ ಒಂದು ಖೋಟಾ ಕ್ವಾರ್ಟರ್ ನಾಣ್ಯವಿದೆ, ಅದರ ಬೆಳ್ಳಿಯಲ್ಲಿ ಹಿತ್ತಾಳೆ ಎದ್ದು ಕಾಣುವುದರಿಂದ ಅದು ನಿಷ್ಪ್ರಯೋಜಕವಾಗಿದೆ. ಒಂದು ವೇಳೆ ಅದರಲ್ಲಿ ಹಾಗೆ ಹಿತ್ತಾಳೆ ಕಂಡು ಬಾರದಿದ್ದರೂ ಅದು ಸಮುಕಲಾಗಿ ಕೈಯಿಂದ ಜಾರುವುದರಿಂದ ಅದರ ಯೋಗ್ಯತೆ ಎಂದಿಗೂ ಸ್ಪಷ್ಟವೇ" ಎಂದೆ ನಾನು. (ನ್ಯಾಯಾಧೀಶನಿಂದ ನನಗೆ ದೊರೆತ ಒಂದು ಡಾಲರಿನ ಬಗ್ಗೆ ನಾನು ಏನನ್ನೂ ಹೇಳ ಬಾರದು ಅಂದುಕೊಂಡು). ಅದು ಸಲ್ಲದ ನಾಣ್ಯವೆಂದೂ ನಿಜವಾದ ನಾಣ್ಯಕ್ಕೂ ಅದಕ್ಕೂ ಇರುವ ವ್ಯತ್ಯಾಸವನ್ನು ಅರಿಯಲಾರದ ಕೂದಲಿನ ಚೆಂಡು ಅದನ್ನು ಸ್ವೀಕರಿಸಬಹುದೆಂದೂ ಹೇಳಿದೆ. ಜಿಮ್ ಅದನ್ನು ಮೂಸಿದ, ಕಚ್ಚಿನೋಡಿದ, ಉಜ್ಜಿದ. ತಾನ್ನು

ಸಾಚಾ ನಾಣ್ಯವೆಂದೇ ತನ್ನ ಕೂದಲಿನ ಚೆಂಡು ನಂಬುವಂತೆ ಮಾಡುವುದಾಗಿ ನುಡಿದನು. ಒಂದು ಹಸಿ ಐರಿಸ್ ಆಲೂಗೆಡ್ಡೆಯನ್ನು ಎರಡು ಹೋಳುಮಾಡಿ, ಈ ಕ್ವಾರ್ಟರ್ ನಾಣ್ಯವನ್ನು ಆ ಹೋಳುಗಳ ನಡುವೆ ಸೇರಿಸಿ ಕಟ್ಟಿ ರಾತ್ರಿಯೆಲ್ಲಾ ಹಾಗೆಯೇ ಇಟ್ಟರೆ ಆ ನಾಣ್ಯದಲ್ಲಿರುವ ಹಿತ್ತಾಳೆ ಎಂದಿಗೂ ಕಾಣಿಸಿಕೊಳ್ಳುವುದಿಲ್ಲವೆಂದೂ, ಅದು ಇನ್ನು ಮುಂದೆ ಕೈಯಿಂದ ಜಾರುವುದಿಲ್ಲವೆಂದೂ, ಕೂದಲಿನ ಚೇಡೇ ಅಲ್ಲ ಊರಿನಲ್ಲಿರುವ ಯಾರಾಗಲಿ ಅದನ್ನು ಹಿಂದೆಮುಂದೆ ನೋಡದೆ ಸಾಚಾ ನಾಣ್ಯವೆಂದು ತೆಗೆದುಕೊಳ್ಳುವರೆಂದೂ ಹೇಳಿದನು. ಆಲೂಗೆಡ್ಡೆ ಹಾಗೆ ಮಾಡಬಲ್ಲದೆಂದು ನನಗೆ ತಿಳಿದಿತ್ತು ; ಆದರೆ ಮರೆತು ಹೋಗಿತ್ತು.

ಜಿಮ್ ಆ ಕ್ವಾರ್ಟರ್ ನಾಣ್ಯವನ್ನು ಕೂದಲಿನ ಚೆಂಡಿನ ಕೆಳಗಿಟ್ಟು ಮತ್ತೆ ಕಿವಿಗೊಟ್ಟು ಕೇಳಿದನು. ಈ ಸಲ ಚೆಂಡು ಕೆಲಸ ಮಾಡುತ್ತಿದೆ ಎಂದನು. ಬೇಕಾದರೆ ನನ್ನ ಇಡೀ ಭವಿಷ್ಯವನ್ನೇ ಅದು ಹೇಳಲಿರುವುದಾಗಿಯೂ ನುಡಿದನು. ಹಾಗೆ ಮಾಡು ಎಂದೆ ನಾನು. ಆಗ ಕೂದಲಿನ ಚೆಂಡು ಜಿಮ್ಮನೊಂದಿಗೆ ಮಾತಾಡತೊಡಗಿತು. ಜಿಮ್ ಅದನ್ನು ನನಗೆ ಹೇಳಿದ, ಹೀಗೆ :

"ನಿನ್ನ ಮುದಿ ತಂದೆಗೆ ತಾನು ಮಾಡಲಿರುವುದು ಇನ್ನೂ ತಿಳಿದಿಲ್ಲ. ಕೆಲವೇಳೆ ಅವನು ಇಲ್ಲಿಂದ ಹೊರಟು ಹೋಗುವುದಾಗಿಯೂ, ಕೆಲವೇಳೆ ಇಲ್ಲೇ ಇರುವುದಾಗಿಯೂ ಹೇಳುತ್ತಿದ್ದಾನೆ. ಆ ಮುದುಕ ತನಗೆ ತೋರಿದ ಹಾಗೆ ಮಾಡಿಕೊಳ್ಳಲಿ ಎಂದು ನೆಮ್ಮದಿಯಿಂದಿದ್ದು ಬಿಡುವುದೇ ನಿನಗೆ ಲೇಸು ಅವನ ಮೇಲೆ ಇಬ್ಬರು ದೇವದೂತರು ಹಾರಾಡುತ್ತಿದ್ದಾರೆ, ಅದರಲ್ಲಿ ಒಬ್ಬ ಬೆಳ್ಳಗೆ ಹೊಳೆಯುತ್ತಿದ್ದರೆ, ಇನ್ನೊಬ್ಬ ಕಪ್ಪು. ಕೆಲವೇಳೆ ಬಿಳಿಯ ಅವನನ್ನು ಸರಿಯಾದ ಮಾರ್ಗಕ್ಕೆ ತರುತ್ತಾನೆ ; ಆ ಮೇಲೆ ಕರಿಯ ಬಂದು ಎಲ್ಲವನ್ನೂ ಹಾಳುಮಾಡುತ್ತಾನೆ. ಇವರಿಬ್ಬರಲ್ಲಿ ಕಟ್ಟಕಡೆಗೆ ಯಾರು ಇವನನ್ನು ವಶಪಡಿಸಿಕೊಳ್ಳುವರೋ ಹೇಳಲು ಅಸಾಧ್ಯ. ಆದರೆ ನೀನು ಕ್ಷೇಮವಾಗಿರುತ್ತೀಯ. ನಿನ್ನ ಜೀವನದಲ್ಲಿ ನೀನು ಕಡುಕಷ್ಟವನ್ನು ಎದುರಿಸ ಬೇಕಾಗುತ್ತದೆ ; ಅಲ್ಲದೆ, ನಿನಗೆ ಹೆಚ್ಚಿನ ಸಂತೋಷವು ಕಾದಿರುತ್ತದೆ. ಕೆಲವೇಳೆ ನೀನು ನೋವನ್ನು ಅನುಭವಿಸುತ್ತೀಯೆ. ಕೆಲವೇಳೆ ನಿನಗೆ ಕಾಹಿಲೆ ಹಿಡಿಯುತ್ತದೆ. ಆದರೆ ಪ್ರತಿ ಸಲವೂ ನೀನು ಚೇತರಿಸಿಕೊಂಡು ಗೆಲವಾಗುತ್ತೀಯೆ. ನಿನ್ನ ಜೀವನದಲ್ಲಿ ಇಬ್ಬರು ಹುಡುಗಿಯರು ನಿನ್ನನ್ನು ತಮ್ಮ ಕಡೆಗೆ ಸೆಳೆಯುತ್ತಿದ್ದಾರೆ. ಒಬ್ಬಳು ಬೆಳ್ಳಗಿದ್ದರೆ, ಇನ್ನೊಬ್ಬಳು ಕಪ್ಪು ಒಬ್ಬಳು ಐಶ್ವರ್ಯವುಳ್ಳವಳು ; ಇನ್ನೊಬ್ಬಳು ಬಡವೆ. ನೀನು ಮೊದಲಿಗೆ ಬಡವೆಯನ್ನು ಮದುವೆಯಾಗುತ್ತೀಯೆ, ಸ್ವಲ್ಪ ಕಾಲದ ಮೇಲೆ ಐಶ್ವರ್ಯಳನ್ನು ಕೈ ಹಿಡಿಯುತ್ತೀಯೆ. ನಿನಗೆ ನೀರೆಂದರೆ ಭಯ ; ಅದಕ್ಕೆ ಆದಷ್ಟು ದೂರದಲ್ಲಿದ್ದು ಬಿಡಲು ಇಷ್ಟಪಡುತ್ತೀಯೆ. ನಿನ್ನನ್ನು ನೇಣು ಹಾಕುವ ಸಂದರ್ಭವೊದಗಿದರೂ ನಿನಗೆ ಅಪಾಯವಾಗದು."

ಆ ರಾತ್ರಿ ನಾನು ಮೇಂಬತ್ತಿಯ ದೀಪವನ್ನು ಹಿಡಿದುಕೊಂಡು ನನ್ನ ಕೊಠಡಿಯನ್ನು ಪ್ರವೇಶಿಸಿದೆ. ಅಲ್ಲಿ ಅಪ್ಪನೇ ಕುಳಿತಿದ್ದಾನೆ—ಸಾಕ್ಷಾತ್ತಾಗಿ !

೫

ನಾನು ಬಾಗಿಲನ್ನು ಹಾಕಬೇಕಾಗಿತ್ತು. ತಿರುಗಿ ನೋಡಿದೆ ; ಅವನು ಅಲ್ಲಿದ್ದ, ನನಗೆ ಅವನನ್ನು ಕಂಡರೆ ಯಾವಾಗಲೂ ಭಯವೇ ; ಅವನು ನನ್ನನ್ನು ಅಷ್ಟರಮಟ್ಟಿಗೆ ಬಡಿಯುತ್ತಿದ್ದ. ಈಗಲೂ ಅವನನ್ನು ಕಂಡಾಗ ನಾನು ದಿಗಿಲು ಬಿದ್ದನೆಂದೇ ನನ್ನ ಊಹೆ. ಒಂದು ನಿಮಿಷದೊಳಗಾಗಿ, ನನ್ನ ಭಾವನೆ ತಪ್ಪೆಂದು ನನಗೆ ತಿಳಿದೀತು;—ಹಾಗೆಂದರೆ, ಅವನು ಇಲ್ಲಿಗೆ ಅಷ್ಟು ಅನಿರೀಕ್ಷಿತವಾಗಿ ಆಗಮಿಸಿದ್ದರಿಂದ ಆದ ಮೊದಲ ಕುಲುಕಿನ ತರುವಾಯ (ನೀವು ಹಾಗೆ ಹೇಳಬಹುದು), ನನ್ನ ಉಸಿರು ಕಟ್ಟಿದಂತೆ ಆಯಿತಲ್ಲ, ಆಗ, ಅದಾದ ಕೂಡಲೆ ನನಗೆ ಮನಸ್ಸಿಗೆ ಹಚ್ಚಿಕೊಳ್ಳುವಂಥ ಭಯವೇನೂ ಅವನಿಂದ ಆಗಲಿಲ್ಲ ಎಂಬುದು ಸ್ಪಷ್ಟವಾಯಿತು.

ಅವನಿಗೆ ಇನ್ನೇನು ಐವತ್ತು ವರುಷ ತುಂಬುವುದರಲ್ಲಿತ್ತು, ಅವನನ್ನು ನೋಡಿದರೆ ಹಾಗೆ ಕಾಣಿಸುತ್ತಿದ್ದ. ಅವನ ತಲೆಗೂದಲು ಉದ್ದವಾಗಿ ಗೋಜಿಕೊಂಡು ನುಣುಪಾಗಿ ಇಳಿದಿತ್ತು. ಅವನ ಮುಖ ಬಳ್ಳಿಮರೆಯಲ್ಲಿದೆಯೋ ಎಂಬಂತಿದ್ದು ಅವನ ಕಣ್ಣು ಹೊಳಪು ಮುಂಗುರುಳ ಮೂಲಕ ಹಾದು ಬರುವುದನ್ನು ನೀವು ಕಾಣಬಹುದಿತ್ತು ; ಪೂರ್ತಿ ಕಪ್ಪು ಕೂದಲು ; ಒಂದೂ ಬಿಳಿ ಕೂದಲಿರಲಿಲ್ಲ. ಅವನ ಉದ್ದವಾದ ಮೀಸೆಯೂ ಹಾಗೆಯೇ ಇತ್ತು, ಅವನ ಮುಖ ವರ್ಣರಹಿತವಾಗಿತ್ತು ; ಬೆಳ್ಳಗಿತ್ತು. ಬೇರೊಬ್ಬನ ಮೈ ಬಿಳುಪಲ್ಲ ಅದು, ಯಾರನ್ನಾದರೂ ಅಸ್ವಸ್ಥರನ್ನಾಗಿ ಮಾಡುವ ಬಿಳುಪು ಅದು : ಮರ–ಕಪ್ಪೆಯ ಬಿಳುಪು, ಮೀನ ಹೊಟ್ಟೆಯ ಬಿಳುಪು. ಅವನ ಬಟ್ಟೆಗಳೋ—ಕೇವಲ ಚಿಂದಿಗಳು. ಅವನು ಕಾಲ ಮೇಲೆ ಕಾಲು ಹಾಕಿಕೊಂಡು ಕುಳಿತಿದ್ದನು. ಆ ಕಾಲಿಗೆ ಅವನು ಧರಿಸಿದ್ದ ಪಾದರಕ್ಷೆ ಅಲ್ಲಲ್ಲಿ ಹರಿದಿತ್ತು. ಇವನ ಕಾಲ್ಬೆರಳೆರಡು ಆ ಹರುಕಿನಲ್ಲಿ ಸಿಕ್ಕಿಕೊಂಡಿದ್ದವು. ಅವನು ಆಗಾಗ ಅವುಗಳನ್ನು ಒಳಕ್ಕೆ ತಳ್ಳುತ್ತಿದ್ದನು. ಅವನ ಟೋಪಿ ನೆಲದ ಮೇಲೆ ಬಿದ್ದಿತ್ತು–ಅದೊಂದು ಕಪ್ಪಗೆ ಅವಲಕ್ಷಣವಾದ ಹಳೆಯ ಸರಕು. ಅದರ ಮೇಲ್ಭಾಗ ಮುಚ್ಚಳದಂತಿದ್ದು ಹಳ್ಳವಾಗಿತ್ತು, ನಾನು ಅವನನ್ನು ನೋಡುತ್ತ ನಿಂತೆ, ಅವನು ಅಲ್ಲಿ ಕೊಂಚ ಹಿಂದಕ್ಕೆ ತಿರುಗಿದಂತಿದ್ದ ಕುರ್ಚಿಯಲ್ಲಿ ಕುಳಿತು ನನ್ನನ್ನು ನೋಡುತ್ತಲೇ ಇದ್ದನು. ನಾನು ಮೋಂಬತ್ತಿಯನ್ನು ಕೆಳಗಿರಿಸಿದೆ. ಕಿಟಿಕಿ ತೆರೆದಿದ್ದುದು ನನ್ನ ಗಮನಕ್ಕೆ ಬಂದಿತ್ತು ; ಅವನು ಜೋಪಡಿಯ ಮೇಲೆ ಹತ್ತಿ ಒಳಕ್ಕೆ ಬಂದಿದ್ದ. ನನ್ನ ಮೈಮೇಲೆಲ್ಲ ಕಣ್ಣು ಹಾಯಿಸುತ್ತಿದ್ದ. ಆ ಮೇಲೆ ಅವನು ಹೇಳಿದ ;

"ನಿನ್ನ ಬಟ್ಟೆ ಬರೆ ಬಹಳ ಗರಿಮುರಿಯಾಗಿವೆ, ನೀನು ನಿನ್ನನ್ನು ಬಲು ದೊಡ್ಡ ಮನುಷ್ಯನೆಂದು ತಿಳಿದಿರುವಂತಿದೆ : ಅಲ್ಲವೆ ?"

"ನಾನು ಆಗಿರಬಹುದು, ಆಗಿಲ್ಲದೆಯೂ ಇರಬಹುದು" ಎಂದೆ ನಾನು.

"ನನಗೆ ನೀನು ಬಾಯಿ ಕೊಡಬೇಡ, ನಾನು ದೂರವಾಗಿದ್ದುದರಿಂದ ನೀನು ಅನೇಕ ನಾಜೂಕುಗಳನ್ನು ಕಲಿತಿದ್ದೀಯೆ; ಇಲ್ಲಿಂದ ಹೊರಡುವ ಮೊದಲು ನಾನು ನಿನ್ನನ್ನು ಸ್ವಲ್ಪ ಅದುಮಬೇಕಾಗಿದೆ. ನೀನು ವಿದ್ಯಾವಂತನೆಂದೂ, ಓದು ಬರಹ ಬಲ್ಲವನೆಂದೂ ಹೇಳುತ್ತಾರೆ. ನಿಮ್ಮ ತಂದೆಗಿಂತ ನೀನು ಶ್ರೇಷ್ಠನೆಂದು ತಿಳಿದಿರುವೆ, ಅಲ್ಲವೆ ? ಏಕೆಂದರೆ ಅವನಿಗೆ ಓದು ಬರಹ ಬಾರದು, ಇದು ನಿನ್ನನ್ನು ಬಿಟ್ಟುಹೋಗುವಂತೆ ನಾನು ಮಾಡುತ್ತೇನೆ. ಅಂಥಾ ದೊಡ್ಡ ಮಾತಿನ ದಡ್ಡತನದ ತಂಟೆಗೆ ನೀನು ಹೋಗಬಹುದೆಂದು ನಿನಗೆ ಹೇಳಿದವರು ಯಾರು ?"

ನೀನು ಹಾಗೆ ಮಾಡಬಲ್ಲೆ ಎಂದವರು ಯಾರು ?" ಎಂದನವನು.

"ಆ ವಿಧವೆ. ನನಗೆ ಹೇಳಿದವಳು ಅವಳು."

"ಏನು ? ಆ ವಿಧವೆಯೆ ? ಈ ಅಧಿಕಪ್ರಸಂಗತನಕ್ಕೆ ಕೈಹಾಕಬಹುದೆಂದು ಅವಳಿಗೆ ಹೇಳಿದವರು ಯಾರು ?"

"ಅವಳಿಗೆ ಯಾರೂ ಎಂದೂ ಹೇಳಲಿಲ್ಲ."

"ಹಾಗಾದರೆ, ನಾನು ಅವಳಿಗೆ ಬುದ್ಧಿ ಕಲಿಸುತ್ತೇನೆ. ನೋಡಿಲ್ಲಿ—ನೀನು ಶಾಲೆಯನ್ನು ಬಿಟ್ಟುಬಿಡು. ಕೇಳಿಸಿತೆ ? ಮಗ ತನ್ನ ತಂದೆಯೆದುರಿಗೆ ಸ್ವಪ್ರತಿಷ್ಠೆಯಿಂದ ತಾನು ವಾಸ್ತವವಾಗಿ ಇರುವುದಕ್ಕಿಂತಲೂ ಶ್ರೇಷ್ಠನೆಂದು ತೋರಿಸಿಕೊಳ್ಳುವಮಟ್ಟಿಗೆ ಅವನನ್ನು ಮುಂದಕ್ಕೆ ತಂದ ಜನರಿಗೆ ನಾನು ಬುದ್ಧಿ ಕಲಿಸುತ್ತೇನೆ ನೀನೇನಾದರೂ ಶಾಲೆಯ ಆವರಣದಲ್ಲಿ ಸುಳಿಯುತ್ತಿರುವುದು ನನ್ನ ಕಣ್ಣಿಗೆ ಬಿದ್ದರೆ ನಿನಗೆ ತಕ್ಕದ್ದು ಮಾಡುತ್ತೇನೆ. ನಿಮ್ಮ ತಾಯಿಗೆ ಓದು ಬರುತ್ತಿರಲಿಲ್ಲ. ಸಾಯುವ ತನಕ ಅವಳಿಗೆ ಬರೆಯುವುದೂ ಬರುತ್ತಿರಲಿಲ್ಲ. ನಮ್ಮ ಮನೆತನದಲ್ಲಿ ಯಾರೂ ತಾವು ಸಾಯುವುದರೊಳಗಾಗಿ ಓದು ಬರಹ ಕಲಿತಿರಲಿಲ್ಲ. ನನಗೂ ಬರುವುದಿಲ್ಲ. ನೀನು ಉಬ್ಬಿ ಹೋಗಿದ್ದೀಯೆ, ನಾನು ಇದನ್ನೆಲ್ಲ ಸಹಿಸುವವನಲ್ಲ. ಕಿವಿಗೆ ಬಿತ್ತೋ ! ಎಲ್ಲಿ, ಓದು ಕೇಳೋಣ:"

ನಾನು ಒಂದು ಪುಸ್ತಕವನ್ನು ಎತ್ತಿಕೊಂಡು "ಜನರಲ್ ವಾಷಿಂಗ್‌ಟನ್ನನೂ, ಯುದ್ಧಗಳೂ" ಎಂಬ ವಿಷಯವಾಗಿ ಏನನ್ನೋ ಓದತೊಡಗಿದೆ. ನನ್ನ ಓದು ಇನ್ನೂ ನಿಮಿಷಾರ್ಧವನ್ನು ಮುಟ್ಟುವುದರೊಳಗಾಗಿ ಅವನು ಆ ಪುಸ್ತಕವನ್ನು ಗಬಕ್ಕನೆ ಕಸಿದುಕೊಂಡು ಆಚೆಗೆ ಬಿಸಾಡಿದನು. ಅವನು ಹೇಳಿದ :

"ಅದು ಹಾಗೆಯೇ, ನೀನು ಅದನ್ನು ಮಾಡಬಲ್ಲೆ, ನೀನು ಹೇಳಿದಾಗ ನನ್ನ ಮನಸ್ಸಿನಲ್ಲಿ ಸಂಶಯಗಳಿದ್ದವು. ಈಗ ನೋಡಿಲ್ಲಿ. ಈ ಚಮತ್ಕಾರಗಳನ್ನು ನಿಲ್ಲಿಸು. ಅವು ನನ್ನ ಬಳಿ ಬೇಯುವುದಿಲ್ಲ, ಜಾಣಮರಿಯೆ. ನೀನೇನಾದರೂ ಆ ಶಾಲೆಯ ಆವರಣ

ದಲ್ಲಿ ನನಗೆ ಸಿಕ್ಕಿದೆಯೋ ನಿನ್ನ ಚರ್ಮವನ್ನು ಚೆನ್ನಾಗಿ ಹದಮಾಡುತ್ತೇನೆ. ಮತ ಧರ್ಮವೂ ನಿನಗೆ ಮೊದಲಾಗಿ ಸಿಕ್ಕುವುದೆನ್ನುವುದು ತಿಳಿಯುತ್ತದೆ. ನಾನು ಇಂಥಾ ಮಗನನ್ನು ನೋಡಿಯೇ ಇಲ್ಲ"

ಕೆಲವು ಹಸುಗಳೂ ಒಬ್ಬ ಹುಡುಗನೂ ಇರುವ ನೀಲಿ ಮತ್ತು ಹಳದಿ ಬಣ್ಣಗಳ ಚಿಕ್ಕ ಚಿತ್ರವೊಂದನ್ನು ಎತ್ತಿ ಹಿಡಿದುಕೊಂಡು ಅವನು ಹೇಳಿದನು :

"ಏನಿದು ?"

"ನಾನು ನನ್ನ ಪಾಠಗಳನ್ನು ಚೆನ್ನಾಗಿ ಕಲಿತದ್ದಕ್ಕಾಗಿ ನನಗೆ ಅದನ್ನು ಕೊಟ್ಟಿದ್ದಾರೆ."

ಅವನು ಅದನ್ನು ಹರಿದು ಹಾಕಿದ ; ಹೇಳಿದ ;

"ಇದಕ್ಕಿಂತ ಉತ್ತಮವಾದುದನ್ನು ನಾನು ನಿನಗೆ ಕೊಡುತ್ತೇನೆ. ಒಂದು ಹೊಡೆತವನ್ನು ಕೊಡುತ್ತೇನೆ."

ಅವನು ಗೊಣಗುತ್ತಾ ಒಂದು ನಿಮಿಷಕಾಲ ಅಲ್ಲೇ ಕುಳಿತಿದ್ದ, ಆ ಮೇಲೆ ಹೇಳಿದ :

"ನೀನು ಮುದ್ದು ಮೋಜುಗಾರನಲ್ಲವೆ ? ಹಾಸುಗೆ, ಹಾಸುವ ಬಟ್ಟೆಗಳು, ಕನ್ನಡಿ, ನೆಲದ ಮೇಲೊಂದು ಜಮಖಾನ ಇವೆಲ್ಲ ನಿನಗೆ,—ನಿಮ್ಮ ತಂದೆಯಾದವನು ಚರ್ಮಶಾಲೆಯಲ್ಲಿ ಹಂದಿಗಳೊಡನೆ ಮಲಗಬೇಕು. ನಾನು ಇಂಥಾ ಮಗನನ್ನು ನೋಡಿಲ್ಲ. ನಾನು ಈ ಸ್ಥಳವನ್ನು ಬಿಡುವ ಮೊದಲು ಇವುಗಳಲ್ಲಿ ಕೆಲವನ್ನು ನಿನ್ನಿಂದ ಕಸಿದುಕೊಂಡು ಹೋಗುವುದಂತೂ ನಿಜವೆ. ನಿನ್ನ ಜಂಬಕ್ಕೆ ಕೊನೆಯೇ ಇಲ್ಲವೆ ? ನೀನು ಹಣವಂತನಂತೆ, ಅದರ ವಿಷಯವೇನು ?"

"ಅವರು ಸುಳ್ಳು ಹೇಳುತ್ತಾರೆ—ಅಷ್ಟೇ ಅದರ ವಿಷಯ."

"ಇಲ್ಲಿ ನೋಡು ನನ್ನೊಂದಿಗೆ ನೀನು ಮಾತಾಡುತ್ತಿರುವ ರೀತಿಯ ಕಡೆಗೆ ಗಮನವಿರಲಿ. ನಾನು ಈ ತನಕ ಎಲ್ಲವನ್ನೂ ಸಹಿಸಿಕೊಂಡಿದ್ದೇನೆ. ನನಗೆ ನಿನ್ನ ಎದುರು ಮಾತು ಬೇಕಿಲ್ಲ. ನಾನು ಎರಡು ದಿನಗಳಿಂದಲೂ ಈ ಊರಲ್ಲಿ ಇದ್ದೇನೆ. ನೀನು ಹಣವಂತನಾಗಿದ್ದೇಯೆ ಎನ್ನುವುದು ಹೊರತು ಬೇರೆ ಸುದ್ದಿಯೇ ನನ್ನ ಕಿವಿಗೆ ಬಿದ್ದಿಲ್ಲ. ನದಿಯ ಕೆಳಗಿನ ಸೀಮೆಯಲ್ಲಿದ್ದಾಗಲೂ ನನ್ನ ಕಿವಿಗೆ ಇದೇ ಮಾತು ಕೇಳಿಸಿತು. ನಾನು ಬಂದಿರುವುದು ಆ ಕಾರಣದಿಂದಲೇ. ನಾಳೆ ನೀನು ನನಗೆ ಆ ಹಣವನ್ನು ತಂದುಕೊಡಬೇಕು. ನನಗೆ ಬೇಕು ಅದು."

"ನನ್ನ ಹತ್ತಿರ ಯಾವ ಹಣವೂ ಇಲ್ಲ"

"ಅದು ಸುಳ್ಳು. ನ್ಯಾಯಾಧೀಶ ಥ್ಯಾಚೆರ್ ಅದನ್ನು ಇಟ್ಟುಕೊಂಡಿದ್ದಾನೆ. ನೀನು ಅದನ್ನು ತಂದು ಕೊಡು. ನನಗೆ ಬೇಕು ಅದು."

"ನನ್ನ ಹತ್ತಿರ ಯಾವ ಹಣವೂ ಇಲ್ಲ ಎನ್ನುತ್ತಿದ್ದೇನೆ. ನೀನು ನ್ಯಾಯಾಧೀಶ ಥ್ಯಾಚರನನ್ನೇ ಕೇಳು. ನಿನಗೆ ಅವನೂ ಹಾಗೆಯೇ ಹೇಳುತ್ತಾನೆ."

"ಆಗಲಿ ನಾನು ಅವನನ್ನು ಕೇಳುತ್ತೇನೆ. ಅವನಿಂದ ಹಣವನ್ನು ಕಕ್ಕಿಸುತ್ತೇನೆ ಇಲ್ಲವಾದರೆ, ಕೊಡದಿರುವುದಕ್ಕೆ ಕಾರಣವನ್ನಾದರೂ ತಿಳಿದುಕೊಳ್ಳುತ್ತೇನೆ, ಈಗ ನಿನ್ನ ಜೇಬಿನಲ್ಲಿ ಎಷ್ಟಿದೆ, ಹೇಳು ನನಗೆ ಬೇಕು ಅದು"

"ನನ್ನ ಬಳಿ ಒಂದೇ ಒಂದು ಡಾಲರಿದೆ. ಅದು ನನಗೆ ಬೇಕು—"

"ಅದು ನಿನಗೆ ಏಕೆ ಬೇಕು ಎನ್ನುವುದನ್ನು ಕಟ್ಟಿಕೊಂಡು ನನಗೇನು. ಅದನ್ನು ಇಲ್ಲಿ ಹಾಕು."

ಅದನ್ನು ಅವನು ಕಸಿದುಕೊಂಡನು. ಅದು ಸಾಚಾ ನಾಣ್ಯವೇ ಎಂಬುದನ್ನು ಸ್ಥಿರಪಡಿಸಿಕೊಳ್ಳಲು ಕಚ್ಚಿನೋಡಿದನು. ಆಮೇಲೆ ಇಡೀ ದಿನವೆಲ್ಲ ತಾನು ಕುಡಿದಿರಲಿಲ್ಲವೆಂದೂ ಊರೊಳಗೆ ಸ್ವಲ್ಪ ವ್ಹಿಸ್ಕಿಯನ್ನು ತರುವುದಾಗಿಯೂ ನುಡಿದನು. ಅವನು ಜೋಪಡಿಯ ಮೇಲೆ ಇಳಿದು ಹೋಗುವಾಗ ಕಿಟಕಿಯೊಳಗಿಂದ ತನ್ನ ಕೆಂಚರಳನ್ನು ತೂರಿಸಿ ನಾನು ಬಲು ನಾಜೂಕುಗಳನ್ನು ಕಲಿತವನೆಂದೂ ತನಗಿಂತ ಉತ್ತಮನೆನಿಸಿಕೊಳ್ಳಲು ನಾನು ಯತ್ನಿಸುತ್ತಿರುವೆನೆಂದೂ ನನ್ನನ್ನು ಬೈದನು. ಸದ್ಯ ಅವನು ತೊಲಗಿದನೆಂದು ನಾನು ಅಂದುಕೊಂಡಾಗ ಮತ್ತೆ ಒಳಗೆ ತಲೆಹಾಕಿ ಶಾಲೆಯ ವಿಷಯದಲ್ಲಿ ತಾನು ಹೇಳಿದ್ದನ್ನು ಗಮನಿಸಬೇಕೆಂದೂ, ನಾನು ಆ ಹವ್ಯಾಸವನ್ನು ಬಿಟ್ಟುಬಿಡದಿದ್ದರೆ ತಾನು ಆ ಸುತ್ತಮುತ್ತಿನಲ್ಲೇ ಕಾದಿದ್ದು ನನ್ನನ್ನು ಹಿಡಿದು ಮುಗಿಸಿ ಬಿಡುವುದಾಗಿಯೂ ತಿಳಿಸಿದನು.

ಮೂರನೆಯ ದಿನ ಅವನು ಚೆನ್ನಾಗಿ ಕುಡಿದು ನ್ಯಾಯಾಧೀಶ ಥ್ಯಾಚೆರನ ಬಳಿಗೆ. ಹೋಗಿ ದುಂಡಾವರ್ತಿಮಾಡಿದ. ಹಣವನ್ನು ತನಗೆ ಒಪ್ಪಿಸುವಂತೆ ಒತ್ತಾಯಮಾಡಿದ. ಅದು ನಡೆಯಲಿಲ್ಲವಾದ್ದರಿಂದ ಅವನ ಮೇಲೆ ಕಾನೂನಿನ ಪ್ರಕಾರ ಕ್ರಮತೆಗೆದುಕೊಳ್ಳುವುದಾಗಿ ಶಪಥಮಾಡಿದ.

ನ್ಯಾಯಾಧೀಶನೂ ವಿಧವೆಯೂ ಕಾನೂನಿನಂತೆ ಕ್ರಮವನ್ನು ಕೈಕೊಂಡು ನನ್ನನ್ನು ಅವನ ಒಡೆತನದಿಂದ ಬಿಡಿಸಿ ತಮ್ಮಲ್ಲಿ ಒಬ್ಬರನ್ನು ನನ್ನ ಪೋಷಕರನ್ನಾಗಿ ನೇಮಿಸಬೇಕೆಂದು ನ್ಯಾಯಾಲಯದಲ್ಲಿ ವ್ಯಾಜ್ಯ ಹೂಡಿದರು. ಆದರೆ ಆಗ ತಾನೇ ಹೊಸನ್ಯಾಯಾಧೀಶನೊಬ್ಬನು ಅಧಿಕಾರವಹಿಸಿಕೊಂಡಿದ್ದನು, ಅವನಿಗೆ ಆ ಮುದುಕನ ಪರಿಚಯವಿರಲಿಲ್ಲ. ಆದ್ದರಿಂದ ಅವನು ನ್ಯಾಯಾಲಯಗಳು ಇಂಥ ವಿಷಯಗಳಲ್ಲಿ ತಲೆಹಾಕಬಾರದು, ಸಾಧ್ಯವಾದಲ್ಲಿ ಸಂಸಾರಗಳನ್ನು ಒಡೆಯಬಾರದು ಎಂದು ಅಭಿಪ್ರಾಯಪಟ್ಟು, ತಾನು ಯಾವ ಮಗುವನ್ನೂ ಅದರ ತಂದೆಯಿಂದ ಕಿತ್ತುಕೊಳ್ಳಬಯಸುವುದಿಲ್ಲವೆಂದು ತೀರ್ಪು ಗೊಟ್ಟನು. ಈ ಕಾರಣದಿಂದ ನ್ಯಾಯಾಧೀಶ ಥ್ಯಾಚೆರನೂ ವಿಧವೆಯೂ ಈ ವ್ಯವಹಾರವನ್ನು ಅಲ್ಲಿಗೇ ಬಿಡಬೇಕಾಯಿತು.

ಆ ತೀರ್ಪಿನಿಂದ ಮುದುಕನಿಗೆ ತಡೆಯಲಾಗದಷ್ಟು ಸಂತೋಷವಾಯಿತು. ತನಗೋಸ್ಕರ ಕೊಂಚ ಹಣವನ್ನು ತಂದುಕೊಡದಿದ್ದರೆ ತಾನು ನನ್ನನ್ನು ಸಾಯ ಬೀಳ ಥೊಡೆದು ಹಾಕುವುದಾಗಿ ಹೇಳಿದನು. ನಾನು ನ್ಯಾಯಾಧೀಶ ಥ್ಯಾಚೆರನಿಂದ ಮೂರು

ಡಾಲರುಗಳನ್ನು ಸಾಲತಂದೆ. ಅಪ್ಪ ಅದನ್ನು ಕೊಂಡು ಹೋಗಿ ಪಟ್ಟಾಗಿ ಕುಡಿದ. ದಾರಿಯುದ್ದಕ್ಕೂ ಬಾಯಿಗೆ ಬಂದ ಹಾಗೆ ಕಿರಿಚುತ್ತಾ ಬೈಯುತ್ತಾ ಕೆಮ್ಮುತ್ತಾ ನಡೆದನು. ಸುಮಾರು ನಡುರಾತ್ರಿಯತನಕ ತಗಡಿನ ಡಬ್ಬಿಯೊಂದನ್ನು ಸದ್ದುಮಾಡುತ್ತಾ ಊರೊಳಗೆಲ್ಲಾ ಓಡಾಡಿದನು. ಅವನನ್ನು ಸೆರೆಗೆ ಕೂಡಿದರು. ಮರುದಿನ ಅವನನ್ನು ನ್ಯಾಯಾಲಯದ ಮುಂದೆ ತಂದರು. ಅವನನ್ನು ಒಂದು ವಾರ ಸೆರೆಯಲ್ಲಿಡುವಂತೆ ನ್ಯಾಯಾಲಯ ಆಜ್ಞೆ ಮಾಡಿತು. ಆದರೂ ಅವನು ತನಗೆ ತೃಪ್ತಿಯಾಯಿತು ಎಂದನು ; ತನ್ನ ಮಗನ ಯಜಮಾನ ತಾನೆಂದೂ, ಅವನಿಗೆ ಬಿಸಿತಟ್ಟುವಂತೆ ಮಾಡುವುದಾಗಿಯೂ ಹೇಳಿದನು.

ಅವನು ಸೆರೆಯಿಂದ ಹೊರಬಿದ್ದಮೇಲೆ ಹೊಸ ನ್ಯಾಯಾಧೀಶನು ಅವನನ್ನು ಒಬ್ಬ ಯೋಗ್ಯ ಮನುಷ್ಯನನ್ನಾಗಿ ಮಾಡುವುದಾಗಿ ಹೇಳಿಕೊಂಡನು. ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋದನು ; ಶುಭ್ರವಾದ ಒಳ್ಳೆಯ ಉಡುಪನ್ನು ಕೊಟ್ಟನು ; ಊಟ ತಿಂಡಿಯ ವೇಳೆಯಲ್ಲಿ ಅವನನ್ನು ತನ್ನ ಮನೆಯವರೊಂದಿಗೆ ಕೂರಿಸಿಕೊಂಡನು. ತನ್ನ ಹಳೆಯ ಸ್ನೇಹಿತನಂತೆ ಅವನನ್ನು ಕಂಡುಕೊಂಡನು ಎನ್ನಲೂ ಬಹುದು. ರಾತ್ರಿಯೂಟದ ತರುವಾಯ ನ್ಯಾಯಾಧೀಶನು ಅವನಿಗೆ ಕುಡಿಯುವ ದುರಭ್ಯಾಸವನ್ನು ವರ್ಜಿಸುವ ವಿಷಯದಲ್ಲಿ ಉಪನ್ಯಾಸಕೊಟ್ಟನು. ಅದನ್ನು ಕೇಳಿ ಆ ಮುದುಕ ಗಳಗಳ ಅತ್ತುಬಿಟ್ಟನು ; ತಾನು ಮೂರ್ಖನಾಗಿದ್ದುದಾಗಿಯೂ ತನ್ನ ಬದುಕನ್ನು ಕೆಡಿಸಿಕೊಂಡುದಾಗಿಯೂ ಒಪ್ಪಿಕೊಂಡನು. ಇನ್ನು ತಾನು ತನ್ನ ಬದುಕಿನಲ್ಲಿ ಒಂದು ಹೊಸ ಅಧ್ಯಾಯವನ್ನು ತಿರುವಿಹಾಕುವುದಾಗಿಯೂ, ಯಾರೂ ತನಗಾಗಿ ತಲೆತಗ್ಗಿಸಬೇಕಾದ ಸಂದರ್ಭವಿರುವುದಿಲ್ಲವೆಂದೂ, ಭರವಸೆಕೊಟ್ಟು, ನ್ಯಾಯಾಧೀಶನು ತನಗೆ ನೆರವಾಗಬೇಕೆಂದೂ, ತನ್ನನ್ನು ಕೀಳೆಣಿಸಬಾರದೆಂದೂ ಕೇಳಿಕೊಂಡನು. ನ್ಯಾಯಾಧೀಶನಾದರೋ ಈ ಮಾತಿಗಾಗಿ ಅವನನ್ನು ಅಪ್ಪಿಕೊಂಡನು, ಅತ್ತನು. ಅವನ ಹೆಂಡತಿಯೂ ಮತ್ತೆ ಅತ್ತಳು. ತಾನೂ ಯೋಗ್ಯನೆ ಎಂದೂ ಜನ ತನ್ನನ್ನು ಅಪಾರ್ಥಮಾಡಿಕೊಂಡರೆಂದೂ ಅಪ್ಪ ಹೇಳಿದನು. ನ್ಯಾಯಾಧೀಶನು ಇದನ್ನು ತಾನು ನಂಬುತ್ತೇನೆಂದನು, ಅಪ್ಪ ಪತಿತನಾದವನಿಗೆ ಸಲ್ಲಬೇಕಾದದ್ದು ಸಹಾನುಭೂತಿಯೊಂದೇ ಎಂದನು. ನ್ಯಾಯಾಧೀಶ ಅದು ನಿಜವಾದ ಮಾತೆಂದನು. ಮತ್ತೆ ಎಲ್ಲರೂ ಅತ್ತರು. ಮಲಗುವ ಸಮಯ ಸಮೀಪಿಸುತ್ತಿದ್ದಾಗ, ಮುದುಕ ಎದ್ದುನಿಂತು ತನ್ನ ಕೈಚಾಚಿ ಹೀಗೆ ಹೇಳಿದ :

"ಸಮಸ್ತ ಮಹನಿಯರೆ ಮತ್ತು ಮಹಿಳೆಯರೆ, ಇದನ್ನು ನೋಡಿ, ಇದನ್ನು ಮುಟ್ಟಿ. ಇದನ್ನು ಕುಲುಕಿ. ಈ ಕೈ ಒಂದು ಹಂದಿಯ ಕೈಯಾಗಿತ್ತು, ನಿಜ ; ಇನ್ನು ಮುಂದೆಂದೂ ಹಾಗಿರುವುದಿಲ್ಲ. ಹೊಸ ಜೀವನವನ್ನು ಆರಂಭಿಸುವ ಕೈ ಇದು. ಈ ಮನುಷ್ಯ ಆ ಹಳೆ ಬದುಕಿಗೆ ಹಿಂದಿರುಗುವ ಬದಲು ಸಾಯಲು ಸಿದ್ಧನಾಗುತ್ತಾನೆ.

ಈ ಮಾತುಗಳನ್ನು ಗಮನವಿಟ್ಟು ಕೇಳಿ ;–ಇದನ್ನು ಆಡಿದವನು ನಾನು ಎಂಬುದನ್ನು ಮರೆಯದಿರಿ, ಈಗ ಇದು ಶುಚಿಯಾದ ಕೈ ; ಇದನ್ನು ಕುಲುಕಿರಿ—ಅಂಜಬೇಡಿ."

ಬಳಿಕ ಎಲ್ಲರೂ ಸರದಿಯ ಮೇರೆಗೆ ಅವನ ಕೈಯನ್ನು ಹಿಡಿದು ಕುಲುಕಿದರು ; ಅತ್ತುಬಿಟ್ಟರು. ನ್ಯಾಯಾಧೀಶನ ಹೆಂಡತಿ ಅದಕ್ಕೆ ಮುತ್ತಿಟ್ಟಳು. ಮುದುಕ ತನ್ನ ಪ್ರತಿಜ್ಞೆಗೆ ರುಜುವಿಟ್ಟನು. ಅದು ಚಿರಸ್ಮರಣೀಯವೂ ಪವಿತ್ರವೂ ಆದ ಗಳಿಗೆ ಎಂದು ಮುಂತಾಗಿ ನ್ಯಾಯಾಧೀಶನು ಸಾರಿದನು. ಆ ಬಳಿಕ ಅವರು ಮುದುಕನನ್ನು ಸುಸಜ್ಜಿತವಾದ ಮತ್ತೊಂದು ಕೋಣೆಗೆ ಕರೆದೊಯ್ದು ಬಿಟ್ಟು ಹೋದರು. ರಾತ್ರಿ ಒಂದು ಹೊತ್ತಿನಲ್ಲಿ ಅವನಿಗೆ ತಡೆಯಲಾಗದಷ್ಟು ದಾಹವಾಯಿತು. ಆಗ ಅವನು ಕಿಟಕಿಯ ಚೆಜ್ಜದಿಂದ ಧುಮುಕಿ ಪಾನಗೃಹಕ್ಕೆ ಹೋಗಿ ತನ್ನ ಹೊಸ ಅಂಗಿಯನ್ನು ಮಾರಿ, ತೀಕ್ಷ್ಣವಾದ ಮದ್ಯದಿಂದ ತುಂಬಿದ ಒಂದು ಜಾಡಿಯನ್ನು ಕೊಂಡು ತಂದು ತನ್ನ ಕೋಣೆಗೆ ಹತ್ತಿಬಂದು ಪಟ್ಟಾಗಿ ಕುಡಿದು ಸುಖವಾಗಿ ಕಾಲಕಳೆದನು. ಕಂಠಪೂರ್ತಿ ಕುಡಿದಿದ್ದವನು ಬೆಳಕು ಮೂಡುವ ಹೊತ್ತಿಗೆ ಈಚೆಗೆ ಬಂದು ಚೆಜ್ಜದಿಂದ ಕೆಳಗುರುಳಿದನು. ಆಗ ಅವನ ಎಡಗೈ ಮೂಳೆ ಎರಡು ಬಳಿ ಮುರಿದುಹೋಯಿತು. ಬೆಳಕಾದ ಮೇಲೆ ಯಾರೋ ಬಂದು ಅವನನ್ನು ನೋಡಿದರು. ಬೀದಿಯ ಚಳಿಗೆ ಸೆಡೆದು ಅವನು ಇನ್ನೇನು ಸಾಯುವದರಲ್ಲಿದ್ದನು. ಅವನನ್ನು ನೋಡಲು ಅವರು ಮತ್ತೆ ಆ ಕೊಠಡಿಗೆ ಬಂದರು ಅಲ್ಲಿ ಹಡಗು ನಡಸುವ ಮೊದಲು ಅವರು ಕಡಲಿನಾಳವನ್ನು ಕಂಡುಹಿಡಿಯಬೇಕಾಗಿತ್ತು.

ನ್ಯಾಯಾಧೀಶನ ಮನಸ್ಸಿಗೆ ತುಂಬಾ ನೋವಾಯಿತು. ಆ ಮುದುಕನನ್ನು ಮಾರ್ಪಡಿಸುವುದಕ್ಕೆ ಒಂದು ಬಂದೂಕವನ್ನು ಬಿಟ್ಟರೆ ಇನ್ನಾವ ವಿಧಾನವೂ ತನಗೆ ಹೊಳೆಯದೆಂದು ಅಂದುಕೊಂಡನು.

೬

ಸ್ವಲ್ಪ ಕಾಲದಲ್ಲಿಯೇ ಮುದುಕ ಚೇತರಿಸಿಕೊಂಡು ಆಡ್ಡಾಡಲು ಪ್ರಾರಂಭಿಸಿದನು. ಆ ಹಣವನ್ನು ತಂದೊಪ್ಪಿಸುವಂತೆ ಅವನು ನ್ಯಾಯಾಧೀಶ ಥ್ಯಾಚೆರನ ಮೇಲೆ ವ್ಯಾಜ್ಯ ಹೂಡಿದನು. ಶಾಲೆಗೆ ಹೋಗುವುದನ್ನು ನಿಲ್ಲಿಸದಿದ್ದುದಕ್ಕಾಗಿ ನನ್ನನ್ನು ಹುಡುಕಿಕೊಂಡು ಬಂದ. ಹಲವೇಳೆ ನಾನವನ ಕೈಗೆ ಸಿಕ್ಕಿಬಿದ್ದೆ ; ಅವನು ನನ್ನನ್ನು ಚೆನ್ನಾಗಿ ಥಳಿಸಿದ. ಆದರೂ ನಾನು ಶಾಲೆಗೆ ಹೋಗುತ್ತಲೇ ಇದ್ದೆ. ಬಹು ಕಾಲದವರೆಗೆ ಅವನ ಕಣ್ಣಿಂದ ತಪ್ಪಿಸಿಕೊಂಡೆ, ಅವನಿಗಿಂತ ಮುಂದೆ ಓಡಿಹೋಗುತ್ತಿದ್ದೆ. ಹಿಂದೆಲ್ಲ ನನಗೆ

ಶಾಲೆಗೆ ಹೋಗುವುದೆಂದರೇ ಇಷ್ಟವಿರಲಿಲ್ಲ, ಈಗ ಅಪ್ಪನಿಗೆ ಪ್ರತೀಕಾರವೆಸಗಲು ಶಾಲೆಗೆ ಹೋಗುವುದಾಗಿ ನಿಶ್ಚಯಿಸಿದೆ. ನ್ಯಾಯಾಲಯದ ವ್ಯವಹಾರ ಬಲುನಿಧಾನ,- ಅವರು ವಿಚಾರಣೆಯನ್ನು ಎಂದಿಗೂ ಪ್ರಾರಂಭಿಸುವುದಿಲ್ಲವೆಂದೇ ತೋರುತ್ತಿತ್ತು. ಅಪ್ಪನ ಹೊಡೆತವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ನ್ಯಾಯಾಧೀಶನಿಂದ ಆಗಾಗ ಎರಡೋ ಮೂರೋ ಡಾಲರುಗಳನ್ನು ಸಾಲ ತರುತ್ತಿದ್ದೆ. ದುಡ್ಡು ಕೈಗೆ ಸಿಕ್ಕಿದಾಗೆಲ್ಲ ಅವನು ಕುಡಿಯುತ್ತಿದ್ದ. ಕುಡಿದಾಗಲೆಲ್ಲ ಆವನು ಊರೊಳಗೆ ದಾಂಧಲೆ ಎಬ್ಬಿಸುತ್ತಿದ್ದ. ದಾಂಧಲೆ ಎಬ್ಬಿಸಿದಾಗಲೆಲ್ಲ ಅವನು ಸೆರೆಮನೆಗೆ ಹೋಗುತ್ತಿದ್ದ. ಇದಕ್ಕೆ ಸರಿಯಾದ ಮನುಷ್ಯನವನು ; ಈ ನಡವಳಿಕೆ ಅವನ ಜಾಯಮಾನಕ್ಕೆ ಒಪ್ಪುತ್ತಿತ್ತು.

ಅದನು ವಿಧವೆಯ ಮನೆಯ ಸುತ್ತಮುತ್ತ ತಲೆಹಾಕಲು ಪ್ರಾರಂಭಿಸಿದ. ಅವನು ಆ ಪ್ರದೇಶದಲ್ಲಿ ಓಡಾಡುವುದನ್ನು ನಿಲ್ಲಿಸದಿದ್ದರೆ ಅವನಿಗೆ ತೊಂದರೆ ಮಾಡುವುದಾಗಿ ಅವಳು ಕೊನೆಯೆಚ್ಚರಿಕೆ ಕೊಡಬೇಕಾಯಿತು. ಹೌದು, ಅವನಿಗೆ ಹುಚ್ಚು ಹಿಡಿದಿರ ಲಿಲ್ಲವೆ ? ಹಕ್ಫಿನ್ನನ ಯಜಮಾನ ಯಾರೆಂಬುದನ್ನು ತಾನು ತೋರಿಸುತ್ತೇನೆ ಎನ್ನು ತ್ತಿದ್ದನಲ್ಲವೆ ಅವನು ? ಹೀಗಿರಲು ವಸಂತಋತುವಿನಲ್ಲಿ ಒಂದು ದಿನ ಅವನು ನನಗಾಗಿ ದಾರಿ ಕಾಯುತ್ತಿದ್ದನು. ನನ್ನನ್ನು ಹಿಡಿದನು. ಹಾಯಿದೋಣಿಯೊಂದರಲ್ಲ ನನ್ನನ್ನು ನದಿಯ ಮೇಲೆ ಮೂರು ಮೈಲಿಯ ದೂರಕ್ಕೆ ಕರೆದುಕೊಂಡು ಹೋದನು. ಇಲ್ಲಿನಾಯ್ ನಗರದ ದಡಕ್ಕೆ ತಂದಿಳಿಸಿದನು, ಆ ಪ್ರದೇಶ ವೃಕ್ಷ ನಿಬಿಡವಾಗಿತ್ತು. ಅಲ್ಲಿ ಮನೆಗಳೇ ಇರಲಿಲ್ಲ. ಹಳೆಯ ತೊಲೆಗಳಿಂದ ಮಾಡಿದ ಗುಡಿಸಲೊಂದಿತ್ತು ಅಲ್ಲಿ. ಆ ಸುತ್ತಣ ಕಾಡು ಎಷ್ಟು ದಟ್ಟವಾಗಿರುತ್ತೆಂದರೆ ಆ ಗುಡಿಸಲು ಎಲ್ಲಿದೆ ಎಂಬುದು ನಿಮಗೆ ಮೊದಲೇ ತಿಳಿದಿರದಿದ್ದರೆ ನೀವದನ್ನು ಪತ್ತೆ ಹಚ್ಚುವುದೇ ಅಸಾಧ್ಯವಾಗಿತ್ತು.

ಅವನು ಯಾವಾಗಲೂ ನನ್ನನ್ನು ಬಿಟ್ಟು ಹೋಗುತ್ತಿರಲಿಲ್ಲ. ನನಗೆ ಓಡಿ ಹೋಗಲು ಅವಕಾಶವೇ ಇರಲಿಲ್ಲ. ನಾವಿಬ್ಬರೂ ಈ ಹಳೆಯ ಗುಡಿಸಿಲಿನಲ್ಲಿ ವಾಸ ಮಾಡುತ್ತಿದ್ದೆವು, ಅವನು ಯಾವಾಗಲೂ ಬಾಗಿಲಿಗೆ ಬೀಗ ಹಾಕಿಕೊಂಡೇ ಹೋಗು ತ್ತಿದ್ದನು, ರಾತ್ರಿಯ ಹೊತ್ತು ಬೀಗದ ಕೈಯನ್ನು ತಲೆಯ ಕೆಳಗೆ ಇಟ್ಟುಕೊಳ್ಳು ತ್ತಿದ್ದನು. ಅವನ ಬಳಿ ಅವನು ಕದ್ದು ತಂದ—ಇದು ನನ್ನ ಊಹೆ—ಒಂದು ಬಂದೂಕ ವಿತ್ತು. ಮೀನು ಹಿಡಿಯುವುದು. ಬೇಟೆಯಾಡುವುದು—ಇವೇ ನಮಗೆ ಜೀವನಾಧಾರ ವಾಗಿದ್ದವು. ಪದೇಪದೇ ಅವನು ನನ್ನನ್ನು ಮನೆಯೊಳಗೆ ಸೆರೆ ಹಾಕಿ, ಹರಿಗೋಲಿಗೆ ಮೂರು ಮೈಲಿಯ ದೂರದಲ್ಲಿದ್ದ ಅಂಗಡಿಗೆ ಹೋಗಿ ಮೀನನ್ನು ಬೇಟೆಯಾಡಿದ ಪ್ರಾಣಿ ಗಳನ್ನು ಮಾರಿ ವಿಸ್ಕಿಯನ್ನು ಕೊಂಡು ತರುತ್ತಿದ್ದನು. ಚೆನ್ನಾಗಿ ಕುಡಿದು ಖುಷಿಯಾಗಿ ಕಾಲ ಕಳೆಯುತ್ತಿದ್ದನು, ನನ್ನನ್ನು ಥಳಿಸುತ್ತಿದ್ದನು, ಕಾಲಕ್ರಮೇಣ ವಿಧವೆಗೆ ನಾನೆಲ್ಲಿ ರುವೆನೆಂಬುದು ತಿಳಿಯಿತು. ಅವಳು ನನ್ನನ್ನು ಹಿಡಿದು ತರುವುದಕ್ಕಾಗಿ ಆಳನ್ನು ಕಳಿಸಿ ಕೊಟ್ಟಳು. ಆದರೆ ಅಪ್ಪ ಅವನಿಗೆ ಬಂದೂಕವನ್ನು ತೋರಿಸಿ ಬೆದರಿಸಿ ಓಡಿಸಿದನು,

ಆದಾದ ಮೇಲೆ ನನಗೆ ನಾವಿರುವ ಸ್ಥಳವೇ ಬಳಕೆಯಾಯಿತು. ನಾನದನ್ನು—ಒದೆಗಳನ್ನು ಬಿಟ್ಟು ಅದರ ಎಲ್ಲವನ್ನೂ—ಮೆಚ್ಚಿದೆ.

ಅಲ್ಲಿ ಪುಸ್ತಕಗಳಿಲ್ಲ, ಅಧ್ಯಯನವಿಲ್ಲ. ಹಗಲೆಲ್ಲ ಧೂಮಪಾನಮಾಡುತ್ತಾ ಮೀನು ಹಿಡಿಯುತ್ತಾ ಸುಖವಾಗಿ ಇದ್ದು, ಒಂದು ತರಹ ಸೋಮಾರಿತನದಿಂದ ಮತ್ತು ಖುಷಿಯಿಂದ ಕಾಲಕ್ಷೇಪ ಮಾಡಬಹುದಿತ್ತು. ಎರಡೋ ಎರಡೂವರೆ ತಿಂಗಳೋ ಕಳೆಯಿತು. ನನ್ನ ಬಟ್ಟೆಗಳು ಹರಿಯಲು ಕೊಳೆಯಾಗಲು ಪ್ರಾರಂಭವಾಯಿತು. ನಾನು ವಿಧವೆಯ ಮನೆಯಲ್ಲಿದ್ದಾಗ ಬಟ್ಟೆಗಳನ್ನು ಒಗೆಯಬೇಕಾಗಿತ್ತು. ತಟ್ಟೆಯಲ್ಲೇ ಊಟ ಮಾಡಬೇಕಾಗಿತ್ತು; ತಲೆಯನ್ನು ಬಾಚಿಕೊಳ್ಳಬೇಕಾಗಿತ್ತು; ಹಾಸಿಗೆಯ ಮೇಲೆ ಮಲಗಬೇಕಾಗಿತ್ತು. ಸಕಾಲಕ್ಕೆ ಏಳಬೇಕಾಗಿತ್ತು; ಮುದುಕಿ ಮಿಸ್ ವಾಟ್ಸನ್ನಳ ಕೈಯಲ್ಲಿ ಸದಾ ಮಟ್ಟಿಸಿಕೊಳ್ಳುತ್ತಾ ಯಾವುದಾದರೂ ಪುಸ್ತಕದ ವಿಷಯದಲ್ಲಿ ತಲೆಕೆಡಿಸಿಕೊಳ್ಳಬೇಕಾಗಿತ್ತು. ಆಗ ಇದೆಲ್ಲ ನನಗೆ ಹೇಗೆ ಪ್ರಿಯವೆನಿಸಿತೆಂಬುದೇ ಅರ್ಥವಾಗಲಿಲ್ಲ; ನಾನು ಇನ್ನು ಹಿಂದಿರುಗಲು ಇಷ್ಟಪಡಲಿಲ್ಲ. ಆಗ ನಾನು ಕೆಟ್ಟ ಮಾತಾಡುವುದನ್ನು ನಿಲ್ಲಿಸಿದ್ದೆ; ಏಕೆಂದರೆ ಅದು ವಿಧವೆಗೆ ಇಷ್ಟವಿರಲಿಲ್ಲ. ಈಗ ನಾನು ಮತ್ತೆ ಆ ದಾರಿಗೆ ಬಿದ್ದೆ, ಏಕೆಂದರೆ ಅಪ್ಪ ಅದನ್ನು ವಿರೋಧಿಸಲಿಲ್ಲ. ಒಟ್ಟಾಗಿ ಯೋಚಿಸಿದರೆ ಅಲ್ಲಿನ ಕಾಡಿನಲ್ಲಿ ಕಾಲ ಕಳೆಯುವುದು ಬಲು ಹಿತಕರವಾಗಿತ್ತು,

ಕಾಲಕ್ರಮೇಣ ಅಪ್ಪನ ಒರಟುತನ ಅತಿಯಾಯಿತು. ನಾನು ಅದನ್ನು ಸಹಿಸಲಾಗಲಿಲ್ಲ ನನ್ನ ಮೈಕೈಯೆಲ್ಲ ಗಾಯವಾಗಿತ್ತು. ಅವನು ಅನೇಕ ವೇಳೆ ನನ್ನನ್ನು ಕೂಡಿಹಾಕಿ ಹೊರಟುಹೋಗುತ್ತಿದ್ದನು. ಒಮ್ಮೆ ಅವನು ನನ್ನನ್ನು ಸೆರೆಹಾಕಿ ಹೋದ ಮೂರು ದಿನಗಳ ಮೇಲೆ ಹಿಂದಿರುಗಿದನು. ಈ ಒಂಟಿತನ ಭೀಕರವಾಗಿತ್ತು. ಅವನೆಲ್ಲೋ ನೀರಿನಲ್ಲಿ ಮುಳುಗಿ ಹೋಗಿರಬೇಕು ನಾನು ಇನ್ನೆಂದೂ ಇಲ್ಲಿಂದ ಹೊರಗೆ ಹೋಗುವಂತೆಯೇ ಇಲ್ಲ ಎಂದು ನಿಶ್ಚಯ ಮಾಡಿಕೊಂಡೆನು. ನನಗೆ ಭಯವಾಯಿತು. ಈ ಸ್ಥಳವನ್ನು ಬಿಡಲು ಯಾವುದಾದರೂ ಒಂದು ಉಪಾಯವನ್ನು ಹುಡುಕಲೇಬೇಕೆಂದು ನಿರ್ಧರಿಸಿದೆ: ಆ ಗುಡಿಸಲಿನಿಂದ ಹೊರಗೆ ಹೋಗಲು ನಾನು ಹಲವೊಮ್ಮೆ ಯತ್ನಿಸಿದ್ದೆ. ಆದರೆ ದಾರಿಯೇ ನನಗೆ ತೋರಲಿಲ್ಲ. ಒಂದು ನಾಯಿ ತೂರಿಹೋಗುವಷ್ಟಾದರೂ ದೊಡ್ಡದಾಗಿರುವ ಒಂದು ಕಿಟಕಿ ಕೂಡ ಅಲ್ಲಿರಲಿಲ್ಲ. ನಾನು ಹೊಗೆಯ ಕೊಳವೆಯ ಮಾರ್ಗವಾಗಿ ಪಾರಾಗುವುದು ಸಾಧ್ಯವಿರಲಿಲ್ಲ; ಅದು ಬಲು ಇಕ್ಕಟ್ಟಾಗಿತ್ತು. ಬಾಗಿಲೋ ಬಲು ದಪ್ಪವಾದ, ಭಾರವಾದ ಓಕ್ ಮರದಿಂದ ಮಾಡಿದ್ದಾಗಿತ್ತು. ತಾನು ಹೊರಗೆ ಹೋಗುವಾಗ ಅವನು ಚಾಕುವನ್ನೋ ಇತರ ಸಾಮಗ್ರಿಯನ್ನೋ ಗುಡಿಸಿಲಿನೊಳಗೆ ಬಿಟ್ಟು ಹೋಗುತ್ತಿರಲಿಲ್ಲ; ಅಪ್ಪ ಅಷ್ಟು ಎಚ್ಚರವಂತನಾಗಿದ್ದ. ನಾನು ಆ ಸ್ಥಳವನ್ನು ನೂರಾರು ಸಲ ಶೋಧಿಸಿದೆನೆಂದು ತೋರುತ್ತದೆ. ನಾನು ಸದಾಕಾಲವೂ ಶೋಧನೆಯಲ್ಲೇ ಆಸಕ್ತನಾದೆ; ಏಕೆಂದರೆ ಕಾಲ ಕಳೆಯಲು ನನಗಿದ್ದ ಮಾರ್ಗವೆಂದರೆ ಅದೊಂದೇ.

ಆದರೆ ಈ ಸಲ ನನಗೆ ಕಡೆಗೂ ಒಂದು ಸಲಕರಣೆ ಸಿಕ್ಕಿತು, ಒಂದು ಹಳೆಯ ತುಕ್ಕು ಹಿಡಿದ, ಹಿಡಿಯಿರದ ಗರಗಸವನ್ನು ಪತ್ತೆ ಮಾಡಿದೆ. ಅದು ಗುಡಿಸಿಲಿನ ಚಾವಣಿಯ ಅಡ್ಡ ಹಲಗೆಗಳಿಗೂ ಒಂದು ಜಂತಿಗೂ ನಡುವೆ ಅಡಗಿತ್ತು. ನಾನದನ್ನು ಹದಮಾಡಿ ಕೊಂಡು ಕೆಲಸಕ್ಕೆ ಕೈಹಚ್ಚಿದೆ. ಗುಡಿಸಿಲಿನ ಆಚೆತುದಿಯಲ್ಲಿ ಮೇಜಿನ ಹಿಂದುಗಡೆ ತೊಲೆಗಳಿಗೆ ಮೊಳೆ ಹೊಡೆದು ನಿಲ್ಲಿಸಿದ್ದ ಹಳೆಯ ಕಂಬಳಿಯೊಂದನ್ನು ಇಳಿಯಬಿಡ ಲಾಗಿತ್ತು. ಅದರ ಉದ್ದೇಶ ; ತೊಲೆಗಳ ನಡುವಣ ಬಿರುಕುಗಳ ಮೂಲಕ ಒಳನುಗ್ಗಿದ ಗಾಳಿ ಮೋಂಬತ್ತಿಯ ದೀಪವನ್ನು ಆರಿಸದಂತೆ ಮಾಡುವುದಾಗಿತ್ತು, ನಾನು ಮೇಜಿನ ಕೆಳಗೆ ಕುಳಿತು ಕಂಬಳಿಯನ್ನೆತ್ತಿದೆ ಕೆಳಗಿದ್ದ ದೊಡ್ಡ ತೊಲೆಯ ಒಂದು ಭಾಗವನ್ನು ಗರಗಸದಿಂದ ಕೊಯ್ದು ನಾನು ತೂರಿಹೋಗುವುದಕ್ಕೆ ಅಗತ್ಯವಾದಷ್ಟು ದಾರಿಯನ್ನು ಮಾಡಿಕೊಳ್ಳಲು ತೊಡಗಿದೆ. ಆ ಪ್ರಯಾಸಕರವಾದ ಕೆಲಸವನ್ನು ಮುಗಿಸಲು ದೀರ್ಘ ಕಾಲ ಹಿಡಿಯುತ್ತಿತ್ತು, ಆದರೆ ನಾನು ಕೈಹಾಕಿದ ಕೆಲಸವನ್ನು ಇನ್ನೇನು ಮುಗಿಸ ಲಿದ್ದಾಗ ಕಾಡಿನ ದಿಕ್ಕಿನಿಂದ ಅಪ್ಪನ ಬಂದೂಕದ ಸದ್ದು ಕೇಳಿಸಿತು, ಕೂಡಲೇ, ನನ್ನ ಕೆಲಸದ ಗುರುತುಗಳೆಲ್ಲವನ್ನೂ ತೊಡೆದುಹಾಕಿದೆ ; ಕಂಬಳಿಯನ್ನು ಕೆಳಕ್ಕೆ ಬಿಟ್ಟೆ ; ನನ್ನ ಗರಗಸವನ್ನು ಬಚ್ಚಿಟ್ಟೆ. ಒಡನೆಯೇ ಅಪ್ಪ ಒಳಗೆ ಬಂದ.

ಅಪ್ಪನ ಮುಖದಲ್ಲಿ ಗೆಲವಿರಲಿಲ್ಲ; ಅವನ ಹುಟ್ಟು ಸ್ವಭಾವ ತಾನೇತಾನಾಗಿತ್ತು. ತಾನು ಊರೊಳಗೆ ಹೋಗಿದ್ದುದಾಗಿಯೂ ಪರಿಸ್ಥಿತಿ ಕೆಡುತ್ತಿರುವುದಾಗಿಯೂ ಅವನು ಹೇಳಿದನು. ಹೂಡಿರುವ ವ್ಯಾಜ್ಯದಲ್ಲಿ ತಾನು ಜಯಶೀಲನಾಗುವುದಾಗಿಯೂ ನ್ಯಾಯಾ ಲಯದಲ್ಲಿ ವಿಚಾರಣೆ ಪ್ರಾರಂಭವಾದರೆ ಹಣವೂ ತನಗೆ ಲಭಿಸುವುದಾಗಿಯೂ, ಆದರೆ ಅದನ್ನು ದೀರ್ಘಕಾಲ ಮುಂದೂಡಲು ಉಪಾಯಗಳಿವೆಯೆಂದೂ, ಅವು ನ್ಯಾಯಾದೀಶ ಥ್ಯಾಚೆರನಿಗೆ ತಿಳಿದಿವೆಯೆಂದೂ ತನ್ನ ವಕೀಲನಿಂದ ತಿಳಿಯಬಂದಿದೆ ಎಂದನು. ತನ್ನಿಂದ ನನ್ನನ್ನು ಬಿಡುಗಡೆಮಾಡಿ ಆ ವಿಧವೆಯನ್ನು ತನ್ನ ಪಾಲಕಳನ್ನಾಗಿ ನೇಮಿಸಲು ಇನ್ನೊಂದು ವ್ಯಾಜ್ಯವನ್ನು ಅವರು ತರಲಿರುವುದಾಗಿಯೂ, ಅವರು ಈ ಸಲ ಗೆಲ್ಲುವಂತೆ ತೋರುವುದಾಗಿಯೂ ಜನ ಆಡಿಕೊಳ್ಳುತ್ತಿದ್ದಾರೆ ಎಂದನು. ಇದು ನನ್ನನ್ನು ಬಲು ನಡುಗಿಸಿತು. ಏಕೆಂದರೆ ನಾನು ಮತ್ತೆ ಆ ವಿಧವೆಯ ಮನೆಗೆ ಹಿಂದಿರುಗಲೂ, ಅಲ್ಲಿ ಸಿಕ್ಕಿಕೊಂಡು — ಅವರ ಭಾಷೆಯಲ್ಲಿ ಹೇಳುವುದಾದರೆ—ಹದಗೊಳ್ಳಲೂ ಇಷ್ಟಪಡ ಲಿಲ್ಲ. ಮುದುಕನಾದರೋ ಶಪಿಸ ತೊಡಗಿದನು ; ತನಗೆ ತೋರಿದ ಎಲ್ಲರನ್ನೂ ಎಲ್ಲ ವನ್ನೂ ಶಪಿಸಿದನು ; ಅವರಲ್ಲಿ ಯಾರೂ ಬಿಟ್ಟುಹೋಗದಂತೆ ಎಲ್ಲರನ್ನೂ ಮತ್ತೆ ಮತ್ತೆ ಶಪಿಸಿದನು ; ಇದಾದ ತರುವಾಯ ಯಾರ ಹೆಸರು ತಿಳಿದಿರಲಿಲ್ಲವೋ ಅಂಥ ಜನಸಮು ದಾಯವನ್ನೊಳಗೊಂಡ ಎಲ್ಲರನ್ನೂ ಒಂದು ಸಾರ್ವತ್ರಿಕ ಶಾಪದಿಂದ ಬಳಿದನು. ಅಂಥ ವರನ್ನು ಕಂಡಾಗ 'ಏನವನ ಹೆಸರು ?' ಎಂದು ಅವರನ್ನು ಕರೆಯುತ್ತ ತನ್ನ ಶಾಪ ವನ್ನು ಬೆಳಸಿದನು.

ವಿಧವೆ ನನ್ನನ್ನು ಪಡೆದುಕೊಳ್ಳುವುದನ್ನು ತಾನು ನೋಡಬೇಕು ಎಂದನು; ತಾನು ಕಾವಲಿರುವುದಾಗಿಯೂ ಅವರು ಅಂಥ ಆಟವನ್ನು ತನ್ನ ಮೇಲೆ ಹೂಡಬಂದಾಗ ತಾನು ನನ್ನನ್ನು ಆರೇಳು ಮೈಲಿಯಾಚೆಗಿರುವ ರಹಸ್ಯ ಸ್ಥಳವೊಂದಕ್ಕೆ ಸಾಗಿಸುವುದಾಗಿಯೂ ಅವರು ನೆಗೆದುಬಿದ್ದರೂ ತನ್ನನ್ನು ಪತ್ತೆ ಹಚ್ಚಲಾರರೆಂದೂ ಹೇಳಿದನು, ಇದು ಒಂದು ನಿಮಿಷದ ಮಟ್ಟಿಗೆ ನನಗೆ ತಲೆನೋವನ್ನು ತಂದಿತು. ಅವನಿಗೆ ಅಂಥಾ ಅವಕಾಶ ಒದಗುವ ವರೆಗೂ ನಾನು ಅವನ ಹತ್ತಿರದಲ್ಲೇ ಇರುವುದು ಬೇಡ ವೆನ್ನಿಸಿತು.

ತಾನು ತಂದಿದ್ದ ಸಾಮಾನು ಸರಂಜಾಮನ್ನು ತೆಗೆದುಕೊಂಡು ಬರಲು ಮುದುಕ ನನ್ನನ್ನು ಹಾಯಿದೋಣಿಗೆ ಅಟ್ಟಿದನು. ಐವತ್ತು ಪೌಂಡು ತೂಕದ ಧಾನ್ಯದ ಮಟ್ಟಿನ ಒಂದು ಮೂಟೆಯೂ, ಒಂದಿಷ್ಟು ಹಂದಿಯ ಮಾಂಸವೂ, ಮದ್ದುಗುಂಡುಗಳೂ, ಒಂದು ಹಳೆಯ ಪುಸ್ತಕವೂ, ಸುತ್ತಲು ಎರಡು ಹಳೆಯ ಪೃತ್ತ ಪತ್ರಿಕೆಗಳೂ ಜತೆಗೆ ಒಂದು ಸ್ವಲ್ಪ ದೋಣಿಗೆ ಕಟ್ಟುವ ಹಗ್ಗವೂ ಅಲ್ಲಿದ್ದವು, ನಾನು ಈ ಹೊರೆಯನ್ನು ಎಣಿಕೆಮಾಡಿ ನಡೆದು ಹಾಯಿದೋಣಿಯ ಮೂಕಿಯಮೇಲೆ ದಣಿವಾರಿಸಿಕೊಳ್ಳಲು ಕುಳಿತೆನು. ಬಂದೂಕವನ್ನೂ ಕೆಲವು ಗಾಳಗಳನ್ನೂ ಎತ್ತಿಕೊಂಡು ಕಾಡಿಗೆ ಜಾರಿಕೊಳ್ಳಬಹುದೆಂದೂ, ಒಂದೇ ಸ್ಥಳದಲ್ಲಿ ನಿಲ್ಲದೆ ಪ್ರಾಂತದ ಮೇಲೆಲ್ಲಾ ಬಹುವಾಗಿ ರಾತ್ರಿಯ ವೇಳೆಯಲ್ಲೇ ಅಲೆಯುತ್ತಾ, ಜೀವಧಾರಣೆಗಾಗಿ ಬೇಟೆ-ಯಾಡುವೆನೆಂದೂ ಮೀನು ಹಿಡಿವೆನೆಂದೂ, ಈ ಮುದುಕನಿಗಾಗಲೀ ಆ ವಿಧವೆಗಾಗಲಿ ತಾನು ಎಂದಿಗೂ ಸಿಕ್ಕದಿರುವಷ್ಟು ದೂರ ಹೋಗಿ ಬಡುವೆನೆಂದೂ ಮನಸ್ಸಿನಲ್ಲಿ ಮಾಡಿಕೊಂಡೆ. ಆ ರಾತ್ರಿ ಅಪ್ಪ ಸಾಕಷ್ಟು ಕುಡಿದು ಮಲಗಿದಲ್ಲಿ, ಗರಗಸದ ನೆರವಿನಿಂದ ದಾರಿ ಮಾಡಿಕೊಂಡು ಆಗಲೇ ಆ ಸ್ಥಳವನ್ನು ಬಿಡುವುದಾಗಿಯೂ, ಅವನು ಹಾಗೇ ಮಾಡಬಹುದೆಂದೂ ತೀರ್ಮಾನಿಸಿದೆ. ಈ ಹಂಚಿಕೆ ನನ್ನ ತಲೆಯೊಳಗೆ ತುಂಬಿ ಹೋಗಿದ್ದರಿಂದ ನಾನು ಎಷ್ಟು ಹೊತ್ತು ಅಲ್ಲೇ ಉಳಿದು ಕೊಂಡಿದ್ದೆನೆಂಬುದು ನನಗೆ ಮರೆತೇ ಹೋಯಿತು. ಅಷ್ಟರಲ್ಲಿ ಆ ಮುದುಕ ಗುಡುಗುತ್ತಾ ಬಂದು ನೀನು ನಿದ್ದೆ ಮಾಡುತ್ತಿದ್ದೀಯೋ ಅಥವಾ ಮುಳುಗಿ ಹೋದೆಯೋ ಎಂದು ನನ್ನನ್ನು ಕೇಳಿದನು.

ನಾನು ಆ ಸಾಮಾನುಗಳೆಲ್ಲವನ್ನೂ ಗುಡಿಸಿಲಿಗೆ ತಂದು ಹಾಕಿದೆ. ಅಷ್ಟು ಹೊತ್ತಿಗೆ ಕತ್ತಲಾಯಿತು. ನಾನು ಅಡುಗೆ ಮಾಡುತ್ತಿದ್ದಾಗ ಮುದುಕ ಒಂದೆರಡು ಗುಟುಕು ಕುಡಿದು ಹಾಗೆಯೇ ಕಾವುಗೊಂಡು ಚೇತನವನ್ನು ಮರಳಿ-ಪಡೆದನು. ಎಲ್ಲಿಯೋ ಚೆನ್ನಾಗಿ ಕುಡಿದು ರಾತ್ರಿಯೆಲ್ಲ ಚರಂಡಿಯಲ್ಲಿ ಬಿದ್ದಿದ್ದನು. ಅವನ ಸ್ಥಿತಿ ವಿಚಿತ್ರವಾಗಿತ್ತು. ಅವನನ್ನು ಯಾರೂ ಆಡಮ್ ಎನ್ನ ಬಹುದಿತ್ತು. ಆವನ ಇಡೀ ಮೈ ಮಣ್ಣಾಗಿತ್ತು, ಕುಡಿತದ ಅಮಲು ಏರಿದಾಗಲೆಲ್ಲ ಅವನು ಸರಕಾರದ ಮೇಲೆ ಬೀಳುತ್ತಿದ್ದನು. ಈ ಸಲ ಅವನು ಹೀಗೆ ಹೇಳಿದ :

"ಇದನ್ನು ಸರಕಾರವೆನ್ನಲಾದೀತೆ? ಏಕೆ ? ಇದು ಹೇಗಿದೆ ನೋಡಿ. ತಂದೆಯಾದವನು ಬೇಕಾದಷ್ಟು ಶ್ರಮ ತೆಗೆದುಕೊಂಡು ತುಂಬಾ ಆಸಕ್ತಿ ವಹಿಸಿ ಹೇರಳವಾಗಿ ಹಣಸುರಿದು ಮಗನನ್ನು ಸಾಕುತ್ತಾನೆ. ಆ ಮಗನನ್ನು ತಂದೆಯಿಂದ ಬೇರ್ಪಡಿಸಲು ಅಲ್ಲೊಂದು ಕಾನೂನು ಸಿದ್ಧವಾಗಿ ನಿಂತಿದೆ. ಹೌದು ; ಆ ಮನುಷ್ಯ ಮಗನನ್ನು ಕಡೆಗೂ ಮುಂದಕ್ಕೆ ತಂದು, ಮಗ ಕೆಲಸಕ್ಕೆ ಹೋಗಲು ಸಿದ್ಧನಾಗಿ ತಂದೆಗಾಗಿ ದುಡಿದು ಒಂದು ಸ್ವಲ್ಪ ವಿಶ್ರಾಂತಿಯನ್ನು ಅವನಿಗೆ ಕೊಡಲು ತೊಡಗಿದ ಎಂದರೆ ಕಾನೂನು ಅಡ್ಡ ಬಂದು ಅವನನ್ನು ಹಿಡಿದುಕೊಳ್ಳುತ್ತದೆ. ಅಂಥಾದ್ದನ್ನು ಜನ ಸರಕಾರ ಎನ್ನುತ್ತಾರೆ ! ಅದಷ್ಟೇ ಅಲ್ಲ; ಕಾನೂನು ಆ ವೃದ್ಧ ನ್ಯಾಯಾಧೀಶ ಥ್ಯಾಚೆರನಿಗೆ ಬೆಂಬಲಕೊಡುತ್ತದೆ. ನನ್ನ ಆಸ್ತಿ ನನ್ನ ಕೈಸೇರದಂತೆ ಅವನು ಒಡ್ಡುತ್ತಿರುವ ತಡೆಗೆ ನೆರವಾಗುತ್ತದೆ.

ಕಾನೂನು ಮಾಡುವ ಕೆಲಸವಿದು. ಆರುಸಾವಿರ ಡಾಲರುಗಳಿಗೂ ಮೀರಿದ ಬೆಲೆಯುಳ್ಳ ಮನುಷ್ಯನನ್ನು ಅದು ಕೊಂಡುಹೋಗಿ ಈ ಬಗೆಯ ಗುಡಿಸಿಲಿನಂಥ ಒಂದು ಸೆರೆಯಲ್ಲಿ ಸಿಕ್ಕಿಸುತ್ತದೆ, ಒಂದು ಹಂದಿಗೂ ಯೋಗ್ಯವಲ್ಲದ ಬಟ್ಟೆಗಳನ್ನು ಧರಿಸಿ ಅವನು ಓಡಾಡುವಂತೆ ಮಾಡುತ್ತದೆ; ಜನ ಅದನ್ನು 'ಸರ್ಕಾರ' ಎನ್ನುತ್ತಾರೆ! ಈ ಬಗೆಯ ಸರ್ಕಾರದಲ್ಲಿ ಯಾವನೂ ತನ್ನ ಹಕ್ಕುಗಳನ್ನು ಪಡೆಯಲಾರ ಅಂತಿಮವಾಗಿ ಈ ದೇಶವನ್ನೇ ಬಿಟ್ಟುಹೋಗಬೇಕೆಂಬ ಒಂದು ಪ್ರಬಲಾಭಿಪ್ರಾಯವೂ ನನಗೆ ಕೆಲವು ಸಲ ಬಂದಿದೆ. ಹೌದು; ನಾನು ಅವರಿಗೆ ಹಾಗೆಯೇ ಹೇಳಿದೆ. ನಾನು ಹಾಗೆಯೇ ಮುದುಕ ಥ್ಯಾಚೆರನ ಮುಖಕ್ಕೇ ಹೇಳಿದೆ. ಅನೇಕರು ಅದನ್ನು ಕೇಳಿದ್ದಾರೆ; ನಾನು ಹೇಳಿದ್ದನ್ನು ಅವರು ನುಡಿಯಬಲ್ಲರು. ಕೇವಲ ಎರಡು ಸೆಂಟುಗಳಿಗಾಗಿ ನಾನು ಈ ನಿಂದಿತ ದೇಶವನ್ನು ಬಿಟ್ಟುಹೋಗುವುದೂ, ಮತ್ತೆ ಅದರ ಹತ್ತಿರಕ್ಕೇ ಬಾರದಿರುವುದೂ ಯೋಗ್ಯವಾದದ್ದು. ನಾನು ಆಡಿದ್ದು ಆಮಾತುಗಳನ್ನೇ, ನಾನು ಹೇಳಿದೆ: ನನ್ನ ಟೋಪಿಯನ್ನು ನೋಡಿ—ನೀವದನ್ನು ಟೋಪಿ ಎನ್ನಬಹುದಾದರೆ—ಅದರ ಮುಚ್ಚಳ ಮಾತ್ರ ಮೇಲೆದ್ದಿದೆ; ಉಳಿದ ಭಾಗವೆಲ್ಲ ನನ್ನ ಗಲ್ಲದ ತನಕ ಇಳಿದುಬರುತ್ತದೆ. ಅದು ನ್ಯಾಯವಾಗಿ ನೋಡಿದರೆ ಟೋಪಿಯೇ ಅಲ್ಲ; ಒಂದು ಅಗ್ಗಿಷ್ಟಿಕೆಯ ಕೊಳವೆಯ ರಂಧ್ರದ ಮೂಲಕ ನನ್ನ ತಲೆಯನ್ನು ಹೊರಕ್ಕೆ ತಳ್ಳಿದಂತಿದೆ. ಇದನ್ನು ನೋಡಿ, ಎಂದೆನು; ಹಾಕಿಕೊಳಲು ನನಗೆ ಎಂಥ ಟೋಪಿ ಒದಗಿದೆ! ನನ್ನ ಹಕ್ಕುಗಳು ನನಗೆ ಲಭ್ಯವಾದಲ್ಲಿ, ಊರ ಶ್ರೀಮಂತರಲ್ಲಿ ಒಬ್ಬನೆನಿಸಿಕೊಳ್ಳಬಹುದಾದವ ನಾನು—

ಓ, ಹೌದು; ಇದೊಂದು ಅದ್ಭುತ ಸರಕಾರ, ಅದ್ಭುತ, ಏಕೆ ಎನ್ನುವಿರಾ ಇಲ್ಲಿ ನೋಡಿ. ಓಹಿಯೋದಿಂದ ಬಂದ ಸ್ವತಂತ್ರ ನಿಗ್ರೋ ಒಬ್ಬ ಅಲ್ಲಿದ್ದನು; ಮಾಸಲು ಬಿಳುಪು ಬಣ್ಣದವನು, ಸುಮಾರು ಶ್ವೇತವರ್ಣೀಯನಷ್ಟೇ ಬಿಳಿಯ. ಅವನು ಬಲು ಬೆಳ್ಳಗಿರುವ ಒಂದು ಜುಬ್ಬವನ್ನೂ, ಬಲು ಹೊಳೆಯುವ ಒಂದು ಟೋಪಿಯನ್ನು ಧರಿಸಿ

ತ್ತಿದ್ದನು, ಅವನಲ್ಲಿದ್ದಷ್ಟು ಸೊಗಸಾದ ಬಟ್ಟೆಗಳು ಊರಿನ ಯಾರಬಳಿಯಲ್ಲೂ ಇರಲಿಲ್ಲ, ಅವನ ಬಳಿ ಚಿನ್ನದ ಗಡಿಯಾರವೂ ಸರಪಳಿಯೂ, ಬೆಳ್ಳಿಯ ಹಿಡಿಯ ಬೆತ್ತವೂ ಇದ್ದವು—ಪ್ರಾಂತದ ಒಬ್ಬ ಬಿಳಿತಲೆಯ ಹಳೆಯ ನವಾಬನಂತೆ ಇದ್ದನವನು. ನಿಮಗೂ ಗೊತ್ತು ! ತಾನು ಕಾಲೇಜಿನಲ್ಲಿ ಪ್ರಾಧ್ಯಾಪಕನೆಂದೂ, ಎಲ್ಲಭಾಷೆಗಳಲ್ಲಿ ಮಾತಾಡಬಲ್ಲವನೆಂದೂ, ಸರ್ವಜ್ಞನೆಂದೂ ಅವನು ಹೇಳಿಕೊಂಡನು. ಅಲ್ಲಿಗೆ ಮುಗಿಯಲಿಲ್ಲ. ತನ್ನೂರಿನಲ್ಲಿದ್ದಾಗ ತಾನು ವೋಟುಮಾಡಬಹುದಿತ್ತೆಂದೂ ಹೇಳಿಕೊಂಡನು. ಆ ಮಾತು ನನ್ನ ಕಣ್ಣನ್ನು ತೆರೆಯಿಸಿತು. ಈ ದೇಶ ಎಲ್ಲಿಗೆ ಇಳಿಯುತ್ತಿದೆ ಎಂದೆ ನಾನು, ಅದು ಚುನಾವಣೆಯ ದಿನವಾಗಿತ್ತು, ಹೆಚ್ಚಿಗೆ ಕುಡಿಯದಿದ್ದಲ್ಲಿ ನಾನೂ ಅಲ್ಲಿಗೆ ಹೋಗಿ ಓಟುಕೊಡಬಹುದಿತ್ತು. ನಿಗ್ರೋ ಒಬ್ಬನು ಓಟುಮಾಡಲು ಈ ದೇಶದಲ್ಲಿ ಒಂದು ಪ್ರಾಂತದಲ್ಲಿ ಅವಕಾಶವಿದೆ ಎಂದು ಜನ ಹೇಳಿದಮೇಲೆ ನಾನು ಹಿಂತಿರುಗಿದೆ. ನಾನು ಇನ್ನೆಂದೂ ಓಟುಮಾಡುವುದಿಲ್ಲವೆಂದು ಹೇಳಿಬಿಟ್ಟೆ, ನಾನು ಇದೇ ಮಾತನ್ನು ಹೇಳಿದೆ ; ನಾನು ಹೇಳಿದ್ದನ್ನು ಎಲ್ಲರೂ ಕೇಳಿದರು. ನನ್ನೊಬ್ಬನಿಂದಾಗಿ ಈ ದೇಶವೇ ಹಾಳಾಗುವುದಾದರೂ, ನಾನು ಬದುಕಿರುವ ತನಕ ಓಟುಮಾಡುವುದಿಲ್ಲ. ಇನ್ನು ಆ ನಿಗ್ರೋವಿನ ಸೌಮ್ಯರೀತಿ ಹೇಗಿತ್ತೆಂದರೆ—ನಾನು ಅವನನ್ನು ನನ್ನ ದಾರಿಯಿಂದ ಆಚೆಗೆ ನೂಕದೆ ಹೋಗಿದ್ದರೆ, ಅವನು ಎಂದಿಗೂ ನನಗೆ ಓಡಾಡಲು ರಸ್ತೆಯಲ್ಲಿ ಎಡೆಗೊಡುತ್ತಿರಲಿಲ್ಲ. ಈ ನೀಗ್ರೋವನ್ನು ಹರಾಜಿನಲ್ಲಿ ಮಾರಿಲ್ಲವೇಕೆ?—ಎಂದು ಜನರನ್ನು ಕೇಳಿದೆ. ಅವನು ಹೇಳಿದ್ದೇನು, ಬಲ್ಲಿರ? ಅವನು ಈ ಪ್ರಾಂತಕ್ಕೆ ಬಂದು ಇನ್ನೂ ಆರುತಿಂಗಳು ಕಳೆದಿಲ್ಲವಾದ್ದರಿಂದ ಅವನನ್ನು ಮಾರುವಂತಿಲ್ಲ, ಎಂದರು. ಅವನು ಅಲ್ಲಿಗೆ ಬಂದು ಅಷ್ಟು ಕಾಲವೇನೋ ಆಗಿರಲಿಲ್ಲ. ಒಂದು ಮಾದರಿ ಇಲ್ಲಿದೆ: ತನ್ನ ಪ್ರಾಂತಕ್ಕೆ ಬಂದು ಆರು ತಿಂಗಳ ಅವಧಿಯನ್ನು ಕಳೆಯುವತನಕ ಒಬ್ಬ ಸ್ವತಂತ್ರ ನೀಗ್ರೋವನ್ನು ಮಾರಲಾಗದ ಒಂದು ಸಂಸ್ಥೆಯನ್ನು ಅವರು ಸರಕಾರವೆಂದು ಕರೆಯುತ್ತಾರೆ. ತಾನು ಸರಕಾರವೆಂದು ಹೇಳಿಕೊಳ್ಳುವ ಒಂದು ಸರಕಾರ ಇಲ್ಲಿದೆ, ಸರಕಾರವಾಗಿ ಮುಂಬರಿಯುತ್ತಿದೆ; ತಾನು ಸರ್ಕಾರವೆಂದು ತಿಳಿಯುತ್ತಿದೆ, ಆದರೂ ಕದ್ದು ಸುಳಿಯುವ, ಕಳ್ಳತನಮಾಡುವ, ಮತ್ತು ನರಕಪ್ರಾಯನಾದ ಬಿಳಿಯ ಜುಬ್ಬದ ಸ್ವತಂತ್ರ ನೀಗ್ರೋ ಒಬ್ಬನನ್ನು ಬಂಧಿಸುವ ಮುನ್ನ ಅದು ಆರುತಿಂಗಳಕಾಲ ಕೈಕಟ್ಟಿ ಕೂರಬೇಕಾಗಿದೆ."

ಅಪ್ಪ ತನ್ನ ಸೊರಗಿದ ಮುದಿಗಾಲುಗಳು ತನ್ನನ್ನೆಲ್ಲಿಗೆ ಎಳೆಯುತ್ತಿವೆ ಎಂಬುದನ್ನೇ ಗಮನಿಸದೆ ನಡೆಯುತ್ತಲೇ ಇದ್ದನು. ಉಪ್ಪುಹಾಕಿದ ಹಂದಿಯ ಮಾಂಸದ ಪೀಪಾಯಿಯ ಮೇಲೆ ಪಲ್ಟಿಹೊಡೆದನು. ಅವನ ಮೊಣಕಾಲುಗಳು ಕೆತ್ತಿಹೋದವು. ಅವನ ಭಾಷಣದ ಉಳಿದಭಾಗ ಅತ್ಯುಗ್ರವಾದ ಭಾಷೆಯಲ್ಲಿತ್ತು—ಬಹುಪಾಲು ನೀಗ್ರೋವಿನಮೇಲೆ, ಸರ್ಕಾರದಮೇಲೆ, ಸಿಡಿದೇಳುವುದಾಗಿತ್ತು. ಉದ್ದಕ್ಕೂ ಇಲ್ಲಲ್ಲಿ ಅದರ ಕೆಲವು ಭಾಗ ಪೀಪಾಯಿಗೂ ಸಲ್ಲುತ್ತಿತ್ತು. ಮೊದಲು ಒಂದುಕಾಲಿನ ಮೇಲೆ, ಆಮೇಲೆ ಇನ್ನೊಂದು

ಕಾಲಿನಮೇಲೆ, ಮೊದಲು ಒಂದು ಮೊಣಕಾಲನ್ನು ಹಿಡಿದುಕೊಂಡು ಆಮೇಲೆ ಇನ್ನೊಂದನ್ನು ಹಿಡಿದುಕೊಂಡು ಅವನು ಗುಡಿಸಿಲೊಳಗೆಲ್ಲಾ ಕುಪ್ಪಳಿಸಿದನು. ಕಡೆಗೆ ತನ್ನ ಎಡಗಾಲನ್ನು ಇದ್ದಕ್ಕಿದಂತೆ ಝಾಡಿಸಿ ಪೀಪಾಯಿಗೆ ಒಂದು ಜೋರಾದ ಒದೆಯನ್ನು ಕೊಟ್ಟನು. ಅದು ವಿವೇಕದ ಕೆಲಸವಾಗಲಿಲ್ಲ; ಏಕೆಂದರೆ, ಮುಂಬದಿಯಲ್ಲಿ ತೂತುಗಳಾಗಿ ಅವುಗಳ ಮೂಲಕ ಕೆಲವು ಕಾಲ್ಬೆರಳುಗಳು ಹೊರಟುಕೊಂಡಿದ್ದ ಪಾದರಕ್ಷೆಯಲ್ಲಿ ಆ ಕೆಲಸವನ್ನು ಮಾಡಿತ್ತು. ಕೇಳಿದವರ ಮೈನವಿರೇಳುವಷ್ಟು ಜೋರಾಗಿ ಅವನು ಒರಲಿದನು, ಕಸದಲ್ಲಿ ಬಿದ್ದು ಹೊರಳಿದನು. ತನ್ನ ಕಾಲ್ಬೆರಳುಗಳನ್ನು ಹಿಡಿದುಕೊಂಡನು. ಆಗ ಅವನ ಬೈಗುಳವಿದೆಯಲ್ಲ, ಅವನು ಹಿಂದೆಮಾಡಿದ್ದೆಲ್ಲವನ್ನೂ ಮೀರಿಸಿತ್ತು. ಆಮೇಲೆ ಅವನು ತನಗೆ ತಾನೇ ಹಾಗೆ ಹೇಳಿಕೊಂಡ. ಹಳೆಯ ಸೋಬರಿ ಹ್ಯಾಗನ್ನಿನ ಏಳಿಗೆಯ ದಿನಗಳ ವಿಷಯವನ್ನು ಅವನು ಕೇಳಿದ್ದ; ತಾನು ಅದನ್ನು ಮೀರಿಸಿರುವುದಾಗಿ ಹೇಳಿದ. ನನಗಿದೊಂದು ಒಂದರಮೇಲೆ ಒನ್ನೊಂದರ ಪೇರಿಕೆಯ ಹಾಗೆ ತೋರಿತು.

ರಾತ್ರಿಯೂಟದ ತರುವಾಯ ಅಪ್ಪ ಪೀಪಾಯನ್ನು ಕೈಗೆ ಎತ್ತಿಕೊಂಡನು, ಎರಡು ಸಲದ ಕುಡಿತಕ್ಕೆ ಮತ್ತು ಒಂದುಸಲ ಕುಡಿತದ ಜ್ವರವನ್ನು ಬರಿಸಿಕೊಳ್ಳುವುದಕ್ಕೆ ಸಾಕಾಗುವಷ್ಟು ವ್ಹಿಸ್ಕಿ ಅದರಲ್ಲಿದೆ ಎಂದನು. ಯಾವಾಗಲೂ ಅವನ ಮಾತು ಅದೇ. ಅವನು ಇನ್ನೊಂದು ಗಂಟೆಯೊಳಗಾಗಿ ಕಂಠಪೂರ್ತಿ ಕುಡಿಯಲಿರುವನೆಂದೂ, ಬಳಿಕ ನಾನು ಬೀಗದಕೈಯನ್ನು ಕದಿಯುವುದೋ ಇಲ್ಲವೇ ಇಲ್ಲಿಂದ ನುಣುಚಿಕೊಂಡು ಹೋಗುವುದೋ ಎರಡಲ್ಲೊಂದನ್ನು ಮಾಡಿಯಾನೆಂದೂ ನಾನು ಕಲ್ಪಿಸಿಕೊಂಡೆನು. ಅವನು ಕುಡಿದ, ಮತ್ತೂ ಕುಡಿದ. ಹಾಗೆಯೇ ತನ್ನ ಕಂಬಳಿಗಳಮೇಲೆ ಎಡವಿಬಿದ್ದ; ಆದರೆ ವಿಧಿ ನನಗೆ ಅನುಕೂಲವಾಗಲಿಲ್ಲ. ಆಲಸ್ಯವಾಗಿದ್ದರೂ ಅವನಿಗೆ ತುಂಬು ನಿದ್ದೆ ಬರಲಿಲ್ಲ. ಅವನು ಹೀಗೆಯೇ ಬಹುಕಾಲದವರೆಗೆ ಗೊಣಗಿದ, ನರಳಿದ, ಒದ್ದಾಡಿದ. ಕೊನೆಗೆ ಏನು ಮಾಡಿದರೂ ನನಗೆ ಕಣ್ಣುಬಿಟ್ಟುಕೊಂಡಿರುವುದೇ ಅಸಾಧ್ಯವಾಯಿತು. ನನಗೆ ಗಾಢನಿದ್ರೆ ಬಂತು. ನಾನು ಏನುಮಾಡಲಿದ್ದೇನೆ ಎಂಬುದನ್ನು ತಿಳಿಯುವ ಮುನ್ನವೇ ನನಗೆ ತುಂಬುನಿದ್ದೆ ಬಂತು; ಮೋಂಬತ್ತಿಯ ದೀಪ ಉರಿಯುತ್ತಿತ್ತು.

ನಾನು ಎಷ್ಟುಹೊತ್ತು ನಿದ್ದೆಮಾಡಿದೆನೋ ನನಗೆ ತಿಳಿಯದು. ಆದರೆ ಒಂದು ಭಾರಿ ಒರಲಿಕೆ ನನ್ನ ಕಿವಿಗೆ ಬಿತ್ತು. ನಾನು ಮೇಲೆದ್ದೆ. ಅಪ್ಪ ಹುಚ್ಚನಂತೆ ಕಾಣಿಸುತ್ತಿದ್ದ. 'ಹಾವು! ಹಾವು!' ಎಂದು ಕಿರುಚುತ್ತಾ ಎತ್ತೆತ್ತಲೂ ಎಗರುತ್ತಿದ್ದ, ತನ್ನ ಕಾಲುಗಳಮೇಲೆ ಹಾವುಗಳು ಹರಿಯುತ್ತಿವೆ ಎಂದನು. ಬಳಿಕ ಒಮ್ಮೆ ಹಾರಿ ಕಿರಿಚುತ್ತ ಬಂದು, ಹಾವು ತನ್ನ ಕೆನ್ನೆಯನ್ನು ಕಚ್ಚಿತು ಎಂದನು: ನನಗೆ ಯಾವ ಹಾವೂ ಕಂಡು ಬರಲಿಲ್ಲ. ಗುಡಿಸಿಲೊಳಗೆಲ್ಲಾ ಓಡಾಡುತ್ತಾ, "ಅದನ್ನು ಹಿಡಿಥೆಸೆಯಿರಿ! ಅದನ್ನು ಹಿಡಿಥೆಸೆಯಿರಿ! ಅದು ನನ್ನ ಕೊರಳಲ್ಲಿ ಕಚ್ಚುತ್ತಾ ಇದೆ" ಎಂದು ಗದ್ದಲಮಾಡಿದನು. ಅಷ್ಟು ಹುಚ್ಚುಮನುಷ್ಯನನ್ನು ನಾನೆಂದೂ ನೋಡಿಲ್ಲ, ಸ್ವಲ್ಪಹೊತ್ತಿಗೆ ಅವನಿಗೆ ಬಲು ಸುಸ್ತಾ

ಯಿತು; ಏದುಸಿರು ಬಿಡುತ್ತಾ ಕೆಳಗೆಬಿದ್ದುಕೊಂಡನು. ತನ್ನ ಕಾಲಿಗೆ ಸಿಕ್ಕಿದ್ದೆಲ್ಲವನ್ನೂ ಒದೆಯುತ್ತ ತನ್ನ ಕೈಗಳಿಂದ ಗಾಳಿಯನ್ನು ಬಡಿಯುತ್ತ ಬಡಿಯುತ್ತ ತನ್ನನ್ನು ದೆವ್ವಗಳು ಮೆಟ್ಟಿಕೊಂಡಿವೆ ಎಂದು ಕೂಗುತ್ತಾ ಸರ್ರನೆ ಉರುಳಿದನು. ಸ್ವಲ್ಪಹೊತ್ತಿನೊಳಗಾಗಿ ಅಚಲವಾಗಿ ಬಿದ್ದುಕೊಂಡನು. ಸದ್ದು ಅಡಗಿತು. ಕಾಡಿನೊಳಗಿನಿಂದ ಗೂಗೆಗಳ ಮತ್ತು ನರಿಗಳ ಕೂಗು ಕೇಳಿಬರುತ್ತಿತ್ತು. ಎಲ್ಲವೂ ಅತಿಸ್ತಬ್ಧವಾದಂತೆ ತೋರಿತು. ಮೂಲೆಯಲ್ಲಿ ಉರುಳಿದ್ದ; ಅವನ ತಲೆ ಒಂದುಪಕ್ಕಕ್ಕೆ ವಾಲಿತ್ತು. ಬಲುಸಣ್ಣ ದನಿಯಲ್ಲಿ ಅವನು ಹೇಳಿದ.

"ಅಲೆಮಾರಿ—ಅಲೆಮಾರಿ—ಅಲೆಮಾರಿ ; ಅಂದರೆ ಸತ್ತವರು ; ಅಲೆಮಾರಿ—ಅಲೆಮಾರಿ—ಅಲೆಮಾರಿ ; ನನ್ನನ್ನು ಬೆನ್ನು ಹತ್ತಿದ್ದಾರೆ ; ಆದರೆ ನಾನು ಹೋಗುವುದಿಲ್ಲ. ಓ ಅವರಿಲ್ಲಿಗೆ ಬಂದಿದ್ದಾರೆ ! ನನ್ನನ್ನು ಮುಟ್ಟ—ಬೇಡಿ—ಬೇಡಿ ! ಕೈ ತೆಗೆಯಿರಿ—ಅವು ಕೊರೆಯುತ್ತಿವೆ ; ಬಿಟ್ಟುಬಿಡಿ. ಓ, ಈ ಪಾಪಿಯನ್ನು ಅವನ ಪಾಡಿಗೆ ಬಿಟ್ಟು ಬಿಡಿ."

ಬಳಿಕ ಅವನು ಅಂಬೆಗಾಲಿಟ್ಟನು, ತೆವಳಿದನು, ತನ್ನನ್ನು ತನ್ನ ಪಾಡಿಗೆ ಬಿಡಲೆಂದು ಬೇಡಿಕೊಂಡನು, ತನ್ನ ಮೈಯನ್ನು ಕಂಬಳಿಯಿಂದ ಸುತ್ತಿಕೊಂಡನು, ಹಳೆಯ ಪೈನ್ ಮೇಜಿನಡಿಯಲ್ಲಿ ಬೇಡಿಕೊಳ್ಳುತ್ತಲೇ ಹೊರಳಿದನು. ಅವನ ಕಂಬಳಿಯ ಮೂಲಕ ನಾನು ಅವನ ಧ್ವನಿಯನ್ನು ಕೇಳಬಹುದಿತ್ತು.

ಸ್ವಲ್ಪಹೊತ್ತಾದ ಮೇಲೆ ಅವನು ಈಚೆಗೆ ಉರುಳಿದನು ; ತನ್ನ ಕಾಲಿನ ಮೇಲೆ ಎಗರಿ ನಿಂತನು, ಹುಚ್ಚನಂತೆ ನೋಡುತ್ತ, ನನ್ನನ್ನು ಕಂಡು, ಹಿಡಿಯ ಬಂದನು. ಸುತ್ತಿ ಸುತ್ತಿ, ನನ್ನನ್ನು ಅಟ್ಟಿಸಿಕೊಂಡು ಬಂದನು. ಒಂದು ಚಿಕ್ಕ ಚಾಕುವನ್ನು ಹಿಡಿದು ನನ್ನನ್ನು ಮೃತ್ಯುದೂತನೆಂದು ಕರೆದು, ನನ್ನನ್ನು ಕೊಲ್ಲುವುದಾಗಿಯೂ, ಹಾಗೆ ಮಾಡಿದಲ್ಲಿ ನಾನು ಅವನನ್ನು ಮೆಟ್ಟಿಕೊಳ್ಳುವುದು ತಪ್ಪುವುದೆಂದೂ ಹೇಳಿದನು. 'ನಾನು ಹಕ್, ಬರಿಯ ಹಕ್' ಎಂದು ನಾನು ಬೇಡಿಕೊಂಡ. ಅವನು ಬಲು ಕೆಟ್ಟ ನಗೆಯನ್ನು ಬೀರಿ ಗರ್ಜಿಸುತ್ತಾ ನನ್ನನ್ನು ಅಟ್ಟಿಕೊಂಡು ಬರುತ್ತಲೇ ಇದ್ದನು. ಒಂದು ಸಲವಂತೂ ನಾನು ಅವನ ಕಂಕುಳ ಕೆಳಗೆ ತೂರಿ ತಪ್ಪಿಸಿಕೊಳ್ಳುವುದರಲ್ಲಿದ್ದಾಗ ಅವನು ನನ್ನ ಒಳ–ಅಂಗಿಯ ಕತ್ತುಪಟ್ಟಿಯನ್ನು ಹಿಡಿದೆತ್ತಿ ಚಾಚಿಕೊಂಡನು ; ನನ್ನ ಕಥೆ ಮುಗಿಯಿತು ಎಂದುಕೊಂಡೆನು. ನಾನು ಒಳ–ಅಂಗಿಯಿಂದ ಮಿಂಚಿನಂತೆ ಜಾರಿಕೊಂಡು ಪಾರಾದೆನು ಕೂಡಲೇ ಅವನಿಗೆ ತುಂಬಾ ಆಯಾಸವಾಯಿತು ; ಬಾಗಿಲಿಗೆ ಬೆನ್ನು ಕೊಟ್ಟು ದೊಪ್ಪನೆ ಕುಸಿದನು, ಒಂದು ನಿಮಿಷ ಕಾಲ ವಿಶ್ರಮಿಸಿಕೊಂಡು ಆಮೇಲೆ ನನ್ನನ್ನು ಕೊಲ್ಲುವುದಾಗಿ ನುಡಿದನು. ತನ್ನ ಚಾಕುವನ್ನು ತಲೆಯ ಕೆಳಗೆ ಇಟ್ಟುಕೊಂಡನು. ತಾನು ನಿದ್ದೆ ಮಾಡಿ ಪ್ರಾಣವನ್ನು ಗಳಿಸಿ, ಬಳಿಕ ಯಾರು ಯಾರೆಂಬುದನ್ನು ವಿಚಾರಿಸಿಕೊಳ್ಳುವೆನೆಂದನು.

ಹಾಗೆನ್ನುತ್ತಿದ್ದಾಗಲೇ ಅವನಿಗೆ ನಿದ್ದೆ ಬಂತು, ಸ್ವಲ್ಪ ಹೊತ್ತಾದ ಮೇಲೆ ನಾನು ಆ ತಳಹರಿದ ಕುರ್ಚಿಯ ಬಳಿಗೆ ಸದ್ದು ಮಾಡದೆ ನಡೆದು ಅದನ್ನು ಹತ್ತಿ ಬಂದೂಕವನ್ನು ಎತ್ತಿಕೊಂಡೆ. ನಾನು ಸಲಾಕಿಯೊಂದನ್ನು ಬಂದೂಕದ ಬಾಯೊಳಗಿಳಿಸಿ ಅದು ಭರ್ತಿಯಾಗಿದೆ, ಎಂಬುದನ್ನು ಖಚಿತಪಡಿಸಿಕೊಂಡೆ; ಅದನ್ನು ಸವಿಮುಲ್ಲಂಗಿಯನ್ನು ತುಂಬಿದ್ದ ಕೊಳಗದ ಮೇಲೆ ತುದಿಯನ್ನು ಅಪ್ಪನ ಕಡೆಗೆ ತಿರುಗಿಸಿಟ್ಟು ಅವನು ಅಲುಗುವುದನ್ನೇ ಕಾಯುತ್ತ ಕುಳಿತೆ, ಕಾಲವೋ, ಎಷ್ಟು ನಿಧಾನವಾಗಿ ಸದ್ದಿಲ್ಲದೆ ಅದು ಹೆಜ್ಜೆ ಎಳೆಯುತ್ತಿತ್ತು !

## ೭

"ಏಳು ಮೇಲೆ ! ಏನು ಮಾಡುತ್ತಾ ಇದ್ದೀಯೆ ?"

ನಾನು ಕಣ್ತೆರೆದೆ ; ನಾನೆಲ್ಲಿದ್ದೇನೆಂಬುದನ್ನರಿಯಲು ಸುತ್ತಲೂ ನೋಡಿದೆ, ಸೂರ್ಯೋದಯವಾಗಿ ಕೆಲಕಾಲವಾಗಿತ್ತು ; ನಾನು ತುಂಬಾ ನಿದ್ದೆ ಮಾಡಿದ್ದೆ. ಅಪ್ಪ ನನ್ನ ಮೇಲೆ ಅಡ್ಡನಿಂತು ಹಗೆಯಂತೆ, ರೋಗಹಿಡಿದವನಂತೆ ಕಂಡು ಬರುತ್ತಿದ್ದ. ಅವನು ಕೇಳಿದ :

"ಬಂದೂಕ ಇಟ್ಟುಕೊಂಡು ಏನು ಮಾಡುತ್ತಿದ್ದೀಯೆ ನೀನು ?"

ತಾನು ಏನು ಮಾಡುತ್ತಿದ್ದನೆಂಬುದು ಅವನಿಗೆ ಏನೂ ತಿಳಿದಿಲ್ಲವೆಂದು ನಾನು ನಿರ್ಧರಿಸಿದೆ. ಆ ಕಾರಣದಿಂದ ನಾನು ಹೇಳಿದೆ :

"ಯಾರೋ ಒಳಕ್ಕೆ ನುಗ್ಗಲು ಪ್ರಯತ್ನಿಸಿದರು ; ಅವರಿಗಾಗಿ ನಾನು ಹೊಂಚು ಹಾಕುತ್ತಿದ್ದೆ."

"ನೀನು ನನ್ನನ್ನು ಏಕೆ ಎಬ್ಬಿಸಲಿಲ್ಲ?"

"ನಾನು ಪ್ರಯತ್ನ ಪಟ್ಟೆ, ನನ್ನ ಕೈಲಾಗಲಿಲ್ಲ. ನಿನ್ನನ್ನು ಅಲುಗಿಸಲು ಆಗಲಿಲ್ಲ"

"ಪರವಾಯಿಲ್ಲ ನೀನು ಹಗಲೆಲ್ಲಾ ಹರಟುತ್ತ ಅಲ್ಲಿ ನಿಂತಿರಬೇಡ, ತೊಲಗು ; ಬೆಳಗಿನ ಉಪಹಾರಕ್ಕೆ ಮೀನಿವೆಯೆ ? ನೋಡು. ನಾನೂ ಒಂದು ನಿಮಿಷದಲ್ಲಿ ಅತ್ತ ಬರುವೆನು".

ಅವನು ಬಾಗಿಲು ತೆರೆದನು. ನಾನು ನದಿಯ ದಡಗೆ ತೆರಳಿದೆ. ಕೆಲವು ಮುರಿದ ಕೊಂಬೆಗಳೂ, ಕೆಲವು ತೊಗಟೆಗಳೂ ತೇಲಿಬರುತ್ತಿದ್ದುದನ್ನು ಕಂಡೆ. ನದಿ ಏರತೊಡಗಿದೆ ಎಂದುಕೊಂಡೆ. ನಾನು ಆಚೆಯ ಊರಿನಲ್ಲಿ ಇದ್ದಿದ್ದಲ್ಲಿ ನನಗೆ ಒಳ್ಳೆಯ ದೆಸೆ

ಒದಗುತ್ತಿತ್ತೆಂದು ಲೆಕ್ಕಹಾಕಿದೆ ಜೂನ್ ತಿಂಗಳ ಪ್ರವಾಹ ಎಂದೂ ನನಗೆ ಸುಯೋಗವೇ: ಏಕೆಂದರೆ ಏರಿಕೆ ಮೊದಲಾಯಿತೆಂದರೆ ಕಾರ್ಡ್‌ವುಡ್‌ಗಳು ಕೆಳಸೀಮೆಗೆ ತೇಲಿಬರುತ್ತವೆ ; ದಿಮ್ಮಿ ತೆಪ್ಪಗಳ ಸಮೂಹಗಳೂ ಹಲವೇಳೆ ಒಟ್ಟಿಗೆ ಹತ್ತು ಹನ್ನೆರಡಂ ದಿಮ್ಮಿಗಳೂ ತೇಲಿಬರುತ್ತವೆ. ಆಗ ನಾವು ಮಾಡಬೇಕಾಗಿರುವುದಿಷ್ಟೇ: ಅವುಗಳನ್ನು ಹಿಡಿದು, ಮರ ಮುಟ್ಟುಗಳನ್ನು ಮಳಿಗೆಗಳಿಗೂ ಗರಗಸದ ಕಾರ್ಖಾನೆಗಳಿಗೂ ಸಾಗಿಸಿ ಮಾರುವುದು. ನಾನು ಒಂದು ಕಣ್ಣನ್ನು ಅಪ್ಪ ಬರುವ ಹಾದಿಯ ಕಡೆಗೂ ಇನ್ನೊಂದನ್ನು ಪ್ರವಾಹ ತೇಲಿಸಿ ಕೊಂಡು ಬರುವ ಸರಕಿನ ಕಡೆಗೂ ಹಾಯಿಸುತ್ತ ದಡದ ಉದ್ದಕ್ಕೂ ನಡೆದೆ. ಅಕಸ್ಮಾತ್ತಾಗಿ ಅಲ್ಲೊಂದು ಕಿರುದೋಣಿ ಕಾಣಿಸಿಕೊಂಡಿತು, ಅದು ಸೊಗಸಾಗಿತ್ತು ; ಸುಮಾರು ಹದಿಮೂರು ಹದಿನಾಲ್ಕು ಅಡಿ ಉದ್ದವಾಗಿತ್ತು ; ಉಬ್ಬುವ ತೆರೆಗಳ ಮೇಲೆ ಅದು ಬಾತಿನಂತೆ ಏರಿಬರುತ್ತಿತ್ತು. ನನ್ನ ಉಡುಪನ್ನು ಕಳಚಿದೆ, ತಲೆ ಮುಂದಾಗಿ, ಕಪ್ಪೆಯಂತೆ ದಡದಿಂದ ನೀರಿಗೆ ಧುಮುಕಿ ಆ ಕಿರುದೋಣಿಯನ್ನು ಹಿಡಿಯಲು ಪ್ರಯತ್ನಿಸಿದೆ. ಅದರಲ್ಲಿ ಯಾರಾದರೂ ಅವಿತುಕೊಂಡಿರಬಹುದೆಂದು ನಿರೀಕ್ಷಿಸಿದ್ದೆ : ಏಕೆಂದರೆ ಇತರರನ್ನು ಬೆಪ್ಪುಮಾಡುವುದಕ್ಕಾಗಿ ಜನ ಹಾಗೆ ಮಾಡುವುದು ರೂಢಿಯಾಗಿದೆ. ಯಾವನಾದರೂ ಹುಡುಗ ಹಾಯಿದೋಣಿಯ ಹತ್ತಿರಕ್ಕೆ ಬಂದು ಬಿಟ್ಟನೆಂದರೆ, ಒಳಗಿದ್ದವರು ತಲೆಯೆತ್ತಿ ಅವನನ್ನು ಗೇಲಿಮಾಡುತ್ತಾರೆ. ಈ ಸಲ ಹಾಗಾಗಲಿಲ್ಲ. ಅನುಮಾನವಿಲ್ಲದೆ ಅದೊಂದು ಪ್ರವಾಹಕಾಲದ ಕಿರುದೋಣಿಯಾಗಿತ್ತು. ನಾನು ಅದನ್ನು ಹತ್ತಿ ಕುಳಿತು, ಹುಟ್ಟುಹಾಕಿ ದಡಕ್ಕೆ ತಂದೆ. ಇದರ ಬೆಲೆ ಹತ್ತು ಡಾಲರ್ ಆಗುತ್ತದೆ ಮುದುಕನಿಗೆ ಇದನ್ನು ಕಂಡರೆ ಸಂತೋಷವಾಗುತ್ತದೆ, ಎಂದು ಭಾವಿಸಿದೆ. ಆದರೆ ನದಿಯ ಅಂಚಿಗೆ ಬಂದಾಗ ಅಪ್ಪನ ತಲೆ ಕಾಣಿಸಲಿಲ್ಲ. ನಾನು ಅದನ್ನು ಕಂದಕದಂತಿದ್ದ ಮತ್ತು ಜೊಂಡಿನಿಂದಲೂ ಬಳ್ಳಿಗಳಿಂದಲೂ ಮುಚ್ಚಿಹೋಗಿದ್ದ ಒಂದು ಸಣ್ಣ ಕೊಲ್ಲಿಗೆ ನೂಕಿಕೊಂಡು ಬರುತ್ತಿದ್ದಾಗ ನನಗೊಂದು ಯೋಚನೆ ಹೊಳೆಯಿತು. ಅದನ್ನು ಸುರಕ್ಷಿತವಾಗಿ ಬಚ್ಚಿಡುವೆನೆಂದೂ, ನನ್ನ ಪಲಾಯನ ಸಮಯ ಬಂದಾಗ ನಾನು ಕಾಡುಗಳಲ್ಲಿ ತಿರುಗುವ ಬದಲು ನದಿಯ ಮೇಲೆಯೇ ಐವತ್ತು ಮೈಲಿ ದೂರ ಕೆಳಸೀಮೆಗೆ, ಪ್ರಯಾಣಮಾಡಿ ಅಂತಿಮವಾಗಿ ಒಂದು ಸ್ಥಳದಲ್ಲಿ ಬಿಡದಿಮಾಡಬಹುದು, ಪಾದಚಾರಿಯಾಗಿ ಕಷ್ಟಪಡುವುದು ತಪ್ಪುತ್ತದೆ ಎಂದು ನಿರ್ಧರಿಸಿದೆ.

ಆ ಸ್ಥಳವೂ ಗುಡಿಸಿಲಿಗೆ ಹತ್ತಿರದಲ್ಲೇ ಇತ್ತು, ಅಷ್ಟು ಹೊತ್ತೂ ಆ ಮುದುಕ ಇತ್ತಕಡೆಗೆ ಬರುತ್ತಿರುವನೆಂಬ ಸದ್ದೇ ನನ್ನ ಕಿವಿಯೊಳಗೆ, ನಾನು ಅದನ್ನು ಬಚ್ಚಿಟ್ಟೆನು. ಈಚೆಗೆ ಬಂದು ಒಂದು ಜೊಂಪೆ ಜೋಡಿನಾಚೆಗೆ ತಲೆಹಾಕಿ ನೋಡಿದೆ. ಅಲ್ಲೇ ಹತ್ತಿರದ ಕಾಲುಹಾದಿಯಲ್ಲಿ ಮುದುಕ ಸಾಕ್ಷಾತ್ತಾಗಿ ನಿಂತು ಹಕ್ಕಿಯೊಂದನ್ನು ತನ್ನ ಬಾದೂಕದ ಗುಂಡಿನಿಂದ ಹೊಡೆಯುವುದರಲ್ಲಿದ್ದ. ಅವನ ಕಣ್ಣಿಗಂತೂ ಏನೂ ಬಿದ್ದಿರಲಿಲ್ಲ.

ಅವನು ಮುಂದೆ ನಡೆದಾಗ, ಓಟಕ್ಕೂ ಮೆಲುನಡೆಗೂ ನಡುವಣ ಗತಿಯಲ್ಲಿ ಹೆಜ್ಜೆ ಹಾಕುವುದು ನನಗೆ ದುಸ್ತರವಾಯಿತು. ಅಷ್ಟು ನಿಧಾನವಾದದ್ದಕ್ಕಾಗಿ ಅವನು ನನ್ನನ್ನು ಸ್ವಲ್ಪ ಬೈದನು. ನದಿಯಲ್ಲಿ ಜಾರಿ ಬಿದ್ದದ್ದರಿಂದ ತಡವಾಯಿತು, ಎಂದೆ ನಾನು, ನಾನು ಒದ್ದೆಯಾಗಿರುವುದನ್ನು ಅವನು ಮೊದಲೇ ಕಾಣುವನೆಂದೂ, ಅನಂತರ ನನ್ನನ್ನು ಪ್ರಶ್ನೆ ಕೇಳಬಹುದೆಂದೂ ನಾನು ತಿಳಿದಿದ್ದೆ. ಮೀನು ಹಿಡಿಯುವ ಸ್ಥಳಕ್ಕೆ ಕೊಂಚ ದೂರದಲ್ಲಿ ನಮಗೆ ಐದು ಕ್ಯಾಟ್–ಮೀನುಗಳು ದೊರೆತವು; ಮನೆಗೆ ಹೋದೆವು.

ನಮಗೆ ತುಂಬಾ ದಣಿವಾಗಿದ್ದುದರಿಂದ ನಾವು ಉಪಾಹಾರವನ್ನು ತೆಗೆದುಕೊಂಡು ಸ್ವಲ್ಪ ನಿದ್ದೆ ಮಾಡೋಣವೆಂದು ಮಲಗಿಕೊಂಡೆವು. ಅಪ್ಪನಿಂದಲೂ ಆವಿಧವೆಯಿಂದಲೂ ನಾನು ತಪ್ಪಿಸಿಕೊಂಡುಹೋಗಲು ಕೇವಲ ಅದೃಷ್ಟವನ್ನೇ ನಂಬಿಕೊಂಡಿರುವುದಕ್ಕಿಂತ ಯಾವುದಾದರೂ ಮಾರ್ಗವನ್ನು ಹುಡುಕಿಕೊಳ್ಳುವುದು ಹೆಚ್ಚು ಫಲಕಾರಿ ಎಂಬುದು ನನಗೆ ಆಗ ಹೊಳೆಯಿತು. ಏಕೆಂದರೆ, ಅಷ್ಟರೊಳಗೇ ಏನೇನೋ ನಡೆದು ಹೋಗಬಹುದು, ನೋಡಿ. ಆದರೂ ಕೊಂಚಕಾಲ ನನಗೆ ಯಾವ ಮಾರ್ಗವೂ ಹೊಳೆಯಲಿಲ್ಲ. ಸರಿ, ಅಷ್ಟು ಹೊತ್ತಿಗೆ ಇನ್ನೊಂದು ಕೊಳಗ ನೀರು ಕುಡಿಯಲು ಅಪ್ಪ ಎದ್ದನು; ಅವನು ಹೇಳಿದ :

"ಈ ಸುತ್ತ ಮುತ್ತ ಯಾರಾದರೂ ಸುಳಿದರೆ ನೀನು ನನ್ನನ್ನು ಎಬ್ಬಿಸಬೇಕು,— ಕೇಳಿದೆಯಾ? ಆ ಮನುಷ್ಯ ಸುಮ್ಮನೆ ಇಲ್ಲಿಗೆ ಬಂದಿರಲಿಲ್ಲ. ನಾನು ಅವನನ್ನು ಗುಂಡಿಟ್ಟು ಕೊಲ್ಲುತ್ತಿದ್ದೆ. ಮುಂದಿನ ಸಲ ನೀನು ನನ್ನನ್ನು ಎಬ್ಬಿಸಬೇಕು,— ಕೇಳಿಸಿತೆ ?"

ಅವನು ಬಿದ್ದುಕೊಂಡನು, ನಿದ್ದೆ ಮಾಡತೊಡಗಿದನು. ಅವನು ಹೇಳಿದ್ದರಲ್ಲಿ ನನಗೆ ಬೇಕಾಗಿದ್ದ ಸಲಹೆಯೇ ಬಂದಿತ್ತು. ನನ್ನನ್ನು ಹಿಂಬಾಲಿಸಲು ಯಾರೂ ಯೋಚಿಸಲಾಗದ ಒಂದು ಮಾರ್ಗವನ್ನು ನಾನೀಗ ಹಿಡಿಯಬಲ್ಲೆ ಎಂದುಕೊಂಡೆ ನಾನು.

ಹನ್ನೆರಡು ಗಂಟೆಯ ಸುಮಾರಿಗೆ ನಾವು ಈಚೆಗೆ ಬಂದು ನದಿಯ ದಡದ ಮೇಲೆ ನಡೆದು ಹೋದೆವು, ನದಿ ತೀವ್ರಗತಿಯಿಂದ ಏರುತ್ತಿತ್ತು. ಪ್ರವಾಹದಲ್ಲಿ ಬೇಕಾದಷ್ಟು ತೇಲು ಮರ ಸಾಗುತ್ತಿತ್ತು. ಆಮೇಲಾಮೇಲೆ ಒಟ್ಟಿಗೆ ಒಂಬತ್ತು ದಿಮ್ಮಿಗಳ ಒಂದು ತಂಡ ಬಲುವೇಗದಿಂದ ಬರುತ್ತಿತ್ತು. ನಾವು ಹಾಯಿದೋಣಿಯಲ್ಲಿ ಅಲ್ಲಿಗೆ ಹೋಗಿ ಅದನ್ನು ದಡಕ್ಕೆ ಎಳೆತಂದೆವು. ಮಧ್ಯಾಹ್ನದೂಟವನ್ನು ಮುಗಿಸಿದೆವು. ಅಪ್ಪನಲ್ಲದೆ ಇನ್ನು ಯಾರಾದರೂ ಆಗಿದ್ದರೆ ಇಡೀ ದಿನ ಅಲ್ಲಿದ್ದುಕೊಂಡು ಇನ್ನಷ್ಟು ಸರಕನ್ನು ಹಿಡಿದು ಹಾಕಲು ಕಾದು ನೋಡುತ್ತಿದ್ದರು; ಅಪ್ಪನ ರೀತಿ ಅದಲ್ಲ. ಒಂದು ಸಲಕ್ಕೆ ಒಂಬತ್ತು ದಿಮ್ಮಿಗಳೇ ಸಾಕಾಗಿತ್ತು ಅವನಿಗೆ, ಅವನು ಅವುಗಳನ್ನು ತಕ್ಷಣ ಪಟ್ಟಣಕ್ಕೆ ಕೊಂಡುಹೋಗಿ ಮಾರಿಬಿಡಬೇಕು. ಈ ಕಾರಣದಿಂದ ಅವನು ನನ್ನನ್ನು ಮನೆಯಲ್ಲಿ ಕೂಡಿಹಾಕಿ ಹಾಯಿದೋಣಿಯನ್ನು ಬಿಚ್ಚಿ ಸುಮಾರು ಮೂರೂವರೆ ಗಂಟೆ ಸಮಯದಲ್ಲಿ

ಆ ತೆಪ್ಪವನ್ನು ತೇಲಿಸಿಕೊಂಡು ಹೊರಟನು. ಆ ರಾತ್ರಿಯೇ ಅವನು ಹಿಂದಿರುಗುವುದಿಲ್ಲ ಎಂದುಕೊಂಡೆ. ನನ್ನ ಲೆಕ್ಕಾಚಾರದಲ್ಲಿ ಅವನು ಬಲುದೂರ ಹೋಗಿಬಿಟ್ಟಿದ್ದಾನೆ ಎನ್ನಿಸುವ ತನಕ ನಾನು ಕಾದೆ. ಬಳಿಕ ನನ್ನ ಗರಗಸವನ್ನು ಎತ್ತಿಕೊಂಡು ಗುಡಿಸಿಲಿನ ತೊಲೆಯನ್ನು ಮತ್ತೆ ಕೊಯ್ಯತೊಡಗಿದೆ. ಅವನು ನದಿಯ ಆಚೆಯ ದಡವನ್ನು ತಲಪುವುದರೊಳಗಾಗಿ ನಾನು ಗುಡಿಸಲಿನಿಂದ ಹೊರಬಿದ್ದೆ. ಅವನೂ ಅವನ ತೆಪ್ಪವೂ ದೂರದಲ್ಲೆಲ್ಲೋ ನೀರ ಮೇಲಣ ಒಂದು ಚುಕ್ಕೆಯಂತೆ ಕಾಣಿಸಿತು. ಧಾನ್ಯದ ಹಿಟ್ಟನ್ನು ತುಂಬಿಕೊಂಡಿದ್ದ ಚೀಲವನ್ನು ಎತ್ತಿಕೊಂಡು ಹೋಗಿ ನನ್ನ ಕಿರುದೋಣಿಯಿದ್ದ ಸ್ಥಳವನ್ನು ತಲಪಿ ಅಲ್ಲಿದ್ದ ಜೊಂಡನ್ನೂ ಬಳ್ಳಿಗಳನ್ನೂ ಹಿಂದಕ್ಕೆ ತಳ್ಳಿ ಅದನ್ನು ಅಲ್ಲಿ ಹಾಕಿದೆ. ಹಂದಿಯ ಮಾಂಸದ ಡಬ್ಬವನ್ನೂ, ಆಮೇಲೆ ವ್ಹಿಸ್ಕಿ ಜಾಡಿಯನ್ನೂ ಅಲ್ಲಿಗೆ ತಂದೆ. ಅಲ್ಲಿದ್ದ ಮದ್ದುಗುಂಡುಗಳಷ್ಟನ್ನೂ ಕಾಫಿ, ಸಕ್ಕರೆಗಳನ್ನೂ ತೆಗೆದುಕೊಂಡೆ. ಕಾಗದದ ಸೀಬಿಯನ್ನೂ, ಬಕೆಟ್ಟು, ಸೋರೆಬುರುಡೆ, ಸೌಟುಗಳನ್ನೂ ತವರದ ಬಟ್ಟಲು ಹಳೆಯ ಗರಗಸ, ಕಾಫಿ ತಂಬಿಗೆಗಳನ್ನೂ ತೆಗೆದುಕೊಂಡೆ. ಮೀನಿನ ಗಾಳಗಳನ್ನೂ ಬೆಂಕಿ ಕಡ್ಡಿಗಳನ್ನೂ — ಒಂದು ಬೆಲೆಬಾಳುವ ಸೆಂಟ್ ಯಾವುವನ್ನೂ ಬಿಡದೆ — ತೆಗೆದುಕೊಂಡೆ. ಆ ಸ್ಥಳವನ್ನು ಬರಿದು ಮಾಡಿದೆ. ನನಗೊಂದು ಕೊಡಲಿ ಬೇಕಾಗಿತ್ತು; ಅದು ಅಲ್ಲಿರಲಿಲ್ಲ, ದೂರದಲ್ಲಿ ಸೌದೆಯ ರಾಶಿಯ ಬಳಿ ಬಿದ್ದಿತ್ತು, ಅದನ್ನೇಕೆ ನಾನು ಅಲ್ಲಿ ಉಳಿಸಿಹೋಗುವೆನೆಂಬುದು ನನಗೆ ಗೊತ್ತಿತ್ತು. ನನಗೆ ಬಂದೂಕವೂ ಕೈಗೆ ಬಂತು; ನಾನು ಮಾಡಬೇಕಾಗಿದ್ದ ಕೆಲಸ ಮುಗಿಯಿತು.

ನಾನು ಕನ್ನದ ಒಳಗೂ ಹೊರಗೂ ಅನೇಕ ಸಲ ತೆವಳಿದ್ದರಿಂದಲೂ ಅಷ್ಟೆಲ್ಲ ಸಾಮಾನುಗಳನ್ನು ಎಳೆದಾಡಿದ್ದರಿಂದಲೂ ನೆಲ ಸವೆದುಹೋಗಿತ್ತು. ಹೊರಗಿನಿಂದ ದೂಳನ್ನು ತಂದು ಚಿಮುಕಿಸಿ ನೆಲದ ಸುಣುಪನ್ನೂ ಒಳಗೆ ಬಿದ್ದಿದ್ದ ಮರದ ಹೊಟ್ಟನ್ನೂ ಮುಚ್ಚಲು ಶ್ರಮಿಸಿದೆ. ತೊಲೆಯ ತುಂಡನ್ನು ಅದು ಮೊದಲಿದ್ದ ಸ್ಥಳಕ್ಕೇ ತಂದಿರಿಸಿ, ಅದನ್ನು ಭದ್ರಗೊಳಿಸಲು ಅದರ ಕೆಳಗೆ ಎರಡು ಬಂಡೆಗಳನ್ನೂ ಒತ್ತಾಸೆಗಾಗಿ ಒಂದು ಬಂಡೆಯನ್ನೂ ನಿಲ್ಲಿಸಿದೆ. ಏಕೆಂದರೆ ತೊಲೆಯ ಕೆಳಭಾಗ ಸ್ವಲ್ಪ ಡೊಂಕಾಗಿದ್ದು ನೆಲದ ಮೇಲೆ ಸರಿಯಾಗಿ ಕೂರುತ್ತಿರಲಿಲ್ಲ. ಅದನ್ನು ಗರಗಸದಿಂದ ಕೊಯ್ಯಲಾಗಿದೆ ಎಂಬುದು ನಿಮಗೆ ತಿಳಿಯದೆ, ನೀವು ನಾಲ್ಕೈದು ಅಡಿಗಳ ದೂರದಿಂದ ಅದನ್ನು ನೋಡಿದ್ದಲ್ಲಿ ನೀವು ಈ ಹುಳುಕನ್ನು ಗಮನಿಸುತ್ತಿರಲಿಲ್ಲ. ಇಷ್ಟರ ಮೇಲೆ ಅದು ಗುಡಿಸಿಲಿನ ಹಿಂಭಾಗದಲ್ಲಿತ್ತು; ಅಲ್ಲಿಗೆ ಯಾರಾದರೂ ಹೋಗಿ ಚೇಷ್ಟೆ ಮಾಡುವುದು ಅಸಂಭವವಾಗಿತ್ತು. ಕಿರುದೋಣಿಯವರೆಗೂ ದಾರಿ ಹುಲ್ಲಿನಿಂದ ತುಂಬಿ ಹೋಗಿತ್ತು. ಆದ್ದರಿಂದ ನನ್ನ ಹೆಜ್ಜೆಗುರುತು ಪತ್ತೆಯಾಗುತ್ತಿರಲಿಲ್ಲ. ನಾನು ಸುತ್ತಲೂ ನೋಡಿದೆ. ದಡದ ಮೇಲೆ ನಿಂತು ಪೊಳೆಯುತ್ತ ಕಣ್ಸುಳಿಸಿದೆ. ಎಲ್ಲವೂ ಕ್ಷೇಮ ಸೂಚಕವಾಗಿತ್ತು. ಬಂದೂಕವನ್ನು ಹಿಡಿದುಕೊಂಡು ಕಾಡಿಗೆ ನಡೆದೆ, ಮತ್ತು ಹಕ್ಕಿಗಳನ್ನು ಹೊಡೆದು ಕೆಡಹಲು

ಹೊಂಚುತ್ತಿದ್ದೆ. ಆಗೊಂದು ಕಾಡುಹಂದಿ ನನ್ನ ಕಣ್ಣಿಗೆ ಬಿತ್ತು. ಪ್ರಯರಿ ಹೊಲಗಳನ್ನು ತಪ್ಪಿಸಿಕೊಂಡು ಬಂದ ಮೇಲೆ ಹಂದಿಗಳಿಗೆ ಬಲುಬೇಗ ಹುಚ್ಚು ಹಿಡಿಯುತ್ತದೆ. ನಾನು ಈ ಹಂದಿಯನ್ನು ಗುಂಡಿಟ್ಟು ಕೊಂದು ನನ್ನ ಬಿಡದಿಗೆ ತೆಗೆದುಕೊಂಡು ಹೋದೆ.

ಕೊಡಲಿಯನ್ನು ತೆಗೆದುಕೊಂಡೆ, ಅದರಿಂದ ಬಾಗಿಲಿಗೆ ಏಟು ಹಾಕಿದೆ. ಬಲು ಶ್ರಮಪಟ್ಟು ಅದನ್ನು ಚಚ್ಚಿದೆ, ಕೊಚ್ಚಿದೆ. ಹಂದಿಯನ್ನು ಒಳಗೆ ತಂದು, ಮೇಜಿನ ಸಮೀಪದ ತನಕ ಎಳೆದುಕೊಂಡು ಹೋಗಿ ಅದರ ಗಂಟಲಿಗೆ ಕೊಡಲಿಯನ್ನು ನಾಟಿಸಿದೆ, ರಕ್ತ ಸುರಿದು ಹೋಗಲೆಂದು ಅದನ್ನು ನೆಲದ ಮೇಲೆ ಉರುಳಿಸಿದೆ,—ನೆಲ ಎಂದು ನಾನು ಹೇಳಿದ್ದೇಕೆ ಎಂದರೆ, ಅಲ್ಲಿದ್ದದ್ದು ಧಮ್ಮಸ್ಸು ಮಾಡಿದ ನೆಲವೇ ಹೊರತು, ಹಲಗೆಯ ಹಾಸಲ್ಲ. ಸರಿ, ಆಮೇಲೆ ನಾನು ಹಳೆಯ ಚೀಲವನ್ನು ತಂದೆ. ಅದರ ಭರ್ತಿ ಕಲ್ಲುಗುಂಡುಗಳನ್ನು—ನನಗೆ ಎಳೆಯಲು ಸಾಧ್ಯವಾದಷ್ಟನ್ನು—ಹಾಕಿದೆ. ಅದನ್ನು ಹಂದಿಯಿಂದ ಪ್ರಾರಂಭಮಾಡಿ ಬಾಗಿಲ ಬಳಿಗೆ ಮತ್ತು ಕಾಡಿನ ಮೂಲಕ ನದಿಗೆ ಎಳೆದುಕೊಂಡು ಹೋಗಿ ನೀರಿಗೆ ಬೀಸಾಡಿದೆ. ಅದು ಆಳಕ್ಕೆ ಮುಳುಗಿತು, ಕಣ್ಮರೆಯಾಯಿತು. ಏನನ್ನೋ ನೆಲದ ಮೇಲೆ ಉದ್ದಕ್ಕೂ ಎಳೆದುಕೊಂಡು ಹೋಗಿದ್ದಾರೆ ಎಂದು ಸುಲಭವಾಗಿ ಕಾಣಬಹುದಿತ್ತು. ಟಾಮ್ ಸಾಯರ್ ಅಲ್ಲಿದ್ದರೆ ಚೆನ್ನಾಗಿತ್ತು. ಇಂಥಾ ಕೆಲಸಗಳಲ್ಲಿ ಅವನಿಗೆ ಆಸಕ್ತಿಯುಂಟೆಂಬುದನ್ನು ನಾನು ಬಲ್ಲೆ, ಇಂಥಾದ್ದಕ್ಕೆ ಅವನು ತನ್ನ ಕಲ್ಪನೆಯ ಮೆರಗನ್ನು ಕೊಡುತ್ತಿದ್ದನು. ಈ ಬಗೆಯ ಪ್ರಸಂಗ ಸಿಕ್ಕಿತೆಂದರೆ ಅವನಷ್ಟು ಕತೆಕಟ್ಟಬಲ್ಲವರು ಯಾರೂ ಇಲ್ಲ.

ಬಳಿಕ ನಾನು ಒಂದಿಷ್ಟು ಕೂದಲನ್ನು ಕಿತ್ತುಕೊಂಡು ರಕ್ತ ಒರಿಸಿ ಅದನ್ನು ಕೊಡಲಿಗೆ ಬಳಿದು ಕೊಡಲಿಯ ಹಿಂಭಾಗಕ್ಕೆ ಕೂದಲನ್ನು ಅಂಟಿಸಿದೆ. ಕೊಡಲಿಯನ್ನು ಮೂಲೆಗೆಸೆದೆ. ಹಂದಿಯನ್ನು ಎತ್ತಿ ನಿಲ್ಲಿಸಿ ನನ್ನ ಒಳ-ಅಂಗಿಯಿಂದ ಅದನ್ನು ನನ್ನೆದೆಗೆ ಬಿಗಿಯಾಗಿ ಕಟ್ಟಿಕೊಂಡು (ಅದು ಬಿದ್ದು ಹೋಗದಂತೆ ಮಾಡಿ) ಮನೆಯಿಂದ ಕೊಂಚ ದೂರದ ತನಕ ಹಾಗೆಯೇ ನಡೆದು, ಆಮೇಲೆ ಅದನ್ನು ನದಿಗೆ ಒಗೆದೆ. ಈ ಸಮಯದಲ್ಲೇ ನನಗೆ ಇನ್ನೇನೋ ಹೊಳೆಯಿತು. ಆ ಕಾರಣದಿಂದ ನಾನು ಹಿಟ್ಟಿನ ಚೀಲವನ್ನೂ ಗರಗಸವನ್ನೂ ತಂದು ಮನೆಯೊಳಗೆ ಇರಿಸಿದೆ. ಆ ಚೀಲವನ್ನು ಅದು ಮೊದಲು ಎಲ್ಲಿತ್ತೋ ಅಲ್ಲಿಯೇ ನಿಲ್ಲಿಸಿ, ಗರಗಸದಿಂದ ಅದರ ತಳದಲ್ಲಿ ಒಂದು ತೂತನ್ನು ಕೊರೆದೆ. ಏಕೆಂದರೆ ಅಲ್ಲಿ ಚಾಕುಗಳಾಗಲೀ ಮುಳ್ಳು ಚಮಚಗಳಾಗಲೀ ಇರಲಿಲ್ಲ, ಅಪ್ಪ ಅಡುಗೆಗೆ ಸಂಬಂಧಿಸಿದ ಎಲ್ಲಾ ಕೆಲಸಗಳನ್ನೂ ತನ್ನ ಕೈ ಚಾಕುವಿನಿಂದಲೇ ಮಾಡುತ್ತಿದ್ದನು. ಆಮೇಲೆ ನಾನು ಹಿಟ್ಟಿನ ಮೂಟೆಯನ್ನು ಮನೆಯ ಮೂಡಲ ದಿಕ್ಕಿಗೆ ಇದ್ದ ಗಿಡಗಳ ಮೇಲೆಯೂ ಹುಲ್ಲಿನ ಮೇಲೆಯೂ ಹೊತ್ತು ನಡೆದು ಆಳವಿಲ್ಲದ ಒಂದು ಸರೋವರದ ಬಳಿಗೆ ಬಂದೆನು ; ಅದು ಐದು ಮೈಲಿ ಅಗಲವಾಗಿತ್ತು, ಜೊಂಡಿನಿಂದಲೂ—ಕೇವ

ಸಮಯಗಳಲ್ಲಿ ಬಾತುಗಳಿಂದಲೂ, ಎನ್ನಬಹುದು ನೀವು—ತ.ಂಬಿರುತ್ತಿತ್ತು. ಅದರಿಂದಾಚೆಗೆ ಹೊರಟುಕೊಂಡಿದ್ದ ಒಂದು ಕೊಲ್ಲಿಯೋ ನಾಲೆಯೋ ಅನೇಕ ಮೈಲಿಗಳವರೆಗೆ ಹಬ್ಬಿತ್ತು; ಅದು ಎಲ್ಲಿಗೆ ಒಯ್ಯುತ್ತಿತ್ತೋ ನನಗೆ ತಿಳಿಯದು, —ಆದರೆ ನದಿಗಂತೂ ಅಲ್ಲ ಹಿಟ್ಟು ಸರೋವರದ ಅಂಚಿನತನಕ ಸೋರಿ ಹೋಗಿದ್ದು ದಾರಿಯನ್ನು ಗುರುತು ಮಾಡಿತ್ತು. ಅಪ್ಪನ ಸಾಣೆಕಲ್ಲನ್ನು ನಾನು ದಾರಿಯಲ್ಲೆ ಬೀಳಿಸಿದೆ—ಏನೋ ಅನಾಹುತ ಆಗಿರಬೇಕೆಂಬುದನ್ನು ಸಾರುವಂತೆ. ಹಿಟ್ಟಿನ ಮೂಟೆಯ ತೂತನ್ನು—ಹಿಟ್ಟು ಸೋರದ ಹಾಗೆ ಮಾಡಲು—ದಾರದಿಂದ ಕಟ್ಟಿದೆ. ಅದನ್ನೂ ಗರಗಸವನ್ನೂ ನನ್ನ ಕಿರುದೋಣಿಗೆ ಮತ್ತೆ ತಂದೆನು.

ಕತ್ತಲಾಗುತ್ತ ಬಂದಿತ್ತು, ಆದ್ದರಿಂದ ನಾನು ನನ್ನ ಕಿರುದೋಣಿಯನ್ನು ನದಿಯ ದಡದಿಂದ ಇಳಿಯ ಬಿದ್ದಿದ್ದ ಬಳ್ಳಿಪೊದರಿನ ಕೆಳಗೆ ತಂದುಬಿಟ್ಟೆ. ಚಂದ್ರೋದಯಕ್ಕಾಗಿ ಕಾದೆ. ಒಂದು ಪೊದರಿನೆಡೆಗೆ ಧಾವಿಸಿದೆ, ಊಟದ ಶಾಸ್ತ್ರ ಮುಗಿಸಿದೆ. ಆ ಮೇಲೆ ಹೊಗೆಸೇದಲೂ ಮುಂದಿನ ಹೆಜ್ಜೆಯನ್ನು ಆಲೋಚಿಸಲೂ ದೋಣಿಯಲ್ಲಿ ಹಾಗೆಯೇ ಮಲಗಿದೆ. ಅವರು ಆ ಕಲ್ಲು ತುಂಬಿದ ಚೀಲದ ದಾರಿಯನ್ನು ಹಿಡಿದು ನದೀ ತೀರಕ್ಕೆ ಬರುತ್ತಾರೆ; ನನಗಾಗಿ ಇಡೀ ನದಿಯನ್ನು ಶೋಧಿಸುತ್ತಾರೆ; ಹಿಟ್ಟಿನ ದಾರಿಯನ್ನು ಸರೋವರ ತನಕ ಅನುಸರಿಸಿ ಬಂದು, ನನ್ನನ್ನು ಕೊಂದು ಸಾಮಾನುಗಳನ್ನು ಕದ್ದ ಕಳ್ಳರನ್ನು ಹುಡುಕುವುದಕ್ಕಾಗಿ, ಸರೋವರದಿಂದ ಆಚೆಗೆ ಒಯ್ಯುವ ಕೊಲ್ಲಿಯ ಉದ್ದಕ್ಕೂ ತಿಂಡಿಯ ಚೂರುಗಳನ್ನು ಕುರುಕುತ್ತಾ ಹೋಗುತ್ತಾರೆ. ಅವರು ನದಿಯಲ್ಲಿ ಹುಡುಕ ಬರುವುದು ನನ್ನ ಹೆಣವನ್ನಲ್ಲದೆ ಮತ್ತೇನನ್ನೂ ಅಲ್ಲ. ಅವರಿಗೂ ಬೇಗನೆ ಬೇಸರವೂ ಆಯಾಸವೂ ಆಗುತ್ತದೆ, ಇನ್ನು ಮುಂದೆ ನನ್ನ ಚಿಂತೆಯನ್ನೇ ಬಿಟ್ಟು ಬಿಡುತ್ತಾರೆ. ಅದೂ ಅನುಕೂಲವೇ; ನಾನು ನನಗೆ ಬೇಕಾದಲ್ಲಿ ನೆಲಸಬಹುದು. ಜಾಕ್‌ಸನ್ನನ ದ್ವೀಪ ನನಗೆ ಸಾಕಷ್ಟು ಅನುಕೂಲವಾಗಿದೆ. ನಾನು ಆ ದ್ವೀಪವನ್ನು ಚೆನ್ನಾಗಿ ಬಲ್ಲೆ. ಯಾರೂ ಅಲ್ಲಿಗೆ ಬರುವುದಿಲ್ಲ, ರಾತ್ರಿಯ ಹೊತ್ತಿನಲ್ಲಿ ನಾನು ದೋಣಿಯನ್ನು ಮೀಟಿಕೊಂಡು ಪಟ್ಟಣವನ್ನು ಸೇರಿ ಅಲ್ಲಿ ತಲೆಮರೆಸಿಕೊಂಡು ಸುಳಿದು ನನಗೆ ಬೇಕಾದ್ದನ್ನು ಎಗರಿಸಬಹುದು. ಜಾಕ್‌ಸನ್ನನ ದ್ವೀಪವೇ ಸರಿಯಾದ ಸ್ಥಳ.

ನನಗೆ ತುಂಬಾ ದಣಿವಾಯಿತು. ನನಗೆ ಮೊತ್ತ ಮೊದಲಿಗೆ ತಿಳಿದದ್ದು ನನಗೆ ನಿದ್ದೆ ಬಂತೆಂಬುದೇ. ಎದ್ದ ಮೇಲೆ ನಿಮಿಷ ಕಾಲ ನಾನೆಲ್ಲಿದ್ದೇನೆಂಬುದೇ ನನಗೆ ತಿಳಿಯಲಿಲ್ಲ, ಎದ್ದು ಕುಳಿತೆ, ಸುತ್ತಲೂ ನೋಡಿದೆ. ಸ್ವಲ್ಪ ಭಯವಾಯಿತು. ಆಮೇಲೆ ನೆನಪಾಯಿತು. ನದಿ ಅನೇಕಾನೇಕ ಮೈಲಿಗಳಗಲವಿರುವಂತೆ ಕಾಣಿಸಿತು. ಅಂಚಿಗೆ ನೂರಾರು ಗಜಗಳಾಚೆಗೆ ಕಪ್ಪಾಗಿ ಸದ್ದಿಲ್ಲದೆ ನೀರಿನಲ್ಲಿ ಜಾರಿ ಬರುತ್ತಿದ್ದ ತೇಲುದಿಮ್ಮಿಗಳನ್ನು ನಾನು ಎಣಿಕೆ ಮಾಡುವುದು ಸಾಧ್ಯವಿತ್ತು; ಅಷ್ಟು ಸೊಗಸಾದ ಬೆಳುದಿಂಗ

ಳಿತ್ತು ! ಎಲ್ಲವೂ ಅತಿಸ್ತಬ್ಧವಾಗಿದ್ದು, ಹೊತ್ತು ಮೀರಿದಂತೆ ಕಂಡು ಬಂತು, ಹೊತ್ತು ಮೀರಿದಂತೆ ವಾಸನೆ ಹೊಡೆದಿತ್ತು. ನನ್ನ ಅರ್ಥ ನಿಮಗೆ ತಿಳಿದಿರಬಹುದು–ಅದನ್ನು ಮಾತಿನಲ್ಲಿ ಹೇಗೆ ಹೇಳಬೇಕೋ ನನಗೆ ತಿಳಿಯದು.

ನಾನು ಒಂದಿಷ್ಟು ಪುರುಸೂತ್ತು ಮಾಡಿಕೊಂಡೆ, ಕಾಲು ನೀಡಿ ಮಲಗಿದೆ, ಆ ಮೇಲೆ ದೋಣಿಯ ಕಟ್ಟನ್ನು ಬಿಚ್ಚಿ ಮುಂದೆ ಸಾಗಲು ಇನ್ನೇನು ತೊಡಗಿದಾಗ, ನನಗೆ ನೀರಮೇಲೆ ಬಲುದೂರದಿಂದ ಧ್ವನಿಯೊಂದು ಕೇಳಿಸಿತು, ಆಲಿಸಿದೆ. ಅದೇನೆಂಬುದು ನನಗೆ ಕೂಡಲೆ ತಿಳಿಯಿತು. ಸದ್ದಡಗಿದ ಇರುಳಿನಲ್ಲಿ ಸಾಲಾಗಿ ದುಡಿಯುವ ಹುಟ್ಟು ಗಳೆಡೆಯಿಂದ ಕೇಳಿಬರುವ ಲಯಬದ್ಧ ಅಸ್ಪಷ್ಟ ಧ್ವನಿಯದು. ನಾನು ನೀರ್-ಗಿಡಗಳ ರೆಂಬೆಗಳನ್ನು ಸರಿಸಿ ಇಣುಕಿ ನೋಡಿದೆ. ಅದೊಂದು ಸಣ್ಣ ನೌಕೆ ; ನಡುಹೊಳೆಯಾಚೆಗೆ ಚಲಿಸುತ್ತಿತ್ತು. ಅದರೊಳಗೆ ಎಷ್ಟು ಜನವಿದ್ದರೋ ನನಗೆ ಹೇಳಲುಬಾರದು, ಅದು ಬಳಿಗೆ ಬರುತ್ತಲೇ ಬರುತ್ತಲೇ ಇತ್ತು. ಅದು ನನಗಿಂತ ಮುಂದಾದಾಗ ಅದರಲ್ಲಿ ಒಬ್ಬನೇ ಇದ್ದದ್ದು ಕಾಣಿಸಿತು ಅವನು ಅಪ್ಪನೇ ಇರಬೇಕು. ನಾನವನನ್ನು ನಿರೀಕ್ಷಿಸಿರಲಿಲ್ಲ ಎಂದುಕೊಂಡೆ ನಾನು, ಅವನು ನನಗಿಂತ ಕೊಂಚ ಕೆಳಗೆ ಹೊನಲ ದಿಕ್ಕಿನಲ್ಲಿ ಧುಮುಕಿದ ; ಆಮೇಲಾಮೇಲೆ ದುಸ್ತರವಲ್ಲದ ನೀರಿನಲ್ಲಿ ಹೀಗೂ ಹಾಗೂ ತೇಲುತ್ತಾ ದಡಕ್ಕೆ ಹತ್ತಿ ಬಂದ. ಅವನು ನನಗೆ ಎಷ್ಟು ಹತ್ತಿರದಲ್ಲಿಯೇ ನಡೆದನೆಂದರೆ, ನಾನು ಅವನನ್ನು ಬಂದೂಕದ ಮೂತಿಯಿಂದ ಸೋಕಬಹುದಾಗಿತ್ತು. ಹೌದು ; ಅವನು ಖಂಡಿತವಾಗಿಯೂ ಅಪ್ಪನೇ ಎಂದೂ, ಅವನು ಹುಟ್ಟುಗಳನ್ನು ಹಾಕಿದ ಪರಿಯನ್ನು ನೋಡಿದರೆ ಆವನ ಬುದ್ಧಿ ಮಟ್ಟವಾಗಿದೆಯೆಂದೂ ತೋರಿತು.

ನಾನು ಎಷ್ಟೂ ತಡಮಾಡಲಿಲ್ಲ ; ದಡದ ನೆರಳಲ್ಲಿಯೇ, ನುಣುಪಾದರೂ ಬಲು ಸೆಳವಿನಿಂದ ಕೂಡಿದ್ದ, ನೆರೆಯಲ್ಲಿ ದೋಣಿಯನ್ನು ನೂಕಿದೆ. ಎರಡುವರೆ ಮೈಲಿ ಸಾಗಿದ ಮೇಲೆ ನದಿಯ ಮಧ್ಯಕ್ಕೆ ಸುಮಾರು ಕಾಲು ಮೈಲಿ ಇದೆ ಎನ್ನುವ ತನಕ ಹಿಮ್ಮೆಟ್ಟಿದೆ, ಏಕೆಂದರೆ, ನಾನು ಕೂಡಲೇ ಕಡುವನ್ನು ದಾಟುವುದರಲ್ಲಿದ್ದೆ ; ಜನ ನನ್ನನ್ನು ಕಂಡು, ಗಟ್ಟಿಯಾಗಿ ಕೂಗಿಬಹುದಿತ್ತು. ನಾನು ತೇಲು–ಮರಗಳ ನಡುವೆ ಕೂಡಿ ಚಲಿಸುತ್ತಿದ್ದೆ. ಕಿರು ದೋಣಿಯಲ್ಲಿ ಮಲಗಿ ಅದು ತೇಲಿಹೋಗಲೆಂದು ಸುಮ್ಮನಿದ್ದೆನು. ವಿಶ್ರಾಂತಿಗಾಗಿ ಹಾಯಾಗಿ ಮಲಗಿದೆ ; ನನ್ನ ಹೊಗೆ ಕೊಳವೆಯಿಂದ ಹೊಗೆಯನ್ನು ನಿಧಾನವಾಗಿ ಸೇದುತ್ತಾ ಗಗನದೆಡೆಗೆ ಕಣ್ಣನ್ನು ಬೀರಿದೆ. ಅದು ನಿರಭ್ರವಾಗಿತ್ತು. ಅಂಗಾತ ಮಲಗಿ ನೋಡಿದರೆ, ಬೆಳುದಿಂಗಳ ರಾತ್ರಿಯ ಗಗನವು ಅತೀವ ಆಳವಾಗಿರುವಂತೆ ಭಾಸವಾಗುತ್ತದೆ. ಇಲ್ಲಿಯವರೆಗೆ ನನಗೆ ಇದು ತಿಳಿದಿರಲಿಲ್ಲ. ಅಲ್ಲದೆ ಅಂಥ ರಾತ್ರಿಗಳಲ್ಲಿ ನೀರ ಮೇಲೆ ಎಷ್ಟುದೂರದಿಂದ ಬರುವ ಶಬ್ದವನ್ನೂ ಕೇಳಬಹುದು ! ಕಡುವಿನ ನಿಲ್ದಾಣದಲ್ಲಿ ಜನ ಮಾಡುತ್ತಿದ್ದುದು ನನ್ನ ಕಿವಿಗೆ ಬಿತ್ತು, ಅವರು ಆಡಿದ್ದನ್ನೂ, ಅವರ ಪ್ರತಿ ಮಾತನ್ನೂ ನಾನು ಕೇಳಿದೆ. ಹಗಲು ಹೆಚ್ಚುವ ಇರುಳು ಕುಗ್ಗುವ ಕಾಲ ಹತ್ತಿರವಾಗು

ತ್ತಿದೆ ಎಂದನು ಒಬ್ಬ. ಇದು ಇರುಳು ಕುಗ್ಗುವ ಕಾಲವಲ್ಲವೆಂದು ತನ್ನ ಭಾವನೆ ಎಂದನು ಇನ್ನೊಬ್ಬ. ಇಬ್ಬರೂ ನಕ್ಕರು. ಮತ್ತೆ ಹಾಗೆಯೇ ಹೇಳಿದರು. ಮತ್ತೆ ನಕ್ಕರು. ಅವರು ಮತ್ತೊಬ್ಬನನ್ನು ಎಬ್ಬಿಸಿದರು. ಇದನ್ನು ಅವನಿಗೆ ಹೇಳಿದರು, ನಕ್ಕರು ; ಅವನು ನಗಲಿಲ್ಲ. ಅವನು ತಟಕ್ಕನೆ ಏನನ್ನೋ ಹೇಳಿ, ನನ್ನ ತಂಟೆಗೆ ಬರ ಬೇಡಿ, ಎಂದ. ತಾನು ಅದನ್ನು ತನ್ನ ಹಳೆಯ ಹೆಣ್ಣಿಗೆ ಹೇಳುವುದಾಗಿಯೂ ಅವಳು ಅದನ್ನು ಬಲು ಮೆಚ್ಚಿಕೊಳ್ಳುವುದಾಗಿಯೂ ಮೊದಲನೆಯವನು ಹೇಳಿದ ; ಆದರೆ ತನ್ನ ಕಾಲದಲ್ಲಿ ತಾನು ಅವಳಿಗೆ ಹಿಂದೆಯೇ ಹೇಳಿದ್ದ ಹಲವು ಸಂಗತಿಗಳಿಗೆ ಇದನ್ನು ಹೋಲಿಸಿ ದರೆ, ಇದು ತೀರಾ ಅಲ್ಪ ವಿಷಯವೆಂದೂ ಹೇಳಿದನು. ಈಗಾಗಲೇ ಸುಮಾರು ಮೂರು ಗಂಟೆಯಾಗಿದೆ ಎಂದೂ, ಸುಮಾರು ಇನ್ನೊಂದು ವಾರ ಕಳೆಯುವುದರೊಳಗಾಗಿ, ಬೆಳಕು ಮಾಡುವುದು ಇಷ್ಟು ತಡವಾಗದೆಂದೂ ಒಬ್ಬ ಹೇಳಿದುದು ನನ್ನ ಕಿವಿಗೆ ಬಿತ್ತು. ಅದಾದ ಮೇಲೆ ಅವರ ಸಂಭಾಷಣೆ ನನ್ನಿಂದ ದೂರ ದೂರಕ್ಕೆ ಸರಿಯುತ್ತ ಹೋಯಿತು ; ಅವ ರಾಡಿದ ಮಾತು ಅಸ್ಪಷ್ಟವಾಯಿತು. ಆದರೂ ಏನನ್ನೋ ಅಗಿಯುತ್ತಾ ಅವರು ಆಡು ತ್ತಿದ್ದ ಮಾತು ನನಗೆ ಕೇಳಿಬಂತು ; ಆಗೊಮ್ಮೆ ಈಗೊಮ್ಮೆ ಅವರು ನಗುವುದೂ ಕೇಳಿ ಸಿತು ; ಆದರೆ ಅವೆಲ್ಲವೂ ಎಲ್ಲೋ ಬಲುದೂರ ದೂರದಲ್ಲಿ.

ನಾನೀಗ ಕಡುವಿಗೆ ಸ್ವಲ್ಪ ಕೆಳಿಗಿದ್ದೆನು. ಎದ್ದು ನೋಡಿದೆ ; ಕೆಳನದಿಗೆ ಸುಮಾರು ಎರಡುವರೆ ಮೈಲಿ ದೂರದಲ್ಲಿ, ಕಪ್ಪಾಗಿ ಮಜಬೂತಾಗಿ ಬೃಹದಾಕಾರವನ್ನು ತಾಳಿ, ದೀಪಗಳಿಲ್ಲದ ಆವಿ ಹಡಗಿನಂತೆ, ಭಾರಿ–ದಿಮ್ಮಿಗಳಿಂದ ಆವೃತವಾಗಿ, ನದಿಯ ಮಧ್ಯದಲ್ಲಿ ಎದ್ದು ನಿಂತಿತ್ತು ಜಾಕ್‌ಸನ್ನನ ದ್ವೀಪ. ಅದರ ಮುಖಭಾಗದಲ್ಲಿ ಅಡ್ಡಸಲಾಕಿಯ ಚಿಹ್ನೆಯಾವುದೂ ಇರಲಿಲ್ಲ—ಅದೆಲ್ಲವೂ ಈಗ ನೀರೊಳಗಿತ್ತು.

ನಾನು ಅಲ್ಲಿಗೆ ಹೋಗುವುದಕ್ಕೆ ಹೆಚ್ಚು ವೇಳೆ ಹಿಡಿಯಲಿಲ್ಲ. ಕಿತ್ತುಬರುವ ವೇಗದಿಂದ ಅದರ ಮುನ್ನೆಲವನ್ನು ದಾಟಿಕೊಂಡು ಹೋದೆ ; ಪ್ರವಾಹದ ರಭಸ ಹಾಗಿತ್ತು, ನಿಂತ ನೀರನ್ನು ಪ್ರವೇಶಿಸಿ ಇಲ್ಲಿ ನಾಯ್ಸ್ ತೀರದ ಕಡೆಗಿರುವ ಭಾಗದಲ್ಲಿ ನೆಲವನ್ನು ಸೋಕಿದೆ. ನನಗೆ ಸುಪರಿಚಿತವಾಗಿದ್ದ ಆ ದಡದ ಒಂದು ಕೊರಕಲಿನಲ್ಲಿ ನನ್ನ ಕಿರುದೋಣಿಯನ್ನು ಬೇಗಬೇಗ ಅಟ್ಟಿದೆ, ನೀರ್ಗಿಡಗಳ ಟೊಂಗೆಗಳ ಗೋಜನ್ನು ಬಿಡಿಸಿಕೊಂಡು ನಾನು ಮುಂಬರಿಯಬೇಕಾಗಿತ್ತು. ನಾನು ಅಲ್ಲಿ ವೇಗದಿಂದ ಚಲಿಸು ತ್ತಿದ್ದರೆ, ನನ್ನ ಕಿರುದೋಣಿ ಹೊರಗಿನ ಯಾರ ಕಣ್ಣಿಗೂ ಬೀಳುವುದು ಸಾಧ್ಯವಿರಲಿಲ್ಲ.

ನಾನು ಹತ್ತಿಹೋಗಿ ದ್ವೀಪದ ಮುಖದಲ್ಲಿದ್ದ ಒಂದು ದಿಮ್ಮಿಯ ಮೇಲೆ ಕುಳಿತೆ ; ಮಹಾನದಿಯನ್ನೂ ಕಪ್ಪು ತೇಲು ದಿಮ್ಮಿಗಳನ್ನೂ ಮೂರು ಮೈಲಿಯಾಚೆಗೆ ಮೂರೋ ನಾಲ್ಕೋ ದೀಪಗಳು ಮಿನುಗುತ್ತಿದ್ದ ನಗರವನ್ನೂ ಚೆನ್ನಾಗಿ ನೋಡಿದೆ. ರಾಕ್ಷಸಾಕಾ ರದ ದಿಮ್ಮಿ–ತೆಪ್ಪವೊಂದು ಮೇಲು ನದಿಯಲ್ಲಿ, ಸುಮಾರು ಒಂದು ಮೈಲಿಯೊಳಗೆ, ತೇಲಿಬರುತ್ತಿತ್ತು ; ಅದರ ಮೇಲೆ ಒಂದು ಲಾಂದ್ರದ ಬೆಳಕಿತ್ತು. ಅದು ಕೆಳಗೆ ಜಾರಿ

ಬರುವುದನ್ನು ನಾನು ನಿಂತು ನೋಡುತ್ತಿದ್ದೆ. ಅದು ಇನ್ನೇನು ನನ್ನನ್ನು ಹಿಂದೆ ಹಾಕುತ್ತಿದೆ ಎನ್ನುವಾಗ, ಒಬ್ಬ ಮನುಷ್ಯ "ಹಿಂಭಾಗದ ಹುಟ್ಟುಗಳನ್ನು ಹಿಡಿದವರು ತೆಪ್ಪದ ಮೂತಿಯನ್ನು ಬಲಗಡೆಗೆ ಎತ್ತಬೇಕು" ಎಂದು ಹೇಳಿದುದು ನನಗೆ ಕೇಳಿಸಿತು. ಅವನು ನನ್ನ ಪಕ್ಕದಲ್ಲಿಯೇ ನಿಂತು ಆಡಿದ್ದರೆ ಹೇಗೋ ಹಾಗೆ ನಾನು ಸ್ಪಷ್ಟವಾಗಿ ಆಲಿಸಿದೆ.

ಈಗ ಬಾನು ತುಸು ಬೂದಿ ಬಣ್ಣಕ್ಕೆ ತಿರುಗಿತ್ತು ; ನಾನು ಕಾಡಿನ ಕಡೆಗೆ ಇಳಿದು ನಡೆದೆ, ಬೆಳಗಿನ ಉಪಹಾರಕ್ಕೆ ಸ್ವಲ್ಪ ಮುನ್ನ ಒಂದು ಗಳಿಗೆ ಕಣ್ಣುಮುಚ್ಚೋಣವೆಂದು ನೆಲದ ಮೇಲೆ ಮಲಗಿದೆ

## ೮

ನನಗೆ ಎಚ್ಚರವಾದಾಗ ಸೂರ್ಯ ಬಲು ಎತ್ತರಕ್ಕೆ ಏರಿದ್ದ, ಎಂಟು ಗಂಟೆಯಾಗಿತ್ತೆಂದು ನನ್ನೆಣಿಕೆ. ನಾನು ಏನನ್ನೋ ಯೋಚನೆಮಾಡುತ್ತಾ ವಿಶ್ರಾಂತಿಯನ್ನು ಅನುಭವಿಸುತ್ತಾ, ಸುಖಿಯಾಗಿ, ತೃಪ್ತನಾಗಿ ತಣ್ಣೆಳಲಿನಲ್ಲಿ ಹುಲ್ಲಿನ ಮೇಲೆ ಮಲಗಿದೆ. ಒಂದೆರಡು ಕಿಂಡಿಗಳ ಮೂಲಕ ನಾನು ಸೂರ್ಯನನ್ನು ದರ್ಶಿಸಬಹುದಾಗಿದ್ದರೂ, ಆ ಸ್ಥಳ ಬಹುಮಟ್ಟಿಗೆ ಉನ್ನತವೃಕ್ಷಮಯವಾಗಿತ್ತು, ಮಬ್ಬುಗತ್ತಲೆಯಿಂದ ಆವೃತವಾಗಿತ್ತು. ಎಲೆಗಳ ನಡುವೆ ತೂರಿಬಂದ ಬಿಸಿಲಿನಿಂದ ಅಲ್ಲಲ್ಲಿ ನೆಲದ ಮೇಲೆ ಬೆಳಕಿನ ಕಲೆಗಳು ರಚಿತವಾಗಿದ್ದವು ; ಆ ಕಲೆಗಳು ಕೆಲವೊಮ್ಮೆ ಅದಲುಬದಲಾಗುತ್ತಿದ್ದವು ; ಅಲ್ಲಿಷ್ಟು ಮೆಲ ಗಾಳಿ ಇರುವುದನ್ನು ಸೂಚಿಸುತ್ತಿದ್ದವು. ಕೆಲವಾರು ಅಳಿಲುಗಳು ಕೊಂಬೆಯ ಮೇಲೆ ಕುಳಿತು ನನ್ನನ್ನು ನೋಡಿ ಬಲು ಸ್ನೇಹದಿಂದ ಗಡಬಡಿಸುತ್ತಿದ್ದವು.

ನಾನು ಬಲು ಸೋಮಾರಿಯಾಗಿದ್ದೆ, ಮೇಲೆ ಏಳುವುದೂ ಉಪಾಹಾರವನು ಬೇಯಿಸಿಕೊಳ್ಳುವುದೂ ನನಗೆ ಬೇಡವಾಗಿತ್ತು. ನನಗೆ ಮತ್ತೆ ತೂಕಡಿಕೆ ; ಆಗ ಎಲ್ಲೋ ನದಿಯ ಮೇಲಿಂದ "ಬೂಮ್" ಎಂಬ ಗಂಭೀರ ಧ್ವನಿ ಕಿವಿಗೆ ಬಿದ್ದಂತಾಯಿತು. ನಾನು ತಟ್ಟನೆ ಎದ್ದು ಹೋಗಿ ನನ್ನ ಮೊಣಕೈಯ ಮೇಲೆ ಮುಖವಿಟ್ಟುಕೊಂಡು ಆಲಿಸಿದೆ, ಮೇಲೆಗರಿ ನಿಂತು ಎಲೆಗಳ ನಡುವಣ ಕಿಂಡಿಯಿಂದ ಸುತ್ತಲೂ ನೋಡಿದೆ ; ಕಡುವಿಗೆ ಕೊಂಚಮುಂದೆ ನದಿಯ ಮೇಲ್ಭಾಗದಲ್ಲಿ ಹೊಗೆಯ ಗೊಂಚಲೊಂದು ನೀರಮೇಲೆ ಬಿದ್ದಿರುವುದನ್ನು ಕಂಡೆ. ಅಲ್ಲೊಂದು ಜನಭರಿತ ಹರಿಗೋಲು ತೇಲಿಬರುತ್ತಿತ್ತು. ಹರಿಗೋಲಿನ ಪಕ್ಕದಿಂದ ಬಿಳಿಯ ಹೊಗೆ ಚಿಮ್ಮುತ್ತಿರುವುದು ಕಂಡುಬಂತು ; 'ಬೂಮ್'

ಪರಿಸ್ಥಿತಿ ಏನೆಂಬುದು ನನಗೆ ಈಗ ತಿಳಿಯಿತು. ನನ್ನ ಹೆಣವೇನಾದರೂ ಮುಳುಗಿಕೊಂಡಿದ್ದರೆ ಅದನ್ನು ಮೇಲಕ್ಕೆ ತರಲು ಅವರು ಗುಂಡುಹಾರಿಸುತ್ತಿದ್ದರು.

ನನಗೆ ತುಂಬ ಹಸಿವಾಗಿತ್ತು ; ಅವರು ಹೊಗೆಯನ್ನು ಕಂಡುಬಿಡುತ್ತಿದ್ದರಾದ್ದರಿಂದ, ಬೆಂಕಿಯನ್ನು ಹೊತ್ತಿಸುವುದು ನನಗೆ ಕ್ಷೇಮವೆನಿಸಲಿಲ್ಲ. ಅದಕ್ಕಾಗಿ ನಾನು ಅಲ್ಲೇ ಸುಮ್ಮನೆ ಕುಳಿತೆ, ಫಿರಂಗಿಯ ಹೊಗೆಯನ್ನೇ ಗಮನಿಸುತ್ತಿದ್ದೆ, ಬೂಮ್ ಶಬ್ದವನ್ನೇ ಆಲಿಸುತ್ತಿದ್ದೆ. ನದಿ ಆ ಬಳಿ ಒಂದು ಮೈಲಿಯಗಲವಿತ್ತು ; ಬೇಸಗೆಯ ಬೆಳಗಿನಲ್ಲಿ ಅದು ಎಂದೂ ಸುಂದರವಾಗಿ ಕಾಣಿಸುತ್ತದೆ. ನನ್ನ ಉಳಿಕೆಗಳಿಗಾಗಿ ಅವರು ಬೇಟೆಯಾಡುತ್ತಿರುವುದನ್ನು ನೋಡುತ್ತಾ, ಸುಖವಾಗಿ ಕಾಲಕಳೆದೆ ; ಆಗ ತಿನ್ನಲು ಏನಾದರೂ ಒಂದು ದೊರಿದ್ದರೆ ಎಷ್ಟೋ ಚೆನ್ನಾಗಿತ್ತು, ರೊಟ್ಟಿಯ ಹಲ್ಲೆಗಳ ನಡುವೆ ಪಾದರಸವನ್ನು ಇರಿಸಿ ತೇಲಿಬಿಡುತ್ತಾರೆಂದೂ, ಅವು ನೇರವಾಗಿ ಮುಳುಗಿರುವ ಹೆಣದ ಹತ್ತಿರದಲ್ಲೇ ನಿಂತು ಬಿಡುವುದೆಂದೂ ರೂಢಿಯಲ್ಲಿರುವ ಮಾತು ನನ್ನ ನೆನಪಿಗೆ ಬಂತು, ಆದ್ದರಿಂದ ನಾನು ಜಾಗರೂಕತೆಯಿಂದ ಸುತ್ತಲೂ ನೋಡುತ್ತಾ ಇರುತ್ತೇನೆ, ಆ ಪದಾರ್ಥವೇನಾದರೂ ನನ್ನ ಬಳಿಗೆ ತೇಲುತ್ತ ಬಂದರೆ, ನಾನು ಅವರಿಗೆ ಕೈಕೊಡುತ್ತೇನೆ ಎಂದುಕೊಂಡೆ, ನನ್ನ ಅದೃಷ್ಟದಲ್ಲಿ ಏನಿದೆಯೋ ಎಂಬುದನ್ನು ಪರೀಕ್ಷಿಸುವ ಸಲುವಾಗಿ ನಾನು ದ್ವೀಪದ ಇಲ್ಲಿ ನಾಯ್ಸ್ ಕಡೆಯ ಅಂಚಿಗೆ ನನ್ನ ನೆಲೆಯನ್ನು ಬದಲಾಯಿಸಿದೆ, ನನ್ನ ನಿರೀಕ್ಷೆ ವಿಫಲವಾಗಲಿಲ್ಲ. ಒಂದು ದೊಡ್ಡ ಜೋಡಿ ರೊಟ್ಟಿ ನನ್ನ ಕಡೆಗೆ ತೇಲಿ ಬಂತು, ಒಂದು ಉದ್ದವಾದ ಕೋಲಿನಿಂದ ನಾನು ಅದನ್ನು ಇನ್ನೇನು ಹಿಡಿದಿದ್ದೆ ; ಆದರೆ ನನ್ನ ಕಾಲು ಜಾರಿತು, ಅದು ದೂರ ದೂರ ಸರಿಯಿತು. ನಾನಂತೂ ದಡಕ್ಕೆ ಅತಿ ಹತ್ತಿರದಲ್ಲಿ ಪ್ರವಾಹ ಬರುವ ಸ್ಥಳದಲ್ಲೇ ಇದ್ದೆ—ನನಗದು ಸಾಕಷ್ಟು ತಿಳಿದಿತ್ತು. ಸ್ವಲ್ಪ ಹೊತ್ತಾದ ಮೇಲೆ ಇನ್ನೊಂದು ರೊಟ್ಟಿ ತೇಲಿ ಬಂತು ; ಈ ಸಲ ನಾನು ಗೆದ್ದೆ. ನಾನು ಅದರಲ್ಲಿದ್ದ ಬಿರಡೆಯನ್ನು ಕಿತ್ತುಹಾಕಿದೆ, ಒಳಗಿದ್ದ ಪಾದರಸದ ಚಿಕ್ಕ ಗುಂಡನ್ನು ಆಚೆಗೆಸೆದೆ. ರೊಟ್ಟಿಗೆ ಬಾಯಿ ಹಾಕಿದೆ. ಅದು ಪರವಾಯಿಲ್ಲ ರೊಟ್ಟಿ ; ದೊಡ್ಡ ಮನುಷ್ಯರು ತಿನ್ನುವಂಥದು—ನಿಮ್ಮಂಥ ಕೆಳವರ್ಗದವರು ತಿನ್ನುವ ಬಡರೊಟ್ಟಿಯಲ್ಲ.

ಎಲೆಗಳ ಮರೆಯಲ್ಲಿ ನನಗೊಂದು ಅಣಿಯಾದ ಸ್ಥಳ ಸಿಕ್ಕಿತು, ರೊಟ್ಟಿಯನ್ನು ಅಗಿಯುತ್ತಾ ತುಂಬಾ ತೃಪ್ತಿಯಿಂದ ಹರಿಗೋಲನ್ನು ವೀಕ್ಷಿಸುತ್ತಾ ಮರದ ದಿಮ್ಮಿಯೊಂದರ ಮೇಲೆ ಕುಳಿತೆ. ಆಗ ನನಗೆ ಯಾವುದೋ ವಿಷಯ ಹೊಳೆಯಿತು. ಆ ವಿಧವೆಯೋ, ಪಾದರಿಯೋ ಇಲ್ಲವೇ ಇನ್ಯಾರೋ ಈ ರೊಟ್ಟಿ ನನ್ನ ಕೈಸೇರಲೆಂದು ಪ್ರಾರ್ಥಿಸಿರಬೇಕು, ರೊಟ್ಟಿ ಇಲ್ಲಿಗೆ ಬಂದು ಅದನ್ನು ನೆರವೇರಿಸಿದೆ ಎಂದು ನಾನೀಗ ಭಾವಿಸಬೇಕು ಎಂದುಕೊಂಡೆ. ಅದರಲ್ಲಿ ಸ್ವಲ್ಪ ಮಹಿಮೆ ಇರಬೇಕು ಎನ್ನುವುದರಲ್ಲಿ ಸಂದೇಹವೇ ಇಲ್ಲ. ಅಂದರೆ, ಆ ವಿಧವೆಯಂಥ, ಅಥವಾ ಪಾದರಿಯಂಥ ಯಾರಾದರೂ ಪ್ರಾರ್ಥನೆ ಸಲ್ಲಿಸಿದರೆ ಅದರಲ್ಲಿ ಸ್ವಲ್ಪ ಮಹಿಮೆ ಇರುತ್ತದೆಯೇ ಹೊರತು, ನಾನು

ಪ್ರಾರ್ಥನೆ ಮಾಡಿದರೆ ಏನೂ ಆಗುವುದಿಲ್ಲ. ಆ ಯೋಗ್ಯ ಜನರಿಗೆ ಮಾತ್ರ ಅದು ಫಲಿಸುವುದಿಲ್ಲವೆಂದು ನನ್ನೆಣಿಕೆ.

ನಾನು ಹೊಗೆ ಕೊಳವೆಗೆ ಬೆಂಕಿಯನ್ನು ಮುಟ್ಟಿಸಿದೆ. ನಿಧಾನವಾಗಿ ಹೊಗೆಯೆಳೆದೆ, ವೀಕ್ಷಿಸುತ್ತಲೇ. ಹರಿಗೋಲು ಪ್ರವಾಹವನ್ನನುಸರಿಸಿ ತೇಲುತ್ತಿತ್ತು, ರೊಟ್ಟಿ ಬಂದ ಕಡೆಗೇ ಹರಿಗೋಲೂ ಹಿಂದೆಯೇ ಬರಲಿರುವುದರಿಂದ, ಅದು ಬಂದಾಗ ಒಳಗೆ ಯಾರಿದ್ದಾರೆ ಎಂಬುದನ್ನು ನೋಡಿ ತಿಳಿಯಲು ನನಗೆ ಅವಕಾಶವಿರುತ್ತದೆ ಅಂದುಕೊಂಡೆ. ನಾನಿರುವೆಡೆಗೆ ಅದು ಸಾಕಷ್ಟು ಹತ್ತಿರ ಬಂದಾಗ ನಾನು ನನ್ನ ಹೊಗೆ ಕೊಳವೆಯನ್ನಾರಿಸಿ ದಡದ ಒಂದು ಚಿಕ್ಕ ತೆರವಿನಲ್ಲಿದ್ದ ದಿಮ್ಮಿಯೊಂದರ ಹಿಂದೆ—ಆ ಬಳಿಯಲ್ಲೇ ನನಗೆ ರೊಟ್ಟಿ ಲಭಿಸಿದ ಸ್ಥಳವಿತ್ತು—ಮಲಗಿ ನೋಡುತ್ತಿದ್ದೆ. ಎಲ್ಲಿ ದಿಮ್ಮಿ ಕವಲೊಡೆದಿತ್ತೋ ಆ ಮೂಲಕ ನಾನು ಇಣಿಕಿ ನೋಡುವುದು ಸಾಧ್ಯವಿತ್ತು.

ಆಮೇಲಾಮೇಲೆ ಅದು ಬಂತು; ಅದು ದಡಕ್ಕೆ ಎಷ್ಟು ಹತ್ತಿರ ಬಂತು ಎಂದರೆ ಕೇವಲ ಒಂದು ಹಲಗೆಯನ್ನು ಚಾಚಿ ದಡದ ಮೇಲಕ್ಕೆ ಅವರು ಬರಬಹುದಾಗಿತ್ತು. ಆ ಹರಿಗೋಲಿನಲ್ಲಿ ಸುಮಾರು ಎಲ್ಲರೂ ಇದ್ದರು:—ಅಪ್ಪ; ನ್ಯಾಯಾಧೀಶ ಥ್ಯಾಚೆರ್ ಮತ್ತು ಬೆಸ್ಸಿ ಥ್ಯಾಚೆರ್; ಜೋ ಹಾರ್ಪರ್; ಟಾಮ್ ಸಾಯರ್ ಮತ್ತು ಅವನ ಮುದಿ ಅತ್ತೆ ಪಾಲಿ; ಸಿಡ್ ಮತ್ತು ಮೇರಿ. ಇನ್ನೂ ಹಲವರಿದ್ದರು. ಎಲ್ಲರೂ ಮಾತಾಡುತ್ತಿದ್ದುದು ಕೊಲೆಯ ವಿಷಯವನ್ನೇ. ಆದರೆ ಹಡಗಿನ ಯಜಮಾನ ನಡುವೆ ಬಾಯಿ ಹಾಕಿದ:

"ಈಗ ಹುಷಾರಾಗಿ ನೋಡಿ. ಪ್ರವಾಹ ಇಲ್ಲಿಗೆ ಅತಿ ಸಮೀಪದಲ್ಲಿ ಮೊದಲಾಗುತ್ತದೆ. ಪ್ರಾಯಶಃ ಅದು ಅವನನ್ನು ದಡದ ಮೇಲೆಸೆದು ಹೋಗಿರಬೇಕು. ಅವನು ನೀರಂಚಿನ ಕುರುಚಲು ಗಿಡಗಳಲ್ಲಿ ಸಿಕ್ಕಿಕೊಂಡಿರಬೇಕು. ಹಾಗೆಂದೇ ನನ್ನೆಣಿಕೆ" ಎಂದನು.

ನಾನು ಹಾಗೆ ಎಣಿಸಲಿಲ್ಲ. ಎಲ್ಲರೂ ಗುಂಪು ಸೇರಿದರು. ನನ್ನ ಮುಖಕ್ಕೆ ನೇರ ಅಡ್ಡ ಸಲಾಕೆಯ ಮೇಲೆ ಶಕ್ತಿ ಮೀರಿ ಬಗ್ಗಿದರು ಅಲುಗಾಡದೆ ತಮ್ಮ ಕಣ್ಬಲವನ್ನೆಲ್ಲ ಹೂಡಿಕೊಂಡು ನೋಡುತ್ತಿದ್ದರು. ನಾನು ಅವರನ್ನು ಸ್ಪಷ್ಟವಾಗಿ ನೋಡುತ್ತಿದ್ದೆ: ಅವರು ನನ್ನನ್ನು ನೋಡಲಾಗುತ್ತಿರಲಿಲ್ಲ. ಆ ಮೇಲೆ ಯಜಮಾನ ಎಚ್ಚರಿಕೆ ಕೊಟ್ಟನು:—

"ದೂರ ನಿಲ್ಲಿ." ಫಿರಂಗಿ ಅಸಾಧ್ಯ ರಭಸದಿಂದ ನೇರ ನನ್ನೆದುರಿಗೇ ಆರ್ಭಟಿಸಿತು; ಆ ಶಬ್ದದಿಂದ ನನ್ನ ಕಿವಿ ಕಿವುಡಾಯಿತು; ಆ ಹೊಗೆಯಿಂದ ನನ್ನ ಕಣ್ಣು ಇನ್ನೇನ ಕುರುಡಾಗಿಹೋಯಿತು; ಹೋದೆ ನಾನು ಎಂದುಕೊಂಡೆ. ಅವರೇನಾದರೂ ಅದರೊಳಗೆ ಗುಂಡಿಟ್ಟು ಹೊಡೆದಿದ್ದರೆ, ಅವರು ಯಾವ ಹೆಣಕ್ಕಾಗಿ ಹುಡುಕುತ್ತಿದ್ದರೋ

ಅವೇ ಅವರಿಗೆ ಸಿಕ್ಕುತ್ತಿತ್ತು ಅಂದುಕೊಂಡೆ. ನನಗೆ ಯಾವ ಅಪಾಯವೂ ಆಗದಿದ್ದು ದೇನೋ ಒಳ್ಳೆಯದೇ ಆಯಿತು ಎಂದು ನನ್ನ ಪುಣ್ಯಕ್ಕೆ ನಾನು ಕೈ ಮುಗಿದೆ. ಹರಿಗೋಲು ತೇಲುತ್ತ ಮುಂದೆ ಹೋಯಿತು; ದ್ವೀಪದ ಬೆನ್ನನ್ನು ಬಳಸಿ ಕಣ್ಮರೆ ಯಾಯಿತು. ದೂರದಿಂದ, ಅತಿದೂರದಿಂದ ಆಗೊಮ್ಮೆ ಈಗೊಮ್ಮೆ ಅದರ ಫಿರಂಗಿಯ ಗುಡುಗನ್ನು ನಾನು ಕೇಳಬಹುದಾಗಿತ್ತು, ಕ್ರಮೇಣ, ಒಂದು ಗಂಟೆಯಾದ ಮೇಲೆ, ಅದು ಇನ್ನು ಕೇಳಿಬರಲಿಲ್ಲ. ದ್ವೀಪ ಮೂರು ಮೈಲಿಯುದ್ದವಿತ್ತು. ಅವರು ಅದರ ಪಾದಕ್ಕೆ ತಲಪಿರಬಹುದೆಂದೂ ತಮ್ಮ ಪ್ರಯತ್ನವನ್ನು ಕೈಬಿಟ್ಟರೆಂದೂ ನಾನು ತೀರ್ಮಾ ನಿಸಿದೆ. ಅಷ್ಟಕ್ಕೇ ಅವರು ನಿಲ್ಲಿಸಲಿಲ್ಲ. ದ್ವೀಪದ ಪಾದವನ್ನು ಪ್ರದಕ್ಷಿಣೆ ಮಾಡಿ ಪ್ರವಾಹದ ಸೆಳವಿನಲ್ಲಿ ನುಗ್ಗಿ ಮಿಸ್ಸೌರಿಯ ಕಡೆಗಿರುವ ಕಾಲುವೆಗೆ ನುಗ್ಗಿದರು; ಹೋಗುತ್ತಾ ಆಗಾಗ ಫಿರಂಗಿಯನ್ನು ಗುಡುಗಿಸುತ್ತಿದ್ದರು. ನಾನು ಆ ಭಾಗಕ್ಕೆ ದಾಟಿ ಹೋದೆ, ಅವರನ್ನೇ ವೀಕ್ಷಿಸುತ್ತಿದ್ದೆ. ಅವರು ದ್ವೀಪಶಿರವನ್ನು ಹಿಂದುಳಿಸಿ ಹೋದಾಗ ಗುಂಡು ಹೊಡೆಯುವುದನ್ನು ನಿಲ್ಲಿಸಿದರು, ಮಿಸ್ಸೌರಿಯ ತೀರಕ್ಕೆ ಧುಮುಕಿದರು ಪಟ್ಟಣವನ್ನು ಪ್ರವೇಶಿಸಿದರು.

ನನಗೀಗ ಸರ್ವಕ್ಷೇಮವಾಯಿತು ಎಂದು ತಿಳಿದೆ. ನನ್ನನ್ನು ಹುಡುಕಿಕೊಂಡು ಇನ್ನು ಯಾರೂ ಬರುವುದಿಲ್ಲ. ಕಿರುದೋಣಿಯಲ್ಲಿದ್ದ ನನ್ನ ಬಲೆಗಳನ್ನು ಈಚೆಗೆ ಹಾಕಿದೆ; ದಟ್ಟಡವಿಯಲ್ಲಿ ಒಂದು ಸೊಗಸಾದ ಬಿಡಾರವನ್ನು ನಿರ್ಮಿಸಿಕೊಂಡೆ. ನನ್ನ ಕಂಬಳಿ ಗಳಿಂದ ಒಂದು ರೀತಿಯ ಡೇರೆಯನ್ನು ಕಟ್ಟಿದೆ; ನನ್ನ ಸಾಮಾನು ಸರಂಜಾಮು ಮಳೆಗೆ ಸಿಕ್ಕದ ಹಾಗೆ ಮಾಡಿದೆ. ಒಂದು ಕ್ಯಾಟ್–ಮೀನನ್ನು ಹಿಡಿದು, ಅದನ್ನು ಗರಗಸದಿಂದ ಕೊಯ್ದು ಬಿಚ್ಚಿ, ಹಗಲಿಳಿವ ಹೊತ್ತಿಗೆ ಶಿಬಿರಾಗ್ನಿಯನ್ನು ಹೊತ್ತಿಸಿ, ರಾತ್ರಿಯೂಟ ವನ್ನು ಮುಗಿಸಿದೆ. ಬೆಳಗಿನ ಉಪಾಹಾರಕ್ಕಾಗಿ ಕೆಲವು ಮೀನು ಹಿಡಿಯಲು ಬಲೆ ಯೊಡ್ಡಿದೆ.

ಕತ್ತಲಾದಾಗ ನಾನು ಶಿಬಿರಾಗ್ನಿಯ ಮುಂದೆ ಹೊಗೆ ಸೇದುತ್ತಾ ಕುಳಿತೆ, ಎಲ್ಲವೂ ಹಾಯೆನ್ನಿಸುವ ಪೂರ್ಣ ತೃಪ್ತಿಯಿಂದ. ಆದರೆ ಕ್ರಮೇಣ ಒಂಟಿತನದ ಬೇಸರ ಹುಟ್ಟಿತು ಆದ್ದರಿಂದ ನದಿಯ ದಡದ ಮೇಲೆ ಹೋಗಿ ಕುಳಿತೆ; ಅಪ್ಪಳಿಸುವ ಪ್ರವಾಹ ಧ್ವನಿಯನ್ನು ಆಲಿಸಿದೆ; ನಕ್ಷತ್ರಗಳನ್ನೂ, ಕೆಳನದಿಗೆ ಧಾವಿಸುತ್ತಿರುವ ತೇಲು ದಿಮ್ಮಿಗಳನ್ನೂ ತೆಪ್ಪಗಳನ್ನೂ ಲೆಕ್ಕ ಮಾಡಿದೆ. ಆಮೇಲೆ ಒಂದು ಹಾಸುಗೆಯ ಮೇಲೆ ಮಲಗಿದೆ. ನೀವು ಏಕಾಕಿಯಾಗಿರುವಾಗ ನಿಮಗೆ ಕಾಲ ಕಳೆಯಲು ಇದಕ್ಕಿಂತ ಬೇರೆ ಯಾದ ಉತ್ತಮ ಮಾರ್ಗವಿಲ್ಲ. ನೀವು ಹಾಗೆಯೇ ಉಳಿಯಲಾರಿರಿ; ನೀವು ಅದನ್ನು ಕೂಡಲೆ ದಾಟಿಕೊಳ್ಳಬೇಕು.

ಹೀಗೆಯೇ ಕಳೆದವು ಮೂರು ಹಗಲು, ಮೂರು ರಾತ್ರಿ. ವ್ಯತ್ಯಾಸವೇ ಇಲ್ಲ— ಉದ್ದಕ್ಕೂ ಅದೇ, ಅದೇ. ಮರುದಿನ ನಾನು ದ್ವೀಪದೊಳಗೆ ಏನಿದೆ ಎಂಬುದನ್ನು

ಕಂಡು ಹಿಡಿಯಲು ಹೊರಟೆ. ಅದರ ಯಜಮಾನನಾಗಿದ್ದೆ ನಾನು. ಒಂದು ರೀತಿಯಲ್ಲಿ, ಅದು ನನಗೆ ಸೇರಿದ ವಸ್ತುವಾಗಿತ್ತು. ಅದರ ವಿವರಗಳನ್ನೆಲ್ಲ ನಾನು ತಿಳಿಯಲಪೇಕ್ಷಿಸಿದೆ; ಕಾಲಯಾಪನೆಯೇ ನನ್ನ ಮುಖ್ಯೋದ್ದೇಶವಾಗಿತ್ತು. ಅಲ್ಲಿ ಕಳಿತ ಒಳ್ಳೆಯ ಸ್ಟ್ರಾಬೆರಿಗಳೂ, ಹಸಿರು ಬೇಸಗೆ ದ್ರಾಕ್ಷಿಗಳು, ಹಸಿರುರ್ಯಾಸ್ಪ ಬೆರಿಗಳೂ ಯಥೇಚ್ಛವಾಗಿರುವುದನ್ನು ಕಂಡುಹಿಡಿದೆ. ಹಸಿರು ಬ್ಲ್ಯಾಕ್ ಬೆರಿಗಳು ಈಗ ತಾನೆ ಕಾಣಿಸಿ ಕೊಳ್ಳುತ್ತಿದ್ದವು. ಕ್ರಮೇಣ ಅವೆಲ್ಲವೂ ಕೈಗೆ ಬರುವುದೆಂದುಕೊಂಡೆ.

ಸರಿ, ನಾನು ಕಾಡ ಕಣಿವೆಗಳಲ್ಲಿ ಹುಚ್ಚಾ ಬಟ್ಟೆ ಅಲೆಯುತ್ತ ನಡೆದೆ; ದ್ವೀಪದ ಪಾದಕ್ಕೆ ಇನ್ನೇನು ದೂರವಿಲ್ಲ ಎನ್ನುವ ವರೆಗೆ ಹೋಗಿದ್ದೆ. ನನ್ನ ಕೈಯಲ್ಲಿ ಬಂದೂಕ ವಿತ್ತು; ಆದರೆ ನಾನು ಯಾವುದನ್ನೂ ಗುಂಡಿಟ್ಟು ಕೊಂದಿರಲಿಲ್ಲ. ಅದಿದ್ದುದು ನನ್ನ ರಕ್ಷಣೆಗಾಗಿ ಮಾತ್ರ. ನನ್ನ ಬಿಡದಿಯ ಹತ್ತಿರವೇ ಕೆಲವು ಪ್ರಾಣಿಗಳನ್ನು ಕೊಂದ ರಾಯಿತು ಅಂದುಕೊಂಡೆ. ಇಷ್ಟು ಹೊತ್ತಿಗೆ ನಾನು ಒಂದು ಭಾರಿ ಹಾವನ್ನು ತುಳಿಯು ವುದರಲ್ಲಿದ್ದೆ; ಅದು ಹುಲ್ಲನ್ನೂ ಹೂಗಳನ್ನೂ ಅಲುಗಿಸುತ್ತಾ ಹರಿದು ಹೋಯಿತು. ಗುಂಡಿಟ್ಟು ಅದನ್ನು ಕೊಲ್ಲಲು ಹವಣಿಸಿ ಹಿಂಬಾಲಿಸಿದೆ. ಹಾಗೆಯೇ ದಾರಿ ಬಿಡಿಸಿಕೊಂಡು ಹೋಗುತ್ತಾ ನಾನು, ಇನ್ನೂ ಹೊಗೆಯಾಡುತ್ತಿದ್ದ ಶಿಬಿರಾಗ್ನಿಯೊಂದರ ಬೂದಿಯ ಮೇಲೆ ಅರಿಯದೆಯೇ ಕಾಲಿಟ್ಟೆ.

ನನ್ನ ಹೃದಯವೇ ನೆಲೆಗೆಟ್ಟು ಹಾರಿತು. ಅದನ್ನು ಇನ್ನಷ್ಟು ಪರೀಕ್ಷಿಸಲು ನಾನು ಕಾಯಲಿಲ್ಲ; ನನ್ನ ಬಂದೂಕವನ್ನು ಕೆಳಮುಖಮಾಡಿ ನನಗೆ ಸಾಧ್ಯವಾದಷ್ಟು ಬೇಗ ಮೆಟ್ಟುಂಗಾಲಿಡುತ್ತಾ ಹಿಂದಕ್ಕೆ ನುಸುಳಿದೆ. ಈಗೊಮ್ಮೆ ನಿಂತು ಕ್ಷಣಕಾಲ ಆಲಿಸಿದೆ, ಎಲೆಮರೆಯಲ್ಲಿ. ಉಳಿದ ಧ್ವನಿಯೇನೂ ನನ್ನ ಕಿವಿಗೆ ಬೀಳದಷ್ಟು ಗಟ್ಟಿಯಾಗಿ ನನ್ನ ಉಸಿರೇ ಹೊಯ್ದು ಕೊಳ್ಳುತ್ತಿತ್ತು. ನಾನು ಇನ್ನೊಂದಷ್ಟು ದೂರ ಮರೆಯಲ್ಲಿ ನಡೆದೆ, ಮತ್ತೆ ಆಲಿಸಿದೆ; ಉದ್ದಕ್ಕೂ ಹೀಗೆಯೇ, ಹೀಗೆಯೇ. ಒಂದು ಮರದ ಮೋಟು ಕಣ್ಣಿಗೆ ಬಿದ್ದರೆ ಅದೊಬ್ಬ ಮನುಷ್ಯನೆಂದು ತಪ್ಪು ತಿಳಿಯುತ್ತಿದ್ದೆ. ಒಂದು ಕಡ್ಡಿಯನ್ನು ನಾನು ತುಳಿದು ಮುರಿದರೆ, ಯಾರೋ ನನ್ನ ಉಸಿರನ್ನು ಎರಡು ತುಂಡಾಗಿ ಕಡಿದ ರೆಂದೂ, ನನಗೆ ಅದರಲ್ಲಿ ಅರ್ಧಮಾತ್ರ–ಅದರಲ್ಲಿಯೂ ಚಿಕ್ಕ ಅರ್ಧ—ಸಿಕ್ಕಿದಂತೆಯೂ ನನಗೆ ಅನುಭವವಾಗುತ್ತಿತ್ತು.

ನಾನು ಶಿಬಿರಕ್ಕೆ ಹಿಂದಿರುಗಿದಾಗ ನನ್ನ ಮನಸ್ಸು ಸಿಡಿಮಿಡಿ ಗೊಂಡಿರಲಿಲ್ಲ, ನನ್ನ ಗಂಟಲಲ್ಲಿ ಹೆಚ್ಚು ಮರಳು ಬಿದ್ದಿರಲಿಲ್ಲ. ಆದರೂ ಇದು ಎಚ್ಚರಗೆಟ್ಟು ಅಲೆಯುವ ಕಾಲವಲ್ಲ ಎಂದುಕೊಂಡೆ ಆದ್ದರಿಂದ ನಾನು ಬಲೆಗಳೆಲ್ಲವನ್ನೂ, ಅವು ಯಾರ ಕಣ್ಣಿಗೂ ಬೀಳದಿರಲೆಂದು, ನನ್ನ ಕಿರುದೋಣಿಗೆ ಸಾಗಿಸಿದೆ. ಬೆಂಕಿಯನ್ನು ಆರಿಸಿದೆ; ಇದು ಕಳೆದ ವರುಷದ ಶಿಬಿರದಂತೆ ಕಾಣುವಹಾಗೆ, ಬೂದಿಯನ್ನು ಅತ್ತಿತ್ತ ಎರಚಿದೆ. ಒಂದು ಮರವನ್ನು ಹತ್ತಿ ಕುಳಿತೆ.

ಎರಡು ಗಂಟೆಗಳಕಾಲ ನಾನು ಮರದ ಮೇಲಿದ್ದೆನೆಂದು ನನ್ನೆಣಿಕೆ. ನನಗೆ ಏನೂ ಗೋಚರವಾಗಲಿಲ್ಲ, ನನ್ನ ಕಿವಿಗೆ ಯಾವ ಶಬ್ದವೂ ಬೀಳಲಿಲ್ಲ, ಒಂದು ಸಾವಿರ ವಸ್ತುಗಳನ್ನು ಆಲಿಸಿದೆ, ಕಂಡೆ ಎಂದು ಭಾವಿಸಿದೆ, ಅಷ್ಟೆ. ನಿರಂತರವೂ ನಾನಲ್ಲಿಯೇ ಇದ್ದುಬಿಡುವುದಾಗದು ; ಆದ್ದರಿಂದ ಕೊನೆಗೆ ಕೆಳಗಿಳಿದೆ, ದಟ್ಟಡವಿಯಲ್ಲಿಯೇ ಉಳಿದುಕೊಂಡು ಅಷ್ಟು ಕಾಲವೂ ಸುತ್ತಲೂ ಕಣ್ಣು ಹಾಯಿಸುತ್ತಾ ಇದ್ದೆ. ಬೆರಿಗಳೂ, ಬೆಳಗಿನ ಉಪಾಹಾರದ ಒಂದಿಷ್ಟು ತಂಗಳೂ ನಾನು ತಿನ್ನಲು ಸಿಕ್ಕಬಹುದಾದ ಸರ್ವಸ್ವವಾಗಿತ್ತು.

ರಾತ್ರಿಯ ಹೊತ್ತಿಗೆ ನನಗೆ ತುಂಬಾ ಹಸಿವಾಯಿತು. ಕತ್ತಲಾಗಿದ್ದ ಒಂದು ಅನುಕೂಲ ಸಮಯದಲ್ಲಿ ಚಂದ್ರೋದಯಕ್ಕೆ ಮುನ್ನವೇ ನಾನು ನದಿ ತೀರದಿಂದ ಹೊರಬಿದ್ದು ನನ್ನ ಕಿರುದೋಣಿಯನ್ನು ಇಲ್ಲಿನಾಯ್ಸ್ ದಡಕ್ಕೆ ಮೀಟಿಕೊಂಡು ಹೋದೆ—ಸುಮಾರು ಕಾಲು ಮೈಲಿ, ಅಷ್ಟೆ. ಕಾಡಿಗೆ ಹೋದೆ ; ರಾತ್ರಿಯೂಟಕ್ಕಾಗಿ ಅಡುಗೆ-ಮಾಡಿದೆ. ಇಲ್ಲೇ ರಾತ್ರಿಯನ್ನು ಕಳೆಯುವೆನೆಂದು ನಾನು ಇನ್ನೇನು ನಿರ್ಧರಿಸಬೇಕು, ಅಷ್ಟು ಹೊತ್ತಿಗೆ 'ಪ್ಲಂಕೆಟಿ-ಪ್ಲಂಕ್', 'ಪ್ಲಂಕೆಟಿ-ಪ್ಲಂಕ್', ಎಂಬ ಧ್ವನಿ ಕೇಳಿಸಿತು. ಕುದುರೆಗಳು ಬರುತ್ತಿವೆ ಎಂದು ಕೊಂಡೆ. ತರುವಾಯ ಜನರು ಮಾತಾಡಿಕೊಳ್ಳುವುದು ಕೇಳಿಸಿತು. ಎಲ್ಲವನ್ನೂ ಆದಷ್ಟು ಬೇಗ ನನ್ನ ಕಿರುದೋಣಿಗೆ ಸಾಗಿಸಿದೆ ; ನನಗೆ ಪತ್ತೆ ಹಚ್ಚಲು ಸಾಧ್ಯವಾದದ್ದನ್ನು ನೋಡಿ ಬಿಡೋಣವೆಂದು ಕಾಡಿನಲ್ಲಿ, ಸುಳುವು ಕೊಡದೆ, ಚಲಿಸಿದೆ. ಅನತಿದೂರ ಹೋಗುವುದರೊಳಗೇ ನನಗೆ ಮನುಷ್ಯನೊಬ್ಬನ ಧ್ವನಿ ಕೇಳಿಬಂತು:

"ಒಂದು ಅನುಕೂಲವಾದ ಸ್ಥಳ ನಮಗೆ ಸಿಕ್ಕುವುದಾದರೆ, ನಾವು ಇಲ್ಲಿಯೇ ತಂಗುವುದು ಬಲು ಒಳ್ಳೆಯದು ; ಕುದುರೆಗಳು ತುಂಬಾ ಸುಸ್ತಾಗಿವೆ. ಸ್ಥಳ ಪರೀಕ್ಷೆ ಮಾಡೋಣ"

ನಾನು ಇನ್ನು ತಡಮಾಡಲಿಲ್ಲ ; ಅಲ್ಲಿಂದ ಹಾರಿ ನನ್ನ ಕಿರುದೋಣಿಯ ಹುಟ್ಟು ಹಾಕಿ ಕೊಂಡು ದೂರ ಹೋದೆ. ಅದನ್ನು ಹಿಂದಣ ಸ್ಥಳದಲ್ಲೇ ಕಟ್ಟಿಹಾಕಿದೆ. ಕಿರುದೋಣಿಯಲ್ಲೇ ಮಲಗಿ ನಿದ್ರಿಸುವೆನು ಎಂದುಕೊಂಡೆ.

ನನಗೆ ಅಷ್ಟೇನೂ ನಿದ್ರೆ ಬರಲಿಲ್ಲ. ಪ್ರತಿಸಲ ಎಚ್ಚರವಾದಾಗಲೂ ಯಾರೋ ನನ್ನ ಕುತ್ತಿಗೆಹಿಡಿದೆತ್ತಿದಂತೆ ನನಗೆತೋರುತ್ತಿತ್ತು. ನನಗೆನಿದ್ದೆಯಿಂದ ಒಳ್ಳೆಯದೇನೂ ಆಗಲಿಲ್ಲ ಕ್ರಮೇಣ ಹೀಗೆ ಬದುಕುವುದು ನನ್ನಿಂದ ಸಾಧ್ಯವಿಲ್ಲ ಎಂದುಕೊಂಡೆ. ನನ್ನ ಜೊತೆಗೆ ಈ ದ್ವೀಪದಲ್ಲಿರುವವನು ಯಾರೆಂಬುದನ್ನು ನಾನು ಹುಡುಕಿಯೇ ಬಿಡುತ್ತೇನೆಂದು ನಿರ್ಧರಿಸಿದೆ. ಅದನ್ನು ಕಂಡು ಹಿಡಿಯುವುದು, ಇಲ್ಲವೇ ಇಲ್ಲಿಂದ ಓಡಿ ಹೋಗುವುದು —ಇವೆರಡೇ ದಾರಿ. ನನ್ನಲ್ಲಿ ಗೆಲವು ಮೂಡಿದಂತೆ ತೋರಿತು.

ಹುಟ್ಟನ್ನು ತೆಗೆದುಕೊಂಡು ತೀರದಿಂದ ಒಂದೋ ಎರಡೋ ಹೆಜ್ಜೆ ಮುಂದೆ ಸರಿದು, ನನ್ನ ಕಿರುದೋಣಿಯನ್ನು ಅಲ್ಲಿ ಉದ್ದಕ್ಕೂ ಬಿದ್ದಿದ್ದ ನೆರಳ ನಡುವೆ ತೇಲಿಬಿಟ್ಟೆ. ಚಂದ್ರ ಹೊಳೆಯುತ್ತಿದ್ದನು; ನೆರಳುಗಳಾಚೆ ಬೆಳಕು ಹಗಲಿನಷ್ಟೇ ಪ್ರಕಾಶಮಾನ ವಾಗಿತ್ತು, ಒಂದು ಗಂಟೆಯ ಕಾಲ ತಡೆಯಿಲ್ಲದೆ ಮುನ್ನಡೆದೆ. ಸಮಸ್ತವೂ ಬಂಡೆ ಯಂತೆ ನಿಶ್ಶಬ್ದವಾಗಿತ್ತು, ಗಾಢ ನಿದ್ರೆಯಲ್ಲಿತ್ತು. ಇಷ್ಟು ಹೊತ್ತಿಗೆ ನಾನು ದ್ವೀಪದ ಪಾದದ ತನಕ ಇಳಿದಿದ್ದೆ. ತುಂತುರುಗಳಿಂದ ಕೂಡಿದ ತಂಬೆಲರು ಬೀಸತೊಡಗಿತ್ತು, ಇರುಳು ಇನ್ನೇನು ಮುಗಿಯಿತು ಅದು ಹೇಳಿದಂತೆಯೇ ಇತ್ತು. ಹುಟ್ಟಿನಿಂದ ಕಿರು ದೋಣಿಯನ್ನು ತಿರುಗಿಸಿ, ಅದರ ಮೂತಿಯನ್ನು ತೀರಕ್ಕೆ ಎಳೆದುತಂದೆ. ಬಂದೂಕ ವನ್ನು ಹಿಡಿದುಕೊಂಡು ಹೊರಬಿದ್ದು ಕಾಡನ್ನು ಪ್ರವೇಶಿಸಿದೆ. ಅಲ್ಲೊಂದು ದಿಮ್ಮಿಯ ಮೇಲೆ ಕುಳಿತೆ, ಎಲೆಗಳ ತೆರೆಯನ್ನು ಸರಿಸಿ ನೋಡಿದೆ. ಚಂದ್ರನ ಕಾವಲಿನ ಸರದಿ ಮುಗಿದುದನ್ನೂ, ಕತ್ತಲೆ ನದಿಯನ್ನು ಆವರಿಸತೊಡಗುವುದನ್ನೂ ಕಂಡೆನು. ಸ್ವಲ್ಪ ಹೊತ್ತಿನಲ್ಲೇ ವೃಕ್ಷಗಳೆತ್ತರದಲ್ಲಿ ಮಾಸಲು ಬೆಳಕಿನ ಗೀಚೊಂದನ್ನು ಕಂಡೆನು; ಹಗ ಲಾಗುತ್ತಿದೆ ಎಂಬುದು ತಿಳಿಯಿತು. ಯಾವ ಬಳಿಯಲ್ಲಿ ನಾನು ಆ ಶಿಬಿರಾಗ್ನಿಯನ್ನು ದಾಟಿದ್ದೆನೋ ಅಲ್ಲಿಗೆ ನಾನು ಬಂದೂಕವನ್ನು ಹಿಡಿದು, ನಿಮಿಷಕ್ಕೋ ಎರಡು ನಿಮಿಷ ಗಳಿಗೋ ನಿಂತುನಿಂತು ಆಲಿಸುತ್ತಾ, ಧಾವಿಸಿದೆನು. ಏಕೋ ಕಾಣೆ, ಈ ಸಲ ನನಗೆ ಸುಯೋಗ ಕಾದಿರಲಿಲ್ಲ. ಸ್ಥಳವನ್ನು ಹುಡುಕುವುದು ನನ್ನಿಂದ ಆಗುವ ಕೆಲಸವೆಂದು ತೋರಲಿಲ್ಲ, ದೂರದಲ್ಲಿ ಉರಿಯುತ್ತಿರುವ ಬೆಂಕಿಯೊಂದರ ಇಣಿಕು ವೃಕ್ಷಸಂಕ್ತಿಯನ್ನು ದಾಟುತ್ತಿರುವುದು ನನಗೆ ಕ್ರಮೇಣ ಗೋಚರವಾಯಿತು. ಎಚ್ಚರಿಕೆಯಿಂದ ನಾನದರ ಬಳಿಗೆ ಮೆಲ್ಲನೆ ನಡೆದೆ. ನನ್ನ ಕಣ್ಣಿಗೆ ಅದು ಚೆನ್ನಾಗಿ ಕಾಣಿಸುವಷ್ಟು ಹತ್ತಿರಕ್ಕೆ ಬಂದಿದ್ದೆ; ಅಲ್ಲೊಬ್ಬ ಮನುಷ್ಯ ಮಲಗಿದ್ದುದನ್ನು ಕಂಡೆ. ನನಗೆ ಪ್ರಜ್ಞೆಯೇ ತಪ್ಪಿದಂತಾಯಿತು. ಅವನು ತಲೆಗೆ ಕಂಬಳಿಯನ್ನು ಬಿಗಿದುಕೊಂಡಿದ್ದನು, ಅವನ ತಲೆ ಸುಮಾರು ಬೆಂಕಿಯ ಸೆರಗನ್ನೇ ಸೋಕಿದಂತಿತ್ತು. ಅವನ ಬಳಿಗೆ ಸುಮಾರು ಆರೇ ಅಡಿ ಹತ್ತಿರದಲ್ಲಿದ್ದ ಪೊದೆಯೊಂದರ ಮರೆಯಲ್ಲಿ ಕುಳಿತು ನಾನು ಅವನನ್ನು ಎವೆಯಿಕ್ಕದೆ ನೋಡುತ್ತಿದ್ದ, ಈಗೀಗ ಬಾನು ಬಿಳುಪಿಗೆ ತಿರುಗುತ್ತಿತ್ತು. ಸ್ವಲ್ಪಹೊತ್ತಿನಲ್ಲಿ ಅವನು ಆಕಳಿಸಿದ, ಕಾಲು ನೀಡಿದ, ಕಂಬಳಿಯನ್ನು ತೆಗೆದೆಸೆದ; ಮಿಸ್ ವ್ಯಾಟ್‌ಸನ್ನಳ ಜಿಮ್ ಅವನು! ಅವನನ್ನು ಕಂಡು ನನಗೆ ಸಂತೋಷವೇ ಆಯಿತು. ನಾನು ಹೇಳಿದೆ:

"ಓಯ್, ಜಿಮ್!" ಎಂದು; ದೌಡು ಹಾಕಿದೆ.

ಅವನು ಗಾಬರಿಯಿಂದ ಎದ್ದು ಕುಳಿತು ನನ್ನನ್ನು ದುರುಗುಟ್ಟಿನೋಡಿದ; ತನ್ನ ಮೊಣಕಾಲತನಕ ಕುಸಿದು, ಕೈಜೋಡಿಸಿ ಹೇಳಿದ:

"ನನ್ನನ್ನು ಹಿಂಸಿಸಬೇಡ ನೀನು—ಬೇಡ! ನಾನು ಯಾವ ದೆವ್ವಕ್ಕೂ ಎಂದೂ ತೊಂದರೆ ಮಾಡಿಲ್ಲ. ಎಂದೂ ನನಗೆ ಸತ್ತವರಲ್ಲಿ ಬಲು ಪ್ರೀತಿ; ನನ್ನ ಕೈಲಾದ್ದನ್ನೆಲ್ಲ

ಅವರಿಗೆ ಮಾಡಿದ್ದೇನೆ. ನಿನ್ನ ನಿವಾಸಸ್ಥಾನವಾದ ನದಿಗೆ ಹೋಗಿ ಸೇರಿಕೊ ; ಹಳೆಯ ಸ್ನೇಹಿತ ಜಿಮ್ಮನ ತಂಟೆಗೆ ಬರಬೇಡ"

ನಾನು ಸತ್ತಿಲ್ಲವೆಂಬುದನ್ನು ಅವನಿಗೆ ಮನವರಿಕೆ ಮಾಡಿಕೊಡಲು ನನಗೆ ಹೆಚ್ಚು ಹೊತ್ತು ಹಿಡಿಯಲಿಲ್ಲ. ಜಿಮ್ಮನನ್ನು ಕಂಡದ್ದು ನನಗೆ ಬಲು ಸಂತೋಷವನ್ನು ತಂದಿತ್ತು. ಈಗ ನಾನು ಒಂಟಿಗನಲ್ಲ. ನಾನು ಇಲ್ಲಿದ್ದೇನೆಂದು ಅವನು ಯಾರಿಗೆ ತಿಳಿಸಿದರೂ ಭಯವಿಲ್ಲ ನನಗೆ ಎಂದೆ. ಉದ್ದಕ್ಕೂ ಮಾತಾಡಿದವನು ನಾನು ; ಅವನು ಅಲ್ಲಿ ಸುಮ್ಮನೆ ಕೇಳುತ್ತಾ ನನ್ನನ್ನು ನೋಡುತ್ತಿದ್ದನೇ ಹೊರತು, ತುಟಿ ಬಿಚ್ಚಲಿಲ್ಲ. ಆಗ ನಾನು.

"ಈಗ ಚೆನ್ನಾಗಿ ಬೆಳಕು ಹರಿದಿದೆ. ಬೆಳಗಿನ ಉಪಾಹಾರವನ್ನು ಸಿದ್ಧಪಡಿಸೋಣ; ನಿನ್ನ ಶಿಬಿರಾಗ್ನಿಯನ್ನು ಪುಟಗೊಳಿಸು" ಎಂದೆ.

"ಸ್ಟ್ರಾಬೆರಿ ಮುಂತಾದುವನ್ನು ಬೇಯಿಸಲು ಶಿಬಿರಾಗ್ನಿಯನ್ನು ಪುಟಗೊಳಿಸಿ ಏನು ಪ್ರಯೋಜನ ? ನಿನ್ನ ಬಳಿ ಬಂದೂಕವಿದೆ ತಾನೆ ? ಆದ್ದರಿಂದ ಸ್ಟ್ರಾಬೆರಿಗಿಂತ ಉತ್ತಮವಾದುದನ್ನು ನಾವು ಸಂಪಾದಿಸಬಲ್ಲೆವು,"

"ಸ್ಟ್ರಾಬೆರಿ ಮುಂತಾದುವು. ಅವುಗಳನ್ನು ತಿಂದು ಬದುಕಿದ್ದೀಯಾ?" ಎಂದೆ ನಾನು,

"ನನ್ನ ಕೈಗೆ ಇನ್ನೇನೂ ಸಿಕ್ಕಲಿಲ್ಲ" ಎಂದನವನು,

"ಏಕೆ, ನೀನು ಈ ದ್ವೀಪದಲ್ಲಿ ಎಷ್ಟು ಕಾಲದಿಂದ ಇದ್ದೀಯೆ ಜಿಮ್ ?"

"ನಿನ್ನ ಕೊಲೆ ನಡೆದ ಮರುರಾತ್ರಿಯೇ ನಾನಿಲ್ಲಿಗೆ ಬಂದೆ."

"ಏನು ಅಷ್ಟು ದಿನವೂ ?"

"ಹೌದು ; ನಿಜವಾಗಿಯೂ."

"ಆ ಬಗೆಯ ಕಸವಲ್ಲದೆ ನಿನಗೆ ಬೇರೇನೂ ತಿನ್ನಲು ಸಿಕ್ಕಲಿಲ್ಲವೆ ?"

"ಇಲ್ಲ ಸ್ವಾಮಿ, ಬೇರೇನೂ ಸಿಕ್ಕಲಿಲ್ಲ."

"ಹೌದು, ಹೊಟ್ಟೆಗಿಲ್ಲದೆ ನೀನು ತುಂಬಾ ಸೊರಗಿರಬೇಕು ಅಲ್ಲವೆ ?"

"ನಾನು ಒಂದು ಕುದುರೆಯನ್ನು ಬೇಕಾದರೂ ತಿನ್ನಬಲ್ಲೆನೆಂದು ನನ್ನೆಣಿಕೆ : ತಿನ್ನಬಲ್ಲೆ ಎಂದು ತಿಳಿದಿದ್ದೇನೆ. ಈ ದ್ವೀಪಕ್ಕೆ ನೀನು ಬಂದು ಎಷ್ಟು ಕಾಲವಾಯಿತು ?"

"ನಾನು ಕೊಲೆಯಾದೆನೆಂದು ಹೇಳುವ ರಾತ್ರಿಯಿಂದ,"

"ಇಲ್ಲ. ಏಕೆ, ನೀನು ಏನನ್ನು ತಿಂದು ಬದುಕಿದ್ದೀಯೆ ? ನಿನ್ನ ಬಳಿ ಒಂದು ಬಂದೂಕವಾದರೂ ಇದೆ. ಓ ಹೌದು, ನಿನ್ನ ಬಳಿ ಒಂದು ಬಂದೂಕವಿದೆ. ಅದು ಒಳ್ಳೆಯದೇ ಆಯಿತು. ನೀನು ಏನನ್ನಾದರೂ ಕೊಂದು ತಾ, ನಾನು ಬೆಂಕಿಯನ್ನು ಪುಟಗೊಳಿಸುತ್ತೇನೆ."

ನಾವಿಬ್ಬರೂ ಕಿರುದೋಣಿಯ ಬಳಿಗೆ ಹೋದೆವು. ಮರಗಳ ನಡುವಣ ಹಸಿರಾದ ತೆರವಿನಲ್ಲಿ ಅವನು ಬೆಂಕಿ ಹೊತ್ತಿಸುತ್ತಿದ್ದಾಗ ನಾನು ಉಣಿಸನ್ನೂ, ಹಂದಿಯ ಮಾಂಸ, ಕಾಫಿ, ಕಾಫಿ ತಂಬಿಗೆ, ಬಾಣಲೆ, ಸಕ್ಕರೆ, ತಗಡಿನ ಬಟ್ಟಲುಗಳು ಇವುಗಳನ್ನೂ ತಂದು ಅವನ ಬಳಿಯಲ್ಲಿ ಇರಿಸಿದೆ. ನೀಗ್ರೋವಿಗೆ ಪರಮಾಶ್ಚರ್ಯವಾಯಿತು. ಏಕೆಂದರೆ

ಅವನೆಣಿಕೆಯಲ್ಲಿ ಇವೆಲ್ಲವೂ ಐಂದ್ರಜಾಲಿಕ ಸೃಷ್ಟಿಯಾಗಿತ್ತು, ಇಷ್ಟರ ಜೊತೆಗೆ ನಾನೊಂದು ಭಾರಿ ಕ್ಯಾಟ್-ಮೀನನ್ನು ಹಿಡಿದು ತಂದೆ. ಜಿಮ್ ಅದನ್ನು ಚಾಕುವಿನಿಂದ ಕೊಯ್ದು ತೊಳೆದು ಕರಿದನು.

ಉಪಾಹಾರ ಸಿದ್ಧವಾದ ಮೇಲೆ ಹೊಗೆಯಾಡುತ್ತಿದ್ದ ಬಿಸಿ ಅಡುಗೆಯನ್ನು ತಿನ್ನುತ್ತಾ ನಾವು ಸುಮ್ಮನೆ ಹುಲ್ಲಿನ ಮೇಲೆ ಬಿದ್ದುಕೊಂಡೆವು.

ಆಮೇಲಾಮೇಲೆ ಜಿಮ್ ಹೇಳಿದ :

"ಇಲ್ಲಿ ಕೇಳು ಹಕ್. ಆ ಗುಡಿಸಲಿನಲ್ಲಿ ಕೊಲೆಯಾದವನು—ನೀನಲ್ಲದಿದ್ದರೆ—ಇನ್ನಾರು ?"

ನಾನು ಅವನಿಗೆ ಎಲ್ಲವನ್ನೂ ವಿವರಿಸಿದೆ. ಅದು ಬಲು ಜಾಣ ಕೆಲಸವೆಂದೂ, ನಾನು ಹೂಡಿದ ಯೋಜನೆಗಿಂತ ಉತ್ತಮವಾದುದನ್ನು ಟಾಮ್ ಸಾಯರ್ ಕೂಡ ಯೋಚಿಸಲಾರನೆಂದೂ, ಅವನು ಹೇಳಿದ. ನಾನು ಕೇಳಿದೆ ;

"ನೀನಿಲ್ಲಿಗೆ ಏಕೆ ಬಂದೆ ? ಹೇಗೆ ಬಂದೆ ?"

ಅವನ ಮನಸ್ಸಿಗೆ ಹೇಗೆ ಹೇಗೋ ಆಯಿತು. ಒಂದು ನಿಮಿಷ ಕಾಲ ಅವನು ಏನೂ ಹೇಳಲಿಲ್ಲ, ಆ ಮೇಲೆ ನುಡಿದ :

"ನಾನು ಹೇಳದಿರುವುದೇ ಮೇಲು,"

"ಏಕೆ, ಜಿಮ್ ?"

"ಹೌದು, ಕಾರಣಗಳಿವೆ. ನಾನು ನಿನಗೆ ಅದನ್ನು ಹೇಳಿದರೆ ನೀನು ನನ್ನ ಮೇಲೆ ಹಾಕುವುದಿಲ್ಲ ತಾನೆ, ಹಕ್ ? ಹೌದೆ ?"

"ಹಾಗೆ ಮಾಡಿದರೆ ನಾನು ಅಯೋಗ್ಯನಾದೇನು ಜಿಮ್."

"ನಿನ್ನನ್ನು ನಂಬುತ್ತೇನೆ, ಹಕ್. ನಾನು—ನಾನು ಪಲಾಯನ ಮಾಡಿದೆ"

"ಜಿಮ್ !"

"ಗಮನವಿರಲಿ, ನೀನು ಯಾರಿಗೂ ಹೇಳುವುದಿಲ್ಲವೆಂದಿರುವೆ. ನೀನು ಹಾಗೆ ಹೇಳಿದ್ದು ನಿನಗೂ ಗೊತ್ತಿದೆ ಹಕ್."

"ಹೌದು, ನಾನು ಹೇಳಿದೆ ; ಹಾಗೆ ಮಾಡುವುದಿಲ್ಲವೆಂದೆ, ನಾನು ಅದಕ್ಕೆ ಬದ್ಧನಾಗಿ ನಡೆಯುತ್ತೇನೆ. ಪ್ರಮಾಣವಾಗಿಯೂ, ಜನ ನನ್ನನ್ನು ಕೀಳುಮಟ್ಟದ ದಾಸತ್ವ ವಿರೋಧಿ ಎಂದಾರು ; ಮೌನ ತಾಳಿರುವುದಕ್ಕಾಗಿ ನನ್ನನ್ನು ಶಪಿಸಿಯಾರು—ಅದರಿಂದ ಏನೂ ವ್ಯತ್ಯಾಸವಾಗುವುದಿಲ್ಲ. ನಾನು ಎಂದಿಗೂ ಬಾಯಿಬಿಡುವುದಿಲ್ಲ, ಏನಾಗಲಿ ನಾನಲ್ಲಿಗೆ ಹಿಂದಿರುಗುವುದಿಲ್ಲ. ಆದ್ದರಿಂದ ಈಗ ಎಲ್ಲವನ್ನೂ ವಿವರವಾಗಿ ತಿಳಿಯೋಣ."

"ನೋಡು, ಅದು ನಡೆದದ್ದು ಹೀಗೆ. ಮುದಿಯೊಡತಿ—ಅಂದರೆ ಮಿಸ್ ವ್ಯಾಟ್‌ಸನ್—ನನ್ನನ್ನು ಸದಾಕಾಲವೂ ಚುಚ್ಚುತ್ತಿದ್ದಳು. ನನ್ನ ಬಗ್ಗೆ ಬಲು ಒರಟಾಗಿ ನಡೆದುಕೊಳ್ಳುತ್ತಿದ್ದಳು ; ಆದರೂ ನನ್ನನ್ನು ಆರ್ಲಿಯನ್ಸಿಗೆ ಕೊಂಡುಹೋಗಿ ಮಾರು

ವುದಿಲ್ಲ ಎನ್ನುತ್ತಿದ್ದಳು. ಈಚೆಗೆ ಒಬ್ಬ ನೀಗ್ರೋ ವ್ಯಾಪಾರಿ ಆಕೆಯ ಮನೆಯ ಹತ್ತಿರ ಸುಳಿದಾಡುತ್ತಿರುವುದನ್ನು ನಾನು ಕಂಡೆ; ನನ್ನ ಮನಸ್ಸು ಹೊಯ್ದುಕೊಳ್ಳತೊಡಗಿತು. ಹೀಗಿರಲು ಒಂದು ರಾತ್ರಿ ನಾನು ಬಾಗಿಲ ಬಳಿಗೆ, ಸದ್ದುಮಾಡದೆ, ಹೋಗಿ ನಿಂತು ಆಲಿಸಿದೆ; ಬಾಗಿಲನ್ನು ಬಿಗಿಯಾಗಿ ಹಾಕಿರಲಿಲ್ಲ, ಹಳೆಯೊಡತಿ ನನ್ನನ್ನು ಆರ್ಲಿಯನ್ಸಿಗೆ ಮಾರಲಿರುವುದಾಗಿ ಆ ಗಿರಾಕಿಗೆ ಹೇಳುತ್ತಿದ್ದಳು; ಆದರೂ ಹಾಗೆ ಮಾಡಲು ಇಷ್ಟವಿಲ್ಲವೆಂದೂ, ಏನೇ ಆಗಲಿ, ನನ್ನನ್ನು ಮಾರಿದರೆ ಎಂಟು ಸಾವಿರ ಡಾಲರುಗಳು ತನಗೆ ಸಿಕ್ಕುವುದಾಗಿಯೂ. ಅಷ್ಟು ದೊಡ್ಡ ಮೊತ್ತದ ಹಣವನ್ನು ಒಲ್ಲೆನೆನ್ನಲು ತನ್ನಿಂದಾಗದೆಂದೂ ತಿಳಿಸುತ್ತಿದ್ದಳು. ತಾನು ಕೆಲಸಕ್ಕೆ ಕೈಹಾಕುವುದಿಲ್ಲವೆಂದು ಆ ಗಿರಾಕಿ ಅರ್ಥಮಾಡಿಕೊಳ್ಳುವಂತೆ ಪ್ರಯತ್ನಿಸುತ್ತಿದ್ದಳು. ಉಳಿದ ಚರ್ಚೆಯನ್ನು ಕೇಳುವ ತನಕ ನಾನು ನಿಲ್ಲಲಿಲ್ಲ. ಬಲು ಬೇಗ ಅಲ್ಲಿಂದ ಓಡಿಬಂದೆ, ನೋಡು".

"ನಾನು ದೌಡುಹಾಕಿ ಗುಡ್ಡವನ್ನು ಇಳಿದು ಬಂದೆ, ಊರ ಮೇಗಣ ದಡದ ಬಳಿಯಲ್ಲಿ ಎಲ್ಲಾದರೂ ಒಂದು ಹಾಯಿದೋಣಿಯನ್ನು ಕದಿಯಬಹುದೆಂದೂ ನಿರೀಕ್ಷಿಸಿದೆ. ಆದರೆ ಜನರು ಇತ್ತ ಅತ್ತ ಇನ್ನೂ ಓಡಾಡುತ್ತಲೇ ಇದ್ದರು. ಆದ್ದರಿಂದ ಎಲ್ಲರೂ ಹೊರಟು ಹೋಗುವತನಕ ಕಾದುಕೊಂಡಿರುವುದಕ್ಕಾಗಿ ನಾನು ದಡದ ಮೇಲಿದ್ದ ಒಂದು ಹಳೆಯ, ಇನ್ನೇನು ಬಿದ್ದುಹೋಗುವಂತಿರುವ ಪೀಪಾಯಿಯ–ಅಂಗಡಿಯಲ್ಲಿ ಅವಿತುಕೊಂಡಿದ್ದೆ. ರಾತ್ರಿಯೆಲ್ಲ ನಾನು ಅಲ್ಲೇ ಇದ್ದೆ. ಅಷ್ಟುಹೊತ್ತೂ ಅಲ್ಲಿ ಯಾರೋ ಒಬ್ಬನಿದ್ದೇ ಇದ್ದ. ಬೆಳಗಿನ ಆರು ಗಂಟೆ ಸುಮಾರಿನಲ್ಲಿ ದೋಣಿಗಳು ಚಲಿಸ ತೊಡಗಿದವು, ಮತ್ತು ಎಂಟು ಒಂಬತ್ತು ಗಂಟೆಯ ಹೊತ್ತಿಗೆ ಅತ್ತ ಸಾಗುತ್ತಿದ್ದ ಒಂದೊಂದು ದೋಣಿಯೂ ನೀನು ಹತನಾದೆ ಎಂದು ನಿಮ್ಮ ಅಪ್ಪ ಬಂದು ಹೇಳಿದ್ದನ್ನೇ ಕುರಿತು ಮಾತಾಡಿಕೊಳ್ಳುತ್ತಿತ್ತು. ಹಿಂದೆ ಹೇಳಿದ ಈ ದೋಣಿಗಳಲ್ಲಿ ಆ ಸ್ಥಳದ ವೀಕ್ಷಣೆಗಾಗಿ ಹೊರಟಿದ್ದ ಗಂಡಸರೂ ಹೆಂಗಸರೂ ಕಿಕ್ಕಿರಿದಿದ್ದರು. ತಮ್ಮ ಪ್ರಯಾಣದ ನಡುವೆ ಅವರು ಆಗಾಗ ವಿಶ್ರಮಿಸಿಕೊಳ್ಳಲು ದಡಕ್ಕೆ ಬರುತ್ತಿದ್ದರು; ಅವರು ಮಾತಾಡಿಕೊಂಡದ್ದನ್ನು ಕೇಳಿದ ನನಗೆ ಈ ಕೊಲೆಯ ವಿವರ ತಿಳಿಯಿತು. ನೀನು ಹತನಾದ್ದನ್ನು ಕೇಳಿ ನನಗೆ ಮಹಾ ವ್ಯಥೆಯಾಗಿತ್ತು, ಹಕ್: ಆದರೆ ಈಗ ಮನಸ್ಸಿಗೆ ನೆಮ್ಮದಿಯಾಯಿತು."

"ನಾನು ಇಡೀ ದಿನ ಆ ಕಸದ ರಾಶಿಯ ಹಿಂದೆ ಮಲಗಿದ್ದೆ. ನನಗೆ ಹಸಿವಾಯಿತು; ನಾನು ಹೆದರಲಿಲ್ಲ. ಏಕೆಂದರೆ, ನನ್ನ ಮುದಿಯೊಡತಿಯೂ ಗಿರಾಕಿಯೂ ಬೆಳಕಿನ ಉಪಾಹಾರ ಮುಗಿದ ತತ್‌ಕ್ಷಣವೇ ಶಿಬಿರದಲ್ಲಿ ನಡೆವ ಕೂಟಕ್ಕೆ ಹೊರಟು ಹೋಗಿ ಇಡೀದಿನ ಮನೆಯ ಹೊರಗಿರುವರೆಂದೂ, ನಾನು ಬೆಳಕು ಹರಿಯುವ ಹೊತ್ತಿಗೆ ದನಕರುಗಳನ್ನು ಅಟ್ಟಿಕೊಂಡು ಹೋಗುವುದು. ಅವರಿಗೆ ಗೊತ್ತೆಂದೂ ಆ ಸಮಯ ನಾನು ಮನೆಯ ಸಮೀಪದಲ್ಲೇ ಇರುವುದನ್ನು ಅವರು ನಿರೀಕ್ಷಿಸುವುದಿಲ್ಲವೆಂದೂ ಆದ್ದ

ರಿಂದ ಸಂಜೆಗತ್ತಲು ಕವಿಯುವುದರ ಒಳಗೆ ಇವನೆಲ್ಲಿ ಹೋದನೆಂದು ನನ್ನನ್ನು ಹುಡುಕು ವುದಿಲ್ಲವೆಂದೂ ನನಗೆ ತಿಳಿದಿತ್ತು. ಉಳಿದ ಮನೆಯಾಳುಗಳೂ ನನಗಾಗಿ ಹುಡುಕು ವುದಿಲ್ಲ; ಏಕೆಂದರೆ ಆ ಮುದುಕರು ಆಚೆಗೆ ಹೊರಟ ಕೂಡಲೆ ಇವರು ತಮ್ಮ ಮನಸ್ಸು ಬಂದಂತೆ ವಿಹರಿಸುವುದಕ್ಕಾಗಿ ಮನೆಯಿಂದ ಹೊರಬೀಳುತ್ತಿದ್ದರು,

"ಸರಿ, ರಾತ್ರಿಯಾಯಿತು, ಆಗ ನಾನು ನದಿಯ ಮಾರ್ಗವನ್ನು ಅನುಸರಿಸಿ ಎರಡು ಮೂರು ಮೈಲಿ ನಡೆದು ಮನೆಗಳೇ ಇಲ್ಲದ ಒಂದು ಪ್ರದೇಶಕ್ಕೆ ಬಂದೆ. ನಾನು ಮುಂದೇನು ಮಾಡಲಿರುವೆನೆಂಬುದನ್ನು ನಿರ್ಧರಿಸಿದೆ. ಕಾಲ್ನಡೆಯನ್ನೇ ಮುಂದುವರಿಸಿದ್ದರೆ, ನಾಯಿಗಳು ನಾನು ನಡೆದ ದಾರಿಯನ್ನು ಪತ್ತೆ ಹಿಡಿದು ಬೆನ್ನು ಹತ್ತುತ್ತಿದ್ದವು; ದೋಣಿಯೊಂದನ್ನು ಕದ್ದು ಹೊಳೆದಾಟಿದ್ದರೆ, ಒಂದು ದೋಣಿ ತಪ್ಪಿಸಿಕೊಂಡಿರುವುದೂ ಆಚೆದಡದಲ್ಲಿ ನಾನೆಲ್ಲಿ ಇಳಿದಿರಬಹುದೆನ್ನುವುದೂ ಎಲ್ಲಿ ನನಗಾಗಿ ಹುಡುಕಬೇಕೆನ್ನುವುದೂ ಅವರಿಗೆ ತಿಳಿಯುತ್ತಿತ್ತು. ಆದ್ದರಿಂದ ನನಗೆ ಬೇಕಾಗಿರುವುದು ಒಂದು ತೆಪ್ಪವೆಂದೇ ಹೊಳೆಯಿತು; ಏಕೆಂದರೆ ಅದು ಯಾವ ದಾರಿ-ಗುರುತನ್ನೂ ಬಿಟ್ಟು ಹೋಗು ವುದಿಲ್ಲ.

"ಕೊಂಚ ಹೊತ್ತಾದ ಮೇಲೆ ಆ ಬಳಿಗೆ ದೀಪವೊಂದು ತೇಲಿ ಬರುತ್ತಿರುವುದನ್ನು ಕಂಡೆ; ಅದಕ್ಕಾಗಿ ನಾನು ನೀರಿನಲ್ಲಿ ನಡೆದುಹೋಗಿ, ದಿಮ್ಮಿಯೊಂದನ್ನು ಮುಂದಕ್ಕೆ ತಳ್ಳಿ ನದಿಯ ಮಧ್ಯಕ್ಕಿಂತ ಹೆಚ್ಚು ದೂರಕ್ಕೆ ಈಜಿಕೊಂಡು ಹೋದೆ; ತೇಲು-ಮರಗಳ ನಡುವೆ ಸೇರಿಕೊಂಡೆ: ನನ್ನ ತಲೆಯನ್ನು ಕೆಳಕ್ಕೆ ತಗ್ಗಿಸಿ ತೆಪ್ಪ ಬಳಿಗೆ ಬರುವವರೆಗೂ ಪ್ರವಾಹಕ್ಕೆ ಇದಿರಾಗಿ ಒಂದು ವಿಧವಾಗಿ ಈಜಿಕೊಂಡು ಹೋದೆ. ಬಳಿಕ ಅದರ ಹಿಂಭಾಗಕ್ಕೆ ಈಜಿಕೊಂಡು ಹೋಗಿ ಎಳೆದೆನು, ಆಗ ಮೋಡ ಮುಚ್ಚಿಕೊಂಡಿತ್ತು, ಸ್ವಲ್ಪ ಹೊತ್ತು ತುಂಬಾ ಕತ್ತಲಾಗಿತ್ತು. ನಾನು ಹತ್ತಿಹೋಗಿ ಹಲಗೆಗಳ ಮೇಲೆ ಮಲಗಿದೆ. ಉದ್ದಕ್ಕೂ ಜನರು ಅಲ್ಲಿ ನದಿಯ ಮಧ್ಯದಲ್ಲಿ ಲಾಂದ್ರವಿದ್ದ ಬಳಿಯಲ್ಲೇ ಇದ್ದರು. ನದಿ ಏರುತ್ತಲೇ ಇತ್ತು. ಪ್ರವಾಹ ಭಾರಿಯದಾಗಿತ್ತು. ಆದ್ದರಿಂದ ಬೆಳಗಿನ ನಾಲ್ಕು ಗಂಟೆಯೊಳಗಾಗಿ ನಾನು ನದಿಯಲ್ಲಿ ಇಪ್ಪತ್ತೈದು ಮೈಲಿಗಳ ದೂರ ಸಾಗಿರುವೆನೆಂದೂ, ಬೆಳಕು ಹರಿಯುವುದರೊಳಗಾಗಿ ಇಲ್ಲಿಗೆ ತಲಪಿ ತೀರಕ್ಕೆ ಈಜಿಕೊಂಡು ಬಂದು ಇಲ್ಲಿನಾಯ್ಸ್ ಕಡೆಯ ಕಾಡಿಗೆ ಧಾವಿಸುವೆನೆಂದೂ ಅಂದುಕೊಂಡೆ.

"ನನ್ನ ಅದೃಷ್ಟ ಚೆನ್ನಾಗಿರಲಿಲ್ಲ. ನಾವಿನ್ನೇನು ದ್ವೀಪವನ್ನು ತಲಪಿದೆವು ಎನ್ನು ವಾಗ ಒಬ್ಬ ಮನುಷ್ಯ ಲಾಂದ್ರಹಿಡಿದು ಹತ್ತಿರಕ್ಕೆ ಬರುತ್ತಿದ್ದ. ಇನ್ನು ಕಾಯುವುದು ನಿಷ್ಫಲವೆನಿಸಿತು; ನಾನು ಅಲ್ಲಿಂದ ನೀರಿಗೆ ಹಾರಿ ಈಜಿ, ದ್ವೀಪಕ್ಕೆ ಬಂದು ತಲಪಿದೆ. ಅಲ್ಲಿ ಎಲ್ಲಿ ಬೇಕಾದರೂ ದಡಸೇರಬಹುದು ನಾನು ಎಂದುಕೊಂಡಿದ್ದೆ; ಅದು ನನಗೆ ಸಾಧ್ಯವೇ ಆಗಲಿಲ್ಲ. ದಡ ಬಲು ಕಡಿದಾಗಿತ್ತು. ಅಲ್ಲಿ ನನಗೊಂದು ಅನುಕೂಲವಾದ ಸ್ಥಳ ಸಿಕ್ಕುವ ಹೊತ್ತಿಗೆ, ನಾನು ದ್ವೀಪದ ಮೇಲೆಲ್ಲಾ ತುಂಬಾ ಸುತ್ತಾಡಬೇಕಾಯಿತು,

ನಾನು ಕಾಡನ್ನು ಪ್ರವೇಶಿಸಿದೆ. ಎಲ್ಲಿಯವರೆಗೆ ಅವರು ಲಾಂದ್ರವನ್ನು ಸುತ್ತಲೂ ತಿರಂಗಿಸುವರೋ ಅಲ್ಲಿಯತನಕ ನಾನು ತೆಪ್ಪಗಳ ತಂಟೆಗೇ ಹೋಗಂವುದಿಲ್ಲವೆಂದು ನಿರ್ಧರಿಸಿದೆ. ನನ್ನ ಹೊಗೆಕೊಳವೆಯೂ. ಒಂದು ತಂಬಾಕಿನ ಗುಳಿಗೆಯೂ, ನನ್ನ ಟೊಪ್ಪಿಗೆಯಲ್ಲಿ ಕೆಲವು ಬೆಂಕಿಯ ಕಡ್ಡಿಗಳೂ ನನಗಿದ್ದುವು. ಅವು ಒದ್ದೆಯಾಗಿರಲಿಲ್ಲ. ನನ್ನ ಪರಿಸ್ಥಿತಿ ಚೆನ್ನಾಗಿಯೇ ಇತ್ತು."

"ಆದ್ದರಿಂದ ನೀನು ಇಷ್ಟು ಕಾಲವೂ ಮಾಂಸವಿಲ್ಲದೆ, ರೊಟ್ಟಿಯಿಲ್ಲದೆ ಇದ್ದೆ ಎನ್ನು ? ನಿನಗೆ ನೆಲದ ಆಮೆಗಳು ಏಕೆ ಸಿಕ್ಕಲಿಲ್ಲ ?"

"ನೀನು ಅವುಗಳನ್ನು ಹಿಡಿಯುವುದು ಹೇಗೆ ? ನೀನು ಅವುಗಳ ಮೇಲೆ ಹಾರಿ ಬಾಚಿಕೊಳ್ಳುವಂತಿಲ್ಲ ; ಯಾರಾಗಲೀ ಅವುಗಳನ್ನು ಕಲ್ಲಿನಿಂದ ಹೊಡೆಯುವುದು ಹೇಗೆ ? ಯಾರಾಗಲೀ ರಾತ್ರಿ ಕಾಲದಲ್ಲಿ ಹೇಗೆ ಈ ಕೆಲಸವನ್ನು ಮಾಡಬಲ್ಲ ? ಹಗಲಲ್ಲಿ ನಾನು ಹೋಗಿ ದಡದ ಮೇಲೆಲ್ಲಾ ಕಾಣಿಸಿಕೊಳ್ಳಬಾರದಾಗಿತ್ತಲ್ಲ."

"ಹೌದು, ಅದು ಸರಿ ಸದಾ ಕಾಲವೂ ನೀನು ಕಾಡಿನಲ್ಲಿಯೇ ಹುದುಗಿಕೊಂಡಿರಬೇಕಾದದ್ದು ನಿಜವೇ. ಅವರು ಗುಂಡು ಹಾರಿಸಿದ್ದನ್ನು ನೀನು ಕೇಳಿದೆಯ ?"

"ಓ, ಹೌದು. ಅವರು ನಿನ್ನನ್ನು ಬೆನ್ನು ಹತ್ತಿದ್ದಾರೆಂಬುದು ನನಗೆ ತಿಳಿದಿತ್ತು. ಅವರು ಇತ್ತ ಸಾಗಿದ್ದನ್ನು ನಾನು ಕಂಡೆ. ಪೊದೆಮರೆಯಲ್ಲಿದ್ದುಕೊಂಡು ನಾನು ಅವರ ಚಲನವಲನವನ್ನು ಗಮನಿಸುತ್ತಿದ್ದೆ."

"ಕೆಲವು ಹಕ್ಕಿಮರಿಗಳು ಇತ್ತ ಬಂದವು ಒಂದುಬಾರಿಗೆ ಒಂದೋ ಎರಡೋ ಗಜದಷ್ಟು ದೂರಹಾರುತ್ತಾ, ಮತ್ತೆ ಇಳಿಯುತ್ತ ಬಂದವು. ಇದಂ ಮಳೆಬರುವುದರ ಸೂಚನೆ ಎಂದನು ಜಿಮ್. ಕೋಳಿಮರಿಗಳು ಹಾಗೆ ಹಾರಿದಾಗ ಅದು ಮಳೆ ಬರುವುದನ್ನು ಸೂಚಿಸುವುದಂತೆ ; ಹಕ್ಕಿಮರಿಗಳು ಹಾಗೆ ಮಾಡಿದಾಗಲೂ ಹಾಗೆಯೇ ಆಗುವುದೆಂದು ಅವನೆಣಿಕೆ, ನಾನು ಕೆಲವನ್ನು ಹಿಡಿಯ ತುಡುಕಿದೆ ; ಆದರೆ ಜಿಮ್ ಕೂಡದು ಎಂದ. ಹಾಗೆ ಮಾಡುವುದರಿಂದ ಸಾವು ಒದಗುತ್ತದೆ ಎಂದ. ಒಮ್ಮೆ ಅವನ ತಂದೆಗೆ ತುಂಬಾ ಕಾಹಿಲೆಯಾಗಿತ್ತಂತೆ, ಆಗ ಅವರಲ್ಲಿ ಕೆಲವರು ಒಂದು ಹಕ್ಕಿಯನ್ನು ಹಿಡಿದರಂತೆ ; ಆಗ ಅವನ ಮುದಿಯಜ್ಜಿ ಜಿಮ್ಮನ ತಂದೆ ಸಾಯುತ್ತಾನೆ ಎಂದಳಂತೆ ; ಅವನು ಹಾಗೆಯೇ ಸತ್ತನೆಂದು ಜಿಮ್ ಹೇಳಿದ.

ನೀನು ಊಟಕ್ಕಾಗಿ ಬೇಯಿಸುವ ಆಹಾರ ಪದಾರ್ಥಗಳನ್ನು ಎಣಿಕೆ ಮಾಡಬಾರದು, ಆದರಿಂದ ದುರ್ವಿಧಿಯೊದಗುತ್ತದೆ ಎಂದನು ಜಿಮ್. ಸೂರ್ಯ ಮುಳುಗಿದ ಮೇಲೆ ಮೇಜಿನ ಹೊದಿಕೆಯನ್ನು ಅಲ್ಲಾಡಿಸಿದರೂ ಅದೇ ಪರಿಣಾಮವಂತೆ. ಇನ್ನೂ ಒಂದು : ಯಾರ ಬಳಿಯಲ್ಲಾದರೂ ಒಂದು ಜೇನುಗೂಡು ಇದ್ದರೆ, ಅವನು ಸತ್ತು ಹೋದ ಎಂದರೆ, ಮರುದಿನ ಸೂರ್ಯೋದಯದೊಳಗಾಗಿ ಅವನ ಸಾವಿನ ಸುದ್ದಿಯನು ಜೇನ್ನೊಣಗಳಿಗೆ ತಿಳಿಸಬೇಕೆಂದೂ, ಇಲ್ಲವಾದರೆ ಅವು ದುರ್ಬಲವಾಗಿ, ಕೆಲಸ ಮಾಡದೆ

ಸಾಯುವವಂತೆ. ಹೀಗೆಂದು ಜಿಮ್ ಹೇಳಿದ, ಜೇನು ಮೂರ್ಖರನ್ನು ಕಚ್ಚುವುದಿಲ್ಲವೆಂದೂ ಅವನು ಹೇಳಿದ. ನಾನು ಈ ಮಾತನ್ನು ನಂಬಲಿಲ್ಲ. ಏಕೆಂದರೆ ನಾನೇ ಅನೇಕ ವೇಳೆ ಅವುಗಳನ್ನು ಕೆರಳಿಸಿದ್ದೇನೆ. ಅವು ನನ್ನನ್ನು ಕಚ್ಚದೆ ಹೋದವು.

ಹಿಂದೆಯೇ ನಾನು ಇಂಥ ಕೆಲವನ್ನು ಕೇಳಿದ್ದೆ ; ಆದರೆ ಇಂಥವು ಎಲ್ಲವನ್ನೂ ಅಲ್ಲ. ಜಿಮ್ಮನಿಗೆ ಎಲ್ಲಾ ಬಗ್ಗೆಯು ಸೂಚನೆಗಳ ಅರ್ಥವೂ ತಿಳಿದಿತ್ತು. ತಾನು ಸುಮಾರು ಸರ್ವಜ್ಞನೆಂದು ಅವನು ಹೇಳಿದ. ಎಲ್ಲ ಸೂಚನೆಗಳೂ ದುರದೃಷ್ಟಕ್ಕೆ ಸಂಬಂಧಪಟ್ಟವೇ ಎಂದು ನನಗೆ ತೋರುವುದಾಗಿ ಹೇಳಿದೆ. ಒಳ್ಳೆಯ ಶಕುನಗಳಿಲ್ಲವೇ ಇಲ್ಲವೆ ಎಂದು ಕೇಳಿದೆ ನಾನು. ಅವನು ಹೇಳಿದ :

"ಎಲ್ಲೋ ಕೆಲವಿವೆ—ಅವುಗಳಿಂದ ಯಾರಿಗೂ ಪ್ರಯೋಜನವಿಲ್ಲ. ಒಳ್ಳೆಯ ಅದೃಷ್ಟವೇ ಬಂದು ಬಿಡುವಾಗ, ನಿನಗೆ ತಿಳಿಯಬೇಕಾದದ್ದೇನಿದೆ ? ಅದು ಬಳಿಗೆ ಬಾರದಂತೆ ಮಾಡುವ ಉಪೇಕ್ಷೆಯೇ ?" ಇನ್ನೂ ಹೇಳಿದ : ನಿನಗೆ ತುಂಬುಗೂದಲಿನ ಬಾಹುಗಳೂ ತುಂಬುಗೂದಲಿನ ಎದೆಯೂ ಇದ್ದಲ್ಲಿ, ನೀನು ಶ್ರೀಮಂತನಾಗುವೆ ಎನ್ನುವುದರ ಸೂಚನೆ ಅದು. ಅಂಥಾ ಕೆಲವು ಚಿಹ್ನೆಗಳಿಂದ ಕೆಲವು ಪ್ರಯೋಜನವಿದೆ ಏಕೆಂದರೆ ಅದು ಎಂದೋ ಮುಂದೆ ಫಲಿಸುವಂಥದು. ನೀನು ಕಾಲಕ್ರಮದಲ್ಲಿ ಶ್ರೀಮಂತನಾಗುವೆ ಎಂಬುದನ್ನು ಆ ಚಿಹ್ನೆಯಿಂದ ತಿಳಿಯದೆ ಹೋಗಿದ್ದರೆ, ನೀನು ಮೊದಲು ಬಹುಕಾಲ ಬಡವನಾಗಿರಲೇಬೇಕಾಗಿ ಬಂದು ಕಷ್ಟದಿಂದ ಎದೆಗೆಟ್ಟು ಆತ್ಮಹತ್ಯೆ ಮಾಡಿಕೊಳ್ಳಬೇಕಾದೀತು"

"ತುಂಬುಗೂದಲಿನ ಬಾಹುಗಳೂ, ತುಂಬುಗೂದಲಿನ ಎದೆಯೂ ನಿನಗಿವೆಯೆ?"

"ಆ ಪ್ರಶ್ನೆಯನ್ನು ಕೇಳುವುದರಿಂದ ಪ್ರಯೋಜನವೇನು ? ಅವು ನನಗಿರುವುದು ನಿನಗೆ ಕಾಣುತ್ತಿಲ್ಲವೆ ?"

"ಸರಿಯೆ ; ನೀನು ಶ್ರೀಮಂತನೆ ?"

"ಅಲ್ಲ ; ಒಂದು ಕಾಲದಲ್ಲಿ ನಾನು ಶ್ರೀಮಂತನಾಗಿದ್ದೆ. ಮತ್ತೆ ಶ್ರೀಮಂತನಾಗುವವನು ನಾನು. ಒಂದು ಕಾಲದಲ್ಲಿ ನನ್ನ ಬಳಿ ಹದಿನಾಲ್ಕು ಡಾಲರುಗಳಿದ್ದವು, ಆದರೆ ಸಟ್ಟಾ ವ್ಯಾಪಾರಕ್ಕೆ ಬಿದ್ದು ನಾನು ಬರಿದಾದೆ."

"ಜಿಮ್, ನೀನು ಮಾಡಿದ ಅಂಥಾ ವ್ಯವಹಾರ ಯಾವುದು ?"

"ನಾನು ಮೊದಲು ಸರಕುಗಳ ಮೇಲೆ ಹಣ ಹಾಕುತ್ತಿದ್ದೆ"

"ಏನು ಸರಕು ಅದು ?"

"ಏನೇ ?—ಜಾನುವಾರು—ದನ ಕರುಗಳು, ತಿಳಿಯಿತೆ ? ಹತ್ತು ಡಾಲರು ಹಾಕಿ ನಾನು ಹಸುವೊಂದನು ಕೊಂಡೆ. ನಾನು ಇನ್ನೊಂದು ಸರಕಿನ ಮೇಲೆ ಹಣಹಾಕುವುದಿಲ್ಲ. ಆ ಹಸು ನನ್ನ ಬಳಿ ಇದ್ದಾಗಲೇ ಸತ್ತು ಹೋಯಿತು."

"ಆದ್ದರಿಂದ ನೀನು ಹತ್ತುಡಾಲರುಗಳನು ಕಳೆದು ಕೊಂಡೆ."

"ಇಲ್ಲ ಪೂರ್ತಿ ನಷ್ಟವಾಗಲಿಲ್ಲ, ಸುಮಾರು ಒಂಬತ್ತು ಮಾತ್ರ ಕೈ ಬಿಟ್ಟು ಹೋಯಿತು. ಅದರ ಚಕ್ಕಳವನ್ನೂ ಕೊಬ್ಬನ್ನೂ ನಾನು ಒಂದು ಡಾಲರು ಹತ್ತು ಸೆಂಟುಗಳಿಗೆ ಮಾರಿದೆ."

"ಆಗ ನಿನ್ನ ಬಳಿ ಐದು ಡಾಲರು ಹತ್ತು ಸೆಂಟುಗಳು ಉಳಿದವು. ಆಮೇಲೂ ನೀನು ಸಟ್ಟಾ ವ್ಯಾಪಾರವನ್ನು ನಡಸಿದೆಯೇನು ?"

"ಹೌದು, ಮುದಿ ಮಿ.ಬ್ರ್ಯಾಡಿಷನ ಬಳಿ ಜೀತಕ್ಕಿರುವ ಆ ಒಂಟಿಗಾಲಿನ ನೀಗ್ರೋವನ್ನು ನೀನು ಬಲ್ಲೆಯಷ್ಟೆ? ಅವನು ಒಂದು ಬ್ಯಾಂಕನ್ನು ಪ್ರಾರಂಭಿಸಿದ; ಅದರಲ್ಲಿ ಒಂದು ಡಾಲರನ್ನು ಹಾಕಿದವರಿಗೆ ಒಂದು ವರುಷ ಕಳೆದ ಮೇಲೆ, ನಾಲ್ಕು ಹೆಚ್ಚಿಗೆ ಡಾಲರುಗಳು ಸಿಕ್ಕುವುದಾಗಿ ಹೇಳಿದ. ಸರಿ, ಎಲ್ಲಾ ನೀಗ್ರೋಗಳೂ ಅಲ್ಲಿಗೆ ಧುಮುಕಿದರು. ಅವರ ಬಳಿ ಹೆಚ್ಚು ಹಣವೇನೂ ಇರಲಿಲ್ಲ. ನನ್ನೊಬ್ಬನ ಹತ್ತಿರವೇ ಹೆಚ್ಚು ಹಣವಿದ್ದದಲ. ಅದಕ್ಕಾಗಿ ನಾನು ನಾಲ್ಕು ಡಾಲರುಗಳಿಗಿಂತ ಹೆಚ್ಚಿನ ಲಾಭವನ್ನು ಕೊಡುವಂತೆ ಅವನನ್ನು ಕೇಳಿದೆ; ಇಲ್ಲವಾದರೆ ನಾನೇ ಒಂದು ಬ್ಯಾಂಕನ್ನು ತೆರೆಯುವುದಾಗಿ ಹೇಳಿದೆ. ಈ ಉದ್ಯಮಕ್ಕೆ ನಾನು ಇಳಿಯ ಕೂಡದೆಂಬುದೇ ಆ ನೀಗ್ರೋವಿನ ಅಪೇಕ್ಷೆ. ಏಕೆಂದರೆ, ಅವನ ಎಣಿಕೆಯಲ್ಲಿ, ಎರಡು ಬ್ಯಾಂಕುಗಳಿಗೆ ಅವಶ್ಯಕವಾದಷ್ಟು ನಿಧಿ ಅಲ್ಲಿರಲಿಲ್ಲ. ಆ ಕಾರಣದಿಂದ ಅವನು ನಾನು ನನ್ನ ಐದು ಡಾಲರುಗಳನ್ನು ತನ್ನ ಬ್ಯಾಂಕಿನಲ್ಲಿ ಹಾಕುವುದಾದರೆ, ತಾನು ವರ್ಷಾಂತ್ಯದಲ್ಲಿ ಮೂವತ್ತೈದು ಡಾಲರುಗಳನ್ನು ಕೊಡುವುದಾಗಿ ಹೇಳಿದ.

"ನಾನು ಹಾಗೆ ಮಾಡಿದೆ. ಬಳಿಕ ನನ್ನ ಆ ಮೂವತ್ತೈದು ಡಾಲರ್‌ಗಳನ್ನು ಹಾಗೆಯೇ ಅಲ್ಲಿ ಹಾಕಿ ನಿಧಿ ಬೆಳೆಯುವಂತೆ ಮಾಡಬಹುದು ಎಂದುಕೊಂಡೆ. ಬಾಬ್ ಎಂಬ ನೀಗ್ರೋ, ತನ್ನ ಯಜಮಾನನಿಗೆ ತಿಳಿಯದ ಹಾಗೆ, ಒಂದು ಮರದ ಹಲಗೆಯನ್ನು ನದಿಯಲ್ಲಿ ಹಿಡಿದು ಸಂಪಾದಿಸಿದ್ದ. ನಾನು ಅದನ್ನು ಅವನಿಂದ ಕೊಂಡು, ವರುಷ ಕಳೆದ ಮೇಲೆ ಆ ಮೂವತ್ತೈದು ಡಾಲರುಗಳನ್ನು ನೀನು ತೆಗೆದುಕೋ ಎಂದೆ. ಆದರೆ ಆ ರಾತ್ರಿಯೇ ಯಾರೋ ಆ ಮರದ ಹಲಗೆಯನ್ನು ಕದ್ದು ಬಿಟ್ಟರು. ಮರುದಿನವೇ ನಮ್ಮ ಆ ಒಂಟಿಗಾಲಿನ ನೀಗ್ರೋ ತನ್ನ ಬ್ಯಾಂಕ್ ದಿವಾಳಿಯಾಯಿತು ಎಂದನು. ನಮ್ಮೆಲ್ಲರ ಹಣವೂ ಹೋಯಿತು.

"ಆಗಲೂ, ನಿನ್ನ ಬಳಿ ಇದ್ದ ಹತ್ತು ಸೆಂಟಗಳನ್ನು ಏನು ಮಾಡಿದೆ, ಜಿಮ್?"

"ನಾನೇನೋ ಅದನ್ನು ವೆಚ್ಚ ಮಾಡುತ್ತಿದ್ದೆ. ಆದರೆ ನನಗೊಂದು ಕನಸು ಬಿತ್ತು. ಬೇಲಂ ಎಂಬ–ಬೇಲಂ ಕತ್ತೆ ಎನ್ನುತ್ತಿದ್ದರು ಗೇಲಿಗಾಗಿ—ನೀಗ್ರೋವಿಗೆ ಆ ಹಣವನ್ನು ಕೊಟ್ಟುಬಿಡೆಂದು ಕನಸು ಹೇಳಿತು. ಅವನು ದಡ್ಡನೆಂಬುದನ್ನು ನೀ ಬಲ್ಲೆಯಷ್ಟೆ! ಆದರೂ ಅವನನ್ನು ಅದೃಷ್ಟ ಶಾಲಿ ಎನ್ನುತ್ತಾರೆ. ನಾನು ಅದೃಷ್ಟಶಾಲಿಯಲ್ಲ ಎಂದು ತಿಳಿದೆ. ಬೇಲಂ ಆ ಹತ್ತು ಸೆಂಟುಗಳನ್ನು ವ್ಯಾಪಾರಕ್ಕೆ ಹೂಡಲೆಂದೂ, ಅವನು ನನಗೆ ಹೆಚ್ಚು ಹಣವನ್ನು ಕೂಡಿಸಿ ಕೊಡುಪನೆಂದೂ ಕನಸು ಹೇಳಿತು. ಬೇಲಂ ನನ್ನಿಂದ

ಹಣವನ್ನು ಪಡೆದನು ; ಮತ್ತು ಅವನು ಚರ್ಚಿಗೆ ಹೋಗಿದ್ದಾಗ ಅಲ್ಲಿನ ಉಪದೇಶಕ ಯಾರು ಬಡವರಿಗೆ ದಾನ ಮಾಡುತ್ತಾರೋ ಅವರು ಭಗವಂತನಿಗೆ ಸಾಲ ಕೊಡುತ್ತಾರೆ; ಮತ್ತು ತಾವು ಕೊಟ್ಟ ಹಣದ ನೂರ್ಮಡಿಯನ್ನು ಮರಳಿ ಪಡೆಯುವರೆಂಬುದರಲ್ಲಿ ಸಂದೇಹ ವಿಲ್ಲ ಎಂದನಂತೆ. ಈ ಉಪದೇಶವನ್ನು ಕೇಳಿದ ಜಿಮ್ ತನ್ನ ಹತ್ತು ಸೆಂಟುಗಳನ್ನೂ ಬಡವರಿಗೆ ದಾನ ಮಾಡಿದನು. ಅದರ ಫಲಿತಾಂಶಕ್ಕಾಗಿ ಕಾದು ನೋಡುತ್ತಿದ್ದನು."

"ಕಡೆಗೆ ಆದ್ದದ್ದೇನು, ಜಿಮ್ ?"

"ಅದರಿಂದ ಏನೂ ಆಗಲಿಲ್ಲ. ಆ ಹಣವನ್ನು ವಸೂಲು ಮಾಡುವುದು, ನನ್ನಿಂದಾಗಲಿಲ್ಲ ; ಬೇಲಮಿಗೂ ಸಾಧ್ಯವಾಗಲಿಲ್ಲ, ನಾನಂತೂ ಇನ್ನು ಮುಂದೆ ಸರಿಯಾದ ಈಡಿಲ್ಲದೆ ಸಾಲವನ್ನೇ ಕೊಡುವುದಿಲ್ಲ, ಉಪದೇಶಕ ಹೇಳುತ್ತಾನೆ ; "ನಿನ್ನ ಹಣದ ನೂರ್ಮಡಿಯಷ್ಟು ನಿನಗೆ ಲಭಿಸುತ್ತದೆ" ಎಂದು ! ನಾನೋ ನನ್ನ ಹತ್ತು ಸೆಂಟುಗಳು ಕೈಗೆ ಬಂದರೆ ಅದನ್ನೇ ನ್ಯಾಯವಾದ ವ್ಯವಹಾರವೆನ್ನುತ್ತೇನೆ, ಸುಯೋಗವೆಂದು ಸಂತೋಷಿಸುತ್ತೇನೆ.

"ನೀನು ಮತ್ತೆ ಮುಂದೆಂದೋ ಶ್ರೀಮಂತನಾಗುವ ತನಕ, ಜಿಮ್, ಹಾಗೆ ಭಾವಿಸುವುದೇ ಸರ್ವಥಾ ಸರಿಯಾದದ್ದು,"

"ಹೌದು. ನಾನೀಗಲೂ ಶ್ರೀಮಂತನಾಗಿದ್ದೇನೆ, ಹಾಗೆ ನೋಡಿದರೆ. ಈಗ ನಾನು ಸ್ವತಂತ್ರ. ನನ್ನ ಬೆಲೆ ಎಂಟುನೂರು ಡಾಲರುಗಳು. ಅಷ್ಟು ಹಣನನ್ನಲ್ಲಿತ್ತೆ; ನನಗೆ ಹೆಚ್ಚೇನೂ ಬೇಡ!"

## ೯

ದ್ವೀಪದಲ್ಲಿ ಸ್ಥಳಾನ್ವೇಷಣೆ ಮಾಡುತ್ತಿದ್ದಾಗ ಅದರಲ್ಲಿ ನಾನು ಕಂಡು ಹಿಡಿದಿದ್ದ ಒಂದು ಸ್ಥಳಕ್ಕೆ ಹೋಗಿ ಅದು ಹೇಗಿದೆ ಎಂಬುದನ್ನು ನಾನು ನೋಡಬಯಸಿದೆ. ನಾವು ಹೊರಟೆವು ; ದ್ವೀಪ ಕೇವಲ ಮೂರು ಮೈಲಿಗಳುದ್ದ ಕಾಲು ಮೈಲಿ ಯಗಲವಿದ್ದುದರಿಂದ ನಾವು ಕೂಡಲೆ ಅಲ್ಲಿಗೆ ತಲಪಿದೆವು.

ಈ ಸ್ಥಳ ಅಷ್ಟೇನೂ ಉದ್ದವಲ್ಲದ ಸುಮಾರು ನಲವತ್ತು ಅಡಿಗಳೆತ್ತರದ ಕಡಿದಾದ ಗುಡ್ಡವೋ ದಿಣ್ಣೆಯೋ ಆಗಿತ್ತು. ಅದರ ನೆತ್ತಿಗೆ ಹತ್ತುವುದು ಪ್ರಯಾಸಕರವಾಗಿತ್ತು ; ಅದರ ಪಕ್ಕಗಳು ಅಷ್ಟು ಕಡಿದು ; ಪೊದೆಗಳು ಹೆಣೆದುಕೊಂಡಿದ್ದವು ದೃಢವಾಗಿ ಹೆಜ್ಜೆಯಿಡುತ್ತಾ ಬಳಸಿಕೊಂಡು ನಾವು ಹತ್ತಿಹೋದೆವು. ಸ್ವಲ್ಪಹೊತ್ತಿನಲ್ಲೇ ಆ ಬಂಡೆಯಲ್ಲಿ ಒಂದು ದೊಡ್ಡ ಗುಹೆಯೊಂದಿರುವುದನ್ನು ಪತ್ತೆ ಮಾಡಿದೆವು.

ಅದು ಬಂಡೆಯ ಅಡಿಯಿಂದ ಮುಡಿಯುವರೆಗೆ ಹೋಗಿತ್ತು, ಇಲ್ಲಿನಾಯ್ಸ್‌ಗೆ ಅಭಿಮುಖ ವಾಗಿತ್ತು, ಎರಡು ಮೂರು ಕೋಣೆಗಳಷ್ಟು ದೊಡ್ಡದಾಗಿತ್ತು ಅದು; ಜಿಮ್ ಅದರೊಳಗೆ ನೆಟ್ಟಗೆ ನಿಂತುಕೊಳ್ಳಲೂ ಎಡೆಯಿತ್ತು. ಒಳಗೆ ತಂಪಾಗಿತ್ತು; ನಮ್ಮ ಬಲೆಗಳನ್ನು ಅಲ್ಲಿಯೇ ಹಾಕುವುದು ಸರಿಯೆಂದು ಜಿಮ್ಮನ ಅಭಿಪ್ರಾಯ, ಆದರೆ ಎಲ್ಲ ಹೊತ್ತಿನಲ್ಲೂ ಹತ್ತುವುದು ಇಳಿಯುವುದು ನಮಗೆ ಬೇಕಿಲ್ಲವೆಂದೆ ನಾನು,

ನಮ್ಮ ಕಿರು ಸೋಣಿಯನ್ನು ಒಂದು ನೆಮ್ಮದಿಯಾದ ಸ್ಥಳದಲ್ಲಿ ಮುಚ್ಚಿಟ್ಟು ನಮ್ಮ ಬಲೆಗಳೆಲ್ಲವನ್ನೂ ಗುಹೆಯಲ್ಲಿ ಹಾಕುವುದಾದರೆ ನಾವು, ಈ ದ್ವೀಪಕ್ಕೆ ಯಾರಾದರೂ ಬಂದಾಗ, ತಟಕ್ಕನೆ ಅದರೊಳಗೆ ತೂರಿಕೊಳ್ಳಬಹುದು; ನಾಯಿಗಳ ನೆರವಿಲ್ಲದೆ ಅವರು ಎಂದಿಗೂ ನಮ್ಮನ್ನು ಪತ್ತೆ ಹಚ್ಚಲಾರರು ಎಂದನು ಜಿಮ್. ಮತ್ತು ಆ ಪುಟ್ಟಹಕ್ಕಿಗಳು ಮಳೆ ಬರುವುದಾಗಿ ಆಗಲೇ ನುಡಿದಿವೆ. ನಾವು ತಂದಿರುವ ಸಾಮಾನುಗಳು ತೊಯ್ದು ಹೋಗಲೆಂದೇ ನಿನ್ನಿಷ್ಟ? ಎಂದು ಕೇಳಿದನು,

ಆದಕ್ಕಾಗಿ ನಾವು ಹಿಂದಿರುಗಿದೆವು; ಹುಟ್ಟುಮೀಟುತ್ತಾ ಕಿರುದೋಣಿಯನ್ನು ಗುಹೆಯ ಪಕ್ಕಕ್ಕೆ ತಂದೆವು. ಬಲೆಗಳೆಲ್ಲವನ್ನೂ ಅಲ್ಲಿಯೇ ಬಿಗಿಯಾಗಿ ಎಳೆದು ಕಟ್ಟಿದೆವು. ಕಿರುದೋಣಿಯನ್ನು ಬಚ್ಚಿಡಲು ನೀರ್‌–ಬಳ್ಳಿಗಳು ದಟ್ಟವಾಗಿ ಹೆಣೆದುಕೊಂಡಿದ್ದ ಒಂದು ಸ್ಥಳವನ್ನು ಪತ್ತೆ ಮಾಡಿದೆವು, ಮೀನು ಹಿಡಿದೆವು: ಮತ್ತೆ ಗಾಳಗಳನ್ನು ನೀರಿಗೆ ಒಡ್ಡಿದೆವು. ಅಡುಗೆಗೆ ಸಿದ್ಧವಾಗತೊಡಗಿದೆವು:

ಗುಹೆಯ ಬಾಗಿಲೋ ಒಬ್ಬ ಧಾಂಡಿಗನೂ ಸುಸೂತ್ರವಾಗಿ ಪ್ರವೇಶಿಸುವಷ್ಟು ದೊಡ್ಡದಾಗಿತ್ತು. ಬಾಗಿಲಿನ ಒಂದು ಕಡೆಯಲ್ಲಿ ನೆಲ ಸ್ವಲ್ಪ ಎತ್ತರವಾಗಿ ಚಪ್ಪಟೆ ಯಾಗಿತ್ತು. ಅದು ಬೆಂಕಿಯನ್ನು ಹೊತ್ತಿಸಲು ಅಣಿಯಾದ ಸ್ಥಳವಾಗಿತ್ತು. ನಾವು ಅಲ್ಲಿ ಒಲೆ ಹೊತ್ತಿಸಿದೆವು ಅಡುಗೆ ಮಾಡಿದೆವು.

ಜಮಖಾನೆಗೆ ಬದಲು ಕಂಬಳಿಗಳನ್ನೇ ಹಾಸಿದೆವು, ಅದರ ಮೇಲೆ ಕುಳಿತು ಊಟ ಮಾಡಿದೆವು. ಇತರ ಪದಾರ್ಥಗಳೆಲ್ಲವನ್ನೂ ಗುಹೆಯ ಹಿಂಭಾಗದಲ್ಲಿ ಅಡಕಿದೆವು. ಬಲುಬೇಗ ಕತ್ತಲಾಯಿತು: ಗುಡುಗಲು ಮಿಂಚಲು ಮೊದಲಾಯಿತು. ಮುನ್ ಸೂಚನೆಗಳನ್ನು ಹಕ್ಕಿಗಳು ಸರಿಯಾಗಿಯೇ ಗ್ರಹಿಸಿದ್ದವು, ನೇರ ಮಳೆ ಮೊದ ಲಾಯಿತು. ಪ್ರಚಂಡವಾದ ಮಳೆ, ನಾನು ಅಂಥಾ ಹುಚ್ಚು ಗಾಳಿಯನ್ನೇ ಕಂಡಿಲ್ಲ. ಅದು ಯಥಾಪ್ರಕಾರ ಬೇಸಗೆಯ ಬಿರುಗಾಳಿ. ಹೊರಗಿನದೆಲ್ಲವೂ ನೀಲಿಗಪ್ಪಾಗಿ ಕಾಣುವ, ಸುಂದರವಾದ ಗಾಢಾಂಧಕಾರ. ಆಸುಪಾಸಿನ ಗಿಡಮರಗಳು ಮಬ್ಬಾಗಿ ಕಾಣುವ, ಅವುಗಳ ಮೇಲೆ ಜೇಡನ ಬಲೆ ಬಿದ್ದಂತೆ ತೋರುವ ದಟ್ಟವಾದ ಮಳೆ ಬಾರಿಸುತ್ತಿತ್ತು. ಇನ್ನೊಂದು ಕಡೆ ಮರಗಿಡಗಳನ್ನು ತುಳಿದು ಬಗ್ಗಿಸಿ ಬಾಡಿದ ಎಲೆ ಗಳನ್ನು ತಿರುವಿ ಹಾಕಿ ಅಪ್ಪಳಿಸುವ ಬಿರುಗಾಳಿಯು ಹೊಡೆತ ಹಿಂದೆಯೇ ಕೊಂಬೆಗಳು ತಮ್ಮ ಬಾಹುಗಳನ್ನು ಹುಚ್ಚುಹಿಡಿಯಿತೆಂಬಂತೆ ಸಿಕ್ಕಾಪಟ್ಟೆ ತೂಗುತ್ತಿದ್ದವು. ಬಳಿಕ

ದೃಶ್ಯ ಅತಿ ನೀಲಿಗಪ್ಪಿಗೆ ತಿರುಗುತ್ತಿರುವಾಗ ಸಿಡಿಲು–ಘಟಾರ್ ಎಂದಿತು. ಅದು ದಿವ್ಯ ಜ್ಯೋತಿಯಷ್ಟು ಪ್ರಕಾಶಮಾನವಾಗಿತ್ತು, ಅಲ್ಲಿ ದೂರದ ಅತಿದೂರದಲ್ಲಿ ನೂರಾರು ಗಜ ಗಳಾಚೆಗೆ ಚಂಡಮಾರುತನ ಹೊಯ್ಲಿನಲ್ಲಿ ತೊನೆಯುತ್ತಿರುವ ವೃಕ್ಷಶಿರಗಳನ್ನು-ಮೊದಲಿಗೆ ಅವು ನಮ್ಮ ಕಣ್ಣಿಗೆ ಬೀಳುತ್ತಲೇ ಇರಲಿಲ್ಲ—ನೋಡಬಹುದಾಗಿತ್ತು. ಮತ್ತೆ ಒಂದು ಕ್ಷಣದಲ್ಲಿ ಘೋರಾಂಧಕಾರ. ಈ ಸಲ ನೀವು ಆವು ಭಯಂಕರವಾಗಿ ಆರ್ಭಟಿಸುತ್ತಾ ದಡಬಡಿಸುತ್ತಾ ಗೊಣಗುತ್ತಾ—ಬರಿ ಪಾತ್ರೆಗಳು ಮೆಟ್ಟಲುಗಳಿಂದ ದಡದಡನುರುಳು ವಂತೆ—ಹೊರಳುವ ಆಕಾಶದಿಂದ ಭೂಮಿಯ ಕೆಳಪಕ್ಕಕ್ಕೆ ಸರಿಯುವ ಸದ್ದನ್ನೂ ಕೇಳ ಬಹುದು ಮಹಡಿ ಹೆಚ್ಚು ಎತ್ತರದ್ದಾದರೆ, ಅವು ಹೆಚ್ಚು ಸಲ ಪುಟಿಯುವುದನ್ನು ನೀವು ಬಲ್ಲಿರಷ್ಟೆ,

"ಜಿಮ್ ಇದು ಸೊಗಸಾಗಿದೆ. ನಾನು ಬೇರೆ ಇನ್ನೆಲ್ಲೂ ಇರಬಯಸೆನು. ಎಲ್ಲಿ ಇನ್ನೊಂದು ತುಕಡಿ ಮೀನನ್ನೂ, ಇನ್ನಷ್ಟು ಬಿಸಿಬಿಸಿ ಕಾಡು–ರೊಟ್ಟಿಯನ್ನೂ ನನ್ನ ಕೈಗೆ ಹಾಕು" ಎಂದೆ ನಾನು.

"ನೋಡಿದೆಯೋ ಜಿಮ್ಮನಿಲ್ಲದೆ ಹೋಗಿದ್ದರೆ ನೀನಿಲ್ಲಿಗೆ ಬರುತ್ತಲೇ ಇರಲಿಲ್ಲ. ನೀನು ಹೊಟ್ಟೆಗಿಲ್ಲದೆ ಕಾಡಿನಲ್ಲೆಲ್ಲೋ ಅಲೆಯುತ್ತಿದ್ದೆ, ಮುಳುಗಿ ಹೋಗುತ್ತಿದ್ದೆ. ಗೆಳೆಯ, ಮಳೆ ಯಾವಾಗ ಬರುತ್ತದೆ ಎನ್ನುವುದು ಕೋಳಿ–ಮರಿಗಳಿಗೆ ಗೊತ್ತು, ಮಗು, ಹಕ್ಕಿಗಳಿಗೂ ಗೊತ್ತು."

ನದಿ ಏರುತ್ತಲೇ ಇತ್ತು, ಹತ್ತು ಹನ್ನೆರಡು ದಿನಗಳ ತನಕ ಏರುತ್ತಲೇ ಇತ್ತು. ಕೊನೆಗೆ ತನ್ನ ದಡಗಳ ಮೇಲೆ ಉಕ್ಕಿ ಹರಿಯಿತು. ಹಳ್ಳತಗ್ಗುಗಳ ಮೇಲೂ ಇಲ್ಲಿನಾಯ್ಸ್ ಕಡೆಗಿರುವ ಅಡಿ ನೆಲದಮೇಲೂ ಮೂರು ನಾಲ್ಕು ಅಡಿ ನೀರು ನಿಂತಿತ್ತು. ಆ ಭಾಗದಲ್ಲಿ ಅದು ಮೈಲಿಮೈಲಿ-ಗಳಗಲ ಹರಡಿಕೊಂಡಿತ್ತು. ಆದರೆ ಮಿಸ್ಸೌರಿ ಕಡೆಗೆ ಅದರ ಹರಹು–ಹಿಂದಿನಷ್ಟೇ—ಅರ್ಧ ಮೈಲಿಯಷ್ಟೇ ಇತ್ತು. ಏಕೆಂದರೆ ಮಿಸ್ಸೌರಿ ಕಡೆಯ ಕರೆ ಕಡಿದಾದ ನೆಲದ ಉನ್ನತ ಭಿತ್ತಿಯಾಗಿತ್ತು.

ಹಗಲೆಲ್ಲ ನಾವು ಕಿರುದೋಣಿಯನ್ನು ಮೀಟಿಕೊಂಡು ದ್ವೀಪದ ಮೇಲೆಲ್ಲ ಸುತ್ತಾ ಡುತ್ತಿದ್ದೆವು. ಹೊರಗೆ ಬಿಸಿಲು ಉರಿಯುತ್ತಿದ್ದರೂ, ಕಾಡಿನ ಒಳಭಾಗ ಬಲುತಂಪಾಗಿ ನೆರಳಾಗಿತ್ತು. ವೃಕ್ಷಗಳ ನಡುನಡುವೆ ನಾವು ಬಳಸಿಕೊಂಡು ಹೋಗುತ್ತಿದ್ದೆವು. ಕೆಲವುಸಲವಂತೂ ಲತೆಗಳು ಎಷ್ಟುದಟ್ಟವಾಗಿ ಬೆಳೆದುಕೊಂಡಿದ್ದವೆಂದರೆ ನಾವು ಆ ದಾರಿ ಯನ್ನೇ ತ್ಯಜಿಸಿ ಹಿಂದಕ್ಕೆ ಬಂದು, ಬೇರೆಕಡೆಗೆ ತಿರುಗಬೇಕಾಗಿತ್ತು. ಮುರಿದುಬಿದ್ದ ಒಂದೊಂದು ಮರದಮೇಲೂ ಮೊಲ ಹಾವು ಮುಂತಾದುವು ಕಣ್ಣಿಗೆ ಬೀಳುತ್ತಿದ್ದವು. ಒಂದೆರಡುದಿನಗಳಕಾಲ ಇಡೀ ದ್ವೀಪವೇ ಪ್ರವಾಹದಿಂದ ಮುಚ್ಚಿಹೋಗಿದ್ದುದರಿಂದ ಅವು ಹಸಿವಿನಿಂದ ಎಷ್ಟು ಮೆತ್ತಗಾಗಿದ್ದವು ಎಂದರೆ ನೀವು ದೋಣಿಯನ್ನು ಹತ್ತಿರಕ್ಕೆ ಕೊಂಡುಹೋಗಿ, ಬೇಕಾದರೆ ಅವುಗಳಮೇಲೆ ಕೈಯಿಡಲೂ ಬಹುದಿತ್ತು—ಹಾವು ಆಮೆ

ಗಳಾದರೋ ಸರಕ್ಕನೆ ನೀರಿಗೆ ಜಾರಿಕೊಳ್ಳುತ್ತಿದ್ದವು. ನಮ್ಮ ಗುಹೆಯಿದ್ದ ದಿಣ್ಣೆಯ ತುಂಬ ಅವುಗಳೇ, ಇಷ್ಟವಿದ್ದರೆ, ನಾವು ಅವುಗಳನ್ನು ಸಾಕಿಕೊಳ್ಳಬಹುದಿತ್ತು.

ಒಂದು ರಾತ್ರಿ ನಾವು ಸೊಗಸಾದ ಪೈನ್‌ಹಲಗೆಗಳ ಒಂದು ಮರಮುಟ್ಟಿನ ತೆಪ್ಪವನ್ನು ಹಿಡಿದುಕೊಂಡೆವು. ಅದು ಹನ್ನೆರಡು ಅಡಿ ಅಗಲವೂ ಹದಿನೈದು ಹದಿನಾರು ಅಡಿ ಉದ್ದವೂ ಆಗಿದ್ದು ಅದರ ಗಾತ್ರದ ಆರೇಳು ಅಂಗುಲ ನೀರಮೇಲೆ ಎದ್ದು ಕಾಣುತ್ತಿತ್ತು, ತಳ ಮಜಬೂತಾಗಿ ಮಟ್ಟವಾಗಿತ್ತು. ಕೆಲವೇಳೆ ಕೊಯ್ದ ದಿಮ್ಮಿಗಳು ಹಗಲಹೊತ್ತೇ ಕಣ್ಣಿಗೆ ಬೀಳುತ್ತಿದ್ದರೂ, ನಾವದನ್ನು ಹಿಡಿಯದೆ ಬಿಟ್ಟೆವು. ಹಗಲ ಬೆಳಕಿನಲ್ಲಿ ನಾವು ಕಾಣಿಸಿಕೊಳ್ಳಲಿಲ್ಲ.

ಇನ್ನೊಂದುರಾತ್ರಿ ನಾನು ದ್ವೀಪದ ಮುಖಭಾಗದಲ್ಲಿದ್ದಾಗ, ಹಗಲುಹುಟ್ಟುವ ಮುನ್ನ, ಪಶ್ಚಿಮದ ಕಡೆಯಲ್ಲಿ ಒಂದು ತೇಲು-ಮನೆ ಗೋಚರವಾಯಿತು. ನಾವಿರುವ ಬಳಿಗೆ ಬಂತು. ಅದು ಒಂದು ಮಹಡಿಯದು, ಕೊಂಚ ಓಲಿತ್ತು. ನಾವು ಹುಟ್ಟು ಹಾಕುತ್ತಾ ಅಲ್ಲಿಗೆ ಹೋಗಿ ಅದನ್ನು ಹತ್ತಿ ಮಹಡಿಯ ಕಿಟಕಿಯಿಂದ ಒಳಕ್ಕೆ ಇಳಿದೆವು. ಆಗಿನ್ನೂ ಮಬ್ಬುಗತ್ತಲೆ. ಏನೂ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಆದ್ದರಿಂದ ನಾವು ದೋಣಿಯ ಚಲನವನ್ನು ತ್ವರೆಗೊಳಿಸಿದೆವು. ಬೆಳಕುಹರಿಯುವತನಕ ಕಾಯುತ್ತ ಅಲ್ಲೇ ಕುಳಿತೆವು.

ನಾವು ದ್ವೀಪದ ಪಾದದ ಬಳಿಗೆ ಬರುವಹೊತ್ತಿಗೆ ಬೆಳಕು ಹರಿಯುತ್ತಿತ್ತು. ಕಿಟಕಿಯೊಳಗೆ ತಲೆಹಾಕಿ ನೋಡಿದೆವು. ಒಂದು ಹಾಸುಗೆ, ಒಂದು ಮೇಜು, ಎರಡು ಹಳೆಯ ಕುರ್ಚಿಗಳು ಮತ್ತು ಇನ್ನೂ ಹಲವಾರು ಸಾಮಾನುಗಳು ನೆಲದಮೇಲೆ ಬಿದ್ದಿದ್ದವು. ಗೋಡೆಯಮೇಲೆ ಬಟ್ಟೆಬರೆಗಳು ನೇತಾಡುತ್ತಿದ್ದವು ದೂರದಲ್ಲಿ ಮೂಲೆಯಲ್ಲಿ ನೆಲದ ಮೇಲೆ ಏನೋ ಬಿದ್ದುಕೊಂಡಿತ್ತು. ಅದೊಂದು ಮನುಷ್ಯನಂತೆ ಕಾಣುತ್ತಿತ್ತು. ಅದನ್ನು ಕಂಡು ಜಿಮ್ ಕೂಗಿದ.

"ಏ, ಯಾರು ?"

ಅದು ಅಲುಗಾಡಲಿಲ್ಲ. ನಾನು ಬಗ್ಗಿ ನೋಡಿದೆ. ಜಿಮ್ ಮತ್ತೆ ಹೇಳಿದ:

"ಇವನು ನಿದ್ದೆ ಮಾಡುತ್ತಿಲ್ಲ—ಸತ್ತುಹೋಗಿದ್ದಾನೆ ನೀನು ಸುಮ್ಮನೆ ನಿಲ್ಲು. ನಾನು ಕೂಗಿ ನೋಡುತ್ತೇನೆ."

ಅವನು ಹತ್ತಿರಕ್ಕೆ ಹೋದ, ಬಗ್ಗಿನೋಡಿದ; ಹೇಳಿದ:

"ಇದು ಹೆಣ. ಹೌದು. ನಿಜವಾಗಿ, ಬೆತ್ತಲೆ. ಇವನ ಬೆನ್ನಿಗೆ ಗುಂಡಿಟ್ಟು ಕೊಂದಿದ್ದಾರೆ, ಇವನು ಸತ್ತು ಮೂರುನಾಲ್ಕು ದಿನಗಳಾಗಿರಬೇಕೆಂದು ನನಗೆ ತೋರುತ್ತದೆ. ಬಾ ಒಳಗೆ, ಹಕ್. ಇವನ ಮುಖವನ್ನು ನೋಡಬೇಕು-ಅದು ಗಾಯಂಗಳಿಂದ, ಮುಚ್ಚಿಹೋಗಿದೆ."

ನಾನು ಅವನಕಡೆಗೆ ನೋಡಲೇ ಇಲ್ಲ. ಜಿಮ್ ಕೆಲವು ಚಿಂದಿಚಟ್ಟೆಗಳನ್ನು ಅವನ ಮೇಲೆ ಎಳೆದನು. ಅವನು ಹಾಗೆ ಮಾಡಬೇಕಾಗಿಯೇ ಇರಲಿಲ್ಲ. ನನಗೆ ಅವನನ್ನು

ನೋಡುವ ಆಪೇಕ್ಷೆ ಇರಲಿಲ್ಲ. ಜಿಡ್ಡಾಗಿದ್ದ ಹಳೆಯ ಇಸ್ಪೇಟೆಲೆಗಳೂ, ಹಳೆಯ ವಿಸ್ಕಿ ಸೀಸೆಗಳೂ, ಕರಿಬಟ್ಟೆಯಿಂದ ಮಾಡಿದ ಕೆಲವು ಮೊಗವಾಡಗಳೂ ಸುತ್ತಲೂ ನೆಲದ ಮೇಲೆ ಬಿದ್ದಿದ್ದವು. ಗೋಡೆಗಳ ಮೇಲೆಲ್ಲ ಇದ್ದಲಿನಿಂದ ಬರೆದ ಅತಿಮೂಢಪದಗಳೂ ಚಿತ್ರಗಳೂ ಇದ್ದವು. ಎರಡು ಹಳೆಯ ಕೊಳಕಾದ ಕ್ಯಾಲಿಕೋ ಉಡುಪುಗಳೂ, ಒಂದು ಬಿಸಿಲು-ಕುಲಾವಿಯೂ, ಕೆಲವು ಹೆಂಗಸರ ಒಳಉಡುಗೆಗಳೂ, ಕೆಲವು ಗಂಡಸರ ಬಟ್ಟೆಗಳೂ ಗೋಡೆಯಿಂದ ತೂಗಾಡುತ್ತಿದ್ದವು. ಒಟ್ಟು ಎಲ್ಲವನ್ನೂ ನಾವು ಕಿರುದೋಣಿಗೆ ಸಾಗಿಸಿದೆವು—ಒಳ್ಳೆಯದಾಯಿತೆಂದು, ಹುಡುಗರು ಧರಿಸುವ ಹುಲ್ಲು ಟೋಪಿಯೊಂದು ನೆಲದಮೇಲೆ ಬಿದ್ದಿತ್ತು; ಅದರ ತುಂಬಾ ಕರೆಗಳಿದ್ದವು. ನಾನು ಅದನ್ನು ಎತ್ತಿಕೊಂಡೆ. ಅಲ್ಲೊಂದು ಹಾಲಿನ ಸೀಸೆಯೂ ಇತ್ತು. ಅದಕ್ಕೆ ಹಳೆಬಟ್ಟೆಯ ಬಿರುಡೆಯನ್ನು ಹಾಕಿತ್ತು. ಮಗುವಿಗೆ ಹಾಲುಕುಡಿಸಲು ಅನುಕೂಲವಾಗಿತ್ತು. ಅದು ಒಡೆದಿರದಿತ್ತೆ ನಾವದನ್ನೂ ಕೊಂಡುಹೋಗುತ್ತಿದ್ದೆವು. ಜೀರ್ಣವಾದ ಒಂದು ಹಳೆಯ ಪೆಟಾರಿಯೂ ಚಿಲಕಮುರಿದ ಒಂದು ಹಳೆಯ ಪೆಟ್ಟಿಗೆಯೂ ಅಲ್ಲಿದ್ದವು. ಅವು ತೆರೆದೇ ಇದ್ದವು; ಒಳಗೆ ಬೆಲೆಯಾದದ್ದೇನೂ ಉಳಿದಿರಲಿಲ್ಲ. ಪದಾರ್ಥಗಳೆಲ್ಲವೂ ಚೆಲ್ಲಾಪಿಲ್ಲಿಯಾಗಿರುವುದನ್ನು ನೋಡಿದ ನಮಗೆ ಯಾರೋ ಆವರಸದಲ್ಲಿ ಈ ಸ್ಥಳವನ್ನು ಬಿಟ್ಟು ಹೋಗಿರಬೇಕೆಂದೂ, ತಮ್ಮ ಸರಕಿನಲ್ಲಿ ಹೆಚ್ಚು ಪಾಲನ್ನು ಒಯ್ಯಲು ಅವರು ಏರ್ಪಾಡುಮಾಡಿಕೊಂಡಿರಲಿಲ್ಲವೆಂದೂ ತೋರಿತು.

ನಮಗೆ ಸಿಕ್ಕಿದ ಪದಾರ್ಥಗಳಿವು; ಒಂದು ಹಳೆಯ ತಗಡಿನ ಲಾಂದ್ರ, ಒಂದ ಹಿಡಿಯಿಲ್ಲದ ಕಡು-ಗತ್ತಿ, ಯಾವ ಅಂಗಡಿಯಲ್ಲಾದರೂ ಒಂದಿಷ್ಟು ಬೆಲೆಬಾಳುವ ಒಂದು ಹೊಚ್ಚಹೊಸ ಚಾಕು, ಬೇಕಾದಷ್ಟು ಚರಬಿಯ ಮೋಂಬತ್ತಿಗಳು, ಒಂದು ತಗಡಿನ ಮೋಂಬತ್ತಿಯ ಹಿಡಿ, ಒಂದು ಸೋರೆಯ ಹಿಡಿ, ಒಂದು ತಗಡಿನ ಬಟ್ಟಲು ಹಾಸುಗೆಯಾಚೆಗೆ ಬಿದ್ದಿದ್ದ ಮತ್ತು ಇಲಿ ಕಚ್ಚಿದ ಒಂದು ಮಗ್ಗಲುಹಾಸುಗೆ, ಸೂಜಿಗಳು ಗುಂಡುಸೂಜಿಗಳು, ಜೇನುಮೇಣ, ಗುಂಡಿಗಳು ದಾರ ಮುಂತಾದ ವಸ್ತುಗಳಿಂದ ತುಂಬಿದ ಒಂದು ಹೆಣಿಗೆಚೀಲ, ಒಂದು ಕೈಬಾಚಿ, ಹಲವು ಮೊಳೆಗಳು, ನನ್ನ ಕಿರು ಬೆರಳಿನಗಾತ್ರದ ಕೊಕ್ಕೆಗಳುಳ್ಳ ಒಂದು ಮೀನು-ಹಿಡಿಯುವ ದಾರ, ಒಂದು ಜಿಂಕೆತೊಗಲಿನ ಸುರುಳಿ, ಒಂದು ಚಕ್ಕಳದ ನಾಯಿಯ ಕೊರಳುಪಟ್ಟಿ, ಒಂದು ಕುದುರೆಯ ಲಾಳ, ಹೆಸರುಪಟ್ಟಿಗಳಿಲ್ಲದ ಔಷಧದ ಚಿಕ್ಕಸೀಸೆಗಳು. ನಾವು ಆಸ್ಥಳವನ್ನು ಬಿಡುವ ಸಮಯದಲ್ಲಿ ನನಗೊಂದು ಕುದುರೆಗಳನ್ನು ಮಾಲೀಸುಮಾಡುವ ಸುಮಾರಾದ ಬಾಚಣಿಗೆಯೂ ಸಿಕ್ಕಿತು; ಜಿಮ್ಮನಿಗೆ ಒಂದು ಹಳೆಯ ಸವೆದ ಪಿಟೀಲುಕಮಾನೂ ಒಂದು ಮರಗಾಲೂ ಸಿಕ್ಕಿದವು. ಕಟ್ಟುವ ಪಟ್ಟಿಗಳು ಮಾತ್ರ ಕಿತ್ತುಹೋಗಿದ್ದವು. ಅದು ಸಾಕಷ್ಟು ಉಪಯೋಗಕರವಾಗಿಯೇ ಇತ್ತು. ಆದರೆ ಅದು ನನಗೆ ಬಲು ದೊಡ್ಡದು; ಜಿಮ್ಮನಿಗೆ ಸಾಲದು. ಒಳಗೆಲ್ಲಾ ನಾವೆಷ್ಟೇ ಹುಡುಕಿದರೂ ನಮಗೆ ಅದರಜತೆಗಾಲು ಸಿಕ್ಕಲೇ ಇಲ್ಲ.

ಒಟ್ಟಿನಲ್ಲಿ ನಮಗೆ ಒಳ್ಳೆಯ ಲಾಭವಾಯಿತು. ಹೊರಡಲು ಸಿದ್ಧರಾದೆವು, ಆಗ ನಾವು ದ್ವೀಪಕ್ಕೆ ಕಾಲುಮೈಲಿ ದೂರವಿದ್ದೆವು. ಹಗಲ ಬೆಳಕು ತಾನೇತಾನಾಗಿತ್ತು. ಆದ್ದರಿಂದ ನಾನು ಜಿಮ್ಮನಿಗೆ ಮಲಗೆಂದು ಹೇಳಿ ಅವನಮೇಲೆ ಒಂದು ರಜಾಯಿಯನ್ನು ಹೊದ್ದಿಸಿದೆ. ಏಕೆಂದರೆ, ಅವನು ಎದ್ದು ಕುಳಿತಿದ್ದರೆ, ದೂರದಿಂದಲೂ ಜನ ಅವನನ್ನು ನೀಗ್ರೋವೆನ್ನಬಹುದಿತ್ತು, ನಾನು ಹುಟ್ಟುಹಾಕಿಕೊಂಡು ಇಲ್ಲಿನಾಯ್ಸ್ ತೀರಕ್ಕೆ ಹೋದೆ. ಅಲ್ಲಿಗೆ ತಲಪುವ ಮುನ್ನ ನಾನು ನದಿಯ ಕೆಳಭಾಗಕ್ಕೆ ಅರ್ಧಮೈಲಿಯ ತನಕ ಪ್ರಯಾಣಮಾಡಬೇಕಾಯಿತು. ದಡದ ಕೆಳಗಿನ ನಿಂತ ನೀರಿಗೆ ನಾನು ಮೆಲ್ಲಗೆ ಸೇರಿಕೊಂಡೆ. ಯಾವ ಅಪಘಾತಗಳೂ ಒದಗಲಿಲ್ಲ, ಯಾರೂ ಕಣ್ಣಿಗೆ ಬೀಳಲಿಲ್ಲ. ಸುರಕ್ಷಿತವಾಗಿ ನೆಲೆಗೆ ಹಿಂದಿರುಗಿದೆವು,

## ೧೦

ಬೆಳಗಿನ ಉಪಹಾರವಾದಮೇಲೆ. ಆ ಮೃತನ ವಿಷಯದಲ್ಲಿಯೂ ಅವನು ಸತ್ತದ್ದು ಎಂತೆಂಬುದರ ವಿಷಯದಲ್ಲಿಯೂ ನಾನು ಮಾತಾಡಲೆಳಸಿದೆ. ಅದು ಜಿಮ್ಮನಿಗೆ ಇಷ್ಟವಾಗಲಿಲ್ಲ. ಅದು ಅನಿಷ್ಟಕಾರಕವೆಂದನು; ಅದಲ್ಲದೆ, ಅವನು ಬಂದು ನಮ್ಮನ್ನು ಮುಟ್ಟಿಕೊಳ್ಳಬಹುದು ಎಂದನು. ಸತ್ತು ಸಮಾಧಿಯಲ್ಲಿ ನೆಮ್ಮದಿಯಾಗಿರುವವನಿಗಿಂತ, ಸತ್ತಮೇಲೆ ಸರಿಯಾಗಿ ಹೂಳಿಸಿಕೊಳ್ಳದವನು ದೆವ್ವವಾಗಿ ಅಲೆಯುವುದು ಹೆಚ್ಚು ಸಂಭವ ಎಂದನವನು, ಅದು ಸಾಕಷ್ಟು ಸಕಾರಣವೆನ್ನಿಸಿತು, ನಾನು ಏನನ್ನೂ ಹೇಳಲಿಲ್ಲ. ಆದರೆ ಆ ಯೋಚನೆಯನ್ನೇ ಬಿಡುವುದೂ, ಯಾರು ಅವನನ್ನು ಗುಂಡಿಟ್ಟುಕೊಂದರು. ಏಕೆ ಹಾಗೆಮಾಡಿದರು ಎಂಬುದನ್ನು ತಿಳಿಯುವ ಆಸೆಯನ್ನೇ ಬಿಡುವುದೂ ನನಿಂದಾಗಲಿಲ್ಲ.

ನಮಗೆ ದೊರೆತ ಬಟ್ಟೆಬರೆಗಳನ್ನು ನಾವು ಶೋಧಿಸಿದೆವು :ಹಳೆಯ ಕಂಬಳಿಯ ಮೇಲಂಗಿಯೊಂದರ ಹೊಲಿ ಉದರದಲ್ಲಿ ನಮಗೆ ಎಂಟುಬೆಳ್ಳಿಯ ಡಾಲರುಗಳು ಸಿಕ್ಕಿದವು. ಆ ಮನೆಯಲ್ಲಿದ್ದವರು ಅಂಗಿಯನ್ನು ಕದ್ದರೆಂದು ಜಿಮ್ ಭಾವಿಸಿದನು; ಏಕೆಂದರೆ, ಅದರಲ್ಲಿ ಹಣವಿರುವುದು ಅವರೆಲ್ಲರಿಗೂ ತಿಳಿದಿದ್ದರೆ, ಅವರೆಂದಿಗೂ ಅದನ್ನು ಬಿಟ್ಟುಹೋಗುತ್ತಿರಲಿಲ್ಲ. ಅಷ್ಟೇಅಲ್ಲ ಅವರು ಅವನನ್ನು ಕೊಂದರು ಎಂದು ನಾನೆಣಿಸಿದೆ; ಆದರೆ ಜಿಮ್ ಆ ಪ್ರಸ್ತಾಪವೆತ್ತಲು ಇಷ್ಟಪಡಲಿಲ್ಲ. ನಾನು ಅವನಿಗೆ ಹೇಳಿದೆ :

"ಅದು ದುರದೃಷ್ಟವೆಂದು ನೀನು ಯೋಚಿಸುತ್ತೀಯೆ : ಆದರೆ ಮೊನ್ನೆ ನಾನು ದಿಣ್ಣೆಯ ಮೇಲೆ ನನಗೆ ಸಿಕ್ಕಿದ ಹಾವಿನ ಪೊರೆಯನ್ನು ನಾನು ಕೈಯಿಂದ ಮುಟ್ಟುವುದು ಈ ಪ್ರಪಂಚದಲ್ಲೇ ಅತಿ ಘೋರವಾದ ದುರದೃಷ್ಟವೆಂದು ನೀನು ಹೇಳಿದೆ. ನಿನ್ನ

ದುರದೃಷ್ಟ ಇಲ್ಲಿದೆ ನೋಡು! ನಾವು ಈ ಸರಕನ್ನೆಲ್ಲಾ ಅಲ್ಲದೆ ಎಂಟು ಡಾಲರುಗಳನ್ನೂ ಸಂಪಾದಿಸಿದೆವು. ಜಿಮ್, ಈ ಬಗೆಯ ದುರದೃಷ್ಟ ನಮಗೆ ದಿನವೂ ಸಿಕ್ಕಲೆಂದು ನಾನು ಹಾರೈಸುತ್ತೇನೆ."

"ಹಾಗೆ ತಿಳಿಯದಿರು, ಚಿನ್ನ, ಹಾಗೆ ತಿಳಿಯದಿರು. ಅತಿಯಾಗಿ ದುಡುಕದಿರು. ಅದು ಬರುತ್ತಿದೆ; ನಾನು ಹೇಳುವುದನ್ನು ಗಮನಿಸು, ಅದು ಬರುತ್ತಾ ಇದೆ."

ಅದು ಬಂತೇ ಬಂತು. ನಾವು ಹೀಗೆ ಮಾತಾಡಿಕೊಂಡದ್ದು ಮಂಗಳವಾರದ ದಿನ. ಸರಿ ಊಟ ಮುಗಿಸಿಕೊಂಡು ನಾವು ಶುಕ್ರವಾರದಂದು ದಿಣ್ಣೆಯ ಮೇಲು ಭಾಗದ ಅಂಚಿನಲ್ಲಿ ಹುಲ್ಲಿನಮೇಲೆ ಮಲಗಿದ್ದೆವು, ಸ್ವಲ್ಪಹೊತ್ತಿಗೆ ನಮ್ಮಲ್ಲಿದ್ದ ತಂಬಾಕು ಮುಗಿಯಿತು. ಒಂದಿಷ್ಟು ಅದನ್ನು ತರಲು ನಾನು ಮತ್ತೆ ಗುಹೆಯೊಳಕ್ಕೆ ಹೋದೆ, ಅಲ್ಲೊಂದು "ಗದ್ದಲದ ಹಾವಿ"ರುವುದನ್ನು ಕಂಡೆ. ನಾನು ಅದನ್ನು ಕೊಂದು ಸಿಂಬಿ ಸುತ್ತಿ ಜಿಮ್ಮನ ಕಂಬಳಿಯ ಅಡಿಯಲ್ಲಿಟ್ಟೆ. ಅದು ಬದುಕಿರುವ ಹಾವಿನಂತೆಯೇ ಇತ್ತು. ಜಿಮ್ ಅದನ್ನು ಕಾಣಲಿ, ತಮಾಷೆ ಮಾಡೋಣ ಎಂದು ಯೋಚಿಸಿದೆ. ರಾತ್ರಿಯ ಹೊತ್ತಿಗೆ ನನಗೆ ಹಾವಿನ ಪ್ರಕರಣವಷ್ಟೂ ಮರೆತುಹೋಯಿತು. ಜಿಮ್ ಬಂದು ತನ್ನ ಕಂಬಳಿಯಮೇಲೆ ಬಿದ್ದುಕೊಂಡಾಗ ನಾನು ದೀಪದ ಕಡ್ಡಿಯನ್ನು ಗೀಚಿದೆ. ಆಗ ಆ ಆ ಹಾವಿನ ಸಂಗಾತಿ ಅಲ್ಲಿಗೆ ಬಂದಿತ್ತು. ಅದು ಅವನನ್ನು ಕಚ್ಚಿತು. ಅವನು ಕಿರಿಚುತ್ತಾ ಎಗರಾಡಿದನು, ಅದಕ್ಕೂ ಮೊದಲು ಆ ವಿಷಜಂತು. ಮೇಲೆದ್ದು ಎರಡನೆಯ ಸಲ ಕಚ್ಚುವುದಕ್ಕೆ ಸಿದ್ಧವಾಗುತ್ತಿರುವುದನ್ನು ದೀಪದ ಬೆಳಕು ಕಾಣಿಸಿತು. ನಾನದರ ಕಥೆಯನ್ನು ದೊಣ್ಣೆಯಿಂದ ಹೊಡೆದು ಒಂದು ಕ್ಷಣದಲ್ಲಿ ಮುಗಿಸಿದೆ, ಜಿಮ್ ಅಪ್ಪನ ವ್ಹಿಸ್ಕಿ ಹೂಜಿಯನ್ನು ಗಬಕ್ಕನೆ ಎತ್ತಿಕೊಂಡು ಕುಡಿಯ ತೊಡಗಿದನು.

ಜಿಮ್ ಬರಿಗಾಲಿನಲ್ಲಿದ್ದ. ಸರಿಯಾಗಿ ಅವನ ಹಿಮ್ಮಡಿಯ ಮೇಲೆಯೇ ಹಾವು ಕಚ್ಚಿತ್ತು, ಇಷ್ಟೆಲ್ಲಾ ಅನಾಹುತ ಆದದ್ದು. 'ನೀವು ಸತ್ತ ಹಾವನ್ನು ಬಿಟ್ಟ ಬಳಿಗೆ ಅದರ ಸಂಗಾತಿಯೂ ಬಂದು ಅದರ ಸುತ್ತಲೂ ಸುತ್ತಿಕೊಳ್ಳುತ್ತದೆ' ಎಂಬ ಸಾಮಾನ್ಯ ಸಂಗತಿಯನ್ನು ನಾನು ನೆನಪಿಗೆ ತಂದುಕೊಳ್ಳದೆ ಹೋದದ್ದರಿಂದ, ಹಾವಿನ ತಲೆಯನ್ನು ಕಡಿದೆಸೆಯಬೇಕೆಂದೂ, ಅದರ ಚರ್ಮವನ್ನು ಸುಲಿದು ಅದರ ದೇಹದ ಒಂದು ಚೂರನ್ನು ಸುಟ್ಟುಕೊಡಬೇಕೆಂದೂ ಜಿಮ್ ಹೇಳಿದ. ನಾನು ಹಾಗೆಯೇ ಮಾಡಿದೆ; ಅವನು ಅದನ್ನು ತಿಂದ, ಅದು ತನ್ನನ್ನು ಗುಣಪಡಿಸುವುದೆಂದು ನುಡಿದ. ಆ ಹಾವುಗಳ ಭಾಗಗಳನ್ನು ಎತ್ತಿಕೊಂಡು ತನ್ನ ಮಣಿಕಟ್ಟಿನ ಸುತ್ತ ಕಟ್ಟಬೇಕೆಂದೂ, ಅದು ಒಳ್ಳೆಯದೆಂದೂ ಹೇಳಿದ. ನಾನು ಹಾಗೆ ಮಾಡಿದೆ. ಬಳಿಕ ಆ ಹಾವುಗಳನ್ನು ಸದ್ದು ಮಾಡದೆ ಕೊಂಡುಹೋಗಿ ದೂರದ ಪೊದೆಗಳಿಗೆ ಬೀಸಿ ಎಸೆದೆ. ನನ್ನ ಕೈಲಾದಮಟ್ಟಿಗೂ,

ಇಷ್ಟೆಲ್ಲಾ ಆದದ್ದು ನನ್ನ ತಪ್ಪಿನಿಂದಲೇ ಎಂಬುದು ಅವನಿಗೆ ಗೊತ್ತಾಗದಂತೆ ಮಾಡುವುದೇ ನನ್ನ ಉದ್ದೇಶವಾಗಿತ್ತು,

ಜಿಮ್ ಹೂಜಿಯ ಮೂತಿಗೆ ತುಟಿಯಿಟ್ಟು ಹೀರಿದ್ದೂ ಹೀರಿದ್ದೇ. ಆಗಾಗ ಅವನು ಬುದ್ದಿಗೆಟ್ಟು ಸುತ್ತಲೂ ತಿರುಗಿ ಕುಣಿದು ಕಿರಿಚುತ್ತಿದ್ದನು; ಚಿತ್ತಸ್ವಾಸ್ಥ್ಯ ಹಿಂದಿರುಗಿದ ಪ್ರತಿಸಲವೂ ಅವನು ಮತ್ತೆ ಮತ್ತೆ ಹೂಜಿಯಿಂದ ವ್ಹಿಸ್ಕಿಯನ್ನು ಹೀರುತ್ತಿದ್ದನು ಅವನ ಹೆಜ್ಜೆಯೂ ಕಾಲೂ ತುಂಬಾ ದಪ್ಪನಾಗಿ ಊದಿಕೊಂಡವು. ಕ್ರಮೇಣ ಕುಡಿತ ಪ್ರಭಾವಶಾಲಿಯಾಯಿತು. ಆದ್ದರಿಂದ ಅವನು ಸರಿಹೋದಾನು ಎಂದುಕೊಂಡೆ; ನನ್ನನ್ನು ಕೇಳಿದರೆ, ಅಪ್ಪನ ವ್ಹಿಸ್ಕಿಯನ್ನು ಕುಡಿಯುವುದಕ್ಕಿಂತ ಹಾವಿನಿಂದ ಕಚ್ಚಿಸಿಕೊಳ್ಳುವುದೇ ಲೇಸು.

ಜಿಮ್ ನಾಲ್ಕು ಹಗಲು ನಾಲ್ಕು ರಾತ್ರಿಗಳ ತನಕ ಹಾಸುಗೆಯಲ್ಲೇ ಬಿದ್ದುಕೊಂಡಿದ್ದನು. ಆಮೇಲೆ ಊತ ಇಳಿದುಹೋಯಿತು, ಅವನು ಸಂಪೂರ್ಣವಾಗಿ ಚೇತರಿಸಿಕೊಂಡನು. ಈ ಪ್ರಸಂಗದಿಂದ ಪಾಠ ಕಲಿತು, ಇನ್ನೆಂದಿಗೂ ನಾನು ಹಾವಿನ ಪೊರೆಯನ್ನು ಕೈಯಲ್ಲಿ ಹಿಡಿಯುವುದಿಲ್ಲವೆಂದು ನಿಶ್ಚಯಿಸಿದೆ. ಇನ್ನು ಮುಂದಿನ ಸಲವಾದರೂ ತನ್ನ ಮಾತನ್ನು ನಾನು ನಂಬುವುದು ಖಂಡಿತವೆಂದುಕೊಂಡನು ಜಿಮ್. ಹಾವಿನ ಪೊರೆಯನ್ನು ಕೈಯಲ್ಲಿ ಹಿಡಿಯುವುದು ಮಹಾ ದೌರ್ಭಾಗ್ಯವೆಂದೂ, ಅದು ಪೂರ್ತಿ ನಮ್ಮನ್ನು ಬಿಟ್ಟುಹೋಯಿತೆಂದು ಇನ್ನೂ ತಿಳಿಯಲಾಗದೆಂದೂ ಜಿಮ್ ಹೇಳಿದನು; ಹಾವಿನ ಪೊರೆಯನ್ನು ಒಮ್ಮೆ ಕೈಯ್ಯಲ್ಲಿ ಹಿಡಿಯುವುದಕ್ಕಿಂತ, ನಾನು ಸಾವಿರಸಲ ಬೇಕಾದರೂ ತನ್ನ ಎಡಹೆಗಲಮೇಲಿಂದ ಎಳೆಚಂದಿರನನ್ನು ನೋಡುವುದು ಲೇಸೆಂದನು. ಎಳೆಚಂದಿರನೆಡೆಗೆ ಎಡಹೆಗಲಮೇಲಿಂದ ಕಣ್ಣೆತ್ತುವುದು ಯಾರಿಗೂ ಅತ್ಯಂತ ಅಜಾಗರೂಕತೆಯು ಮತ್ತು ಅತಿಮೂರ್ಖತೆಯು ವ್ಯವಹಾರವೆಂದು ನಾನುಯಾವಾಗಲೂ ಎಣಿಸಿದ್ದರೆ ಕೂಡು ನನಗೂ ಹಾಗೆ ಮಾಡಿದನಂತೆ, ಮತ್ತು ಜಂಬ ಕೊಚ್ಚಿದನಂತೆ, ಆದರೆ ಅದಾದ ಎರಡ, ವರುಷನೊಳಗೇ ಅವನು ಚೆನ್ನಾಗಿ ಕುಡಿದು ರಕ್ಷಣಾಗೋಪುರದಿಂದ ಕೆಳಗೆ ಬಿದ್ದು ಸತ್ತುಹೋದನು, ಜಜ್ಜಿ ಚಪ್ಪಟೆಯಾಗಿದ್ದ ಅವನನ್ನು ಮಗ್ಗುಲಾಗಿ ಹಗೇವಿನ ಬಾಗಿಲು ತೆರೆದು ಒಳಕ್ಕೆ ತಳ್ಳಿ ಹಾಗೆಯೇ ಹೂತರು ಎನ್ನುತ್ತಾರೆ; ಆದರೆ ನಾನು ಅದನ್ನು ನೋಡಲಿಲ್ಲ, ಅಪ್ಪ ಹಾಗೆ ಹೇಳಿದ್ದ, ಏನೇ ಇರಲಿ, ಅದೆಲ್ಲಾ ಆದದ್ದು, ತಿಳಿಗೇಡಿಯಂತೆ, ಚಂದ್ರನನ್ನು ಹಾಗೆ ನೋಡಿದ್ದರಿಂದ.

ಸರಿ, ದಿನಗಳುರುಳಿದವು; ನದಿ ಮತ್ತೆ ಇಳಿದುಹೋಯಿತು. ಆಗ ನಾವು ಮಾಡಿದ ಪ್ರಾಯಶಃ ಮೊತ್ತಮೊದಲನೆಯ ಕೆಲಸವೆಂದರೆ: ಚರ್ಮಸುಲಿದ ದೊಲವೊಂದನ್ನು ಮೀನು ಹಿಡಿಯುವ ಗಾಳದ ದೊಡ್ಡ ಕೊಂಡಿಗೆ ಸಿಕ್ಕಿಸಿ ನೀರಿಗೆ ಇಳಿಯಬಿಟ್ಟು ಒಬ್ಬ ಮನುಷ್ಯನ ಗಾತ್ರದ ಒಂದುಕ್ಯಾಟ್–ಮೀನನ್ನು ಹಿಡಿದದ್ದು; ಆರು ಅಡಿ ಎರಡು ಅಂಗುಲ ಉದ್ದವಿದ್ದು ಇನ್ನೂರು ಪೌಂಡುಗಳ ಮೇಲೆ ತೂಗುತ್ತಿದ್ದ ಮೀನು ಅದು,

ನಾವು ಅದನ್ನು ಕೈಯಲ್ಲಿ ಹಿಡಿಯುವುದಾಗಲಿಲ್ಲ; ಅದು ನಮ್ಮನ್ನು ಇಲ್ಲಿನಾಯ್ಸಿಗೆ ಹಾರಿಸಿಬಿಡುತ್ತಿತ್ತು. ನಾವು ಅಲ್ಲೇ ಅದು ಮುಳುಗುವ ತನಕ ಕಾದು ಕುಳಿತಿದ್ದೆವು. ಅದರ ಹೊಟ್ಟೆಯಲ್ಲಿ ಒಂದು ಹಿತ್ತಾಳೆ ಗುಂಡಿಯೂ, ಗುಂಡಾದ ಚೆಂಡು, ರಾಶಿಗಟ್ಟಲೆ ಕಸಕಡ್ಡಿಗಳೂ ಇದ್ದವು. ಕೈಬಾಚಿಯಿಂದ ಚೆಂಡನ್ನು ಸೀಳಿದೆವು. ಅದರೊಳಗೊಂದು ಚಿಕ್ಕ ಗಾಲಿ ಇತ್ತು. ಅದು ಬಹುಕಾಲದಿಂದ ಅಲ್ಲೇ ಇತ್ತೆಂದು, ಕಾಲಕಾಲಕ್ಕೆ ಏನೇನೊ ಅಂಟಿಕೊಳ್ಳುತ್ತ ಬಂದು ಕಡೆಗೆ ಅದೊಂದು ಚೆಂಡಿನಾಕೃತಿಯನ್ನು ತಾಳಿತೆಂದೂ ಜಿಮ್ ಹೇಳಿದನು. ಆ ಮೀನೋ ಮಿಸ್ಸಿಸಿಪ್ಪಿ ನದಿಯಲ್ಲಿ ಸಿಕ್ಕುವ ಯಾವ ಬಲು ಭಾರಿಮೀನಿಗೂ ಸಾಟಿಯಾಗಿತ್ತು. ಎಂದು ನನ್ನೆಣಿಕೆ, ತಾನು ಅದಕ್ಕಿಂತ ಭಾರಿ ಮೀನನ್ನು ಕಂಡೇ ಇಲ್ಲವೆಂದನು ಜಿಮ್. ಅದನ್ನು ಹಳ್ಳಿಗೆ ಒಯ್ದರೆ ತುಂಬಾ ಬೆಲೆ ಗಿಟ್ಟುತ್ತಿತ್ತು. ಆ ಬಗೆಯ ಮೀನನ್ನು ಪೌಂಡಿಗಿಷ್ಟೆಂದು ಮಾರುಕಟ್ಟೆಯಲ್ಲಿ ಮಾರುತ್ತಾರೆ. ಎಲ್ಲರೂ ಅದರ ತುಂಡುಗಳನ್ನು ಕೊಂಚ ಕೊಂಚ ಕೊಳ್ಳುತ್ತಾರೆ. ಅದರ ಮಾಂಸ ಮಂಜಿನಷ್ಟು ಬೆಳ್ಳಗಿರುತ್ತದೆ; ಕರಿದರೆ ತುಂಬಾ ಚೆನ್ನಾಗಿರುತ್ತದೆ.

ಮರುದಿನ ಬೆಳಗಾಗ ನನಗೆ ಏನೋ ಜಡತೆ ಏನೋ ಸೋಂಬೇರಿತನ. ಹೇಗಾದರೂ ಮಾಡಿ ಲವಲವಿಕೆಯನ್ನೂ ಪಡೆಯುವ ಅಪೇಕ್ಷೆಯುಂಟಾಯಿತು. ಆದ್ದರಿಂದ ನದಿಗೆ ಹೋಗಿ ಅಲ್ಲಿ ಏನು ನಡೆಯುತ್ತದೆ ನೋಡೋಣವೆಂದುಕೊಂಡೆ, ಜಿಮ್ಮನಿಗೆ ಈ ಸೂಚನೆ ರುಚಿಸಿತು, ಆದರೆ ನಾನು ಮಬ್ಬಿನಲ್ಲೇ ಚಲಿಸಬೇಕೆಂದೂ, ಜಾಗರೂಕನಾಗಿರಬೇಕೆಂದೂ ಅವನು ನನಗೆ ಎಚ್ಚರಿಕೆ ಕೊಟ್ಟನು. ಅವನೂ ಆಲೋಚನೆ ಮಾಡಿದನು ; ಅಲ್ಲಿರುವ ಹಳೆಯ ಉಡುಗೆ ತೊಡಗೆಗಳನ್ನು ಉಪಯೋಗಿಸಿಕೊಂಡು ನೀನು ಹೆಣ್ಣಿನ ವೇಷ ಹಾಕಿಕೊಳ್ಳುವುದು ಸಾಧ್ಯವಾಗದೆ ಎಂದನವನು. ಅದೂ ಒಳ್ಳೆಯ ಸೂಚನೆಯೇ. ನಾವು ಅಲ್ಲಿದ್ದ ದಪ್ಪ ಬಿಳಿಯರಿವೆಯ ನಿಲುವಂಗಿಯನ್ನು ಚಿಕ್ಕದು ಮಾಡಿಕೊಂಡೆವು. ನಾನು ನನ್ನ ಷರಾಯನ್ನು ಮಂಡಿಯ ತನಕ ಎತ್ತಿ ಕಟ್ಟಿಕೊಂಡೆ. ಜಿಮ್ ಅದರ ಹಿಂಭಾಗವನ್ನು ಕೊಂಡಿಗಳಿಂದ ಬಿಗಿಗೊಳಿಸಿದನು ವೇಷವೇನೋ ಹೆಚ್ಚು ಕಡಿಮೆ ಒಪ್ಪುತ್ತಿತ್ತು. ಬಿಸಿಲು–ಟೋಪಿಯನ್ನು ಹಾಕಿಕೊಂಡು ಅದರ ಪಟ್ಟಿಯನ್ನು ಗಲ್ಲದ ಕೆಳಗೆ ಕಟ್ಟಿಕೊಂಡೆ. ಯಾರಾದರೂ ಒಳಗೆ ಬಂದು ನನ್ನ ಮುಖವನ್ನು ನೋಡಿದ್ದರೆ, ಸೀಮೆಯ ಒಲೆಯ ಕೊಳವಿಯೊಂದನ್ನು ಬೆಸುಗೆ ಮಾಡಿರುವ ದೃಶ್ಯವನ್ನು ಕಾಣಬಹುದಿತ್ತು. ಹಗಲಲ್ಲಿ ಕೂಡ ಯಾರೂ ನನ್ನನ್ನು ಪತ್ತೆ ಮಾಡುವುದು ಅಸಾಧ್ಯವೆಂದು ಜಿಮ್ ಹೇಳಿದನು, ನಾನು ಅವುಗಳನ್ನು ಗಮನಿಸಿದೆ, ನನ್ನ ವೇಷಧಾರಣೆ ಯಶಸ್ವಿಯಾಯಿತು.

ಕತ್ತಲಾದ ಕೂಡಲೆ ನಾನು ಕಿರುದೋಣಿಯಲ್ಲಿ ಇಲ್ಲಿ ನಾಯ್ಸ್ ತೀರದತ್ತ ಚಲಿಸಿದೆ ಹರಿಗೋಲಿನ ನಿಲ್ದಾಣದಿಂದ ಸ್ವಲ್ಪ ಕೆಳಗೆ ಊರ ಕಡೆಗೆ ತಿರುಗಿದೆ. ಪ್ರವಾಹದ ಸೆಳವು ನನ್ನನ್ನು ಊರಿನ ಕೆಳ–ಅಂಚಿಗೇ ಒಯ್ದಿತು. ಅದನ್ನು ಕಟ್ಟಿಹಾಕಿ ದಡದ ಮೇಲೆ

ನಡೆದು ಹೋದೆ. ಅಲ್ಲೊಂದು ಕಿರುಗುಡಿಸಿಲಲ್ಲಿ ದೀಪವೊಂದು ಉರಿಯುತ್ತಿತ್ತು ; ಆ ಗುಡಿಸಿಲು ಅಲ್ಲಿ ಬಹು ಕಾಲದಿಂದ ಇದ್ದಿರಲಿಲ್ಲ. ಅಲ್ಲಿ ಯಾರು ವಾಸಕ್ಕೆ ಬಂದಿದ್ದಾರೆಂಬುದು ಹೊಳೆಯಲಿಲ್ಲ. ಮೆಲ್ಲಗೆ ಹತ್ತಿ ಹೋಗಿ ಕಿಟಕಿಯಲ್ಲಿ ಇಣಿಕಿದೆ. ಒಳಗೆ ಪೈನ್ ಮೇಜೊಂದರ ಮೇಲೆ ಉರಿಯುತ್ತಿದ್ದ ಮೋಂಬತ್ತಿಯ ಬೆಳಕಿನಲ್ಲಿ ಸುಮಾರು ನಲವತ್ತು ವರುಷ ವಯಸ್ಸಿನ ಹೆಂಗಸೊಬ್ಬಳು ಕಸೂತಿ ಹಾಕುತ್ತಾ ಕುಳಿತಿದ್ದಳು. ನನಗೆ ಅವಳ ಮುಖದ ಪರಿಚಯವಿರಲಿಲ್ಲ ; ಅಪರಿಚಿತಳು. ಏಕೆಂದರೆ ಆ ಊರಿನಲ್ಲಿ ನನಗೆ ತಿಳಿಯದವರು ಯಾರನ್ನಾದರೂ ಹುಡುಕುವುದು ಸಾಧ್ಯವಿರಲಿಲ್ಲ. ಇದು ನಿಜವಾಗಿಯೂ ಸುಯೋಗವೇ ; ಏಕೆಂದರೆ ನಾನು ಬಳಲುತ್ತಿದ್ದೆ ; ನಾನು ಈಚೆಗೆ ಬಂದೆನೆಂಬ ಹೆದರಿಕೆಯೂ ಇತ್ತು. ಜನ ನನ್ನ ಧ್ವನಿಯನ್ನು ಆಲಿಸಿ ನನ್ನನ್ನು ಪತ್ತೆ ಮಾಡಬಹುದಾಗಿತ್ತು. ಆದರೆ ಈ ಹೆಂಗಸು ಇಷ್ಟು ಚಿಕ್ಕ ಊರಿನಲ್ಲಿ ಎರಡು ದಿನಗಳಿಂದಲೂ ಇದ್ದಿರುವಲ್ಲಿ ನನಗೆ ಬೇಕಾದ ಸಮಾಚಾರವಷ್ಟನ್ನೂ ಹೇಳಬಲ್ಲವಳಾಗಿದ್ದಳು, ಎಂಬುದು ಸ್ಪಷ್ಟವಿತ್ತು. ಆದ್ದರಿಂದ ನಾನು ಬಾಗಿಲು ತಟ್ಟಿದೆ. ನಾನು ಹುಡುಗಿ ಎಂಬುದನ್ನು ಮರೆಯುವುದಿಲ್ಲವೆಂದು ನಿರ್ಧರಿಸಿದೆ.

## ೧೧

ಆ ಹೆಂಗಸು "ಬಾ ಒಳಗೆ" ಎಂದಳು ; ನಾನು ಒಳಗೆ ಹೋದೆ. "ಕುರ್ಚಿಯನ್ನು ಎಳೆದುಕೊಂಡು ಕುಳಿತುಕೋ" ಎಂದಳು.

ನಾನು ಹಾಗೆಯೇ ಮಾಡಿದೆ. ತನ್ನ ಪುಟ್ಟ ಪುಟ್ಟ ಮಿನುಗುವ ಕಣ್ಣುಗಳನ್ನು ನನ್ನ ಮೇಲೆಲ್ಲಾ ಹೊರಳಿಸಿ ಕೇಳಿದಳು :

"ನಿನ್ನ ಹೆಸರು ಏನಿರಬಹುದು ?"

"ಸಾರಾ ವಿಲಿಯಮ್ಸ್."

"ನಿನ್ನ ವಾಸಸ್ಥಳ ? ಈ ನೆರೆ ಹೊರೆಯಲ್ಲೆ ?"

"ಇಲ್ಲವಮ್ಮ. ಇಲ್ಲಿಂದ ಏಳು ಮೈಲಿಯ ಕೆಳಗಿರುವ ಹೂಕರ್‌ವಿಲ್‌ನಲ್ಲಿ. ನಾನು ಉದ್ದಕ್ಕೂ ನಡೆದು ಬಂದೆ, ನನಗೆ ವಿಪರೀತ ಆಯಾಸವಾಗಿದೆ."

"ಹಸಿವೂ ಆಗಿರಬೇಕೆಂದು ನನಗೆ ತೋರುತ್ತದೆ. ಇರು, ನಿನಗೆ ಏನನ್ನಾದರೂ ತಂದುಕೊಡುತ್ತೇನೆ."

"ಇಲ್ಲವಮ್ಮ, ನನಗೆ ಹಸಿವಾಗಿಲ್ಲ. ನನಗೆ ತುಂಬಾ ಹಸಿವಾಗಿತ್ತು, ಆದಕ್ಕಾಗಿ ನಾನು ಇಲ್ಲಿಗೆ ಎರಡು ಮೈಲಿ ಕೆಳಗಿರುವ ಒಂದು ವ್ಯವಸಾಯ ಕ್ಷೇತ್ರದಲ್ಲಿ ಸ್ವಲ್ಪ ಕಾಲ

ನಿಲ್ಲಬೇಕಾಯಿತು. ಈಗೇನೂ ಹಸಿವಿಲ್ಲ. ನಾನು ಇಲ್ಲಿಗೆ ಬರುವುದು ತಡವಾದದ್ದಕ್ಕೆ ಅದೇ ಕಾರಣ. ನನ್ನ ತಾಯಿ ಹಾಸಿಗೆ ಹಿಡಿದಿದ್ದಾಳೆ, ನಿರ್ಗತಿಕಳಾಗಿದ್ದಾಳೆ. ಈ ವಿಷಯವನ್ನು ನನ್ನ ಸೋದರಮಾವ ಆ್ಯಬ್ನರ್ ಮೂರಿಗೆ ತಿಳಿಸಲು ಇಲ್ಲಿಗೆ ಬಂದಿದ್ದೇನೆ. ಅವನು ಈ ಊರಿನ ಮೇಲು ಬೀದಿಯ ಕೊನೆಯಲ್ಲಿದ್ದಾನೆಂದು ಅವಳು ಹೇಳಿದಳು; ಈ ಊರಿಗೆ ಹಿಂದೆಂದೂ ನಾನು ಬಂದುದೇ ಇಲ್ಲ. ನಿಮಗೆ ಅವನು ಗೊತ್ತೆ ?"

"ಇಲ್ಲ ; ನನಗಿನ್ನೂ ಎಲ್ಲರೂ ಪರಿಚಿತರಾಗಿಲ್ಲ. ನಾನು ಇಲ್ಲಿಗೆ ವಾಸಕ್ಕೆ ಬಂದು ಎರಡೇ ವಾರವಾಯಿತು. ಇಲ್ಲಿಗೂ ಊರಿನ ಆಚೆಯ ತುದಿಗೂ ತುಂಬಾ ದೂರ. ಈ ರಾತ್ರಿ ನೀನು ಇಲ್ಲೇ ನಿಲ್ಲುವುದು ಒಳ್ಳೆಯದು. ನಿನ್ನ ಕುಲಾವಿಯನ್ನು ತೆಗೆದಿಡು."

"ಬೇಡ. ನಾನು ಇಲ್ಲಿ ಕೊಂಚ ಹೊತ್ತು ವಿಶ್ರಮಿಸಿಕೊಳ್ಳುತ್ತೇನೆ, ಆ ಮೇಲೆ ಮುಂದೆ ಹೋಗುತ್ತೇನೆ. ಕತ್ತಲೆಗೆ ನಾನು ಹೆದರುವುದಿಲ್ಲ." ಎಂದೆ ನಾನು.

ತಾನು ನನ್ನನ್ನು ಒಬ್ಬೊಂಟಿಗಳಾಗಿ ಹೋಗಗೊಡುವುದಿಲ್ಲವೆಂದೂ, ತನ್ನ ಗಂಡ ಈಗಲೋ ಆಗಲೋ—ಸುಮಾರು ಇನ್ನು ಒಂದುವರೆ ಗಂಟೆಯೊಳಗಾಗಿ—ಬಂದುಬಿಡು ವನೆಂದೂ, ಅವನನ್ನು ನನ್ನೊಂದಿಗೆ ಕಳಿಸುವುದಾಗಿಯೂ ಆಕೆ ಹೇಳಿದಳು. ಆಮೇಲೆ ತನ್ನ ಗಂಡನ, ಮತ್ತು ಹೊಳೆಯ ಮೇಗಣ ಮತ್ತು ಹೊಳೆಯ ಕೆಳಗಿನ ಬಂಧುಗಳ ಪ್ರಸ್ತಾಪವನ್ನು ಎತ್ತಿದಳು. ತಾವು ಹಿಂದೆ ಎಷ್ಟು ಒಳ್ಳೆಯ ಸ್ಥಿತಿಯಲ್ಲಿದ್ದವರು ; ನಮ್ಮ ಊರಿಗೆ ತಾವು ಬಂದದ್ದು ಎಂಥ ತಪ್ಪಾಯಿತೆಂಬುದು ತಮಗೆ ಮೊದಲೇ ಹೇಗೆ ತಿಳಿಯಲಿಲ್ಲ ; ಬದಲಾಗಿ ಅಲ್ಲೇ ಇದ್ದು ಬಿಟ್ಟಿದ್ದರೆ ಎಷ್ಟು ಲೇಸಾಗಿತ್ತು ಎಂದು ಮುಂತಾಗಿ ಹೇಳತೊಡಗಿದಳು ಇದನ್ನೆಲ್ಲ ಕೇಳಿ ನನಗೆ ಈ ಊರಿನ ವಿದ್ಯಮಾನಗಳನ್ನು ತಿಳಿಯಲೋಸುಗ ಇವಳ ಬಳಿಗೆ ಬಂದದ್ದು ತಪ್ಪಾಯಿತೆಂಬ ಭೀತಿ ತೋರಿತು. ನಡು ನಡುವೆ ಆಕೆಯ ಮಾತು ಅಪ್ಪನ ವಿಷಯವನ್ನು ಕೊಲೆಯಸುದ್ದಿಯನ್ನೂ ಸೋಕುತ್ತಿತ್ತು. ಅವಳು ಆವುಗಳ ಬಗೆಗೆ ಮಾತೆತ್ತಿದಾಗಲೆಲ್ಲ ನಾನು ತಡೆಯೊಡ್ಡಲಿಲ್ಲ. ನನ್ನ ಸುದ್ದಿ ಯನ್ನೂ, ಟಾಮ್‌ಸಾಯರಿನಿಗೆ ಹನ್ನೆರಡುಸಾವಿರ ಡಾಲರುಗಳು (ಅವಳು ಇಪ್ಪತ್ತು ಎಂದುಕೊಂಡಿದ್ದಳು) ಸಿಕ್ಕಿದ್ದನ್ನೂ, ಅಪ್ಪನ ವಿಷಯವಾಗಿ ಸಮಸ್ತವನ್ನೂ, ಅವನೆಂಥ ದುರ್ದೈವಿ ನಾನೆಂಥ ದುರ್ದೈವಿ ಎಂಬುದನ್ನೂ ಹೇಳುತ್ತ ಹೋಗಿ ಕಡೆಗೆ ನನ್ನ ಕೊಲೆ ನಡೆದುದರ ವಿಷಯಕ್ಕೂ ಬಂದಳು. ನಾನು ಕೇಳಿದೆ;

"ಅದನ್ನು ಮಾಡಿದವರು ಯಾರು? ಈ ಘಟನೆಗಳ ವಿಷಯದಲ್ಲಿ ಹೂಕರ್‌ವಿಲ್ಲಿ ನಲ್ಲಿ ಬೇಕಾದಷ್ಟು ಮಾತುಗಳು ನಮ್ಮ ಕಿವಿಗೆ ಬೀಳುತ್ತಿವೆ. ಆದರೆ ಹಕ್‌ಫಿನ್ನನನ್ನು ಕೊಂದವರು ಯಾರೆಂಬುದು ನಮಗೆ ಗೊತ್ತಿಲ್ಲ."

"ಅವನನ್ನು ಕೊಂದವರು ಯಾರೆಂಬುದನ್ನು ತಿಳಿಯಲು ಇಲ್ಲಿ ಸುಮಾರು ಜನಕ್ಕೆ

ಇಷ್ಟವಿದೆ ಎಂದು ನನ್ನೆಣಿಕೆ. ಕೆಲವರಂತೂ ಮುದುಕಫಿನ್ನನೇ ಆ ಕೆಲಸವನ್ನು ಮಾಡಿದ ನೆಂದು ಭಾವಿಸುತ್ತಾರೆ."

"ಇಲ್ಲ—ಅದು ಹಾಗೇನು?"

"ಸುಮಾರು ಎಲ್ಲರೂ ಮೊದಲು ಹಾಗೆಯೇ ತಿಳಿದರು. ತನಗೆ ಇನ್ನೇನು ಶಿಕ್ಷೆ ಯಾಗುವುದರಲ್ಲಿತ್ತು ಎಂಬುದು ಅವನಿಗೆ ತಿಳಿದಿರದು. ಆದರೆ ರಾತ್ರಿಯೊಳಗಾಗಿ ಜನಾಭಿ ಪ್ರಾಯ ಬೇರೆಯಾಯಿತು. ತಲೆ ಮರೆಸಿಕೊಂಡು ಓಡಿಹೋದ ಜಿಯ್ ಎಂಬ ನೀಗ್ರೋ ಅದನ್ನು ಮಾಡಿದನೆಂದು ತೀರ್ಮಾನಿಸಿದರು."

"ಏಕೆ ಅವನು...."

ನಾನು ತಡೆದೆ. ಸುಮ್ಮನಿದ್ದು ಬಿಡುವುದು ಲೇಸೆಂದುಕೊಂಡೆ. ಅವಳು ಮಾತಾಡುತ್ತಲೇ ಇದ್ದಳು. ನಾನು ನಡುವೆ ಬಾಯಿ ಹಾಕಿದ್ದು ಅವಳ ಗಮನಕ್ಕೆ ಬಂದಿರಲಿಲ್ಲ, ಅವಳು ಮುಂದುವರಿದಳು:—

"ಹಕ್‌ಫಿನ್ ಕೊಲೆಯಾದ ರಾತ್ರಿಯೆ ಆ ನೀಗ್ರೋ ಓಡಿಹೋದ. ಅವನನ್ನು ಹುಡುಕಿಕೊಟ್ಟವರಿಗೆ ಮುನ್ನೂರು ಡಾಲರುಗಳ ಬಹುಮಾನವಿದೆ. ಮುದುಕ ಫಿನ್ನನನ್ನು ಹುಡುಕಿ ಕೊಟ್ಟವರಿಗೂ ಬಹುಮಾನವಿದೆ-ಇನ್ನೂರು ಡಾಲರುಗಳು. ಕೊಲೆ ನಡೆದ ಮರುದಿನ ಬೆಳಗಿಗೇ ಅವನು ಊರಿಗೆ ಬಂದ, ಆ ವಿಷಯವನ್ನು ತಿಳಿಸಿದ, ಆ ಮೇಲೆ ಅವರೊಂದಿಗೆ ಹಾಯಿ ದೋಣಿಯಲ್ಲಿ ಪರಿಶೀಲನೆಗಾಗಿ ಹೋಗಿದ್ದ, ಅದಾದ ಮೇಲೆ ಹೊರಟುಹೋದ. ಅವನನ್ನು ಹಿಡಿದು ಶಿಕ್ಷಿಸಬೇಕೆಂದಿದ್ದರು, ಅಷ್ಟರಲ್ಲಿ ಹೊರಟು ಹೋಗಿದ್ದ. ಮರುದಿನವೇ ಆ ನೀಗ್ರೋ ಕೂಡ ಹೊರಟು ಹೋಗಿದ್ದುದು ಅವರಿಗೆ ತಿಳಿಯಿತು: ಏಕೆಂದರೆ ಕೊಲೆ ನಡೆದ ರಾತ್ರಿಯ ಹತ್ತು ಗಂಟೆಯ ತರುವಾಯ ಯಾರ ಕಣ್ಣಿಗೂ ಅವನು ಬಿದ್ದಿರಲಿಲ್ಲ. ಆದ್ದರಿಂದ ಅದನ್ನು ಅವನ ಮೇಲೆ ಹೊರಿಸಿದರು, ನೋಡು. ಅವರು ಅದೇ ವಿಷಯದಲ್ಲಿ ತಲ್ಲೀನರಾಗಿದ್ದಾಗ ಮುದುಕ ಜಿಮ್ ಹಿಂದಿರುಗಿದ. ಆ ನೀಗ್ರೋವನ್ನು ಇಲ್ಲಿನಾಯ್ಸಿನಲಿ ಎಲ್ಲಿದ್ದರೂ ಸರಿಯೆ ಹಿಡಿದು ತರುವುದಕ್ಕಾಗಿ ಹಣವನ್ನು ದೊರಕಿಸಿಕೊಳ್ಳಲು ಅವನು ನ್ಯಾಯಾಧೀಶ ಥ್ಯಾಜೆರನ ಬಳಿಗೆ ಹೋಗಿ ಗದ್ದಲ ಮಾಡಿದನು. ನ್ಯಾಯಾಧೀಶ ಅವನಿಗೆ ಸ್ವಲ್ಪ ಹಣವನ್ನು ಕೊಟ್ಟನು. ಸಂಜೆಯಾದುದೇ ತಡ ಅವನು ಚೆನ್ನಾಗಿ ಕುಡಿದನು. ನಡುರಾತ್ರಿಯಾದ ಮೇಲೆ ಅವನು ಹಲವರು ಅಪರಿಚಿತ ಥಾಂಡಿಗರನ್ನು ಕಟ್ಟಿಕೊಂಡು ಊರೊಳಗೆಲ್ಲಾ ಅಡ್ಡಾಡಿ, ಕೊನೆಗೆ ಅವರೊಂದಿಗೆ ಹೊರಟುಹೋದನು. ಅಂದಿನಿಂದ ಅವನು ಹಿಂದಿರುಗಿಲ್ಲ. ಈ ವದಂತಿ ಸ್ವಲ್ಪ ಅಡಗುವತನಕ ಆವನು ಹಿಂದಿರುಗಬಹುದೆಂದು ಅವರು ನಿರೀಕ್ಷಿಸಿಯೂ ಇಲ್ಲ. ಏಕೆಂದರೆ, ತಾನೇ ತನ್ನ ಮಗನನ್ನು ಕೊಂದು ಯಾರೋ ಕಳ್ಳರು ಕೊಂದುಹಾಕಿದರೆಂದು ಜನರಿಗೆ ನಂಬಿಕೆ ಹುಟ್ಟಿಸಲು ಅವನು ಹೀಗೆ ಮಾಡಿದ್ದಾನೆ ಎಂದು ಜನ ತಿಳಿದಿದ್ದಾರೆ; ಹಾಗೆ ಮಾಡಿದಲ್ಲಿ ನ್ಯಾಯಾಲಯದಲ್ಲಿ ವ್ಯಾಜ್ಯಮಾಡಿ ದೀರ್ಘ ಕಾಲ ತಾಪತ್ರಯಪಡುವ

ಅಗತ್ಯವಿಲ್ಲದೆ ಹೆಚ್ಚಿನ ಹಣ ಅವನಿಗೆ ದಕ್ಕುತ್ತದೆ. ನ್ಯಾಯಾಲಯಕ್ಕೆ ಹೋಗುವಷ್ಟು ಅರ್ಹನಲ್ಲ ಅವನು ಎನ್ನುತ್ತಾನೆ ಆದರೆ ಇವನು ಕಪಟಿಯೆಂದೇ ನನಗೆ ಕಾಣುತ್ತದೆ. ಅವನು ಇನ್ನೊಂದು ವರುಷದ ತನಕ ಹಿಂದಿರುಗದಿದ್ದರೆ, ಅವನಿಗೆ ಬಲು ಅನುಕೂಲ ವಾಗುತ್ತದೆ. ಅವನ ಮೇಲೆ ಏನನ್ನೂ ಸ್ಥಿರಪಡಿಸುವುದಕ್ಕಾಗುವುದಿಲ್ಲ, ನೋಡು ; ಅಷ್ಟುಹೊತ್ತಿಗೆ ಎಲ್ಲವೂ ತಣ್ಣಗಾಗಿ ಬಿಡುತ್ತದೆ; ಹಕ್ಕನ ಹಣ ಅನಾಯಾಸವಾಗಿ ಅವನಿಗೆ ಸಿಕ್ಕಿಹೋಗುತ್ತದೆ."

"ಹೌದು, ಹೌದು ನನಗೂ ಹಾಗೇ ತೋರುತ್ತದೆ, ಅದಕ್ಕೆ ಯಾವ ಅಡ್ಡಿಯೂ ಇರುವಾತೆ ನನಗೆ ತೋರದು. ನೀಗ್ರೋವಿನಿಂದಲೇ ಆ ಕೊಲೆಯಾಯಿತು ಎಂದು ಯೋಚಿಸುವುದನ್ನು ಎಲ್ಲರೂ ಕೈಬಿಟ್ಟಿದ್ದಾರೆಯೇನು ?"

"ಓ, ಇಲ್ಲ, ಎಲ್ಲರೂ ಅಲ್ಲ, ಸುಮಾರು ಮಂದಿ ಅವನೇ ಮಾಡಿದ್ದಾನೆಂದು ತಿಳಿದಿದ್ದಾರೆ. ಈಗಲೋ ಆಗಲೋ ಆ ನೀಗ್ರೋವನ್ನು ಹಿಡಿದು ತರುತ್ತಾರೆ, ಅವನ ಬಾಯಿಂದ ಎಲ್ಲಾ ವಿವರಗಳನ್ನೂ ಹೊರಡಿಸಬಹುದೇನೋ."

"ಏಕೆ, ಅವರು ಇನ್ನೂ ಆವನನ್ನು ಬೆನ್ನು ಹತ್ತಿದ್ದಾರೆಯೆ ?"

"ನಿನಗೆ ಏನೂ ತಿಳಿಯದಲ್ಲವೆ, ಪಾಪ ! ಮುನ್ನೂರು ಡಾಲರುಗಳು ದಿನಾಗಲೂ ಸುಮ್ಮನೇನು ಬಿದ್ದಿರುತ್ತವೆಯೆ ಯಾರಾದರೂ ಎತ್ತಿಕೊಳ್ಳಲೆಂದು. ನೀಗ್ರೋ ಇಲ್ಲೇ ಎಲ್ಲೋ ಹತ್ತಿರದಲ್ಲೇ ಇರಬೇಕೆಂದು ಕೆಲವರು ಊಹಿಸುತ್ತಾರೆ. ಅವರಲ್ಲಿ ನಾನೂ ಒಬ್ಬಳು—ಆದರೆ ಹಾಗೆ ನಾನು ಹೇಳಿಕೊಂಡಿಲ್ಲ ಎಲ್ಲೂ. ಕೆಲವು ದಿನಗಳ ಹಿಂದೆ ಇಲ್ಲೇ ಪಕ್ಕದ ದಿಮ್ಮಿಯ ಗುಡಿಸಲಿನಲ್ಲಿ ವಾಸಿಸುತ್ತಿರುವ ವೃದ್ಧದಂಪತಿಗಳೊಂದಿಗೆ ನಾನು ನೋಡುತ್ತಿದ್ದಾಗ, ಜಾಕ್‌ಸನ್ನನ ದ್ವೀಪವೆಂದು ಕರೆಯುವ ಆಚೆ ಕಡೆಗಿರುವ ದ್ವೀಪಕ್ಕೆ ಯಾರೂ ಎಂದೂ ಹೋಗುವುದಿಲ್ಲವೆಂದು ಅವರು ಹೇಳಿದರು. ಅಲ್ಲಿ ಯಾರೂ ವಾಸ ಮಾಡುತ್ತಿಲ್ಲವೆ ? ಎಂದೆ ನಾನು. ಇಲ್ಲ, ಯಾರೂ ಇಲ್ಲ, ಎಂದರವರು. ನಾನು ಅದಕ್ಕೆ ಏನೂ ಹೇಳಲಿಲ್ಲವಾದರೂ. ಅದರ ವಿಚಾರದಲ್ಲಿ ಯೋಚನೆ ಮಾಡಿದೆ. ಇದಕ್ಕೆ ಒಂದೆರಡು ದಿನಗಳ ಮುನ್ನ ಆ ದ್ವೀಪ ಮುಖದ ಆಸು ಪಾಸಿನಲ್ಲಿ ಏಲ್ಲೋ ಹೊಗೆಯೇಳುತ್ತಿದ್ದುದು ನನ್ನ ಕಣ್ಣಿಗೆ ಬಿತ್ತಲ್ಲ, ಆ ನೀಗ್ರೋ ಅಲ್ಲಿ ಅವಿತುಕೊಂಡಿಲ್ಲವೆ, ಎಂದೆ ನಾನು. ಏನಾಗಲಿ ಆ ಸ್ಥಳವನ್ನು ಶೋಧಿಸುವುದು ಸಾರ್ಥಕ ಶ್ರಮವಾದೀತು ಎಂದುಕೊಂಡೆ. ಈಚೆಗೆ ಅಲ್ಲಿ ನನಗೆ ಹೊಗೆ ಕಾಣಿಸಲಿಲ್ಲ ; ಅದು ಅವನೇ ಅವನೇ ಆಗಿದ್ದರೆ ಹೊರಟುಹೋಗಿರಬೇಕು ಎಂದುಕೊಂಡೆ. ಆದರೆ ನನ್ನ ಪತಿ ಇನ್ನೊಬ್ಬನನ್ನು ತನ್ನ ಜತೆಗೆ ಕರೆದುಕೊಂಡು ಆ ಸ್ಥಳದ ಪರಿಶೀಲನೆಗೆ ಹೋಗುವವನಿದ್ದಾನೆ, ಅವನು ಯಾವುದೋ ಕೆಲಸಕ್ಕಾಗಿ ನದಿಯತ್ತ ಹೋಗಿದ್ದ. ಈ ದಿನ ಹಿಂದಿರುಗಿದ, ಎರಡು ಗಂಟೆಗಳ ಹಿಂದೆ ಬಂದ ಕೂಡಲೆ ನಾನವನಿಗೆ ಇದನ್ನು ತಿಳಿಸಿದೆ."

ಇದು ನನ್ನ ಮನಸ್ಸನ್ನು ಕಲಕಿತು, ನೆಟ್ಟಗೆ ಕೂರುವುದೇ ಸಾಧ್ಯವಿಲ್ಲವಾಯಿತು. ನನ್ನ ಕೈಗಳಿಗೆ ನಾನು ಏನಾದರೂ ಕೆಲಸವನ್ನು ಕೊಡಲೇಬೇಕಾಯಿತು. ಆದಕ್ಕಾಗಿ ನಾನು ಮೇಜಿನ ಮೇಲಿದ್ದ ಒಂದು ಸೂಜಿಯನ್ನು ಎತ್ತಿಕೊಂಡು ಅದಕ್ಕೆ ದಾರವನ್ನು ಪೋಣಿಸ ತೊಡಗಿದೆ, ನನ್ನ ಕೈಗಳು ನಡುಗುತ್ತಿದ್ದವು, ನನ್ನ ಶ್ರಮ ಫಲಿಸಲಿಲ್ಲ. ಆಕೆ ಮಾತಾಡು ವುದನ್ನು ನಿಲ್ಲಿಸಿದಾಗ ನಾನು ಅವಳ ಕಡೆಗೆ ಮುಖವೆತ್ತಿದೆ. ಅವಳು ಬಹು ಕುತೂಹಲ ದಿಂದ ನನ್ನನ್ನು ನೋಡುತ್ತಿದ್ದಳು. ಸ್ವಲ್ಪ ನಗೆಯೂ ಅದರಲ್ಲಿ ಬೆರೆತಿತ್ತು. ನಾನು ಸೂಜಿ ಯನ್ನೂ ದಾರವನ್ನೂ ಕೆಳಗೆ ಹಾಕಿದೆ; ಆಸಕ್ತಿಯುಳ್ಳವನಂತೆ ತೋರ್ಪಡಿಸಿಕೊಂಡು— ನಿಜವಾಗಿಯೂ ನನಗೆ ಅವಳ ಮಾತಿನಲ್ಲಿ ಆಸಕ್ತಿ ಇತ್ತು—ನಾನು ಹೇಳಿದೆ :

"ಮುನ್ನೂರು ಡಾಲರುಗಳು ಎಂದರೆ ಬೇಕಾದಷ್ಟು ಹಣವಾಯಿತು. ಅದು ನಮ್ಮ ತಾಯಿಯ ಕೈಗೆ ಸಿಕ್ಕಿದ್ದರೆ ಚೆನ್ನಾಗಿತ್ತು! ನಿಮ್ಮ ಯಜಮಾನರು ಈ ರಾತ್ರಿಯೇ ಅಲ್ಲಿಗೆ ಹೊರಡುವರೇನು ?

"ಓ ಹೌದು. ಅವರು. ನಾನೀಗ ಹೇಳುತ್ತಿದ್ದೆನಲ್ಲ ಆತನೊಂದಿಗೆ ಹೊರಟು ಪಯಣಕ್ಕೆ ಒಂದು ದೋಣಿಯನ್ನೂ, ಸಾಧ್ಯವಾದರೆ ಇನ್ನೊಂದು ಬಂದೂಕವನ್ನೂ ಒದಗಿಸಿಕೊಳ್ಳಲು ಊರೊಳಗೆ ಹೋಗಿದ್ದಾರೆ. ನಡು ರಾತ್ರಿಯ ತರುವಾಯ ಅವರು ಅಲ್ಲಿಗೆ ಹೊರಡುತ್ತಾರೆ."

"ಹಗಲು ಹುಟ್ಟುವ ತನಕ ಅವರು ತಡೆಯುವುದಾದರೆ. ಇನ್ನೂ ಚೆನ್ನಾಗಿ ನೋಡ ಬಹುದಲ್ಲವೆ ?"

"ಹೌದು. ಆಗ ಆ ನೀಗ್ರೋವಿನ ಕಣ್ಣಿಗೆ ಕೂಡ ಎಲ್ಲವೂ ಚೆನ್ನಾಗಿ ಬೀಳಬಹು ದಲ್ಲವೆ ? ನಡುರಾತ್ರಿ ಕಳೆದ ಮೇಲಾದರೆ ಅವನು ನಿದ್ದೆ ಮಾಡುತ್ತಿರುವುದು ಸಂಭವ; ಅವರು ಆಗ ಕಾವಿನಲ್ಲಿ ನುಸುಳಿಕೊಂಡು ಹೋಗಿ, ಕತ್ತಲೆಯಲಿ ಅವನು ರಚಿಸಿಕೊಂಡಿರ ಬಹುದಾದ ಶಿಬಿರಾಗ್ನಿಯನ್ನು ಪತ್ತೆ ಮಾಡುವುದೇ ಒಳ್ಳೆಯದು"

"ನನಗದು ಹೊಳೆಯಲಿಲ್ಲ."

"ಆಕೆ ತುಂಬಾ ಕುತೂಹಲದಿಂದ ನನ್ನನ್ನೇ ನೋಡುತ್ತಿದ್ದಳು ; ನನಗೆ ಅದರಿಂದ ಸ್ವಲ್ಪವೂ ನೆಮ್ಮದಿಯಾಗಲಿಲ್ಲ, ತತ್‌ಕ್ಷಣವೇ ಅವಳು ಕೇಳಿದಳು :—

"ನಿನ್ನ ಹೆಸರೇನೆಂದೆ, ಚಿನ್ನಾ ?"

"ಮೇ—ಮೇರಿ ವಿಲಿಯಮ್ಸ್".

ನಾನು ಈ ಮೊದಲು ಮೇರಿ ಎಂದು ಹೇಳಿದ್ದೆನೋ ಇಲ್ಲವೋ ನನಗೆ ಏಕೋ ತೋರಲಿಲ್ಲ. ಆದ್ದರಿಂದ ನಾನು ತಲೆಯೆತ್ತಲಿಲ್ಲ—ನಾನು ಸಾರಾ ಎಂದಿದ್ದೆನೆಂದು ತೋರುತ್ತದೆ. ಆ ಕಾರಣದಿಂದ ನಾನು ಇಕ್ಕಟ್ಟಿಗೆ ಸಿಕ್ಕಿದಂತಾಯಿತು, ನನಗೂ ಹಾಗೆಯೇ ತೋರಿತು. ಆಕೆ ಇನ್ನು ಬೇರೆ ಮಾತೆತ್ತಬಹುದು ಎಂದು ಹಾರೈಸಿದೆ, ಆಕೆ ಎಷ್ಟು

ಹೊತ್ತು ಮೌನದಿಂದ ಕುಳಿತಿದ್ದರೆ, ಅಷ್ಟು ಹೊತ್ತೂ ನನಗೆ ಬಲು ಹಿಂಸೆಯೇ. ಬಳಿಕ ಅವಳು ಕೇಳಿಯೇ ಬಿಟ್ಟಳು :

"ಚಿನ್ನಾ, ನೀನು ಇಲ್ಲಿಗೆ ಬಂದ ಮೇಲೆ ಮೊದಲ ಸಲ ನೀನು ಸಾರಾ ಎಂದಿದ್ದಂತೆ ನನಗೆ ತೋರುತ್ತದೆ, ಹೌದೆ ?"

"ಓ ಹೌದು ತಾಯಿ, ಹಾಗೆ ಹೇಳಿದೆ. ಸಾರಾ ಮೇರಿ ವಿಲಿಯಮ್ಸ್. ನನ್ನ ಹೆಸರು ಮೊದಲಾಗುವುದು ಸಾರಾ ಎಂದು. ಕೆಲವರು ನನ್ನನ್ನು ಸಾರಾ ಎಂದು ಕರೆಯು ತ್ತಾರೆ; ಕೆಲವರು ನನ್ನನ್ನು ಮೇರಿ ಎಂದು ಕರೆಯುತ್ತಾರೆ."

ಓ ಹಾಗೋ ಅದು ?"

"ಹೌದು ತಾಯಿ."

ಆಗ ನನ್ನ ಮನಸ್ಸು ನೆಮ್ಮದಿಗೊಂಡಿತು. ಆದರೂ, ಹೇಗಾದರೂ ಅಲ್ಲಿಂದ ಹೊರಟುಬಿಡಬೇಕು ಎನ್ನಿಸಿತು. ತಲೆಯೆತ್ತಿ ನೋಡುವುದು ಇನ್ನೂ ಸಾಧ್ಯವಾಗಲಿಲ್ಲ.

ಸರಿ, ಕಾಲ ಎಷ್ಟು ಕಷ್ಟವಾಯಿತು, ಜನ ಎಂಥ ಬಡತನದ ಬಾಳನ್ನು ಹೊರೆಯ ಬೇಕಾಯಿತು, ಎಲ್ಲೆಲ್ಲೂ ಹೇಗೆ ಇಲಿಗಳು ಸ್ವೇಚ್ಛೆಯಿಂದ ಸ್ಥಳವಷ್ಟೂ ತಮಗೆ ಸೇರಿ ದ್ದೆಂದು ಓಡಾಡುತ್ತಿವೆ, ಇತ್ಯಾದಿ, ಇತ್ಯಾದಿ ವಿಷಯಗಳ ಮಾತಿಗೆ ತೊಡಗಿದಳು. ಇದು ನನ್ನ ಮನಸ್ಸಿಗೆ ನೆಮ್ಮದಿಯನ್ನು ತಂದಿತು. ಇಲಿಗಳ ವಿಷಯದಲ್ಲಿ ಅವಳು ಹೇಳಿದ್ದು ಸರಿ. ಮೂಲೆಯ ಬಿಲದಿಂದ ಇಲಿ ಕ್ಷಣಕ್ಕೊಮ್ಮೆ ಮೂತಿ ಹಾಕುತ್ತಿರುವುದನ್ನು ಕಾಣಬಹುದಾಗಿತ್ತು. ಅವುಗಳ ಕಡೆಗೆಸೆಯಲು ಏನಾದರೂ ಪದಾರ್ಥಗಳನ್ನು ಕೈಯ ಬಳಿಯಲ್ಲೇ ಇಟ್ಟುಕೊಂಡಿರಬೇಕು, ತಾನು ಮನೆಯೊಳಗೆ ಒಂಟಿಯಾಗಿದ್ದಾಗ; ಇಲ್ಲ ವಾದರೆ, ಅವು ತನ್ನನ್ನು ಹಾಯಾಗಿರಲು ಬಿಡುವುದೇ ಇಲ್ಲ ಎಂದಳವಳು. ಒಂದು ಸೀಸದ ಗಡಾರಿಯನ್ನು ತೋರಿಸಿ, ಅದನ್ನು ಗುರಿಯಿಟ್ಟು ಎಸೆಯುವುದರಲ್ಲಿ ತಾನು ಪ್ರವೀಣೆ ಯೆಂದೂ, ಆದರೆ ಒಂದೆರಡು ದಿನಗಳ ಹಿಂದೆ ಕೈಯನ್ನು ತರಿದು ಕೊಂಡುದಾಗಿಯೂ, ಆದ್ದರಿಂದ ಮತ್ತೆ ಅದನ್ನು ಹಿಂದಿನಷ್ಟೇ ಸಫಲವಾಗಿ ಎಸೆಯುವುದು ತನ್ನಿಂದಾಗುವುದರಲ್ಲಿ ತನಗೆ ಸಂದೇಹವಿದೆಯೆಂದೂ ಹೇಳಿದಳು. ಆದರೆ ಹಾಗೆಯೇ ಸಮಯ ಕಾದು ಇಲಿ ಯೊಂದರ ಕಡೆಗೆ ಅದನ್ನು ಗುರಿಯಿಟ್ಟು ಎಸೆದಳು; ಗುರಿ ಪೂರಾ ತಪ್ಪಿತು. ಓಹ್ ತನ್ನ ತೋಳಿಗೆ ನೋವಾಯಿತು ಎಂದಳು. ಮುಂದಿನ ಎಸೆತವನ್ನು ನನ್ನ ಪಾಲಿಗೆ ವಹಿ ಸಿದಳು. ನನಗೋ ಆ ಮುದುಕ ಹಿಂದಿರುಗುವುದರೊಳಗಾಗಿ ಅಲ್ಲಿಂದ ಕಾಲ್ತೆಗೆಯ ಬೇಕೆಂಬ ತವಕ ! ಆದರೂ ನಾನು ಹಿಂದೆಗೆಯಲಿಲ್ಲ. ನಾನು ಅದನ್ನು ಕೈಗೆತ್ತಿಕೊಂಡೆ, ಈಚೆಗೆ ಮೂತಿ ಹಾಕಿದ ಮೊದಲ ಇಲಿಯನ್ನು ಓಡಿಸಿದೆ; ಅದೇನಾದ್ದರೂ ತಾನಿದ್ದಲ್ಲಿಯೇ ಉಳಿದಿದ್ದರೆ ಅದರ ಕಥೆಯೇ ಮುಗಿಯುತ್ತಿತ್ತು. ಅವಳು ಅದು ಭೇಷಾದ ಎಸೆತ ವೆಂದಳು; ನಾನು ಮುಂದಿನದನ್ನು ಹೊಡೆದು ಹಾಕಿಬಿಡುವುದು ಖಂಡಿತವೆಂದು ತನ್ನೆಣಿಕೆ ಎಂದಳು. ಅವಳು ಎದ್ದು ಹೋಗಿ ಸೀಸದ ಗಡಾರಿಯನ್ನು ಎತ್ತಿಕೊಂಡು ಬಂದಳು,

ಜತೆಗೆ ಕೆಲವು ಲಡಿ ನೂಲನ್ನು ತಂದಳು. ಅವಳ ಕೇಳಿಕೆಯಂತೆ ನಾನು ಕೈಗಳನ್ನು ಮೇಲಕ್ಕೆ ಎತ್ತಿದೆ. ಅವಳಂತ ಲಡಿಯನು ಅವುಗಳ ಮೇಲೆ ಹಾಕಿ ಕಟ್ಟಿದಳು; ತನ್ನ ಷಂಶ್ರ್ತು ತನ್ನ ಗಂಡನ ಪ್ರಸ್ತಾತವನನ್ನು ಹೇಳ ಹೊರಟಳು. ಆದರೆ ತಟ್ಟನೆ ಮಾತು ತಿರುಗಿಸಿ ನುಡಿದಳು:

"ನಿನ್ನ ಕಣ್ಣು ಇಲಿಗಳ ಕಡೆಗಿರಲಿ. ಸೀಸದ ಗಡಾರಿ, ಕೈಗೆಟುಕುವಂತೆ, ನಿನ್ನ ತೊಡೆಯ ಮೇಲಿರಲಿ."

ಹಾಗೆ ಹೇಳುತ್ತಾ ಇರುವಾಗಲೇ ಅವಳು ಅದನ್ನು ನನ್ನ ತೊಡೆಯ ಮೇಲೆ ಕೆಡವಿದಳು. ನಾನು ನನ್ನ ಕಾಲುಗಳನ್ನು ಬಿಗಿಯಾಗಿ ಕೂಡಿಸಿ ಅದನ್ನು ಸಿಕ್ಕಿಸಿಕೊಂಡೆ, ಅವಳಂತೂ ಮಾತಾಡುತ್ತಲೇ ಇದ್ದಳು. ಆದರೆ ಒಂದು ನಿಮಿಷದ ಮಟ್ಟಿಗೆ, ಅಷ್ಟೆ. ಬಳಿಕ ಅವಳು ಲಡಿಯನ್ನು ತೆಗೆದುಹಾಕಿದಳು, ನನ್ನ ಮುಖವನ್ನು ನೆಟ್ಟ ಕಣ್ಣಿನಿಂದ ಬಲು ಹರುಷಗೊಂಡು ನೋಡಿದಳು: ಹೇಳಿದಳು:

"ಈಗ ಹೇಳು, ನಿನ್ನ ನಿಜವಾದ ಹೆಸರೇನು?"

"ಏ ಏನು, ತಾಯಿ?"

"ನಿನ್ನ ನಿಜವಾದ ಹೆಸರೇನು? ಅದು ಬಿಲ್ ಎಂದೆ, ಇಲ್ಲ ಟಾಮ್ ಎಂದೆ, ಇಲ್ಲ ಬಾಬ್ ಎಂದೆ ?—ಇಲ್ಲ ಇನ್ನು ಯಾವುದೋ—?" ನಾನು ಎಲೆಯಂತೆ ನಡುಗಿದೆ, ಏನು ಮಾಡಬೇಕೆಂಬುದೇ ನನಗೆ ತೋರಲಿಲ್ಲಿ; ಅದರೂ ಹೇಳಿದೆ;

"ನನ್ನಂಥ ಬಡ ಹುಡುಗಿಯನ್ನು ಗೇಲಿ ಮಾಡಬೇಡಿ, ತಾಯಿ. ನಿಮಗೆ ನನ್ನಿಂದ ಅಡ್ಡಿಯಾಗಿದ್ದಲ್ಲಿ, ಇಕೋ ನಾನು—"

"ಕೂಡದು, ನೀನು ಹಾಗೆ ಮಾಡಕೂಡದು. ಕುಳಿತುಕೋ, ಕದಲದಿರು, ನಾನು ನಿನ್ನನ್ನು ನೋಯಿಸುವುದಿಲ್ಲ; ನಾನು ನಿನ್ನ ಮೇಲೆ ಅಪವಾದವನ್ನು ಹೊರಿಸುವುದಿಲ್ಲ. ನಿನ್ನ ರಹಸ್ಯವೇನಿದ್ದರೂ ನನಗೆ ತಿಳಿಸು; ನನ್ನಲ್ಲಿ ನಂಬಿಕೆ ಇಡು. ಅದನ್ನು ನನ್ನಲ್ಲೇ ಇಟ್ಟುಕೊಳ್ಳುತ್ತೇನೆ; ಅದಕ್ಕೂ ಮಿಗಿಲಾಗಿ ನಿನಗೆ ನೆರವಾಗುತ್ತೇನೆ. ನೀನು ಬಯಸುವುದಾದರೆ, ನನ್ನ ಪತಿಯೂ ಹಾಗೆಯೇ ಮಾಡುತ್ತಾನೆ. ನೀನು ಇನ್ನೂ ಅನನುಭವಿ, ಮನೆಯಿಂದ ಹೊರಬಿದ್ದವನು, ಅಷ್ಟೆ. ಇದೇನು ಅಂಥಾ ಪ್ರಮಾದವಲ್ಲ. ಇದರಲ್ಲಿ ಏನೂ ಅಪಾಯವಿಲ್ಲ. ನಿನ್ನನ್ನು ಮನೆಯವರು ತಿರಸ್ಕಾರದಿಂದ ನೋಡಿರಬೇಕು. ಆದ್ದರಿಂದ ಮನೆಯನ್ನು ಬಿಟ್ಟು ಹೋಗುವುದಾಗಿ ನಿರ್ಧರಿಸಿದ್ದೀಯೆ. ನಿನಗೆ ಒಳ್ಳೆಯದಾಗಲಿ, ಮಗು. ನಾನು ನಿನ್ನ ಮೇಲೆ ದೂರು ಹೊರಿಸುವುದಿಲ್ಲ. ನನಗೆ ಎಲ್ಲಾ ವಿಷಯಗಳನ್ನೂ ಹೇಳು ಈಗ, ಒಳ್ಳೆಯ ಹುಡುಗನ ಹಾಗೆ."

ಆದ್ದರಿಂದ ಇನ್ನುಮುಂದೆಯೂ ಈ ವೇಷವನ್ನು ಮುಂದುವರಿಸುವುದರಲ್ಲಿ ಪ್ರಯೋಜನವಿಲ್ಲವೆಂದೂ, ನಾನು ನನ್ನ ಮನಸ್ಸನ್ನು ಬಿಚ್ಚಿ ಎಲ್ಲವನ್ನೂ ಅವಳಿಗೆ ಹೇಳಿಬಿಡುವೆನೆಂದೂ, ಆದರೆ ಅವಳು ಮಾತ್ರ ತಾನು ಕೊಟ್ಟ ಮಾತನ್ನು ಮುರಿಯಬಾರದೆಂದೂ

ನಾನು ಉತ್ತರ ಕೊಟ್ಟೆನು. "ನನ್ನ ತಂದೆ ತಾಯಿ ಸತ್ತುಹೋದರು ; ಕಾನೂನು ನನ್ನನ್ನು ಈ ನದಿಗೆ ಮೂವತ್ತು ಮೈಲಿ ಕೆಳಗಿರುವ ತುಚ್ಛನಾದ ಮುದುಕ ರೈತನೊಬ್ಬನ ವಶಕ್ಕೆ ಒಪ್ಪಿಸಿತು; ಅವನು ನನಗೆ ಸಹಿಸಲಸಾಧ್ಯವಾದ ಕಿರುಕುಳವನ್ನು ಕೊಟ್ಟನು; ಕೆಲವು ದಿನಗಳ ಮಟ್ಟಿಗೆ ಅವನು ಎಲ್ಲಿಗೋ ತೊಲಗಿದ ; ಆ ಸಮಯದಲ್ಲಿ ನಾನು ಅವನ ಮಗಳ ಕೆಲವು ಉಡುಗೆಗಳನ್ನು ಕದ್ದು ಧರಿಸಿ ಆ ಸ್ಥಳವನ್ನು ಬಿಟ್ಟುಬಂದೆ. ಮೂವತ್ತು ಮೈಲಿಗಳ ದೂರದ ಪ್ರಯಾಣಕ್ಕೆ ಮೂರು ರಾತ್ರಿ ಹಿಡಿಯಿತು. ನಾನು ರಾತ್ರಿ ಹೊತ್ತಿನಲ್ಲೇ ಪ್ರಯಾಣ ಮಾಡುತ್ತಾ ಹಗಲಲ್ಲಿ ತಲೆ ಮರಸಿಕೊಂಡು ನಿದ್ರಿಸುತ್ತಿದ್ದೆ. ಬರುವಾಗ ಒಂದು ಚೀಲದಲ್ಲಿ ತಂದಿದ್ದ ರೊಟ್ಟಿಯೂ ಮಾಂಸವೂ ದಾರಿಯುದ್ದಕ್ಕೂ ಸಾಕಾಯಿತು; ನನ್ನ ಬಳಿ ಬೇಕಾದಷ್ಟಿತ್ತು ; ನನ್ನ ಸೋದರ ಮಾವ ಆ್ಯಬ್ನರ್ ನನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತಾನೆಂದು ನಂಬಿದ್ದೇನೆ; ಆದ್ದರಿಂದಲೇ ನಾನು ಈ ಗಾಷೆನ್ ಪಟ್ಟಣಕ್ಕೆ ಬಂದೆ" ಎಂದು ವಿವರಿಸಿದೆ.

"ಗಾಷೆನ್, ಮಗು ? ಇದು ಗಾಷೆನ್ನಲ್ಲ. ಸೆಂಟ್ ಪೀಟರ್ಸ್‌ಬರ್ಗ್. ಗಾಷೆನ್ ಇಲ್ಲಿಗೆ ಹತ್ತು ಮೈಲಿಯಾಚೆಗೆ ಹೊಳೆಯ ಮೇಗಣ ಸೀಮೆಯಲ್ಲಿದೆ. ಇದು ಗಾಷೆನ್ನೆಂದು ನಿನಗೆ ಯಾರು ಹೇಳಿದರು ?"

"ಯಾರೆ? ಈ ದಿನ ಮುಂಜಾನೆ, ಪದ್ಧತಿಯಂತೆ ನಾನು ನಿದ್ದೆಗಾಗಿ ಕಾಡಿನತ್ತ ತಿರುಗುತ್ತಿರುವ ಸಮಯಕ್ಕೆ ಒಬ್ಬ ಮನುಷ್ಯ ಸಿಕ್ಕಿ, ದಾರಿ ಕವಲೊಡೆವ ಬಳಿ ನಾನು ಬಲಗಡೆಯ ದಾರಿ ಹಿಡಿದರೆ, ಅದು ನನ್ನನ್ನು ನೇರ ಗಾಷೆನ್ನಿಗೆ ಒಯ್ಯುತ್ತದೆ ಎಂದ."

"ಅವನು ಕುಡಿದಿದ್ದನೆಂದು ತೋರುತ್ತದೆ. ಅವನು ನಿನಗೆ ತಪ್ಪು ದಾರಿಯನ್ನೇ ತೋರಿಸಿದ."

"ಅವನು ಕುಡಿದಿದ್ದಂತೆಯೇ ವರ್ತಿಸಿದ. ಆದು ಈಗ ಅಪ್ರಕೃತ. ನಾನು ಮುಂದೆ ಹೋಗಬೇಕಾಗಿದೆ. ಬೆಳಕು ಹರಿಯುವುದರೊಳಗಾಗಿ ಗಾಷೆನ್ನಿಗೆ ತಲಪುತ್ತೇನೆ."

"ಒಂದು ನಿಮಿಷ ನಿಲ್ಲು. ನಿನಗೆ ತಿನ್ನಲು ಏನಾದರೂ ತಂದುಕೊಡುತ್ತೇನೆ. ನಿನಗೆ ಅದು ಬೇಕಾಗಿಯೂ ಇರಬಹುದು."

ಅವಳು ನನಗೆ ಒಂದಿಷ್ಟು ಊಟವನ್ನು ತಂದುಕೊಟ್ಟಳು. ಬಳಿಕ ಕೇಳಿದಳು ;

"ಇಲ್ಲಿ ನೋಡು : ಒಂದು ಹಸು ಮಲಗಿದ್ದು ಎದ್ದೇಳುವಾಗ, ಅದರ ಯಾವ ಭಾಗ ಮೊದಲು ಮೇಲಕ್ಕೇಳುತ್ತದೆ? ಕೂಡಲೇ ಉತ್ತರಕೊಡು.–ಯೋಚನೆ ಮಾಡುತ್ತ ನಿಲ್ಲಬೇಡ. ಅದರ ಯಾವ ಭಾಗ ಮೊದಲು ಮೇಲಕ್ಕೇಳುತ್ತದೆ ?"

"ಹಿಂದಿನ ತುದಿ, ತಾಯಿ"

"ಸರಿ, ಕುದುರೆಯಾದರೆ?"

"ಮುಂದಿನ ತುದಿ, ತಾಯಿ."

"ವೃಕ್ಷದ ಯಾವ ಪಕ್ಕದ ಮೇಲೆ ಪಾಚಿ ಬೆಳೆಯುತ್ತದೆ?"

"ಉತ್ತರ ದಿಕ್ಕಿಗಿರುವ ಪಕ್ಕದ ಮೇಲೆ."

"ಬೆಟ್ಟದ ತಪ್ಪಲಲ್ಲಿ ಹದಿನೈದು ಹಸುಗಳು ಮೇಯುತ್ತಿದ್ದರೆ, ಅವುಗಳಲ್ಲಿ ಎಷ್ಟು ರಾಸು ಒಂದೇ ದಿಕ್ಕಿಗೆ ತಲೆಯಿಟ್ಟುಕೊಂಡು ಮೇಯುತ್ತವೆ?"

"ಹದಿನೈದೂ. ತಾಯೆ;"

"ಆದ್ದರಿಂದ ನೀನು ಈ ಸೀಮೆಯುವನೆಂದೇ ನನ್ನೆಣಿಕೆ, ನಾನು ಯೋಚಿಸಿದೆ, ನೀನು ನನ್ನನ್ನು ಮತ್ತೆ ಮೋಸಗೊಳಿಸಬಹುದೆಂದು. ಸರಿಯೆ, ಈಗ ನಿನ್ನ ನಿಜವಾದ ಹೆಸರೇನು?"

"ಜಾರ್ಜ್ ಫೀಟರ್ಸ್, ತಾಯಿ."

"ಸರಿ ಅದನ್ನು ನೆನಪಿಡು ಜಾರ್ಜ್. ಮರೆಯಬೇಡ, ಇಲ್ಲಿಂದ ಹೊರಡುವ ಮುನ್ನ ಅದು ಎಲೆಕ್ಸಾಂಡರ್ ಎಂದು ನನಗೆ ಹೇಳಬೇಡ. ಆಮೇಲೆ ನಿನ್ನ ತಪ್ಪನ್ನು ನಾನು ಹಿಡಿದಾಗ ಅದು ಜಾರ್ಜ್ ಎಲೆಕ್ಸಾಂಡರ್ ಎಂದು ಹೇಳಿ ಓಡಿಹೋಗಬೇಡ. ಈ ಬಟ್ಟೆ ಹಾಕಿಕೊಂಡು ಹೆಂಗಸರ ಮುಂದೆ ಹೋಗಬೇಡ. ನಿನ್ನ ಹೆಣ್ಣಿನ ಅನುಕರಣ ಬಲು ಕಳಪೆಯದು; ನೀನು ಗಂಡಸರನ್ನು ಮೋಹಗೊಳಿಸಬಹುದು, ಅಷ್ಟೆ. ನಿನಗೆ ಒಳ್ಳೆಯದಾಗಲಿ, ಮಗು; ನೀನು ಸೂಜಿಗೆ ದಾರವನ್ನು ಪೋಣಿಸತೊಡಗುವಾಗ ದಾರವನ್ನು ಒಂದೇ ಕಡೆ ಅಲ್ಲಾಡಿಸದೆ ಹಿಡಿದು ಸೂಜಿಯನ್ನು ಅದಕ್ಕೆ ತಗುಲಿಸಬೇಡ; ಸೂಜಿಯನ್ನು ಒಂದೇಕಡೆ ಅಲ್ಲಾಡಿಸದೆ ಹಿಡಿದು, ದಾರವನ್ನು ಅದಕ್ಕೆ ತಗುಲಿಸುತ್ತಾ ತೂರಿಸು. ಹೆಂಗಸರು ಸಾಧಾರಣವಾಗಿ ಯಾವಾಗಲೂ ಮಾಡುವುದು ಹೀಗೆ; ಗಂಡಸರು ಸಾಧಾರಣವಾಗಿ ಯಾವಾಗಲೂ ಮಾಡುವುದು ಹಾಗೆ. ಇಲಿಯಮೇಲಾಗಲೀ ಇನ್ನಾವುದರ ಮೇಲಾಗಲೀ ನೀನು ಏನನ್ನಾದರೂ ಎಸೆಯುವಾಗ, ಮೆಟ್ಟಿಂಗಾಲಮೇಲೆ ನಿಂತು, ತಲೆಯಮೇಲೆ ಕೈಯನ್ನು ನಿನಗೆ ಎಷ್ಟು ಸಾಧ್ಯವೋ ಅಷ್ಟು ಮೇಲೆತ್ತಿ. ನಿನಗೂ ಇಲಿಗೂ ನಡುವೆ ಆರೇಳು ಅಡಿಗಳ ಅಂತರವನ್ನು ಬಿಟ್ಟುಕೊಳ್ಳಬೇಕು. ಬೆನ್ನಮೇಲಿಂದ ನೆಟ್ಟಗೆ ನೀಡಿದ ಕೈಯನ್ನು—ಹಾಗೆ ತಿರುಗಲು ಅಲ್ಲೊಂದು ಕೀಲಿದೆಯೋ ಎಂಬಂತೆ ಎತ್ತಿ ಎಸೆಯಬೇಕು, ಹುಡುಗಿಯಂತೆ; ನಿನ್ನ ತೋಳನ್ನು ಒಂದು ಪಕ್ಕಕ್ಕೆ ನೀಡಿಕೊಂಡು, ಮಣಿಕಟ್ಟು ಮೊಣಕೈಗಳಿಂದಲ್ಲ, ಹುಡುಗನಂತೆ. ಇನ್ನೂ ಒಂದು ಮಾತು; ಹುಡುಗಿಯಾದವಳು ಏನನ್ನಾದರೂ ತನ್ನ ತೊಡೆಯಮೇಲೆ ಇರಿಸಿಕೊಳ್ಳುವಾಗ ಎರಡೂ ಮಂಡಿಗಳನ್ನು ದೂರಪಡಿಸುತ್ತಾಳೆಯೇ ಹೊರತು, ಒಟ್ಟುಗೂಡಿಸುವುದಿಲ್ಲ-ನೀನು ಸೀಸದ ಗಡಾರಿಯನ್ನು ಹಿಡಿಯಲು ಈ ಮೊದಲು ಮಾಡಿದ ಹಾಗೆ. ನೀನು ಸೂಜಿಗೆ ದಾರ ಪೋಣಿಸುವಾಗಲೇ ನೀನು ಹುಡುಗನೆಂಬುದು ನನಗೆ ತಿಳಿದುಹೋಯಿತು; ಉಳಿದದ್ದೆಲ್ಲ ಅದನ್ನು ಸ್ಥಿರಪಡಿಸಲು, ಅಷ್ಟೆ. ಈಗ ಸಾರಾ ಮೇರಿ ವಿಲಿಯಮ್ಸ್ ಜಾರ್ಜ್ ಎಲೆಕ್ಸಾಂಡರ್ ಆದ ನೀನು ನಿನ್ನ ಸೋದರ ಮಾವನ ಬಳಿಗೆ ಹೋಗಬಹುದು. ನಿನಗೆ ಏನಾದರೂ ತೊರಿದರೆಯೊದಗಿದಲ್ಲಿ ಮಿಸೆಸ್ ಜ್ಯೂಡಿತ್ ಲಾಫ್ಟಸ್ ಆದ ನನಗೆ ಹೇಳಿ

ಕಳಿಸು; ನಿನ್ನ ತೊಂದರೆಯನ್ನು ನಿವಾರಿಸಲು ನನ್ನ ಕೈಲಾದದನ್ನು ಮಾಡುತ್ತೇನೆ. ನದಿಯ ಪಕ್ಕದ ದಾರಿಯಲ್ಲೇ ಉದ್ದಕ್ಕೂ ಹೋಗು. ನೀನು ಮುಂದೆಂದಾದರೂ ಕಾಲ್ನಡೆಯನ್ನೇ ಹಿಡಿಯಬೇಕಾದಾಗ, ಪಾದರಕ್ಷೆಗಳನ್ನೂ ಕಾಲು ಚೀಲಗಳನ್ನೂ ಸಂಪಾದಿಸಿಕೊಂಡು, ನದಿಯ ಪಕ್ಕದ ದಾರಿ ಶಿಲಾಮಯವಾದುದು ನೀನು ಗೋಷೆನ್ನನ್ನು ಸೇರುವ ಹೊತ್ತಿಗೆ ನಿನ್ನ ಹೆಜ್ಜೆಗಳು ದುರವಸ್ಥೆಗೀಗಾಗಿರುತ್ತವೆ ಎಂದು ನನ್ನೆಣಿಕೆ."

ನಾನು ದಡದ ಮೇಲೆ ಸುಮಾರು ಐವತ್ತು ಗಜಗಳ ದೂರ ನಡೆದೆ; ಆಮೇಲೆ ನನ್ನ ಹೆಜ್ಜೆ ಗುರುತನ್ನೇ ಅನುಸರಿಸಿ ಧಾವಿಸಿ, ಆ ಮನೆಯಿಂದ ತುಸು ದೂರ ಕೆಳಗಿದ್ದ ನನ್ನ ಕಿರುದೋಣಿಗೆ ಜಾರಿಕೊಂಡೆ; ತ್ವರೆಯಿಂದ ಚಲಿಸಿದೆ. ಮೇಲುಹೊಳೆಯಲ್ಲಿ ಆ ದ್ವೀಪದ ಮುಖದ ಸಮೀಪಕ್ಕೆ ನುಗ್ಗಿದೆ; ದಡವನ್ನು ಸೇರಲು ಮುನ್ನಡೆದೆ. ನನ್ನ ಹೆಣ್ಣಿನ ಕುಲಾವಿಯನ್ನು ತೆಗೆದು ಹಾಕಿದೆ, ಏಕೆಂದರೆ ಆ ವೇಷದ ಅಗತ್ಯವೇ ಇನ್ನಿರಲಿಲ್ಲ. ಮಧ್ಯದಲ್ಲಿ ನನಗೆ ಗಡಿಯಾರದ ಬಡಿತ ಮೊದಲಾದುದು ಕಿವಿಗೆ ಬಿತ್ತು. ನಾನು ನಿಂತೆ, ಎಣಿಸಿದೆ, ನೀರ ಮೇಲಿಂದ ಬಂದ ರದ್ದು ಗಟ್ಟಿಯಾಗಿರದಿದ್ದರೂ, ಸ್ಪಷ್ಟವಾಗಿತ್ತು—ಹನ್ನೊಂದು. ನನ್ನ ಕಿರುದೋಣಿ ದ್ವೀಪ ಮುಖಕ್ಕೆ ತಾಕಿದಾಗ, ನಾನು ತಡಮಾಡದೆ, ನನ್ನ ಹಳೆಯ ಶಿಬಿರವಿರುತ್ತಿದ್ದ ತೋಪಿಗೆ ನುಗ್ಗಿ ಅಲ್ಲೊಂದು ಸೌಕರ್ಯವಾದ ಸ್ಥಳದಲ್ಲಿ ಬೆಂಕಿಯನ್ನು ಹೊತ್ತಿಸಿದೆನು.

ಬಳಿಕ ಮತ್ತೆ ನನ್ನ ಕಿರುದೋಣಿಗೆ ಸಾರಿ, ಅಲ್ಲಿಂದ ಒಂದುವರೆ ಮೈಲಿ ಕೆಳಗಿದ್ದ ನಮ್ಮ ನೆಲೆಗೆ ಆದಷ್ಟು ಬೇಗ ತಲುಪಿದೆ ಅಲ್ಲಿ ದೋಣಿಯನ್ನು ಬಿಟ್ಟು ದಡವನ್ನು ಸೇರಿ ವೃಕ್ಷಗಳ ನಡುವೆ ದಿಣ್ಣೆಯ ಮೇಲೆ ಏರಿ ನಡೆದು ಗುಹೆಗೆ ಬಂದೆ, ಜಿಮ್ ಅಲ್ಲಿ ನೆಲದ ಮೇಲೆ ಮಲಗಿದ್ದ; ಅವನಿಗೆ ತುಂಬು ನಿದ್ರೆ. ಅವನನ್ನು ಎಬ್ಬಿಸಿ ಹೇಳಿದೆ:

"ಎದ್ದು ಹೊರಡು ಜಿಮ್, ಒಂದು ನಿಮಿಷವನ್ನೂ ವ್ಯರ್ಥ ಮಾಡುವಂತಿಲ್ಲ. ಅವರು ನಮ್ಮನ್ನು ಬೆನ್ನು ಹತ್ತಿದ್ದಾರೆ!"

ಜಿಮ್ ಒಂದು ಪ್ರಶ್ನೆಯನ್ನೂ ಕೇಳಲಿಲ್ಲ. ಒಂದು ಮಾತನ್ನೂ ಆಡಲಿಲ್ಲ. ಮುಂದೆ ಅರ್ಧ ಗಂಟೆಯ ತನಕ ಅವನು ಮಾಡಿದ್ದನ್ನು ನೋಡಿದರೆ ಅವನಿಗೆ ಎಷ್ಟು ಹೆದರಿಕೆಯಾಗಿತ್ತೆಂಬುದು ಕಾಣುತ್ತಿತ್ತು. ಅಷ್ಟು ಹೊತ್ತಿಗೆ, ನಮ್ಮದಾಗಿ ಈ ಪ್ರಪಂಚದಲ್ಲಿದ್ದ ಸರ್ವಸ್ವವೂ ನಮ್ಮ ತೆಪ್ಪದ ಮೇಲಿತ್ತು; ಆ ತೆಪ್ಪವೂ ನೀರಬಳ್ಳಿಗಳೂ ಹೆಣೆದುಕೊಂಡಿದ್ದ ಸಣ್ಣ ಕೊಲ್ಲಿಯಿಂದ–ಅದನ್ನು ನಾವೆ ಅಲ್ಲಿ ಬಚ್ಚಿಟ್ಟಿದ್ದೆವು—ಆಚೆಗೆ ಹೊರಡಲು ಸಿದ್ಧವಾಗಿತ್ತು. ಪ್ರಪ್ರಥಮವಾಗಿ ನಾವು ಗುಹೆಯಲ್ಲಿನ ಶಿಬಿರಾಗ್ನಿಯನ್ನು ಆರಿಸಿದೆವು; ಅದಾದ ಮೇಲೆ ಒಂದು ಮೋಂಬತ್ತಿಯ ಬೆಳಕನ್ನು ಕೂಡ ಈಚೆಗೆ ತೋರಲಿಲ್ಲ; ಸ್ವಲ್ಪ ಹತ್ತಿರದಲ್ಲೇ ಇದ್ದ ಕಿರುದೋಣಿಯನ್ನು ತೀರದಿಂದ ಈಚೆಗೆಳೆದು ಪರಿಶೀಲಿಸಿದೆವು. ಸಮೀಪದಲ್ಲಿ ಏನಾದರೂ ಒಂದು ದೋಣಿ ಇದ್ದಿದ್ದರೂ ನನಗದನ್ನು ಕಾಣುವುದು ಸಾಧ್ಯವಿರಲಿಲ್ಲ, ಏಕೆಂದರೆ ನಕ್ಷತ್ರಗಳೂ ನೆರಳುಗಳೂ ದೃಷ್ಟಿಗೆ ಅನುಕೂಲವಲ್ಲ,

ಬಳಿಕ ನಾವು ತೆಪ್ಪವನ್ನು ಈಚೆಗೆ ಎಳೆದು ಮರೆಯಲ್ಲೇ ದ್ವೀಪದ ಪಾದಕ್ಕೆ ತೇಲಿಸಿ ಕೊಂಡು ಹೋದೆವು, ಎಷ್ಟೂ ಸದ್ದಿಲ್ಲದೆ—ಒಂದು ಮಾತನ್ನೂ ಆಡದೆ.

## ೧೨

ಕಡೆಗೂ ನಾವು ದ್ವೀಪದ ಕೆಳ-ಅಂಚಿಗೆ ಬರುವ ಹೊತ್ತಿಗೆ ಹತ್ತಿರ ಹತ್ತಿರ ಒಂದು ಗಂಟೆಯಾಗಿರಬೇಕು; ತೆಪ್ಪ ತುಂಬಾ ನಿಧಾನವಾಗಿ ಹೋಗುತ್ತಿದ್ದಂತೆ ತೋರಿತು. ದೋಣಿ ಯಾವುದಾದರೂ ಹಿಂಬಾಲಿಸುತ್ತಿದ್ದರೆ, ನಾವು ಕಿರುದೋಣಿಗೆ ಹೋಗಿ ಕುಳಿತು ಇಲ್ಲಿನಾಯ್ಸ್ ತೀರಕ್ಕೆ ಹೋಗುತ್ತಿದ್ದೆವು. ಯಾವ ದೋಣಿಯೂ ಬಾರದಿದ್ದುದು ಕ್ಷೇಮವೇ ಆಯಿತು ; ಏಕೆಂದರೆ, ನಾವು ಒಂದು ಬಂದೂಕವನ್ನಾಗಲೀ, ಮೀನಿನ ಗಾಳ ವನ್ನಾಗಲೀ, ಏನಾದರೂ ಉಣಿಸನ್ನಾಗಲೀ ಕಿರುದೋಣಿಯಲ್ಲಿ ಇಟ್ಟುಕೊಳ್ಳುವುದನ್ನು ಯೋಚಿಸಿರಲಿಲ್ಲ. ಹಲವಾರು ವಿಷಯಗಳ ಆಲೋಚನೆಯ ಒತ್ತಡದಿಂದ ನಾವು ತುಂಬಾ ಆಯಾಸಗೊಂಡು ಬೆವರಿಹೋಗಿದ್ದೆವು. ಇದ್ದುದೆಲ್ಲವನ್ನೂ ತೆಪ್ಪದ ಮೇಲೆ ತಂದು ಹಾಕುವುದು ಸೂಕ್ತವಾದ ನಿರ್ಧಾರವೆನಿಸಲಿಲ್ಲ.

ದ್ವೀಪಕ್ಕೆ ಹೋದ ಜನರು ನಾನು ಹೊತ್ತಿಸಿದ ಶಿಬಿರಾಗ್ನಿಯನ್ನು ಪತ್ತೆ ಹಚ್ಚಿ, ಅಲ್ಲಿ ರಾತ್ರಿಯೆಲ್ಲ ಜಿಮ್ ಬರುವನೆಂದು ಕಾದಿದ್ದರೆಂದು ನನ್ನ ನಿರೀಕ್ಷೆ. ಅದು ಹೇಗಿರಲಿ, ಅವರು ನಮಗೆ ಬಲು ದೂರದಲ್ಲೇ ಇದ್ದುಬಿಟ್ಟರು. ನಾನು ಹೊತ್ತಿಸಿದ ಬೆಂಕಿ ಅವರನ್ನು ವಂಚಿಸದಿದ್ದರೆ ಅದು ನನ್ನ ತಪ್ಪಲ್ಲ. ಅವರಿಗೆ ಕೆಟ್ಟುದನ್ನು ಮಾಡಲು ನನಗೆ ಎಷ್ಟು ಸಾಧ್ಯವಿತ್ತೋ ನಾನು ಅಷ್ಟನ್ನೂ ಮಾಡಿದೆ.

ಬೆಳಗಿನ ಮೊದಲ ಹೊಳಪು ತೋರತೊಡಗಿದ ಕೂಡಲೇ ನಾವು ಇಲ್ಲಿನಾಯ್ಸ್ ಭಾಗದ ದೊಡ್ಡ ಡೊಂಕಿನಲ್ಲಿರುವ. ಲಂಗರು-ಕಟ್ಟೆಯಲ್ಲಿ ತೆಪ್ಪವನ್ನು ಕಟ್ಟಿಹಾಕಿ, ಕೈ ಬಾಚಿಯಿಂದ ಹತ್ತಿಯ ಗಿಡದ ಕೊಂಬೆಗಳನ್ನು ಕಡಿದು ತಂದು ಅದರ ಮೇಲೆ ಮುಚ್ಚಿ ದೆವು; ಅಲ್ಲಿನ ದಡದಲ್ಲಿ ಒಳಗವಿಯೊಂದಿತ್ತೇನೋ ಎಂಬಂತೆ ಅದು ಕಾಣುತ್ತಿತ್ತು. 'ಲಂಗರು-ಕಟ್ಟೆ' ಎಂದರೆ ಸಲಿಕೆಯ ಹಲ್ಲುಗಳಷ್ಟು ದಪ್ಪವಾದ ಹತ್ತಿಯ ಗಿಡಗಳಿಂದ ಕೂಡಿದ ಮರಳದಿಣ್ಣೆ.

ಮಿಸ್ಸೂರಿ ತೀರದಲ್ಲಿ ಪರ್ವತಗಳೂ, ಇಲ್ಲಿನಾಯ್ ಭಾಗದಲ್ಲಿ ಮಹಾರಣ್ಯವೂ ಇದ್ದು, ಆ ಬಳಿಯ ಮಿಸ್ಸೂರಿ ತೀರದ ಕೆಳಗೆ ಒಂದು ಕಾಲುವೆ ಇದ್ದುದರಿಂದ ಯಾರಾ ದರೂ ನಮ್ಮನ್ನು ಅಡ್ಡಹಾಕಬಹುದೆಂಬ ಭಯವೇ ನಮಗಿರಲಿಲ್ಲ ಹಗಲೆಲ್ಲಾ ನಾವು ಅಲ್ಲೇ ಇದ್ದೆವು; ಮಿಸ್ಸೂರಿ ತೀರದ ಕೆಳಗೆ ಲಾಳಿ ಹೊಡೆಯುತ್ತಿರುವ ತೆಪ್ಪಗಳನ್ನೂ

ಹಬೆ ದೋಣಿಗಳನ್ನೂ, ಮೇಲ್ದಂಡೆಯ ಸ್ಥಳಗಳಿಗೆ ಹೋಗುವ ಹಬೆದೋಣಿಗಳು ಆ ಮಹಾನದಿಯ ನಡು ನೀರಿನಲ್ಲಿ ಹೊಯ್ದಾಡುತ್ತಿರುವುದನ್ನೂ ವೀಕ್ಷಿಸುತ್ತಿದ್ದೆವು. ನನಗೂ ಆ ಹೆಂಗಸಿಗೂ ನಡೆದ ಅಂದಿನ ಸಂಭಾಷಣೆಯಷ್ಟನ್ನೂ ನಾನು ಜಿಮ್ಮನಿಗೆ ತಿಳಿಸಿದೆ, ಅದಕ್ಕೆ ಜಿಮ್ ಆಕೆ ಬಲುಬುದ್ಧಿವಂತೆಯೆಂದೂ, ತಾನೇ ನಮ್ಮನ್ನು ಹುಡುಕಲು ಬಂದರೆ ಅವಳು ಅಲ್ಲಿ ಕುಳಿತು ಶಿಬಿರಾಗ್ನಿಯನು ಕಾಯುತ್ತಿರದೆ, ಜತೆಗೆ ನಾಯಿಗಳನ್ನೂ ತಂದಿರುತ್ತಾಳೆ ಎಂದನು. ಹಾಗಾದರೆ ನಾಯಿಯನ್ನು ತರುವಂತೆ ಅವಳು ತನ್ನ ಗಂಡನಿಗೆ ಹೇಳದೆ ಹೋದುದೇಕೆ? ಎಂದೆ ನಾನು. ಅವರು ಹೊರಡಲು ಸಿದ್ಧವಾದ ಸಮಯದಲ್ಲಿ ಅವಳಿಗೆ ಈ ಯೋಚನೆ ಹೊಳೆದಿತ್ತೆಂಬುದು ತನಗೆ ಖಚಿತವೆಂದೂ, ಅದಕ್ಕಾಗಿಯೇ ಅವರು ನಾಯಿಯನ್ನು ತರಲು ಊರೊಳಕ್ಕೆ ಹೋದರೆಂದೂ, ಆದ್ದರಿಂದಲೇ ಹಿಂದೆ ಬಿದ್ದರು, ಇಲ್ಲದಿದ್ದರೆ ನಾವು ಆ ಹಳ್ಳಿಗೆ ಹದಿನಾರು ಹದಿನೇಳು ಮೈಲಿ ಕೆಳಗಿರುವ ಈ ಲಂಗರು ಕಟ್ಟೆಗೆ ಬಂದು ಸೇರಿದ್ದೆ—ಮತ್ತೆ ಆ ಹಳೆಯ ಊರಿಗೇ ತಲಪುತ್ತಿದ್ದುದು ಖಂಡಿತವೆಂದೂ ಜಿಮ್ ಹೇಳಿದನು. ಅವರು ನಮ್ಮನ್ನು ಹಿಡಿಯದಿರುವ ತನಕ ಅವರು ನಮ್ಮನ್ನು ಹಿಡಿಯದಿರುವುದಕ್ಕೆ ಕಾರಣ ಬೆದಕುವುದರಲ್ಲಿ ನನಗೆ ಎಷ್ಟೂ ಆಸಕ್ತಿಯಿಲ್ಲ.

ಕತ್ತಲಾಗುತ್ತ ಬರುತ್ತಲೆ ನಾವು ಹತ್ತಿ ಗಿಡಗಳ ಪೊದೆಯಿಂದಾಚೆಗೆ ತಲೆಹಾಕಿದೆವು, ಮೇಲೂ ಕೆಳಗೂ ಆಚೆಗೂ ನೋಡಿದೆವು; ಏನೂ ಕಾಣಿಸಲಿಲ್ಲ ಆಗ ಜಿಮ್ ತೆಪ್ಪದ ಕೆಲವು ಮೇಲು-ಹಲಗೆಗಳನ್ನು ತಂದು, ಉರಿಬಿಸಿಲಿನಿಂದಲೂ ಮಳೆಯಿಂದಲೂ ತಪ್ಪಿಸಿಕೊಳ್ಳಲು ಮತ್ತು ನಮ್ಮ ಸಾಮಾನುಗಳು ಒದ್ದೆಯಾಗುವಂತೆ ನೋಡಿಕೊಳ್ಳಲು ಒಂದು ಬೆಚ್ಚನೆಯ ಚಿಕ್ಕ ಚಪ್ಪರವನ್ನು ನಿರ್ಮಿಸಿದನು; ತೆಪ್ಪದ ಒಳ ಮಟ್ಟಕ್ಕಿಂತ ಒಂದು ಅಡಿಯಷ್ಟು ಎತ್ತರದ ಅಟ್ಟಣೆಯನ್ನು ಅದರೊಳಗೆ ಕಟ್ಟಿದನು, ಹಾಗೆ ಮಾಡಿದ್ದರಿಂದ ನಮ್ಮ ಕಂಬಳಿಗಳೂ ಬೆಲೆಗಳೂ ಹಬೆ-ದೋಣಿಯ ಅಲೆ-ಬಡಿತಗಳಿಗೆ ನಿಲುಕದಂತಾಗಿತ್ತು; ಚಪ್ಪರದ ಮಧ್ಯ ಭಾಗದಲ್ಲಿ ನಾವು ಐದಾರು ಅಂಗುಲ ದಪ್ಪವಾದ ಮಣ್ಣಿನ ಹರಡನ್ನು ರಚಿಸಿ ಅದು ಕೆದರಿಹೋಗದಂತೆ ಸುತ್ತಲೂ ಭದ್ರವಾಗಿ ಅಂಚುಕಟ್ಟಿದೆವು. ಈ ವೇದಿಕೆಯ ಉದ್ದೇಶ ಮಳೆಗಾಲದಲ್ಲೂ ಚಳಿಗಾಲದಲ್ಲೂ ಬೆಂಕಿಯನು ಹೊತ್ತಿಸಿ ಇಟ್ಟುಕೊಳ್ಳಲು ಸ್ಥಳವನ್ನು ಅಣಿಗೊಳಿಸುವುದೇ ಆಗಿತ್ತು; ಅಲ್ಲದೆ ನಾಲ್ಕೂ ಕಡೆ ಮರೆಮಾಡಿದ್ದ ಚಪ್ಪರದಿಂದ ಹೊರಗೆ ಬೆಂಕಿ ಕಾಣಿಸುತ್ತಿರಲಿಲ್ಲ. ನಮ್ಮಲ್ಲಿರುವ ಹುಟ್ಟುಗಳಲ್ಲಿ ಯಾವುದಾದರೂ ಒಂದು ಹುಟ್ಟು ಅಕಸ್ಮಾತ್ತಾಗಿ ಏತಕ್ಕಾದರೂ ತಗುಲಿ ಮುರಿದು ಹೋದರೆ, ತೊಂದರೆಯಾಗದಿರಲೆಂದು ನಾನು ಇನ್ನೊಂದು ಹೆಚ್ಚಿಗೆ ಹುಟ್ಟನ್ನು ಮಾಡಿಕೊಂಡೆವು. ಹಳೆಯ ಲಾಂದ್ರವನ್ನು ತಗುಲಿ ಹಾಕಲು ಚಿಕ್ಕದೊಂದು ಕವಲೊಡೆದ ಕಡ್ಡಿಯನು ನೆಟ್ಟೆವು; ಏಕೆಂದರೆ ಯಾವಗಲಾದರೂ ನದಿಯ ಕೆಳಭಾಗಕ್ಕೆ ಯಾವುದಾದರು ಹಬೆ-ದೋಣಿ ಬರುತ್ತಿರುವುದು ನಮಗೆ ಕಂಡು ಬಂದರೆ, ಅದು ನಮ್ಮ ತೆಪ್ಪಕ್ಕೆ ತಾಗದಂತೆ ಮಾಡುವುದಕ್ಕಾಗಿ ನಾವು ಲಾಂದ್ರವನ್ನು ಹತ್ತಿಸಲೇಬೇಕಾಗಿದೆ. ಹೊಳೆಯ ದಿಕ್ಕಿಗೆ ಇದಿರಾಗಿ ಹೋಗುವ

ದೋಣಿಗಳನ್ನು ಕಂಡಾಗಲಾದರೋ, ನಾವು "ಹಾಯುಗಡ" ಎನ್ನುತ್ತಾರಲ್ಲ ಆ ಸ್ಥಳದಲ್ಲಿ ಬಿಟ್ಟರೆ, ಇನ್ನೆಲ್ಲೂ ದೀಪ ಹೊತ್ತಿಸಬೇಕಾಗಿಲ್ಲ. ಏಕೆಂದರೆ ಪ್ರವಾಹ ಇನ್ನೂ ಏರಿಯೇ ಇತ್ತು, ಬಲು ತಗ್ಗಿನಲ್ಲಿದ್ದ ದಡಗಳ ಇನ್ನೂ ನೀರೊಳಗೆ ಮುಳುಗಿದ್ದವು; ಆದ್ದರಿಂದ ನದಿಯ ಮೇಲು ಭಾಗಕ್ಕೆ ಚಲಿಸುತ್ತಿದ್ದ ದೋಣಿಗಳು ಎಂದೂ ಹೊನಲಿನ ಜಾಡನ್ನು ಹಿಡಿಯದೆ, ಸೆಳವಿಲ್ಲದ ಸುಲಭ ಜಲದಲ್ಲಿಯೇ ಚಲಿಸುತ್ತಿದುವು.

ಎರಡನೆಯ ರಾತ್ರಿ ನಾವು ಗಂಟೆಗೆ ನಾಲ್ಕು ಮೈಲಿಗೂ ಮೀರಿದ ವೇಗದಿಂದ ಧಾವಿಸುತ್ತಿದ್ದ ಪ್ರವಾಹದಲ್ಲಿ ಏಳೆಂಟು ಗಂಟೆಗಳ ಕಾಲ ಸಾಗಿದೆವು. ಮೀನು ಹಿಡಿದೆವು,ಮಾತಾಡಿದೆವು, ನಡುನಡುವೆ ನಿದ್ದೆಯನ್ನು ತಡೆಯಲು ನೀರಿಗೆ ಬಿದ್ದು ಈಜಿದೆವು. ಗಂಭೀರವಾಗಿ ಸದ್ದಿಲ್ಲದೆ ಹರಿವ ಮಹಾನದಿಯಲ್ಲಿ ನಾವು ಅಂಗತಂಗನಾಗಿ ಮಲಗಿ ನಕ್ಷತ್ರಗಳನ್ನು ವೀಕ್ಷಿಸುವ ಒಂದು ವಿಶೇಷಾನುಭವವದು ಗಟ್ಟಿಯಾಗಿ ಮಾತಾಡುವುದು ನಮಗೆ ಹಿಡಿಸಲಿಲ್ಲ; ನಾವು ಪದೇಪದೇ ಅಷ್ಟಾಗಿ ನಗಲೂ ಇಲ್ಲ—ಒಂದು ರೀತಿಯ ತೆಳುವಾದ ಒಳ-ನಗೆ ಅಷ್ಟೆ. ಸಾಮಾನ್ಯವಾಗಿ ಬಲು ಸೊಗಸಾದ ಹವೆಯಿತ್ತು—ನಮಗೆ ಯಾವ ಆತಂಕವೂ ಒದಗಲಿಲ್ಲ. ಆ ರಾತ್ರಿಯಾಗಲಿ, ಮರುರಾತ್ರಿಯಾಗಲಿ, ಮೂರನೆಯ ರಾತ್ರಿಯಾಗಲಿ.

ಇರುಳಿರುಳೂ ನಾವು ಪಕ್ಕದ ಊರುಗಳನ್ನು ದಾಟಿ ಹೋಗುತ್ತಿದ್ದೆವು; ಕೆಲವಂತೂ ದೂರದಲ್ಲಿ ಬೆಟ್ಟದ ಕಪ್ಪು ತಪ್ಪಲಿನಲ್ಲಿ, ಹೊಳೆವ ಬೆಳಕಿನ ಹಾಸುಗೆಯಂತೆ ಮಾತ್ರ ಕಂಗೊಳಿಸುತ್ತಿದ್ದವು; ಒಂದು ಮನೆಯೂ ನಿಮ್ಮ ಕಣ್ಣಿಗೆ ಬೀಳುತ್ತಿರಲಿಲ್ಲ. ಐದನೆಯ ರಾತ್ರಿ ನಾವು ಸೇಂಟ್‌ಲೂಯಿಯನ್ನು ದಾಟಿದೆವು; ಅದೇ ಒಂದು ದೇದೀಪ್ಯಮಾನ ಜಗತ್ತಿನಂತಿತ್ತು. ಅಲ್ಲಿ ಇಪ್ಪತ್ತು ಅಥವಾ ಮೂವತ್ತು ಸಾವಿರ ಜನರಿದ್ದಾರೆ ಎನ್ನುತ್ತಿದ್ದರು. ಸೇಂಟ್ ಪೀಟರ್ಸ್‌ಬರ್ಗಿನವರು; ಆ ಸದ್ದಿಲ್ಲದಿರುಳಿನಲ್ಲಿ ಎರಡು ಗಂಟೆಯ ಹೊತ್ತಿನಲ್ಲಿ ಆ ಅದ್ಭುತ ದೀಪಾವಳಿಯ ಹರಹನ್ನು ನೋಡುವ ತನಕ, ನನಗೆ ಅವರ ಮಾತಿನಲ್ಲಿ ನಂಬಿಕೆ ಬಂದಿರಲಿಲ್ಲ, ಅಲ್ಲಿ ಪರಮ ಮೌನವೇ ನೆಲಸಿತ್ತು ; ಎಲ್ಲರೂ ನಿದ್ರಾಧೀನರಾಗಿದ್ದರು.

ಪ್ರತಿ ರಾತ್ರಿಯೂ ಹತ್ತು ಗಂಟೆಯ ಸುಮಾರಿಗೆ ನಾನು ದಡದ ಮೇಲೆ ಹರಡಿಕೊಂಡಿದ್ದ ಯಾವುದಾದರೊಂದು ಹಳ್ಳಿಗೆ ನುಗ್ಗಿ, ಹತ್ತು ಅಥವಾ ಹದಿನೈದು ಸೆಂಟುಗಳಿಗೆ ಗೋಧಿಯ ಹಿಟ್ಟನ್ನೋ ಹಂದಿಯ ಮಾಂಸವನ್ನೋ, ತಿನ್ನಲು ಇನ್ನೇನಾದರೂ ಉಣಿಸನ್ನೋ ತರುತ್ತಿದ್ದೆ, ಕೆಲವೇಳೆ ನಾನು ನೆಟ್ಟಗೆ ಕೂರಲು ಬಾರದ ಕೋಳಿ ಮರಿಗಳನ್ನು ಎಗುರಿಸಿಕೊಂಡು ಬರುತ್ತಿದ್ದೆ, ಅವಕಾಶವಿದ್ದಾಗ ಕೋಳಿಮರಿಯನ್ನು ಕದ್ದು ತಂದುಬಿಡು, ಒಂದುವೇಳೆ ಅದು ನಿನಗೆ ಬೇಕಾಗದಿದ್ದರೆ, ಅದರ ಅಗತ್ಯವಿರುವವರನ್ನು ನೀನು ಸುಲಭವಾಗಿ ದೊರಕಿಸಿಕೊಳ್ಳಬಹುದು; ಒಳ್ಳೆಯ ಕೆಲಸ ಎಂದಿಗೂ ಮರೆತು ಹೋಗುವುದಿಲ್ಲ, ಎಂದು ಅಪ್ಪ ಯಾವಾಗಲೂ ಹೇಳುತ್ತಿದ್ದನು. ಅಪ್ಪ ಎಂದೂ ತನಗೆ

ಕೋಳಿಮರಿ ಬೇಡುವೆನ್ನುತ್ತಲೇ ಇರಲಿಲ್ಲ, ನಾನು ಕಂಡಮಟ್ಟಿಗೆ. ಅದು ಹೇಗಿರಲಿ ಅವನೇನೋ ಹಾಗೆ ಹೇಳುವುದು ಪದ್ಧತಿಯಾಗಿತ್ತು.

ಮುಂಬೆಳಗಿನಲ್ಲಿ ನಾನು ಹೊಲಗಳಿಗೆ ನುಸುಳಿ ಒಂದು ಕಲ್ಲಂಗಡಿಯನ್ನೋ, ಕರು ಬೂಜವನ್ನೋ, ಸೌತೆಕಾಯನ್ನೊ, ಇನ್ನಾವುದಾದರೂ ಹೊಸ ಕಾಳನ್ನೋ ಅಥವಾ ಆ ಬಗೆಯ ಆಹಾರಪದಾರ್ಥವನ್ನೋ ಸಾಲ ತರುತ್ತಿದೆ. ಮುಂದೆ ಅದನ್ನು ಸ್ವಲ್ಪ ಕಾಲದಲ್ಲೇ ಹಿಂದಿರುಗಿಸುವುದಾದಲ್ಲಿ, ಸಾಲ ತರುವುದರಿಂದ ಏನೂ ತೊಂದರೆಯಿಲ್ಲ; ಎನ್ನುವುದು ಅಪ್ಪನ ಅಭಿಪ್ರಾಯವಾಗಿತ್ತು. ಆ ವಿಧವೆಯಾದರೋ ಅದು ಚೌರ್ಯಕ್ಕಿಟ್ಟ ಮೃದುವಾದ ಹೆಸರೆಂದೂ, ಯೋಗ್ಯನಾದವನು ಯಾವನೂ ಹಾಗೆ ಮಾಡುವುದಿಲ್ಲ ವೆಂದೂ ಹೇಳಿದ್ದಳು. ವಿಧವೆ ಹೇಳಿದ್ದು ಭಾಗಶಃ ಸರಿಯೆಂದೂ, ಅಪ್ಪ ಹೇಳಿದ್ದೂ ಭಾಗಶಃ ಸರಿಯೆಂದೂ ತಾನೆಣಿಸುವುದಾಗಿ ಜಿಮ್ ಹೇಳಿದನು. ಆದ್ದರಿಂದ ನಮಗಿರುವ ಉತ್ತಮ ಮಾರ್ಗವೆಂದರೆ ಪಟ್ಟಿಯಲ್ಲಿ ಎರಡನ್ನೋ ಮೂರನ್ನೋ ಆರಿಸಿಕೊಳ್ಳುವುದು, ಮತ್ತು ಅವುಗಳನ್ನು ಇನ್ನುಮುಂದೆ ನಾವು ಸಾಲ ತರುವುದಿಲ್ಲ ಎಂದುಬಿಡುವುದು— ಆಮೇಲೆ ಇತರ ವಸ್ತುಗಳನ್ನು ಸಾಲ ತರುವುದರಲ್ಲಿ ಯಾವ ತೊಂದರೆಯೂ ಇಲ್ಲವೆಂಬು ಅವನ ಭಾವನೆ. ತ್ಯಜಿಸುವುದು ಕಲ್ಲಂಗಡಿ ಹಣ್ಣನ್ನೇ, ಕರುಬೂಜವನ್ನೇ ಅಥವಾ ಇನ್ನೊಂದನ್ನೇ ಎಂದು ತೀರ್ಮಾನಿಸಲು ಯೋಚನೆಮಾಡುತ್ತಾ, ಕೆಳ-ನದಿಗೆ ತೇಲಿ ಹೋಗುತ್ತಾ, ನಾವು ಒಂದು ರಾತ್ರಿಯೆಲ್ಲಾ ಚರ್ಚೆಮಾಡಿದೆವು. ಬೆಳಗಿನ ಹೊತ್ತಿಗೆ ಒಂದು ತೃಪ್ತಿಕರ ನಿರ್ಧಾರಕ್ಕೆ ಬಂದೆವು, ಕಾಡುಸೇಬನ್ನೂ ಪರ್ಸಿಮನ್ ಹಣ್ಣನ್ನೂ ಬಿಡುವುದಾಗಿ ತೀರ್ಮಾನಿಸಿದೆವು. ಅದರಿಂದ ನಮ್ಮ ಮನಸ್ಸಿಗೆ ಮೊದಲು ಹೇಗೆಹೇಗೋ ಅನ್ನಿಸಿತು; ಆಮೇಲೆ ಎಲ್ಲವೂ ಸರಿಹೋಯಿತು. ಅದು ನಡೆದ ಪರಿಯನ್ನು ನೋಡಿ ನನಗೂ ಸಂತೋಷವಾಯಿತು, ಏಕೆಂದರೆ ಕಾಡುಸೇಬು ಎಂದೂ ಒಳ್ಳೆಯದಲ್ಲ, ಪರ್ಸಿ ಮನ್ ಹಣ್ಣುಗಳು ಇನ್ನೆರಡು ಮೂರು ತಿಂಗಳ ತನಕ ಪಕ್ವವಾಗುವ ಸಂಭವವಿಲ್ಲ.

ನಾವು ಸಂಜೆಗೆ ಮುನ್ನವೇ ಗೂಡುಸೇರದಿರುವ ಇಲ್ಲವೇ ಬೆಳಗಿನ ಮುನ್ನವೇ ಹೊರಗೆ ಹಾರಿದ ನೀರು-ಕೋಳಿಯನ್ನು ಆಗಾಗ ಬೇಟೆಯಾಡುತ್ತಿದ್ದೆವು. ಒಟ್ಟಾರೆ ನೋಡಿದರೆ ನಮ್ಮ ಬದುಕು ಉಲ್ಲಾಸಮಯವಾಗಿತ್ತು.

ಐದನೆಯ ರಾತ್ರಿ ಸೇಂಟ್‌ಲೂಯಿಯ ಕೆಳಪ್ರದೇಶದಲ್ಲಿ ಮಧ್ಯರಾತ್ರಿ ಕಳೆದ ಮೇಲೆ ಅಸಾಧ್ಯವಾದ ಸಿಡಿಲು ಮಿಂಚುಗಳಿಂದ ಕೂಡಿದ ಪ್ರಚಂಡ ಬಿರುಗಾಳಿ ಎದ್ದಿತು; ಧಾರಾಕಾರವಾಗಿ ಮಳೆ ಸುರಿಯತೊಡಗಿತು. ತೆಪ್ಪವನ್ನು ಅದರ ಪಾಲಿಗೆ ಬಿಟ್ಟು ನಾವು ನಮ್ಮ ಕುಟೀರದೊಳಗೇ ನಿಂತೆವು. ಮಿಂಚಿನ ಝಳಪಿನಲ್ಲಿ ನಾವು ನಮ್ಮೆದುರಿಗೆ ನೇರ ಹರಿಯುತ್ತಿದ್ದ ಮಹಾ ನದಿಯನ್ನೂ ಇಕ್ಕೆಲದ ಕಡಿದಾದ ಶಿಲಾಮುಖಗಳನ್ನೂ ಕಾಣ ಬಹುದಿತ್ತು. ಸ್ವಲ್ಪಹೊತ್ತಾದಮೇಲೆ ನಾನು "ಓಯ್ ಜಿಮ್, ಅಲ್ಲಿ ನೋಡು"

ಎಂದೆ. ಬಂಡೆಗೆ ಬಡಿದು ಧ್ವಂಸವಾಗಿದ್ದ ಹಬೆ ದೋಣಿ ಅದು. ನಾವು ನೇರ ಅದರ ಬಳಿಗೇ ಚಲಿಸುತ್ತಿದ್ದೆವು. ಮಿಂಚು ಅದನ್ನು ಸ್ಪಷ್ಟವಾಗಿ ಕಾಣಿಸಿತು. ಅದರ ಮೇಲಂತಸ್ತಿನ ಒಂದು ಭಾಗ ನೀರಮೇಲೆ ಎದ್ದು, ಅದು ಓಲಿತ್ತು. ನೀವು ಅದರ ಚಿಮಣಿಯ ಪ್ರತಿಯೊಂದು ಚಿಕ್ಕ ತಂತಿಯನ್ನು ಕೂಡ ಸ್ಪಷ್ಟವಾಗಿ ನೋಡಬಹುದಿತ್ತು; ಮಿಂಚು ಹೊಡೆದಾಗ ದೊಡ್ಡ ಗಂಟೆಯ ಪಕ್ಕದಲ್ಲಿದ್ದ ಕುರ್ಚಿಯನ್ನೂ ಅದರ ಹಿಂಭಾಗದಲ್ಲಿ ಅವಲಕ್ಷಣವಾಗಿ ನೇತಾಡುತ್ತಿದ್ದ ಹಳೆಯ ಟೋಪಿಯನ್ನೂ ನೋಡಬಹುದಿತ್ತು.

ರಾತ್ರಿಯಲ್ಲಿ ದೂರದ ಎಲ್ಲಿಗೋ ಬಂದಿದ್ದೆವು, ಬಿರುಗಾಳಿ ಎದ್ದಿತ್ತು, ಎಲ್ಲವೂ ಬಲು ಗಹನವಾಗಿತ್ತು. ನದಿಯ ಮಧ್ಯದಲ್ಲಿ ಅಷ್ಟು ಶೋಕಮಯವಾಗಿ ಏಕಾಕಿಯಾಗಿ ಬಿದ್ದಿದ್ದ ಆ ಅವಶೇಷವನ್ನು ನೋಡಿದಾಗ ನನಗೆ ಆದ ಅನುಭವ, ನನ್ನ ವಯಸ್ಸಿನ ಬೇರೊಬ್ಬ ಹುಡುಗನಿಗೆ ಆಗುವಂಥದೇ! ಅದನ್ನು ಹತ್ತಿ ಮೇಲೆಲ್ಲ ಸುಳಿದಾಡಿ ಅಲ್ಲೇನಿದೆ ಎಂದು ನೋಡುವ ಅಪೇಕ್ಷೆಯಾಯಿತು ನನಗೆ. ನಾನು ಹೇಳಿದೆ:

"ನಾವು ಅದರ ಮೇಲೆಯೇ ಇಳಿಯೋಣ ಜಿಮ್."

ಆದರೆ ಜಿಮ್ ಮೊದಲು ಈ ಸಲಹೆಯನ್ನು ಸಂಪೂರ್ಣವಾಗಿ ವಿರೋಧಿಸಿದನು. ಅವನು ಹೇಳಿದ:

"ನಾನು ಆ ಅವಶೇಷದ ಬಳಿಗೆ ಹೋಗಿ ಚೇಷ್ಟೆ ಮಾಡಬಯಸುವುದಿಲ್ಲ. ನಮಗೆ ಈಗಾಗಲೇ ಸಾಕಷ್ಟು ಕೆಟ್ಟ ಹೆಸರು ಬಂದಿದೆ; ಆ ಒಳ್ಳೆಯ ನಾಣ್ಣುಡಿಯಂತೆ, ಶನಿಯನ್ನು ಅದರ ಪಾಡಿಗೆ ಬಿಡೋಣ. ಆ ಅವಶೇಷದಲ್ಲಿ ಒಬ್ಬ ಕಾವಲುಗಾರನಿರುವಂತೆ ತೋರುತ್ತದೆ."

"ಕಾವಲುಗಾರ, ನಿಮ್ಮಜ್ಜಿಯ ತಲೆ! ದೋಣಿಯ ಮೇಲುಭಾಗವನ್ನೂ, ಮಾರ್ಗದರ್ಶಿಯ ಮನೆಯನ್ನೂ ಬಿಟ್ಟರೆ ಅಲ್ಲಿ ಕಾಯುವುದಕ್ಕೆ ಏನೂ ಇಲ್ಲ. ಆ ಬಯಲನ್ನೂ ಮನೆಯನ್ನೂ ಕಾಯುವುದಕ್ಕಾಗಿ, ಯಾವ ಕ್ಷಣಕ್ಕಾದರೂ ಮುರಿದುಬಿದ್ದು ನದಿಯಲ್ಲಿ ಅವು ಕೊಚ್ಚಿಹೋಗುವುದು ದಿಟವೆನಿಸುವ ಇಂಥ ರಾತ್ರಿಯಲ್ಲಿ ಯಾರಾದರೂ ಪ್ರಾಣಾಪಾಯವನ್ನು ತಂದುಕೊಳ್ಳುತ್ತಾರೆಂದು ನೀನು ನಂಬಿರುವೆಯ?" ಎಂದೆ ನಾನು. ಜಿಮ್ಮನಿಗೆ ಏನು ಹೇಳಲೂ ತೋರಲಿಲ್ಲ, ಸುಮ್ಮನಿದ್ದ. ಅದಲ್ಲದೆ ದೋಣಿಯ ಯಜಮಾನನ ಕೊಠಡಿಯಿಂದ ನಾವು ಬೆಲೆಬಾಳುವ ಏನನ್ನಾದರೂ, ಎರವಲು ತರಬಹುದು. ಚುಟ್ಟಾಗಳು, ಏನೆನ್ನುವೆ?—ನಗದು ಐದು ಸೆಂಟುಗಳ ಬೆಲೆಯವು. ಹಬೆದೋಣಿಯ ಯಜಮಾನರು ಎಂದೂ ಶ್ರೀಮಂತರು; ಅವರ ಸಂಬಳವೇ ತಿಂಗಳಿಗೆ ಅರುವತ್ತು ಡಾಲರುಗಳು; ಅವರಿಗೆ ಎಲ್ಲಿಯವರೆಗೆ ಯಾವ ಪದಾರ್ಥ ಬೇಕೋ ಅಲ್ಲಿಯವರೆಗೆ ಅದರ ಬೆಲೆಯನ್ನೇ ಅವರು ಲಕ್ಷ್ಯಮಾಡುವುದಿಲ್ಲ. ನಿನ್ನ ಜೇಬಿನಲ್ಲಿ ಒಂದು ಮೋಂಬತ್ತಿಯನ್ನು ಇಟ್ಟುಕೋ. ನಾವು ಆ ದೋಣಿಯನ್ನು ಸಂಪೂರ್ಣವಾಗಿ ಶೋಧಿಸುವ ತನಕ ನನಗೆ ಮನಶ್ಶಾಂತಿ ಇಲ್ಲ. ಟಾಂ ಸಾಯರ್ ಆಗಿದ್ದರೆ ಈ ಅವಕಾಶವನ್ನು ಬಿಟ್ಟುಕೊಡುತ್ತಿದ್ದನೆ? ಎಂದಿಗೂ ಇಲ್ಲ, ಅದನ್ನು

ಸಾಹಸಕಾರ್ಯವೆನ್ನುತ್ತಿದ್ದನು— ಅವನು ಕರೆಯುತ್ತಿದ್ದುದೇ ಹಾಗೆ, ಒಂದು ವೇಳೆ ಅದರಿಂದ ತನ್ನ ಪ್ರಾಣವೇ ಹೋಗುವುದಾದರೂ ಅವನು ಅದಕ್ಕೆ ಧುಮುಕುತ್ತಿದ್ದನು; ಅದಕ್ಕೊಂದು ಗತ್ತನ್ನು ಸೇರಿಸುತ್ತಿದ್ದನಲ್ಲವೆ ? ತನಗೆ ತಾನೆ ಹಿಗ್ಗುತ್ತಿರಲಿಲ್ಲವೆ ? ಅಷ್ಟೇ ಏಕೆ, ದೇವಲೋಕವನ್ನು ಕಂಡುಹಿಡಿದ ಕ್ರಿಸ್ಟೋಫರ್ ಕೊಲಂಬಸ್ಸೇ ಅವನು ಎಂದು ನೀವು ತಿಳಿಯುತ್ತಿದ್ದಿರಿ, ಟಾಂ ಇಲ್ಲಿರಬೇಕಾಗಿತ್ತು." ಎಂದೆ ನಾನು.

ಜಿಮ್ ಸ್ವಲ್ಪ ಗೊಣಗಿದ, ಆದರೂ ಒಪ್ಪಿಕೊಂಡ. ನಾವು ಆದಷ್ಟೂ ಮಾತಾಡದಿರಬೇಕೆಂದೂ, ಆಡಿದರೂ ಬಲುಮೆತ್ತಗೆ ಮಾತಾಡಬೇಕೆಂದೂ ಹೇಳಿದನು. ಆ ಸಮಯಕ್ಕೆ ಸರಿಯಾಗಿ ಮತ್ತೆ ಮಿಂಚು ಹೊಡೆದು ಆ ಅವಶೇಷವನ್ನು ನಮಗೆ ಕಾಣಿಸಿತು; ನಾವು ಆ ದೋಣಿಯ ಅಂಚನ್ನು ಹಿಡಿದೆವು, ಬೇಗ ಬೇಗ ನಡೆದೆವು.

ದೋಣಿಯ ಅಂತಸ್ತು ತುಂಬಾ ಮೇಲಿತ್ತು, ನಾವು ಆದರ ಇಳಿಜಾರನ್ನು ಹಿಡಿದು ಕದ್ದಿಳಿದು ಕತ್ತಲೆಯಲ್ಲಿ ಮೆಲ್ಲಮೆಲ್ಲನೆ ಹೆಜ್ಜೆಯಿಟ್ಟುಕೊಂಡು ಕೈಗಳನ್ನು ಮೇಲೆತ್ತಿಕೊಂಡು ಅಡ್ಡತಂತಿಗಳನ್ನು ನಿವಾರಿಸಿಕೊಂಡು ಹೋದೆವು ; ಅವುಗಳಿರುವುದೇ ಕಣ್ಣಿಗೆ ಬೀಳದಷ್ಟು ಕತ್ತಲಾಗಿತ್ತು. ಕೆಲವೇ ಕ್ಷಣಗಳಲ್ಲಿ ಗವಾಕ್ಷಿಯ ಮುನ್-ಚಾಚಿನ ಅಂಚಿಗೆ ಬಂದೆವು, ಅದರ ಮೇಲಕ್ಕೆ ಹತ್ತಿದೆವು. ಮುಂದಿನ ಹೆಜ್ಜೆ ನಮ್ಮನ್ನು ಹಡಗಿನ ಯಜಮಾನನ ಬಾಗಿಲಿಗೇ ನೇರ ಒಯ್ದಿತು, ಬಾಗಿಲು ತೆರೆದಿತ್ತು, ಒಳಹಜಾರದ ಮೂಲಕ ನೋಡಿದೆವು ; ಪರಮಾಶ್ಚರ್ಯ ! ದೂರದಲ್ಲೊಂದು ದೀಪವಿತ್ತು ; ಅದೇ ಕ್ಷಣದಲ್ಲಿ ಅಲ್ಲೆಲ್ಲೋ ತಗ್ಗಿದ ದನಿ ಕೇಳಿಸಿತು!

ಜಿಮ್ ಪಿಸುಗುಟ್ಟಿದ ; ತನಗೆ ತುಂಬಾ ತಲೆನೋವೆಂದೂ, ಹೋಗಿಬಿಡೋಣ ಬಾ ಎಂದೂ ಹೇಳಿದ. ನಾನು ಆಗಲಿ ಎಂದೆ, ತೆಪ್ಪದ ಬಳಿಗೆ ಹೊರಡುವುದರಲ್ಲಿದ್ದೆ. ಆಗೊಂದು ಧ್ವನಿ ಅಳುತ್ತಾ ಹೀಗೆ ಹೇಳಿದುದನ್ನು ಕೇಳಿದೆ.

"ಓ ದಯವಿಟ್ಟು ಹಾಗೆ ಮಾಡಬೇಡಿ ಸ್ನೇಹಿತರೆ ; ನಾನು ಎಂದಿಗೂ ಬಾಯಿ ಬಿಡುವುದಿಲ್ಲವೆಂದು ಪ್ರಮಾಣ ಮಾಡುತ್ತೇನೆ !"

ಇನ್ನೊಂದು ದನಿ ಗಟ್ಟಿಯಾಗಿ ಹೇಳಿತು :

"ಅದು ಸುಳ್ಳು, ಜಿಮ್ ಟರ್ನರ್. ನೀನು ಹಿಂದೆಯೂ ಹೀಗೆ ಮಾಡಿದ್ದೀಯೆ ಲಾಭದಲ್ಲಿ ನಿನಗೆ ಸಲ್ಲಬೇಕಾದ ಪಾಲಿಗಿಂತ ಹೆಚ್ಚಾಗಿಯೇ ಕೊಡಬೇಕೆಂದು ನೀನು ಎಂದೂ ಕೇಳುವವನೇ, ಎಂದೂ ಗಿಟ್ಟಿಸಿಕೊಂಡಿರುವವನೇ, ಏಕೆಂದರೆ ಹಾಗೆ ಹೆಚ್ಚಿನ ಪಾಲು ನಿನಗೆ ಗಿಟ್ಟದಿದ್ದರೆ ನೀನು ಗುಟ್ಟನ್ನು ಬಯಲು ಮಾಡುವುದಾಗಿ ಪ್ರತಿಜ್ಞೆ ಮಾಡಿದ್ದೀಯೆ. ಈವರೆಗೆ ನೀನು ಈ ಮಾತನ್ನು ಸಾವಿರಾರು ಸಲ ಹೇಳಿದ್ದೀಯೆ, ನೀನು ಈ ನಾಡಿನಲ್ಲೇ ಪರಮ ನೀಚನೂ ಪರಮದ್ರೋಹಿಯೂ ಆದ ಬೇಟೆ ನಾಯಿಯಂಥವನು."

ಇಷ್ಟು ಹೊತ್ತಿಗೆ ಜಿಮ್ ತೆಪ್ಪದ ಬಳಿಗೆ ಹೋಗಿದ್ದ. ನಾನು ಕುತೂಹಲದಿಂದ ಕುದಿಯುತ್ತಿದ್ದೆ; ಟಾಮ್‌ಸಾಯರ್ ಈಗ ಹಿಮ್ಮೆಟ್ಟುತ್ತಿರಲಿಲ್ಲ, ನಾನೂ ಹಾಗೆಯೇ ಮಾಡುತ್ತೇನೆ, ಇಲ್ಲಿ ಏನಾಗುತ್ತಿದೆಯೋ ನೋಡಿಯೇಬಿಡುತ್ತೇನೆ ಎಂದುಕೊಂಡೆ, ಆ ಕಿರಿದಾದ ಓಣಿಯಲ್ಲಿ ಕೈಗಳನ್ನು ಮಂಡಿಗಳ ಮೇಲೆ ಇಳಿಸಿ ಕತ್ತಲೆಯಲ್ಲೇ ತೆವಳುತ್ತ ನನಗೂ ಆ ದೋಣಿಯ ಅಡ್ಡಹಜಾರಕ್ಕೂ ನಡುವೆ ಇನ್ನೊಂದೇ ಕೊಠಡಿ ಕೂಡ ಇಲ್ಲವಾಗುವ ತನಕ ಮೆಲ್ಲಗೆ ಹೋದೆ, ಅಲ್ಲಿ ಕೈಕಾಲು ಕಟ್ಟಿಹಾಕಿ ನೆಲದ ಮೇಲೆ ಕೆಡಹಿರುವ ಒಬ್ಬನನ್ನೂ ಅವನ ಮೇಲೆ ಇಬ್ಬರು ನಿಂತಿರುವುದನ್ನೂ ಕಂಡೆ; ಅವರಲ್ಲಿ ಒಬ್ಬ ಮಂಕಾದ ಬೆಳಕಿನ ಲಾಂದ್ರವನ್ನು ಹಿಡಿದಿದ್ದನು; ಇನ್ನೊಬ್ಬನ ಕೈಯಲ್ಲಿ ಪಿಸ್ತೂಲಿತ್ತು. ಇವನು ಪಿಸ್ತೂಲನ್ನು ನೆಲದ ಮೇಲೆ ಬಿದ್ದಿದ್ದ ಮನುಷ್ಯನ ತಲೆಗೆ ಗುರಿಯಿಟ್ಟು ಹೇಳುತ್ತಿದ್ದನು:

"ನಿನ್ನ ಇಷ್ಟವೇನೆಂದರೆ! ಅದು ನನ್ನಾಜ್ಞೆಯೂ ಆಗಿದೆ—ಪರಮನೀಚನೆ!"

ನೆಲದ ಮೇಲೆ ಬಿದ್ದಿದ್ದ ಮನುಷ್ಯ ಮುದುರಿಕೊಂಡು ಬೇಡುತ್ತಿದ್ದ:

'ಓ ದಯವಿಟ್ಟು ಮಾಡಬೇಡ, ಬಿಲ್; ನಾನೆಂದಿಗೂ ಬಾಯಿ ಬಿಡುವುದಿಲ್ಲ."

ಅವನು ಪ್ರತಿಸಲ ಹಾಗೆ ಹೇಳಿದಾಗಲೂ, ಲಾಂದ್ರ ಹಿಡಿದಿದ್ದ ಮನುಷ್ಯ—ಗಟ್ಟಿಯಾಗಿ ನಕ್ಕು ಹೇಳುತ್ತಿದ್ದ;

"ನೀನು ಹೇಳುವುದೇ ಇಲ್ಲ, ನಿಜವಾಗಿಯೂ. ನೀನು ಅದಕ್ಕಿಂತ ನಿಜವಾದ ಮಾತನ್ನು ಎಂದೂ ಆಡಿಲ್ಲ." ಒಂದು ಸಲ "ಅವನು ಬೇಡಿಕೊಳ್ಳುತ್ತಿರುವುದನ್ನು ನೋಡು! ನಾವೇನಾದರೂ ಅವನನ್ನು ಮಿಸುಕಾಡದಂತೆ ಹಿಡಿದು ಕಟ್ಟಿಹಾಕದೆ ಹೋಗಿದ್ದರೆ, ಅವನು ನಮ್ಮಿಬ್ಬರನ್ನೂ ತೀರಿಸಿಬಿಡುತ್ತಿದ್ದ. ಏತಕ್ಕಾಗಿ? ನಿಷ್ಕಾರಣವಾಗಿ, ನಾವು ನಮ್ಮ ಹಕ್ಕುಗಳ ರಕ್ಷಣೆಗೆ ನಿಂತಿದ್ದಕ್ಕಾಗಿ, ಅಷ್ಟೆ. ನಾನು ನಿನ್ನನ್ನು ಕೆಡಹಿದ್ದೇನೆ, ನೀನು ಇನ್ನೆಂದೂ ಯಾರಿಗೂ ಬೆದರಿಕೆ ಹಾಕುವಂತಿಲ್ಲ, ಜಿಮ್ ಟರ್ನರ್, ಆ ಪಿಸ್ತೂಲನ್ನು ಮೇಲಕ್ಕೆ ತಿರುಗಿಸು, ಬಿಲ್."

ಬಿಲ್ ಹೇಳಿದ:

"ನಾನು ಹಾಗೆ ಮಾಡಲೊಲ್ಲೆ, ಜೇಕ್ ಪ್ಯಾಕಾರ್ಡ್. ನಾನು ಅವನನ್ನು ಕೊಲ್ಲ ಬಯಸುತ್ತೇನೆ—ಅವನು ಇದೇ ರೀತಿಯಲ್ಲಿ ಮುದುಕ ಹ್ಯಾಟ್‌ಫೀಲ್ಡನ್ನು ಕೊಲ್ಲಲಿಲ್ಲವೆ?—ಅವನು ಈ ಶಿಕ್ಷೆಗೆ ಅರ್ಹನಲ್ಲವೆ?"

"ಅವನನ್ನು ಕೊಲ್ಲಿಸುವುದು ನನಗಿಷ್ಟವಿಲ್ಲ; ಅದಕ್ಕೆ ನನ್ನದೇ ಆದ ಕಾರಣಗಳೂ ನನ್ನಲ್ಲಿವೆ."

"ಈ ಮಾತುಗಳನ್ನು ಆಡಿದ್ದಕ್ಕಾಗಿ ನಿನಗೆ ಪುಣ್ಯ ದೊರಕಲಿ, ಜೇಕ್ ಪ್ಯಾಕಾರ್ಡ್, ನಾನು ಬದುಕಿರುವ ತನಕ ನಿನ್ನನ್ನು ಮರೆಯುವುದಿಲ್ಲ"—ಕೆಳಗೆ ಬಿದ್ದಿದ್ದ ಮನುಷ ಉಗ್ಗುತ್ತಾ ಹೀಗೆಂದನು.

ಪ್ಯಾಕಾರ್ಡ್ ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ, ತನ್ನ ಲಾಂದ್ರವನ್ನು ಮೊಳೆಗೆ ತೂಗಿಹಾಕಿ ನಾನಿರುವ ಬಳಿಗೆ ಕತ್ತಲೆಯಲ್ಲಿ ನಡೆದುಬರುತ್ತಿದ್ದನು; ಬಿಲ್ಲಿಗೂ ಬಾಯೆಂದು ಸನ್ನೆ ಮಾಡಿದನು. ನಾನು ಅದಷ್ಟು ಬೇಗ ಸುಮಾರು ಎರಡುಗಜ ದೂರಕ್ಕೆ ಹಿಂದೆ ಸರಿದೆ ; ಆದರೆ ದೋಣಿ ಓಲಿತು, ನನಗೆ ಸಾಕಷ್ಟು ಅವಕಾಶವಿರಲಿಲ್ಲ. ಅವರ ಕಾಲಿಗೆ ತೊಡರಿಕೊಂಡು ಸಿಕ್ಕಿಹಾಕಿಕೊಳ್ಳದಿರಲು ಮೇಲುಭಾಗದ ಕೊಠಡಿಯೊಂದಕ್ಕೆ ನುಸುಳಿದೆ. ಅವನು ಕತ್ತಲೆಯೊಳಗೇ ಕಾಲೆಳೆದುಕೊಂಡು ಬಂದನು. ಪ್ಯಾಕಾರ್ಡ್ ನಾನಿದ್ದ ಕೋಣೆಗೆ ಬಂದು ಹೇಳಿದನು :

"ಇಲ್ಲಿಗೆ ಬಾ, ಒಳಗೆ ಬಾ.

ಅವನು ಒಳಗೆ ಬಂದನು, ಬಿಲ್ ಅವನನ್ನು ಹಿಂಬಾಲಿಸಿದನು. ಅವರು ಒಳಗೆ ಬರುವುದರೊಳಗಾಗಿ ನಾನು ಮೇಲಂತಸ್ತಿನ ಮೇಲುಭಾಗದಲ್ಲಿದ್ದೆ; ಸಿಕ್ಕಿಹಾಕಿಕೊಂಡಿದ್ದೆ ; ಅವರು ಅಲ್ಲಿ ನಿಂತಿದ್ದರು ; ಮೇಲಂತಸ್ತಿನ ಕಟಕಡೆಯಮೇಲೆ ಕೈಯ್ಯೂರಿಕೊಂಡು ಮಾತಾಡುತ್ತಿದ್ದರು. ನನ್ನ ಕಣ್ಣಿಗೆ ಅವರು ಬೀಳುತ್ತಿರಲಿಲ್ಲ; ಆದರೆ ಅವರು ವ್ಹಿಸ್ಕಿ ಕುಡಿಯುತ್ತಿದ್ದುದರಿಂದ ಅವರು ಎಲ್ಲಿ ನಿಂತಿದ್ದರು ಎಂಬುದನ್ನು ಹೇಳಬಲ್ಲವನಾಗಿದ್ದೆ. ನಾನು ವ್ಹಿಸ್ಕಿ ಕುಡಿಯದೆ ಹೋದದ್ದು ಎಷ್ಟೋ ಒಳ್ಳೆಯದಾಯಿತು. ಆದರಿಂದಲೇ ಯಾವುದೂ ವ್ಯತ್ಯಸ್ತಗೊಂಡಂತೆ ತೋರಲಿಲ್ಲ; ಏಕೆಂದರೆ ನಾನು ಉಸಿರುಕಟ್ಟಿದ್ದರಿಂದ, ಅವರು ನನ್ನನ್ನು ಈ ಪೇಚಿನಲ್ಲೇ ಬಲುಹೊತ್ತು ಉಳಿಸುವುದು ಸಾಧ್ಯವಿರಲಿಲ್ಲ, ನನಗೆ ತುಂಬಾ ಹೆದರಿಕೆಯಾಯಿತು. ಅಲ್ಲದೆ, ಉಸಿರಾಡುವುದೂ, ಅಂಥಾ ಸಂಭಾಷಣೆಯನ್ನು ಕೇಳುವುದೂ ಯಾರಿಗೂ ಏಕಕಾಲದಲ್ಲಿ ಸಾಧ್ಯವಿಲ್ಲ. ಅವರು ತಗ್ಗಿದ ದನಿಯಲ್ಲಿ ಬಿಚ್ಚುಮನದಿಂದ ಮಾತಾಡುತ್ತಿದ್ದರು. ಟರ್ನರನ್ನು ಕೊಲ್ಲಬಯಸಿದ್ದನು ಬಿಲ್, ಅವನು ಹೇಳಿದ:

"ಅವನು ಬಯಲುಮಾಡುವುದಾಗಿ ಹೇಳಿದ್ದಾನೆ, ಹಾಗೆಯೇ ಮಾಡುತ್ತಾನೆ. ನಮ್ಮಿಬ್ಬರ ಪಾಲನ್ನೂ ಅವನಿಗೆ ಈಗ ಕೊಟ್ಟೆವು ಎಂದಿಟ್ಟುಕೊಳ್ಳೋಣ, ಅದರಿಂದ ಆಗುವ ವ್ಯತ್ಯಾಸವೇನು ಈ ಜಗಳ ನಡೆದುಹೋಗಿರುವಾಗ ? ನಾವು ಅವನಿಗೆ ಮಾಡಿರುವುದೇನು ಈಗ ? ನೀವು ಈ ಲೋಕಕ್ಕೆ ಹುಟ್ಟಿಬಂದಿರುವಷ್ಟೇ ಖಚಿತ, ಅವನು ಸರ್ಕಾರದ ಪರವಾಗಿ ಸಾಕ್ಷ್ಯನುಡಿಯುವುದು ನನ್ನ ಮಾತು ಕಿವಿಗೆ ಬಿತ್ತೆ ? ಈ ತೊಂದರೆಗಳಿಂದ ಅವನನ್ನು ಕೊನೆಗಾಣಿಸಿ ಪಾರುಮಾಡುವುದೇ ಸೂಕ್ತವೆಂದು ನನಗೆ ತೋರುತ್ತದೆ."

"ನನ್ನ ಅಭಿಪ್ರಾಯವೂ ಅದೇ" ಎಂದನು ಗಂಭೀರವಾಗಿ ಪ್ಯಾಕಾರ್ಡ್. "ನೀನು ಒಪ್ಪುತ್ತಿಲ್ಲವೆಂಬಂತೆ ನಾನು ಯೋಚಿಸತೊಡಗಿದ್ದೆ, ಅದು ನನ್ನ ತಪ್ಪು. ಸರಿ ಹಾಗಾದರೆ, ಅದೇ ಸರಿ, ಇನ್ನು ಹೋಗೋಣ ; ಹಾಗೆ ಮಾಡೋಣ."

"ಒಂದು ನಿಮಿಷ ತಡೆದುಕೋ. ನನ್ನ ಮಾತನ್ನು ನಾನು ಆಡಿ ಮುಗಿಸಿಲ್ಲ, ನಾನು ಹೇಳುವುದನ್ನು ಕೇಳು. ಗುಂಡಿಟ್ಟು ಕೊಲ್ಲುವುದು ಒಳ್ಳೆಯದು; ಹಾಗೆ ಮಾಡುವುದು ಅನಿವಾರ್ಯವಾದರೆ. ಸದ್ದಿಲ್ಲದ ಬೇರೆ ಮಾರ್ಗಗಳಿವೆ. ಆದರೆ ನಾನು ಹೇಳುವುದೇನೆಂದರೆ: ಅಷ್ಟೇ ಸೂಕ್ತವಾದ ಮತ್ತು ನಿನಗೆ ಎಲ್ಲ ವಿಧಗಳಲ್ಲೂ ನಿರಪಾಯವಾದ ಮಾರ್ಗವೊಂದರಿಂದ ಗುರಿಯನ್ನು ನೀನು ಸಾಧಿಸಬಲ್ಲೆಯಾದರೆ ಈ ಪ್ರಸಂಗದ ತರುವಾಯ ನ್ಯಾಯಾಸ್ಥಾನ ಮುಂತಾದುವುಗಳ ಮುಂದೆ ನಿಲ್ಲುವಂತೆ ಮಾಡಿಕೊಳ್ಳುವುದು ಬುದ್ಧಿವಂತಿಕೆಯಲ್ಲ, ಅಲ್ಲವೆ?"

"ಖಂಡಿತವಾಗಿ, ಹೌದು. ಆದರೆ ಈ ಸಲ ಅದನ್ನು ಹೇಗೆ ನಿರ್ವಹಿಸುತ್ತೀಯೆ ಎಂಬುದೇ ಪ್ರಶ್ನೆ."

"ನೋಡು, ನನ್ನ ಅಭಿಪ್ರಾಯ ಇದು; ನಾವು ಇದರೊಳಗೆಲ್ಲ ಹೊಕ್ಕು ಬಳಸೋಣ. ಕೊಠಡಿಗಳಲ್ಲಿ ಯಾವ ಯಾವ ಪದಾರ್ಥಗಳು ನಮ್ಮ ಕಣ್ಣಿಗೆ ಬೀಳುವುದಿಲ್ಲವೋ ಅವೆಲ್ಲವನ್ನು ದೋಚಿಕೊಂಡು ದಡಕ್ಕೆ ಸಾಗಿಸೋಣ; ನಮ್ಮ ದೋಣಿಯನ್ನು ಬಚ್ಚಿಟ್ಟು ಕಾಯೋಣ. ಈ ಅವಶೇಷ ಛಿದ್ರಛಿದ್ರವಾಗಿ ನದಿಯಲ್ಲಿ ಕೊಚ್ಚಿಹೋಗುವುದಕ್ಕೆ ಇನ್ನೆರಡು ಗಂಟೆಗಳ ಕಾಲವೂ ಬೇಕಾಗುವುದಿಲ್ಲ. ನೋಡಿದೆಯ? ಅವನೂ ಮುಳುಗಿಹೋಗುತ್ತಾನೆ ತನಗೊದಗಿದ ದುರ್ಗತಿಗೆ ಅವನು ತನ್ನನ್ನಲ್ಲದೆ ಬೇರೆ ಯಾರನ್ನೂ ದೂರುವಂತಿಲ್ಲ, ಅವನನ್ನು ಕೊಲ್ಲುವುದಕ್ಕಿಂತ ಅದು ಎಷ್ಟೋ ವಾಸಿ ಎಂದು ನನಗೆ ತೋರುತ್ತದೆ. ಯಾರನ್ನಾಗಲೀ ಕೊಲ್ಲುವುದು, ಅನಿವಾರ್ಯವಾಗುವತನಕ ಕೂಡದೆನ್ನುತ್ತೇನೆ, ಅದು ಬುದ್ಧಿವಂತಿಕೆಯಲ್ಲ, ಸುನೀತಿಯಲ್ಲ, ನಾನು ಹೇಳುವುದು ಸರಿ ತಾನೆ?"

"ಹೌದು: ನಿನ್ನ ಯೋಚನೆ ಸರಿಯಾದ್ದೆಂದೇ ತೋರುತ್ತದೆ ನನಗೂ. ಒಂದು ವೇಳೆ ಅದು ಒಡೆದು ಕೊಚ್ಚಿಹೋಗದಿದ್ದರೆ?"

"ಆಗಲೂ ನಾವು ಎರಡು ಗಂಟೆಗಳ ಕಾಲ ಕಾಯಬಲ್ಲೆವು. ಏನು ಕಾದಿರಲಾರೆವೆ?"

"ಸರಿ ಹಾಗಾದರೆ; ಹೋಗೋಣ ಬಾ."

ಅವರು ಮುಂದೆ ಹೊರಟರು; ನನ್ನ ಮೈ ಬೆವರಿಡುತ್ತಿತ್ತು. ಹೊರಬಿದ್ದು ಮುಗ್ಗರಿಸುತ್ತಾ ನಡೆದೆ; ಕಗ್ಗತ್ತಲಾವರಿಸಿತ್ತು; ನಾನೊಂದುರೀತಿಯ ಗಡುಸಾದ ಪಿಸುಮಾತಿನಲ್ಲಿ "ಜಿಮ್"ಎಂದೆ. ಅವನು ಇನ್ನೊಂದು ರೀತಿಯಲ್ಲಿ ಗೊಣಗಿ ನನ್ನ ಮೊಳಕೈಯ ಹತ್ತಿರದಲ್ಲೇ ಉತ್ತರಿಸಿದ. ನಾನು ಹೇಳಿದೆ:

"ತ್ವರೆಮಾಡು, ಜಿಮ್, ಅತ್ತಿತ್ತ ಅಡ್ಡಾಡುತ್ತಾ ಗೊಣಗಲು ಈಗ ವೇಳೆಯಿಲ್ಲ. ಅಲ್ಲೊಂದು ಕೊಲೆಪಾತಕಿಗಳ ತಂಡವಿದೆ. ನಾವು ಅವರ ದೋಣಿಯನ್ನು ಪತ್ತೆಮಾಡಿ ಅದು ಕೆಳನದಿಯಲ್ಲಿ ತೇಲಿಹೋಗುವಂತೆ ಮಾಡಿ ಈ ಜನರು ಈ ಅವಶೇಷದಿಂದ ಕದಲದಂತೆ ಮಾಡದೆಹೋದರೆ, ಅವರಲ್ಲಿ ಒಬ್ಬ ಅಪಾಯಕ್ಕೆ ಸಿಕ್ಕುವುದು ಖಂಡಿತ. ಅವರ

ದೋಣಿ ನಮಗೆ ಸಿಕ್ಕಿತೆ, ನಾವು ಅವರೆಲ್ಲರನ್ನೂ ತೊಂದರೆಗೆ ಒಳಗಾಗಿಸಬಲ್ಲೆವು,–ಏಕೆಂದರೆ ಅವರು ಕೊತ್ತವಾಲನ ಕೈಗೆ ಸಿಕ್ಕಿಬೀಳುತ್ತಾರೆ. ಏಳು ಬೇಗ! ನಾನು ದೋಣಿಯ ಬಲಭಾಗವನ್ನು ಹುಡುಕುತ್ತೇನೆ, ನೀನದರ ಎಡಭಾಗವನ್ನು ಹುಡುಕು, ನೀನು ತೆಪ್ಪದ ಬಳಿಗೆ ಹೋಗು ಮತ್ತು—"

"ಅಯ್ಯೋ, ನನ್ನೊಡೆಯ, ಒಡೆಯ! ತೆಪ್ಪ? ತೆಪ್ಪ ಇನ್ನಿಲ್ಲವಾಗಿದೆ. ಅದು ಎಲ್ಲಿಗೋ ತಪ್ಪಿಸಿಕೊಂಡು ಹೋಗಿದೆ!— ನಾವಿದ್ದೇವೆ ಇಲ್ಲಿ!"

## ೧೩

ಸರಿ, ನನಗೆ ಉಸಿರು ಕಟ್ಟಿತು, ತ್ರಾಣವೇ ಉಡುಗಿಹೋಯಿತು. ಅಂಥದೊಂದು ಗುಂಪಿನೊಡನೆ ಆ ದೋಣಿಯ ಅವಶೇಷದಲ್ಲಿ ಸೆರೆಸಿಕ್ಕಿ ಬಿದ್ದಿದ್ದೆವು! ಆದರೂ ಸುಮ್ಮನೆ ಭಾವೋದ್ರೇಕದಿಂದ ವರ್ಣಿಸುವ ಸಮಯವೂ ಆದಾಗಿರಲಿಲ್ಲ. ನಾವು ಆ ದೋಣಿಯನ್ನು ಪತ್ತೆ ಮಾಡಲೇಬೇಕಾಗಿತ್ತು–ಅದನ್ನು ನಮದಾಗಿಸಿಕೊಳ್ಳಲೇಬೇಕಾಗಿತ್ತು. ಆದ್ದರಿಂದ ನಾವು ಗಡಗಡ ನಡುಗುತ್ತ ದೋಣಿಯ ಬಲಭಾಗಕ್ಕೆ ಹೋದೆವು: ಆ ಕೆಲಸ ಬಲು ನಿಧಾನವಾಯಿತು. ನಾವು ದೋಣಿಯ ಹಿಂಭಾಗಕ್ಕೆ ತಲುಪಲು ಒಂದು ವಾರದಷ್ಟು ಕಾಲ ಹಿಡಿಯಿತೆಂದು ತೋರುತ್ತಿತ್ತು. ಆ ದೋಣಿಯ ಸುಳಿವೇ ಇರಲಿಲ್ಲ. ಇನ್ನೊಂದು ಹೆಜ್ಜೆ ಇಟ್ಟು ದೂರ ಸಾಗಲೂ ತನ್ನಿಂದಾಗದೆಂದು ತೋರುವುದೆಂದು ಜಿಮ್ ಹೇಳಿದನು. ತನ್ನಲ್ಲಿ ಇದ್ದ ತ್ರಾಣವಷ್ಟೂ ಉಡುಗಿ ಹೋಗುವಂಥ ಅಂಜಿಕೆಯಾಯಿತೆಂದನು. ಆದರೆ ಬಾ ಮುಂದೆ, ನಾವು ಈ ಅವಶೇಷದ ಮೇಲೆಯೇ ಉಳಿದುಕೊಂಡರೆ ನಾವು ತೊಂದರೆಗೆ ಸಿಕ್ಕುವುದು ಖಂಡಿತವೆಂದೆ ನಾನು. ಮತ್ತೆ ಮುಂದೆ ನಡೆದೆವು. ನಾವು ಆ ದೋಣಿಯ ಹಿಂಭಾಗವನ್ನು ಹುಡುಕಿ ತಲಪಿದೆವು, ಕಿಟಕಿಯಿಂದ ಕಿಟಕಿಗೆ ತೂಗುತ್ತ ತೆವಳಿ ಗವಾಕ್ಷಿಯೆಡೆಗೆ ಸಾಗಿದೆವು. ಏಕೆಂದರೆ ಗವಾಕ್ಷಿಯ ಅಂಚು ನೀರಲ್ಲಿ ಮುಳುಗಿತ್ತು. ನಾವು ಅಡ್ಡ-ಹಜಾರದ ಬಾಗಿಲಿನ ಬಲು ಹತ್ತಿರಕ್ಕೆ ಬಂದಾಗ ಅಲ್ಲಿತ್ತು ಕಿರುದೋಣಿ, ಸಂದೇಹಕ್ಕೆ ಆಸ್ಪದ ಕೊಡದೆ! ನನಗದು ಸ್ವಲ್ಪಮಟ್ಟಿಗೆ ಮಾತ್ರ ಕಾಣಿಸುತ್ತಿತ್ತು. ಅದಕ್ಕಾಗಿ ನಾನೆಷ್ಟು ಕೃತಜ್ಞನಾಗಿರಬೇಕೋ ನಾನರಿಯೆ, ಇನ್ನೊಂದೆ ಸೆಕೆಂಡಿನಲ್ಲಿ ನಾನು ಅದರ ಮೇಲೆ ಹೋಗಿ ನಿಲ್ಲಬಹುದಾಗಿತ್ತು, ಆದರೆ ಆಗಲೆ ಆ ಬಾಗಿಲು ತೆರೆಯಿತು ನನಗೆ ಒಂದಡಿಯಷ್ಟು ಹತ್ತಿರದಲ್ಲೇ ಅವರಲ್ಲೊಬ್ಬ ಈಚೆಗೆ

ತಲೆಹಾಕಿದನು, ನನ್ನ ಜೀವ ಹೋಯಿತೆಂದೇ ತಿಳಿದೆ. ಅವನು ಮತ್ತೆ ಹಿಂದಕ್ಕೆ ಸರಿದು ಹೇಳುತ್ತಿದ್ದನು :

"ಆ ಶನಿ ಲಾಂದ್ರವನ್ನು ಆಚೆಗೆ ಬಿಸಾಡು, ಬಿಲ್ !" ಅವನು ಏತರದೋ ಒಂದು ಮೂಟೆಯನ್ನು ದೋಣಿಗೆ ಎಸೆದನು, ಆಮೇಲೆ ತಾನೂ ಅಲ್ಲಿಗೆ ಹೋಗಿ ಕುಳಿತನು. ಅವನು ಪ್ಯಾಕಾರ್ಡ್. ಬಳಿಕ ಬಿಲ್ ಹೊರಗೆ ಬಂದನು, ಆ ದೋಣಿಯಲ್ಲಿ ಕುಳಿತನು. ಪ್ಯಾಕಾರ್ಡ್ ಸಣ್ಣದನಿಯಲ್ಲಿ ಕೇಳಿದ :

"ಎಲ್ಲ ಸಿದ್ಧತೆಗಳೂ ಮುಗಿದಿವೆ. ಮುಂದಕ್ಕೆ ನೂಕು !" ಕಿಟಕಿಗಳನ್ನು ಇನ್ನು ಹಿಡಿದಿರುವುದೂ ನನಗೆ ಬಲು ಕಷ್ಟವಾಯಿತು, ನಾನು ಅಷ್ಟು ದುರ್ಬಲನಾಗಿದ್ದೆ :

"ಹಿಡಿದೇ ಇರು—ನೀನು ಅವನನ್ನು ಪರೀಕ್ಷೆಮಾಡಿದ್ದೀಯ್ಯಾ ?"

"ಇಲ್ಲ, ನೀನು ಮಾಡಿದೆಯ ?"

"ಇಲ್ಲ. ಆದ್ದರಿಂದ ಅವನ ಪಾಲಿನ ಹಣ ಇನ್ನೂ ಅವನ ಬಳಿಯಲ್ಲೇ ಇದೆ."

"ಸರಿ, ಹಾಗಾದರೆ ಬಂದುಬಿಡು. ಹಣವನ್ನು ಬಿಟ್ಟು ವಾಹನವನ್ನು ಹಿಡಿದು ಕೊಳ್ಳುವುದರಿಂದ ಪ್ರಯೋಜನವಿಲ್ಲ."

"ನಾವು ಏನನ್ನು ಮಾಡಬೇಕೆಂದಿರುವೆವೋ ಅದರ ವಿಷಯದಲ್ಲಿ ಅವನಿಗೆ ಅನು ಮಾನ ಬರುವುದಿಲ್ಲವೆ ?"

"ಬರಲಾರದೆಂದು ತೋರುತ್ತದೆ, ನಾವು ಹೇಗಾದರೂ ಅದನ್ನು ಕಸಿದು ಕೊಳ್ಳಲೇಬೇಕು. ಬಾ ಹೋಗೋಣ."

ಅವರು ಹೀಗೆ ಹೊರಗೆ ಹೋದರು, ಒಳಗೆ ನುಗ್ಗಿದರು.

ಬಾಗಿಲು, ಅದು ದೋಣಿ ಬಾಗಿದುದರ ಕಡೆಗಿದ್ದುದರಿಂದ, ತನ್ನಷ್ಟಕ್ಕೆ ತಾನೇ ದಢೀರೆಂದು ಮುಚ್ಚಿಕೊಂಡಿತು, ಅರ್ಧ ಸೆಕೆಂಡಿನಲ್ಲಿ ನಾನು ದೋಣಿಯೊಳಗಿದ್ದೆ. ಜಿಮ್ ನನ್ನ ಹಿಂದೆಯೇ ಎಡವುತ್ತ ಬಂದನು, ನಾನು ಬಾಕುವನ್ನು ಹಿರಿದು ಹಗ್ಗವನ್ನು ಕತ್ತರಿಸಿಹಾಕಿದೆ. ಆ ಕ್ಷಣದಿಂದಲೇ ನಾವು ಬಲು ದೂರಕ್ಕೆ ಸಾಗಿದ್ದೆವು.

ನಾವೂ ಹುಟ್ಟನ್ನು ಮುಟ್ಟಲಿಲ್ಲ, ಮಾತಾಡಲಿಲ್ಲ, ಪಿಸುಗುಟ್ಟಲಿಲ್ಲ, ಉಸಿರಾಡ ಲಿಲ್ಲ; ಅತಿವೇಗದಿಂದ ನಿಶ್ಶಬ್ದವಾಗಿ ನೀರಮೇಲೆ ಜಾರಿಹೋದೆವು, ಹುಟ್ಟುಗಳನ್ನು ಹಾಕುವ ಸ್ಥಳದಾಚೆಗೆ, ದೋಣಿಯ ಹಿಂಭಾಗದಾಚೆಗೆ ಬಳಿಕ ಒಂದೆರಡು ಸೆಕೆಂಡು ಗಳಲ್ಲಿ ನಾವು ಆ ಅವಶೇಷಕ್ಕೆ ನೂರು ಗಜಗಳಾಚೆಗೆ ಚಲಿಸಿದ್ದೆವು, ಅದು ಕತ್ತಲೆಯಲ್ಲಿ ಅದ್ದಿ ಮುಳುಗಿತ್ತು, ನಾವು ದೂರದಲ್ಲಿ ಸುರಕ್ಷಿತವಾಗಿದ್ದೆವು, ನಮಗದು ತಿಳಿದಿತ್ತು.

ಕೆಳನದಿಯಲ್ಲಿ ಮುನ್ನೂರು ನಾಲ್ಕುನೂರು ಗಜಗಳ ದೂರ ಹೋದಮೇಲೆ ನಮಗೆ ಒಂದು ಕ್ಷಣಕಾಲ ಆ ಮುರಿದ ದೋಣಿಯ ಬಾಗಿಲ ಬಳಿ ಪುಟ್ಟ ಕಿಡಿಯಂತೆ

ಲಾಂದ್ರದ ಬೆಳಕು ನಮಗೆ ಕಾಣಿಸಿತು. ಆದ್ದರಿಂದ ಆ ಪಟಿಂಗರಿಗೆ ಅವರ ದೋಣಿ ತಪ್ಪಿಹೋಗಿತ್ತೆಂದು ನಾವು ತಿಳಿದೆವು. ಜಿಮ್ ಟರ್ನರಿಗೆ ಯಾವ ಕೇಡು ಒದಗಿತ್ತೋ ಅಂಥದೇ ಕೇಡಿನಲ್ಲಿ ತಾವೂ ಇರುವುದನ್ನು ಅವರು ಅರಿತುಕೊಳ್ಳುತ್ತಿದ್ದರು.

ಜಿಮ್ ಹುಟ್ಟು ಹಾಕುತ್ತಿದ್ದನು, ನಾವು ನಮ್ಮ ತೆಪ್ಪವನ್ನು ಹಿಂಬಾಲಿಸಿದೆವು. ಈಗ ನನಗೆ ಮೊದಲಬಾರಿಗೆ ಆ ಮನುಷ್ಯರ ಬಗೆಗೆ ಆತಂಕ ಹುಟ್ಟಿತು — ಈ ಹಿಂದೆ ನನಗೆ ಅದನ್ನು ಯೋಚಿಸಲು ವೇಳೆಯಿರಲಿಲ್ಲ, ಅಂಥಾ ಕಷ್ಟಕ್ಕೆ ತುತ್ತಾಗುವುದು, ಅವರು ನರಹಂತಕರಾಗಿದ್ದರೂ ಸರಿಯೆ, ಎಷ್ಟು ಭಯಂಕರವೆಂಬುದನ್ನು ಯೋಚಿಸ ತೊಡಗಿದೆನು. ನಾನೇ ಒಬ್ಬ ಕೊಲೆಗಾರನಾಗಬಹುದೇನೋ ಮುಂದೆ, ಹೇಳುವಂತಿಲ್ಲ ಎಂದುಕೊಂಡೆ. ಆಗ ಅದು ನನಗೆ ಹೇಗೆ ರುಚಿಸೀತು ? ಬಳಿಕ ಜಿಮ್ಮನಿಗೆ ಹೇಳಿದೆ :

"ಮೊದಲ ದೀಪ ಕಣ್ಣಿಗೆ ಬಿದ್ದ ಕೂಡಲೆ ನಾವು ಹಿಂದಕ್ಕೆ ನೂರುಗಜಗಳ ಆಚೆಗೋ ಈಚೆಗೋ, ಅವಿತುಕೊಳ್ಳಲು ನಿನಗೂ ಕಿರುದೋಣಿಗೂ ಅನುಕೂಲವಾದ ಸ್ಥಳವೊಂದರಲ್ಲಿ ಭೂಸ್ಪರ್ಶ ಮಾಡೋಣ. ಆಮೇಲೆ ನಾನೊಂದು ಕಟ್ಟುಕಥೆಯನ್ನು ಹುಟ್ಟಿಸಿಕೊಂಡು, ಅವರನ್ನು ಈ ಗಂಡಾಂತರದಿಂದ ಪಾರು ಮಾಡಲು ಯಾರನ್ನಾದರೂ ಆ ತಂಡದ ಬಳಿಗೆ ಕಳಿಸುತ್ತೇನೆ ; ಆಮೇಲೆ ವೇಳೆ ಬಂದಾಗ ಅವರನ್ನು ಗಲ್ಲಿಗೇರಿಸ ಬಹುದು."

ಆ ಆಲೋಚನೆ ವಿಫಲವಾಯಿತು. ಏಕೆಂದರೆ ಬಲಃಬೇಗ ಬಿರುಗಾಳಿ ಮತ್ತೆ ಬೀಸತೊಡಗಿತು, ಈ ಸಲವಂತೂ ಅದು ಎಂದಿಗಿಂತಲೂ ಘೋರವಾಗಿತ್ತು. ಮಳೆ ಎಡಬಿಡದೆ ಸುರಿಯಿತು, ಒಂದು ದ್ವೀಪವೂ ಕಣ್ಣಿಗೆ ಬೀಳಲೇಇಲ್ಲ. ಎಲ್ಲರೂ ಮಲಗಿದ್ದ ರೆಂದು ತೋರಿತು. ನಾವು ಕೆಳನದಿಗೆ ಧಾವಿಸುತ್ತಿದ್ದೆವು, ನಮ್ಮ ತೆಪ್ಪವನ್ನು ಹುಡು ಕುತ್ತ. ಬಲು ಹೊತ್ತಾದ ಮೇಲೆ ಮಳೆ ನಿಂತಿತು, ಆದರೂ ಮುಗಿಲು ಕವಿದಿತ್ತು; ಇಲ್ಲಲ್ಲಿ ಮಿಂಚು ಹೊಂಚುತ್ತಿತ್ತು. ಆ ಬಳಿಕ ಅದರೊಂದು ಝಳಪು ನಮಗಿಂತ ಮುಂದೆ ಕಪ್ಪಗೆ ತೇಲುತ್ತಿದ್ದ ವಸ್ತುವೊಂದನ್ನು ನಮಗೆ ಕಾಣಿಸಿತು. ನಾವದನ್ನು ಹಿಡಿದೆವು.

ಅದು ನಮ್ಮ ತೆಪ್ಪ ; ಅದರ ಮೇಲೆ ಮತ್ತೆ ಹೋಗಿ ಕೂರಲು ನಮಗೆ ತುಂಬಾ ಸಂತೋಷವಾಯಿತು. ನಮ್ಮ ಬಲಗಡೆಗೆ ತೀರದ ಮೇಲೆ ದೂರದಲ್ಲೊಂದು ದೀಪ ವನ್ನು ಕಂಡೆವು. ಅಲ್ಲಿಗೆ ಹೋಗುತ್ತೇನೆಂದೆ ನಾನು. ಆ ತಂಡ ಆ ದೋಣಿಯ ಅವ ಶೇಷದಲ್ಲಿ ಕದ್ದಿದ್ದ ಲೂಟಿಯೇ ಕಿರುದೋಣಿಯ ಅರ್ಧಭಾಗವನ್ನು ತುಂಬಿಕೊಂಡಿತ್ತು. ನಾವದನ್ನು ಕಂತೆಕಟ್ಟಿ ತೆಪ್ಪಕ್ಕೆ ಸಾಗಿಸಿದೆವು ಅವನು ಹಾಗೆಯೇ ತೇಲುತ್ತ ಹೋಗ ಬೇಕೆಂದೂ, ಎರಡು ಮೈಲಿಗಳ ದೂರ ಹೋದಂತೆ ಅವನಿಗನ್ನಿಸಿದಾಗ ದೀಪವನ್ನು ಹೊತ್ತಿಸಿ ತೋರಬೇಕೆಂದೂ, ನಾನು ಹಿಂದಿರುಗುವತನಕ ಅದನ್ನು ಉರಿಸುತ್ತಲೇ ಇರಬೇಕೆಂದೂ ನಾನು ಜಿಮ್ಮನಿಗೆ ತಿಳಿಸಿದೆ. ಅನಂತರ ನಾನು ಹುಟ್ಟು ಹಾಕುತ್ತಾ ಆ ದೀಪ ಕಾಣಿಸುತ್ತಿದ್ದ ಬಳಿಗೆ ಚಲಿಸಿದೆ. ನಾನದನ್ನು ಸಮೀಪಿಸುತ್ತಿದ್ದಾಗ, ಮೂರು

ನಾಲ್ಕು ದೀಪಗಳು ಬೆಟ್ಟದ ತಪ್ಪಲಲ್ಲಿ ಕಾಣಿಸಿಕೊಂಡವು, ಅದೊಂದು ಹಳ್ಳಿ. ನಾನು ತೀರದಲ್ಲಿದ್ದ ದೀಪದ ಒತ್ತಿಗೆ ಬಾವು ನನ್ನ ಹುಟ್ಟುಗಳನ್ನು ಕೆಳಗೆ ಹಾಕಿ ತೇಲುತ್ತಿದ್ದೆ. ಸಮೀಪಕ್ಕೆ ಹೋದಾಗ ಎರಡಟ್ಟದ ಹರಿಗೋಲೊಂದರ ಕಪ್ಪಿಯ ಕಂಬದ ಮೇಲೆ ಲಾಂದ್ರವೊಂದು ತೂಗುತ್ತಿರುವುದನ್ನು ಕಂಡೆ. ಕಾವಲುಗಾರನಿಗಾಗಿ ಸುತ್ತಲೂ ತೂರಿ ನೋಡಿದೆ; ಅವನೆಲ್ಲಿರಬಹುದೆಂದು ಆಶ್ಚರ್ಯಪಡುತ್ತಿದ್ದೆ. ಅವನು ಮುಂಭಾಗದ ಚಾಚುಗಳ ಮೇಲೆ ತನ್ನೆರಡೂ ಮಂಡಿಗಳ ನಡುವೆ ತಲೆಯಿಟ್ಟುಕೊಂಡು ಹಕ್ಕಿಯಂತೆ ಕುಳಿತಿರುವುದನ್ನು ಸ್ವಲ್ಪ ಹೊತ್ತಿನಮೇಲೆ ಪತ್ತೆ ಮಾಡಿದೆ. ನಾನವನ ಭುಜವನ್ನು ಎರಡು ಮೂರು ಬಾರಿ ತಿವಿದೆ, ಅಳತೊಡಗಿದೆ.

ಅವನು ಬೆಕ್ಕಸಬೆರಗಾಗಿ ಪಕ್ಕನೆ ಎದ್ದು ಕುಳಿತನು; ಎದುರಿಗಿದ್ದವನು ನಾನೊಬ್ಬನೆಂದನ್ನು ಕಂಡಾಗ ಅವನು ದೊಡ್ಡದಾಗಿ ಆಕಳಿಸಿ ಕಾಲು ನೀಡಿದನು; ಬಳಿಕ ಹೇಳಿದನು:

"ಏನೋ, ಏನದು? ಅಳಬೇಡ, ಪುಟ್ಟ ಹುಡುಗ, ನಿನಗೇನಾಗಿದೆ?"

ನಾನು ಹೇಳಿದೆ:

"ಅಪ್ಪ, ಅಮ್ಮ, ಸೋದರಿ ಮತ್ತು—" ಆಮೇಲೆ ನಾನು ಅತ್ತುಬಿಟ್ಟೆ. ಅವನು ಹೇಳಿದ:

"ಓ, ಅದನ್ನು ಬಿಡು; ಹಾಗೆ ಮಾಡಬಾರದು, ನಮ್ಮೆಲ್ಲರಿಗೂ ನಮ್ಮವೇ ತೊಂದರೆಗಳಿವೆ. ನಿನ್ನದು. ಇದು, ಮುಂದೆ ಸರಿಹೋಗುತ್ತದೆ. ಅವರಿಗೇನಾಯಿತು?"

"ಅವರು—ಅವರು—ನೀನು ದೋಣಿಯ ಕಾವಲುಗಾರನೆ?" ಅವನು ಸಾಕಷ್ಟು ತೃಪ್ತಿಗೊಂಡು "ಹೌದು" ಎಂದನು; "ನಾನು ಈ ಹಡಗಿನ ಮೇಲಧಿಕಾರಿ, ಒಡೆಯ, ಕಾರ್ಮಿಕ, ಮಾರ್ಗದರ್ಶಕ, ಕಾವಲುಗಾರ ಮತ್ತು ದೋಣಿಯ ಅಂತಸ್ತಿನ ಸೇವಕರಲ್ಲಿ ಮುಖ್ಯ; ಕೆಲವೇಳೆ ಇದರ ಪ್ರಯಾಣಿಕರೂ, ಇದು ಸಾಗಿಸುವ ಸಮಸ್ತ ವಸ್ತುವೂ ನಾನೇ. ನಾನೇನು ಆ ಹಳೆಯ ಜಿಮ್ ಹಾರನ್ ಬ್ಯಾಕನಷ್ಟು ಶ್ರೀಮಂತನಲ್ಲ, ಅವನ ಹಾಗೆ ಉದಾರಿ ಒಳ್ಳೆಯವ ಎನ್ನಿಸಿಕೊಂಡು ಬೀದಿಯಲ್ಲಿ ಹೋಗುವ ವೆಂಕ ಸೀನ ನಾಣರಿಗೆಲ್ಲ ಹಣ ಚೆಲ್ಲಲಾರೆ ನಾನು. ಆದರೆ ನನ್ನ ಸ್ಥಾನವನ್ನು ಅವನಿಗೆ ಬಿಟ್ಟುಕೊಟ್ಟು ಅವನ ಸ್ಥಾನಕ್ಕೆ ನಾನು ಹೋಗುವುದಕ್ಕೆ ನಾನೆಂದಿಗೂ ಇಷ್ಟಪಡೆನೆಂದು ನಾನೇ ಅವನಿಗೆ ಹಲವುಬಾರಿ ಹೇಳಿದ್ದೇನೆ. ಏಕೆಂದರೆ ನನಗೆ ನಾವಿಕನ ಬದುಕೇ ಬದುಕು, ಅವನ ಬಳಿ ಬೇಕಾದಷ್ಟಿರಬಹುದು, ಅದರ ಮೇಲೆ ಇನ್ನಷ್ಟಿರಬಹುದು, ನಾನಂತೂ ಎಂದೂ ಯಾವ ವಿಶೇಷ ಘಟನೆಯೂ ನಡೆಯದ ಊರಾಚೆಗೆ ಎರಡು ಮೈಲಿಗಳ ಫಾಸಲೆಯೊಳಗೆ ಬದುಕಬಲ್ಲೆನೆಂಬುದು ನನಗೆ ತಿಳಿಯದು! ನಾನು ಹಾಗೆಯೇ ಹೇಳಿದೆ."

ನಡುವೆ ನಾನು ಬಾಯಿ ಹಾಕಿದೆ:

"ಅವರು ಗಂಡಾಂತರಕ್ಕೆ ಸಿಕ್ಕಿಬಿದ್ದಿದ್ದಾರೆ, ಮತ್ತು—"

"ಯಾರು ಅವರು ?"

"ಯಾರೆ, ಅಪ್ಪ, ಅಮ್ಮ, ಸೋದರಿ ಮತ್ತು ಮಿಸ್ ಹೂಕರ್ ; ನೀನು ನಿನ್ನ ದೋಣಿಯನ್ನು ಅಲ್ಲಿಗೆ ತರುವುದಾದರೆ—"

"ಎಲ್ಲಿಗೆ ? ಎಲ್ಲಿದ್ದಾರೆ ಅವರು ?"

"ದೋಣಿಯ ಅವಶೇಷದ ಬಳಿ."

"ಯಾವ ದೋಣಿಯ ಅವಶೇಷ ?"

"ಯಾವುದೆ, ಅಲ್ಲಿರುವುದೊಂದೇ ಅದು."

"ಏನು, 'ವಾಲ್ಟರ್ ಸ್ಕಾಟಿನ' ಕುರಿತೇ ನೀನು ಹೇಳುತ್ತಿರುವುದು?"

"ಹೌದು,"

"ಅಯ್ಯೋ ದೇವರೆ ! ಅವರು ಏನು ಮಾಡುತ್ತಿದ್ದಾರೆ ಅಲ್ಲಿ, ಯಾಕಪ್ಪಾ ಹೋದರು ?"

"ಯಾವುದಾದರೂ ಉದ್ದೇಶವಿಟ್ಟುಕೊಂಡು ಅವರು ಅಲ್ಲಿಗೆ ಹೋದವರಲ್ಲ."

"ಅದು ನನಗೆ ಚೆನ್ನಾಗಿ ಗೊತ್ತು. ಅಯ್ಯೋ ದೇವರೆ ! ಈ ಕೂಡಲೆ ಅವರು ಅದನ್ನು ಬಿಟ್ಟುಬರದಿದ್ದರೆ, ಅವರ ಕಥೆ ಮುಗಿದಂತೆಯೇ. ಅಂಥಾ ವಿಪತ್ತಿಗೆ ಇವರು ಹೇಗೆ ಹೋಗಿ ಸಿಕ್ಕಿಬಿದ್ದರು ?"

"ಇದಕ್ಕೆ ಉತ್ತರ ಸುಲಭ ಮಿಸ್ ಹೂಕರ್ ಆಚೆಯ ದಡದ ಊರಿಗೆ ಹೋಗಬೇಕಾಗಿತ್ತು —"

"ಹೌದು. ಅಲ್ಲಿ ಬೂತ್ಸ್ ನಿಲ್ದಾಣವಿದೆ. ಮುಂದೆ ಹೇಳು "

"ಅವಳು ಬೂತ್ಸ್ ನಿಲ್ದಾಣದತ್ತ ಹೋಗಿದ್ದಳು. ಸಂಜೆಯಾಗುವ ಹೊತ್ತಿಗೆ ಕುದುರೆಗಳನ್ನು ಸಾಗಿಸುವ ಹರಿಗೋಲಿನಲ್ಲಿ ತನ್ನೊಡನಿದ್ದ ನೀಗ್ರೋ ಹೆಂಗಸಿನೊಂದಿಗೆ ತನ್ನ ಗೆಳತಿ ಮಿಸ್—ಅವಳ ಹೇಸರೇನೋ ಮರೆತು ಹೋಗಿದೆ—ನೀವು ಕರೆದದ್ದೇ–ತನ್ನ–ಹೆಸರು ಎನ್ನುವವಳ ಮನೆಯಲ್ಲಿ ಇರುಳನ್ನು ನೂಕಲು ಹೊರಟಳು. ಅವರು ತಮ್ಮ ದೋಣಿಯ ಹುಟ್ಟುಗಳನ್ನು ಕಳೆದುಕೊಂಡರು. ದೋಣಿ ಹೀಗೆ ಹಾಗೆ ಓಲಾಡಿತು ; ಅದರ ಮುಂಭಾಗ ಮುಳುಗಿ, ಹಿಂಭಾಗ ಮೇಲೆದ್ದು ಸುಮಾರು ಎರಡು ಮೈಲಿಗಳ ದೂರ ಅವರು ತೇಲುತ್ತ ಹೋದರು, ಆ ದೋಣಿಯ ಅವಶೇಷವನ್ನು ಹಿಡಿದುಕೊಂಡು ಸಾಗಿದರು. ಅಂಬಿಗ, ನೀಗ್ರೋ ಹೆಂಗಸು, ಆ ಕುದುರೆಗಳು ಎಲ್ಲ ನೀರುಪಾಲಾದರು, ಆದರೆ ಮಿಸ್ ಹೂಕರ್ ಹೇಗೋಮಾಡಿ ಕೈಚಾಚಿ ಆ ಅವಶೇಷದ ಮೇಲೆ ಹತ್ತಿ ಕುಳಿತಳು. ಕತ್ತಲೆಯಾದ ಒಂದು ಗಂಟೆಯ ಸುಮಾರಿಗೆ ನಾವು ನಮ್ಮ ವ್ಯಾಪಾರದ ದೋಣಿಯಲ್ಲಿ ಅತ್ತ ಸಾಗಿದೆವು. ತುಂಬಾ ಕತ್ತಲೆಯಾಗಿತ್ತು, ಆ ಅವಶೇಷ ಅಲ್ಲಿರುವುದು, ನಾವದಕ್ಕೆ ನೇರ ತಾಕುವ ತನಕ, ನಮ್ಮ ಕಣ್ಣಿಗೆ ಬೀಳಲಿಲ್ಲ, ನಾವದಕ್ಕೆ ತಗುಲಿಕೊಂಡೆವು. ಬಿಲ್‌ವ್ಹಿಪ್ಪಲ್ ಒಬ್ಬನ ಹೊರತು—ಓ ಅವನೆಂಥ

ಉತ್ತಮ ಪ್ರಾಣಿ !—ಎಲ್ಲರೂ ಬದುಕಿಕೊಂಡೆವು. ಅವನಿಗೆ ಬದಲು ನಾನೇ ಹೋಗಿಬಿಟ್ಟಿದ್ದರೆ ಬಲು ಒಳ್ಳೆಯದಾಗಿತ್ತು. ನಾನು ಹಾಗೆಯೇ ತಿಳಿಯುತ್ತೇನೆ"

"ಅಯ್ಯೋ ದೇವರೆ ! ನಾನಂಥಾ ಘೋರವನ್ನು ಕಂಡೇ ಇಲ್ಲ. ಆಮೇಲೆ ನೀವೆಲ್ಲ ಏನು ಮಾಡಿದಿರಿ?"

"ಆಮೇಲೆ ನಾವು ಗಟ್ಟಿಯಾಗಿ ಕೂಗಿಕೊಂಡೆವು, ನಮ್ಮ ಕೈಲಾದ್ದನ್ನೆಲ್ಲ ಮಾಡಿದೆವು. ಅಲ್ಲಿ ನದಿ ತುಂಬಾ ಅಗಲವಾಗಿರುವುದರಿಂದ ನಮ್ಮ ಕೂಗನ್ನು ಯಾರ ಕಿವಿಗೂ ಮುಟ್ಟಿಸಲಾಗಲಿಲ್ಲ. ಆ ಸಮಯದಲ್ಲಿ ಅಪ್ಪ ನಮ್ಮಲ್ಲಿ ಒಬ್ಬ ನದಿಯ ಕಡೆಗೆ ಹೋಗಿ ಹೇಗಾದರೂ ಮಾಡಿ ಜನಸಹಾಯವನ್ನು ತರಬೇಕು ಎಂದನು. ನನ್ನೊಬ್ಬನಿಗೇ ಈಜು ಬರುವುದು ; ಆದ್ದರಿಂದ ನಾನಲ್ಲಿಗೆ ಥಟ್ಟನೆ ಬಂದಿದ್ದೇನೆ. ಒಂದು ವೇಳೆ ನನಗೆ ಸಹಾಯ ಒದಗದೆ ಹೋದರೆ, ನಾನಿಲ್ಲಿಗೆ ಬಂದು ತನ್ನ ಸೋದರಮಾವನನ್ನು ಹುಡುಕಿ ಕಾಣಬೇಕೆಂದೂ ಅವನು ಎಲ್ಲಾ ವ್ಯವಸ್ಥೆಗಳನ್ನೂ ಮಾಡುವನೆಂದೂ ಮಿಸ್.ಹೂಕರ್ ಹೇಳಿದಳು. ಇಲ್ಲಿಂದ ಒಂದು ಮೈಲಿಯ ಕೆಳಗೆ ನಾನು ದಡವನ್ನು ಸೇರಿದೆ; ಆಗಿನಿಂದಲೂ ನಾನು ಜನರ ನೆರವನ್ನು ಪಡೆಯಲು ಕಾತರನಾಗಿ ಅಡ್ಡಾಡುತ್ತಿದ್ದೇನೆ; ಆದರೆ ಅವರು ಇಂಥಾ ರಾತ್ರಿಯಲ್ಲಿ ಇಂಥಾ ಪ್ರವಾಹದಲ್ಲಿ ಹೊರಡುವುದೆ? ಅದು ಅರ್ಥಶೂನ್ಯವಾದುದು; ಹಬೆ ದೋಣಿಯನ್ನು ಹುಡುಕಹೋಗು ; ಎಂದರು. ಈಗ ನೀನು ಬರುವುದಾದರೆ ಮತ್ತು —"

"ಖಂಡಿತವಾಗಿಯೂ, ನನಗೆ ಬರುವ ಆಸೆಯಿದೆ ; ಹಾಳಾಗಲಿ, ನನಗೆ ತಿಳಿಯದು, ಆದರೂ ಬರುತ್ತೇನೆ. ಆದರೆ ಈ ಪ್ರಪಂಚದಲ್ಲಿ ಅದಕ್ಕೆ ಹಣ ಕೊಡುವವರು ಯಾರು? ನಿಮ್ಮಪ್ಪ ಕೊಡುವನೆಂದು ನಂಬಿದ್ದೀಯೇನು?"

"ಅದು ಸರಿ, ಬಿಡು ಮಿಸ್ ಹೂಕರ್ ನನಗೆ ಸ್ಪಷ್ಟವಾಗಿ ಹೇಳಿದಳು ತನ್ನ ಸೋದರಮಾವ ಹಾರ್ನ್‌ಬ್ಯಾಕ್ —"

"ಹಾಂ! ಏನೆಂದೆ, ಅವನೆ ಅವಳ ಸೋದರಮಾವ? ಇಲ್ಲಿ ನೋಡು, ಅಲ್ಲಿ ಆ ದಾರಿಯಲ್ಲಿ ಕಾಣುವ ದೀಪದಾಚೆಗೆ ಹೋಗು, ಹೋಗಿ ಪಶ್ಚಿಮಕ್ಕೆ ತಿರುಗು, ಕಾಲುಮೈಲಿಯ ದೂರದಲ್ಲಿ ಒಂದು ಪಾಂಥಗೃಹ ಸಿಕ್ಕುತ್ತದೆ ; ಅಲ್ಲಿರುವವರನ್ನು ಕೇಳು ಜಿಮ್ ಹಾರ್ನ್‌ಬ್ಯಾಕನ ಮನೆ ಎಲ್ಲಿ ಎಂದು. ಅವರು ತೋರಿಸುತ್ತಾರೆ. ಅವನು ವೆಚ್ಚವನ್ನು ವಹಿಸಿಕೊಳ್ಳುತ್ತಾನೆ. ನೀನು ಇಲ್ಲಲ್ಲಿ ಅಲೆದಾಡುತ್ತಿರಬೇಡ ; ಏಕೆಂದರೆ ಈ ವೃತ್ತಾಂತವನ್ನು ಅವನು ತಿಳಿಯಲಪೇಕ್ಷಿಸುತ್ತಾನೆ. ಅವನು ಊರಿಗೆ ಹಿಂದಿರುಗುವ ತನಕ ನಾನು ಅವನ ಸೋದರಸೊಸೆಯನ್ನು ಸುರಕ್ಷಿತವಾಗಿ ಇಟ್ಟುಕೊಂಡಿರುವನೆಂದು ಅವನಿಗೆ ತಿಳಿಸು. ಈಗ ನಿನ್ನ ಬೆನ್ನನ್ನು ನೀನೆ ತಟ್ಟಿಕೊ ; ನಾನು ಆ ಮೂಲೆಗೆ ಹೋಗಿ ತಿರುಗಿ ನನ್ನ ಯಂತ್ರಚಾಲಕನನ್ನು ಎಬ್ಬಿಸಿಕೊಂಡು ಬರುತ್ತೇನೆ."

ನಾನು ಆ ದೀಪದ ಬಳಿಗೇನೋ ಹೋದೆ ; ಅವನು ಬೆನ್ನು ತಿರುಗಿಸಿದ ತತ್ಕ್ಷಣವೇ, ನಾನು ಹಿಂದಿರುಗಿ ನನ್ನ ಕಿರುದೋಣಿಯನ್ನು ಸೇರಿಕೊಂಡು ಅದನ್ನು ಈಚೆಗೆ ಎಳೆದು ದಡದ ಉದ್ದಕ್ಕೂ ಸುಮಾರು ಆರುನೂರು ಗಜಗಳ ದೂರ ತೊಡಕಿಲ್ಲದ ನೀರಿನಲ್ಲಿ ತೇಲಿಕೊಂಡು ಹೋಗಿ ಹಲವು ಮರದ ದೋಣಿಗಳ ನಡುವೆ ಸೇರಿಕೊಂಡೆ, ಅವನ ಆ ಹರಿಗೋಲು ಹೊರಟದ್ದನ್ನು ಕಾಣುವ ತನಕ ನನ್ನ ಮನಸ್ಸಿಗೆ ನೆಮ್ಮದಿಯಾಗಲಿಲ್ಲ. ಒಟ್ಟಾರೆ ನೋಡಿದಲ್ಲಿ, ಆ ತಂಡಕ್ಕಾಗಿ, ನಾನು ತೊಂದರೆ ತೆಗೆದುಕೊಳ್ಳುತ್ತಿರುವುದರಿಂದ ನನಗೇನೂ ಎಷ್ಟೋ ಹಾಯೆನಿಸಿತು. ಏಕೆಂದರೆ, ಬಹಳ ಜನ ಈ ಕೆಲಸವನ್ನು ಮಾಡುತ್ತಿರಲಿಲ್ಲ. ನನ್ನ ಮಂಚಿನ ಒಡತಿ ವಿಧವೆಗೆ ಇದು ತಿಳಿದಿದ್ದರೆ ಎಷ್ಟು ಚೆನ್ನಾಗಿತ್ತು! ಈ ನಿರ್ಗತಿಕರಿಗೆ ನೆರವಾದುದಕ್ಕಾಗಿ ಅವಳು ನನ್ನ ವಿಷಯದಲ್ಲಿ ಹೆಮ್ಮೆಪಟ್ಟುಕೊಳ್ಳಬಹುದು ಎಂದುಕೊಂಡೆ ; ಏಕೆಂದರೆ ಆ ವಿಧವೆಯೂ ಸಜ್ಜನರೂ ಇಂಥ ನಿರ್ಗತಿಕರ ಮತ್ತು ದುರ್ಬಲರ ವಿಷಯದಲ್ಲೇ ಅತಿಶಯವಾಗಿ ಆಸಕ್ತಿವಹಿಸುವುದು.

ಆ ದೋಣಿಯ ಅವಶೇಷ ಮಬ್ಬುಮಬ್ಬಾಗಿ ಇತ್ತ ತೇಲಿಬರಲು ಹೆಚ್ಚುಕಾಲ ಹಿಡಿಯಲಿಲ್ಲ. ನನ್ನ ಮೈಯೊಳಗೆ ಒಂದು ಬಗೆಯ ಚಳಿನಡುಗು ಹುಟ್ಟಿತು. ನಾನು ಅದರ ಬಳಿಗೆ ಹೊರಟೆ. ಅದರ ಹೆಚ್ಚುಭಾಗ ನೀರಿನಲ್ಲಿ ಮುಳುಗಿತ್ತು, ಅದರಲ್ಲಿ ಯಾರಾದರೂ ಬದುಕಿಕೊಂಡಿರುವುದು ಅಸಂಭವನೀಯವೆಂದು ನನಗೆ ತತ್ಕ್ಷಣ ಸ್ಪಷ್ಟವಾಯಿತು. ನಾನು ಅದರ ಸುತ್ತಲೂ ಚಲಿಸಿದೆ, ಸ್ವಲ್ಪ ಸದ್ದು ಮಾಡಿದೆ ; ಉತ್ತರವೇ ಇಲ್ಲ, ಎಲ್ಲವೂ ಸದ್ದಡಗಿತ್ತು. ನನಗೆ ಆ ತಂಡದ ವಿಷಯದಲ್ಲಿ ಸ್ವಲ್ಪ ದುಃಖವೇನೋ ಆಯಿತು ; ಆದರದು ಹೆಚ್ಚಿನದಾಗಿರಲಿಲ್ಲ. ಏಕೆಂದರೆ ಅವರಿಗೆ ಅದನ್ನು ಸಹಿಸುವುದು ಸಾಧ್ಯವಿದ್ದರೆ, ನನಗೂ ಸಾಧ್ಯವೇ ಎಂದು ನನಗೆ ತೋರಿತು.

ಹರಿಗೋಲು ಆ ಬಳಿಗೇ ಬರುತ್ತಿತ್ತು. ಅದಕ್ಕಾಗಿ ನಾನು ನದಿಯ ಮಧ್ಯಭಾಗಕ್ಕೆ ಪ್ರವಾಹದದಿಕ್ಕನ್ನೇ ಅನುಸರಿಸಿ ದೂರ ಸಾಗಿ ಡೊಂಕಾಗಿ ತೂರಿದೆ ಹೆರರ ಕಣ್ಣಿಗೆ ಕಾಣದಷ್ಟು ದೂರ ಹೋಗಿದ್ದೇನೆ ನಾನು ಎಂಬರಿವು ನನಗೆ ಬಂದಾಗ ನಾನು ಹುಟ್ಟುಗಳನ್ನು ಕೆಳಗಿಟ್ಟು ಹಿಂದಿರುಗಿ, ಆ ಹರಿಗೋಲು ಅದನ್ನು ಸಮೀಪಿಸುವುದನ್ನೂ ಆ ದೋಣಿಯ ಅವಶೇಷದ ಸುತ್ತಮುತ್ತಲೂ ಮಿಸ್ ಹೂಕರಳ ಅವಶೇಷಗಳಿಗಾಗಿ ತಡಕಾಡುವುದನ್ನೂ ವೀಕ್ಷಿಸುತ್ತಿದ್ದೆ. ಏಕೆಂದರೆ ಅವು ಅವಳ ಸೋದರಮಾವ ಹಾರ್ನ್‌ಬ್ಯಾಕನಿಗೆ ಬೇಕಾದೀತೆಂಬುದು ಹರಿಗೋಲಿನ ದೋಣಿಯ ಮುಖ್ಯಾಧಿಕಾರಿಗೆ ತಿಳಿದಿರಬಹುದಿತ್ತು .ಸ್ವಲ್ಪಹೊತ್ತಿಗೆ ಹರಿಗೋಲು ತನ್ನ ಪ್ರಯತ್ನಗಳನ್ನು ಕೈಬಿಟ್ಟು ದಡದತ್ತ ಹೊರಟುಹೋಯಿತು. ನಾನು ನನ್ನ ಕೆಲಸಕ್ಕೆ ತೊಡಗಿದೆ ; ಜೋರಾಗಿ ಸದ್ದುಮಾಡುತ್ತ ಕೆಳನದಿಗೆ ಚಲಿಸಿದೆ.

ಜಿಮ್ಮನ ದೀಪ ಕಾಣಿಸಿಕೊಳ್ಳುವುದಕ್ಕೆ ಅಸಾಧ್ಯ ಕಾಲ ಹಿಡಿದಂತೆ ತೋರಿತು. ಅದು ಕಾಣಿಸಿಕೊಂಡಾಗಲೂ, ಎಲ್ಲೋ ಸಾವಿರ ಮೈಲಿಗಳಾಚೆಗೆಂದೇ ತೋರಿತು.

ನಾನಲ್ಲಿಗೆ ಹೋಗುವ ಹೊತ್ತಿಗೆ ಪಡುವಲ ಬಾನಿನಲ್ಲಿ ಒಂದಿಷ್ಟು ಬೂದಿ ಬಣ್ಣದ ಸುಳಿವು ಕಂಡಿತು! ಆದ್ದರಿಂದ ನಾವು ದ್ವೀಪಕ್ಕೆ ಹೋದೆವು, ತೆಪ್ಪವನ್ನು ಬಚ್ಚಿಟ್ಟೆವು, ಕಿರು ದೋಣಿಯನ್ನು ಮುಳುಗಿಸಿದೆವು ; ಒಳಕ್ಕೆ ನುಗ್ಗಿ ದೊಪ್ಪೆಂದು ಮಲಗಿ ಸತ್ತವರ ಹಾಗೆ ನಿದ್ದೆ ಮಾಡಿದೆವು.

## ೧೪

ಆಮೇಲಾಮೇಲೆ ನಾವು ಎದ್ದು ಕುಳಿತೆವು. ಆ ತಂಡದವರು ದೋಣಿಯು ಅವಶೇಷದಿಂದ ಅಪಹರಿಸಿದ್ದ ತಳ್ಳುಬಂಡಿಯನ್ನು ತಳಮೇಲು ಮಾಡಿ ಹುಡುಕಿದೆವು ; ನಮಗೆ ಅಲ್ಲಿ ಪಾದರಕ್ಷೆಗಳೂ, ಕಂಬಳಿಗಳೂ, ಬಟ್ಟೆ ಬರೆಗಳೂ, ಎಲ್ಲಾ ಬಗೆಯ ಇತರ ವಸ್ತುಗಳೂ, ಬೇಕಾದಷ್ಟು ಪುಸ್ತಕಗಳೂ, ಒಂದು ದೂರದರ್ಶಿನಿಯೂ, ಮೂರು ಪೆಟ್ಟಿಗೆ ಚುಟ್ಟಾಗಳೂ ಸಿಕ್ಕಿದವು. ನನ್ನ ಜೀವಮಾನದಲ್ಲಾಗಲಿ ಜಿಮ್ಮನ ಜೀವಮಾನ ದಲ್ಲಾಗಲೀ ನಾವೆಂದೂ ಇಷ್ಟು ಶ್ರೀಮಂತರಾಗಿದ್ದುದೇ ಇಲ್ಲ. ಈ ಲಾಭದಲ್ಲಿನ ಪ್ರಧಾನಾಂಶವೆಂದರೆ ಆ ಚುಟ್ಟಾಗಳು. ಮಧ್ಯಾಹ್ನದ ಮೇಲೆ ನಾವು ಕಾಡಿನಲ್ಲಿ ಬಿದ್ದು ಕೊಂಡು ಹರಟಿದೆವು, ನಾನು ಪುಸ್ತಕಗಳನ್ನು ಓದುತ್ತಾ ಬಹುಮಟ್ಟಿಗೆ ಸುಖವಾಗಿ ಕಾಲ ಕಳೆದೆ. ಆ ಅವಶೇಷದ ಬಳಿಯೂ ಹರಿಗೋಲಿನ ಬಳಿಯೂ ನಡೆದುದೆಲ್ಲವನ್ನೂ ನಾನು ಜಿಮ್ಮನಿಗೆ ಹೇಳಿದೆ, ಇವೆಲ್ಲವೂ ಸಾಹಸ ಕಾರ್ಯಗಳು ಎಂದೆ. ಇಂಥ ಸಾಹಸ ಕಾರ್ಯಗಳು ನನಗಿನ್ನು ಬೇಡ ಎಂದನವನು. ನಾನು ದೋಣಿ–ನಿಲ್ದಾಣದತ್ತ ಹೊರಟಾಗ, ಮತ್ತೆ ತಾನು ತೆಪ್ಪದ ಮೇಗಡೆಗೆ ಜಾರಿಕೊಳ್ಳಲು ಹವಣಿಸಿದಾಗ ಅದು ತನ್ನನ್ನು ಮೀರಿ ಹೊರಟುಹೋಗಿದ್ದಾಗ ತಾನು ಸತ್ತೆನೆಂದೇ ತಿಳಿದುದಾಗಿಯೂ ಹೇಳಿದ. ಹೇಗಾದರೂ ತನ್ನ ಕಥೆ ಪೂರೈಸಿತೆಂದೇ ಅವನು ತಿಳಿದಿದ್ದ ; ಏಕೆಂದರೆ, ಅವನನ್ನು ಯಾರೂ ರಕ್ಷಿಸದೆ ಹೋಗಿದ್ದರೆ ಅವನು ಮುಳುಗಿಹೋಗುತ್ತಿದ್ದ ; ಮತ್ತು ಯಾರಾದರೂ ಅವನನ್ನು ಬದುಕಿಸಿದ್ದರೆ, ಮನೆಗೆ ಹಿಂದಿರುಗಿಸುತ್ತಿದ್ದರು ಬಹುಮಾನ ಪಡೆಯುವ ಆಸೆಯಿಂದ ; ಆಗ ಮಿಸ್. ವ್ಯಾಟ್ಸನ್ ಖಂಡಿತವಾಗಿಯೂ ಅವನನ್ನು ದಕ್ಷಿಣ ಸೀಮೆಗೆ ಮಾರಿಬಿಡು ತ್ತಿದ್ದಳು. ಅವನ ಲೆಕ್ಕಾಚಾರ ಸರಿಯಾಗಿತ್ತು ; ಅದು ಎಂದೂ ಸರಿಯಾಗಿಯೇ ಇರುತ್ತಿತ್ತು ; ನೀಗ್ರೋವಾದರೂ ಅವನು ಅಸಾಧಾರಣ ಬುದ್ಧಿವಂತನಾಗಿ ದ್ದನು.

ದೊರೆಗಳು, ಶ್ರೇಷ್ಠ ಸರದಾರರು, ಗಣ್ಯ ಶ್ರೀಮಂತರು ಮುಂತಾದವರ ವಿಷಯವನ್ನೂ, ಅವರ ಉಡುಗೆ ತೊಡುಗೆಗಳ ಬೆಡಗನ್ನೂ, ಅವರು ಬೀರುವ ಠೀವಿಯನ್ನೂ, ಪರಸ್ಪರ ಸಂಭಾಷಣೆಯಲ್ಲಿ ಅವರು ಹೇಗೆ "ಶ್ರೀಯುತರೆ" ಎಂಬುದಕ್ಕೆ ಬದಲು "ಮಹಾವೈಭವಾನ್ವಿತರೆ, ಮಹಾ ಘನತೆವೆತ್ತವರೆ, ಮಹಾಸ್ವಾಮಿಯವರೆ" ಎಂದು ಮೊದಲಾಗಿ ಕರೆದುಕೊಳ್ಳುವರೆಂಬುದನ್ನೂ ನಾನು ಜಿಮ್ಮನಿಗೆ ಓದಿ ಹೇಳಿದೆ. ಜಿಮ್ಮನ ಕಣ್ಣುಗಳಲ್ಲಿ ಆಶ್ಚರ್ಯವುಕ್ಕಿತು. ಅವನ ಕುತೂಹಲ ಕೆರಳಿತು; ಅವನು ಹೇಳಿದ :

"ಅವರಲ್ಲಿ ಅಷ್ಟೊಂದು ವಿಧಗಳಿರುವುದು ನನಗೆ ತಿಳಿದಿರಲಿಲ್ಲ. ಇಸ್ಪೀಟೆಲೆಗಳ ಕಟ್ಟಿನಲ್ಲಿರುವವರನ್ನೂ ನೀನು ಸೇರಿಸಿಕೊಳ್ಳದೆ ಹೋದರೆ, ನನಗೆ ಆ ಹಳೆಯ ದೊರೆ ಸಾಲೊಮನ್ ಹೊರತು ಇನ್ನೊಬ್ಬ ದೊರೆಯ ವಿಷಯವೇ ತಿಳಿಯದು. ದೊರೆಗೆ ಸಂಬಳವೆಷ್ಟು ?"

"ಎಷ್ಟು ಸಂಬಳವೆ ? ಬೇಕಾದರೆ ಅವರು ತಿಂಗಳಿಗೆ ಸಾವಿರ ಡಾಲರುಗಳನ್ನು ತೆಗೆದುಕೊಳ್ಳಬಹುದು ತಮಗೆ ಎಷ್ಟು ಬೇಕಾದರೆ ಅಷ್ಟನ್ನೂ ಅವರು ಪಡೆಯಬಲ್ಲರು; ಎಲ್ಲವೂ ಅವರಿಗೆ ಸೇರಿದ್ದೇ" ಎಂದೆ ನಾನು.

"ಬಲು ಮೋಜದು ಅಲ್ಲವೆ ? ಅವರು ಮಾಡಬೇಕಾದ ಕೆಲಸವೇನು ಹಕ್ ?"

"ಅವರು ಯಾವ ಕೆಲಸವನ್ನೂ ಮಾಡುವುದೇ ಇಲ್ಲ ! ಅಯ್ಯೋ, ನಿನ್ನ ಮಾತೆ ! ಅವರು ಸುಮ್ಮನೆ ಕುಳಿತಿರುತ್ತಾರೆ."

"ಕೆಲಸವೇ ಇಲ್ಲ ; ಹಾಗೇನು ?"

"ಅದು ವಾಸ್ತವವಾಗಿಯೂ ಹಾಗೆಯೇ, ಬಹುಶಃ ಯುದ್ಧ ಕಾಲದಲ್ಲಿ ಹೊರತು, ಉಳಿದೆಲ್ಲ ವೇಳೆಗಳಲ್ಲಿ ಅವರು ತೆಪ್ಪಗೆ ಕುಳಿತಿರುತ್ತಾರೆ. ಆಗ ಯುದ್ಧಕ್ಕೆ ಹೊರಡುತ್ತಾರೆ. ಉಳಿದ ಕಾಲದಲ್ಲಿ ಅವರು ಸೋಮಾರಿಗಳಾಗಿ ಕಾಲಗಳೆಯುತ್ತಾರೆ ; ಅಥವಾ ಕೈಗೆ ಸಿಕ್ಕಿದ್ದನ್ನು ಎಗರಿಸಿಕೊಳ್ಳುತ್ತಾ—ಆಡುತ್ತಾ ಇದ್ದು ಬಿಡುತ್ತಾರೆ.—ಷ್ !—ಏನೋ ಸದ್ದಾದುದು ನಿನಗೆ ಕೇಳಿಸಿತೆ ?"

ನಾವು ಈಚೆಗೆ ಬಂದು ಸುತ್ತಲೂ ನೋಡಿದೆವು. ಅದು ಎಲ್ಲೋ ದೂರದಲ್ಲಿ ಬಳಸಿ ಬರುತ್ತಿದ್ದ ಹಬೆ ದೋಣಿಯೊಂದರ ಚಕ್ರದ ಒದರು ಸದ್ದಾಗಿತ್ತು, ಅಷ್ಟೆ, ಹಿಂದಿರುಗಿದೆವು.

ನಾನು ಹೇಳಿದೆ : "ಹೌದು, ಉಳಿದ ಕಾಲಗಳಲ್ಲಿ ಅವರು, ಪರಿಸ್ಥಿತಿ ಎಲ್ಲವೂ ಜಡವಾಗಿ ತೋರಿತೆಂದರೆ, ಪಾರ್ಲಿಮೆಂಟಿನೊಂದಿಗೆ ರಂಪ ಮಾಡುತ್ತಾರೆ. ತಮ್ಮ ಇಷ್ಟಕ್ಕನುಸಾರವಾಗಿಯೇ ನಡೆದುಕೊಳ್ಳದ ಎಲ್ಲರ ತಲೆಗಳನ್ನೂ ಕಡಿಸಿ ಹಾಕುತ್ತಾರೆ. ಆದರೆ ಅವರ ಚಲನವಲನವೆಲ್ಲ ಬಹುಮಟ್ಟಿಗೆ ಅಂತಃಪುರದ ಸಮೀಪದಲ್ಲೇ."

"ಯಾವುದರ ಸಮೀಪದಲ್ಲಿ ?"

"ಅಂತಃಪುರದ—"

"ಅಂತಃಪುರ ಎಂದರೇನು ?"

"ಅವನ ಹೆಂಡಿರು ವಾಸಮಾಡುವ ಸ್ಥಳ. ಅಂತಃಪುರದ ವಿಷಯ ನಿನಗೆ ತಿಳಿಯದೆ? ಸಾಲೊಮನ್ ಅಂಥದೊಂದನ್ನು ಇಟ್ಟುಕೊಂಡಿದ್ದನು; ಅವನಿಗೆ ಸುಮಾರು ಹತ್ತುಲಕ್ಷ ಹೆಂಡಿರಿದ್ದರು."

"ಹೌದು, ನಿಜ, ಅದು ಹಾಗೆಯೇ. ನಾನು—ನಾನು ಅದನ್ನು ಮರೆತಿದ್ದೆ. ಅಂತಃಪುರವೆಂದರೆ ಭೋಜನಶಾಲೆ ಎಂದು ನನ್ನೆಣಿಕೆ, ಶಿಶುಪಾಲನೆಯ ಕೋಲಾಹಲಕರವಾದ ಸಮಯಂಗಳು ಅವರಿಗೆ ಒದಗುತ್ತಿದ್ದಿರಬಹುದು. ಆ ಹೆಂಡಿರು ತುಂಬಾ ಜಗಳ ಕಾಯುತ್ತಿದ್ದರೆಂದು ತೋರುತ್ತದೆ; ಅದರಿಂದ ಗದ್ದಲ ಹೆಚ್ಚುತ್ತಿತ್ತು, ಆದರೂ ಸಾಲೆಮನ್ನನಂಥ ವಿವೇಕಶಾಲಿಯೇ ಇರಲಿಲ್ಲವೆನ್ನುತ್ತಾರೆ, ನಾನದಕ್ಕೆ ಬೆಲೆಕೊಡುವುದಿಲ್ಲ. ಏಕೆನ್ನುತ್ತಿಯೋ? ಏಕೆಂದರೆ ವಿವೇಕಶಾಲಿಯಾದವನು ಯಾವನುತಾನೆ ಅಂಥಾ ಕಷ್ಟಪರಿಸ್ಥಿತಿಯಲ್ಲಿ ಸದಾಕಾಲವೂ ಸಿಕ್ಕಿಬಿದ್ದಿರುತ್ತಾನೆ? ಇಲ್ಲ; ಅವನು ಹಾಗೆ ಮಾಡುವುದಿಲ್ಲ; ವಿವೇಕಶಾಲಿಯಾದವನು ಒಂದು ಕಡಾಯಿ—ಕಾರ್ಖಾನೆಯನ್ನು ಸ್ಥಾಪಿಸುತ್ತಾನೆ, ತನಗೆ ಬಿಡುವು ಬೇಕಾದಾಗ ಅದನ್ನು ಮುಚ್ಚಿಬಿಡುತ್ತಾನೆ."

"ಹೇಗಾದರೂ ಅವನು ಅತಿ ವಿವೇಕಶಾಲಿಯಾದ ಮನುಷ್ಯನಾಗಿದ್ದುದು ನಿಜ, ಏಕೆಂದರೆ ಆ ವಿಧವೆಯೇ ಸ್ವತಃ ನನಗೆ ಹಾಗೆ ಹೇಳಿದಳು."

"ವಿಧವೆ ಏನು ಹೇಳಿದಳೋ ಅದನ್ನು ನಾನು ಲೆಕ್ಕಿಸುವುದಿಲ್ಲ. ಅವನು ಖಂಡಿತವಾಗಿಯೂ ವಿವೇಕಶಾಲಿಯಲ್ಲ. ನಾನು ಕಂಡಿರುವ ಎಷ್ಟೋ ದುರ್ವರ್ತನೆಗಳಲ್ಲಿ ಕೆಲವಾದರೂ ಅವನಲ್ಲಿದ್ದವು. ಅವನು ಯಾವುದೋ ಮಗುವನ್ನು ಎರಡು ತುಂಡಾಗಿ ಸೀಳಿ ಹೋದ ಸಂಗತಿ ನಿನಗೆ ತಿಳಿಯದೆ?"

"ಹೌದು, ಆ ವಿಧವೆ ನನಗೆ ಅದೆಲ್ಲವನೂ ಹೇಳಿದ್ದಾಳೆ."

"ಸರಿ ಹಾಗಾದರೆ, ಈಜಗತ್ತಿನಲ್ಲೇ ಅದು ಅತಿ ಹೇಯ ಕೃತ್ಯವಲ್ಲವೆ? ಆ ಮೋಟು ಮರವೇ ಆ ಹೆಂಗಸರಲ್ಲಿ ಒಬ್ಬಳು; ನೀನೇ ಇನ್ನೊಬ್ಬಳು; ನಾನು ಸಾಲೆಮನ್; ಈ ಒಂದು ಡಾಲರಿನ ಹುಂಡಿಯೇ ಆ ಮಗು—ಹೀಗೆ ಇಟ್ಟುಕೋ. ಇಬ್ಬರೂ ಅದನ್ನು ನನಗೆ ಕೊಡು ಎಂದು ಕೇಳುತ್ತಾರೆ ನಾನೇನು ಮಾಡಬೇಕು? ನಾನು ನೆರೆಹೊರೆಯವರನ್ನು ವಿಚಾರಿಸಹೊರಟು ಆ ಹುಂಡಿ ಯಾರಿಗೆ ಸೇರಿದ್ದೆಂಬುದನ್ನು ಇತ್ಯರ್ಥಮಾಡಿಕೊಂಡು ಆಮೇಲೆ ಅದನ್ನು ಸುರಕ್ಷಿತವಾಗಿ ಯಾರಿಗೆ ಸಲ್ಲಬೇಕೋ ಅವನಿಗೆ ಕೊಟ್ಟುಬಿಡುತ್ತೇನೆಯೆ? ಬುದ್ಧಿಶಾಲಿಯಾದವರೇನೋ ಮಾಡುವುದೇ ಹಾಗೆ. ನಾನು ಹಾಗೆ ಮಾಡುವುದಿಲ್ಲ; ಅದನ್ನು ಎರಡು ತುಂಡುಮಾಡಿ, ಅರ್ಧವನ್ನು ನಿನಗೂ ಉಳಿದರ್ಧವನ್ನು ಆ ಇನ್ನೊಬ್ಬಳಿಗೂ ಕೊಡುತ್ತೇನೆ. ಸಾಲೊಮನ್ ಆ ಮಗುವಿನ ವಿಷಯದಲ್ಲಿ ಮಾಡಹೊರಟಿದ್ದೇ ಹಾಗೆ, ನಾನೀಗ ನಿನ್ನನ್ನು ಕೇಳುತ್ತೇನೆ; ಆ ಹುಂಡಿಯ ಉಳಿದರ್ಧ

ಭಾಗದಿಂದ ಏನು ಪ್ರಯೋಜನ?— ಅದರಿಂದ ಏನನ್ನೂ ಕೊಳ್ಳಲಾಗುವುದಿಲ್ಲ, ಅರ್ಧ ಮಗುವಿನಿಂದ ಏನು ಪ್ರಯೋಜನ? ಅಂಥ ಹತ್ತುಲಕ್ಷವನ್ನು ತೋರಿಸಿದರೂ ನಾನು ಅವುಗಳಿಗೆ ಒಂದು ಬಿಡಿಕಾಸನ್ನೂ ಕೊಡೆನು."

"ಹಾಗಲ್ಲ ಜಿಮ್, ನೀನು ಅದರ ಮುಖ್ಯಾಂಶವನ್ನೇ ಉಪೇಕ್ಷಿಸಿದ್ದೀಯೆ. ನಿನಗೂ ಅಲ್ಲಿಗೂ ಸಾವಿರಮೈಲಿಗಳ ಅಂತರವಿದೆ."

"ಯಾರು? ನಾನೆ? ಮುಂದೆ ಹೇಳು. ನಿನ್ನ ಮುಖ್ಯಾಂಶಗಳ ಮಾತು ನನಗೆ ಬೇಕಾಗಿಲ್ಲ. ನನಗೆ ಅದು ಅರ್ಥವಾಗುತ್ತದೆ, ಅರ್ಥವಿದ್ದಲ್ಲಿ. ಹಾಗೆ ಮಾಡುವುದರಲ್ಲಿ ಏನರ್ಥವಿದೆ? ಆ ವ್ಯಾಜ್ಯ ಮಗುವಿನಲ್ಲಿ ಅರ್ಧಕ್ಕೆ ಸಂಬಂಧಪಟ್ಟದ್ದಲ್ಲ, ಇಡೀ ಮಗು ವಿಗೆ ಸಂಬಂಧಪಟ್ಟದ್ದು. ಇಡೀ ಮಗುವಿಗೆ ಸಂಬಂಧಪಟ್ಟ ವ್ಯಾಜ್ಯವನ್ನು ಮಗುವಿ ನಲ್ಲಿ ಅರ್ಧವನ್ನು ಕೊಡುವುದರಿಂದ ಇತ್ಯರ್ಥಪಡಿಸಬಲ್ಲೆನೆಂದು ತಿಳಿಯುವ ಮನುಷ್ಯನಿಗೆ ಮಳೆಯಲ್ಲಿ ಓಡಾಡುವುದು ಕೂಡ ತಿಳಿಯದೆನ್ನುತ್ತೇನೆ. ನನಗಿನ್ನು ಸಾಲೆಮನ್ನಿನ ವಿಷಯದಲ್ಲಿ ಉಪನ್ಯಾಸ ಮಾಡಬೇಡ, ಹಕ್, ನಾನವನನ್ನು ಚೆನ್ನಾಗಿ ಬಲ್ಲೆ."

"ಆದರೂ ನಿನಗೆ ಅದರ ಮುಖ್ಯಾಂಶ ಕರಗತವಾಗಿಲ್ಲವೆಂದೇ ನಾನು ಹೇಳು ತ್ತೇನೆ."

"ನಿನ್ನ ಮುಖ್ಯಾಂಶ ಹಾಳಾಯ್ತು! ನನಗೆ ತಿಳಿದಿರುವುದು ನನಗೆ ತಿಳಿದಿದೆ: ನಿಜವಾದ ಸಂಗತಿ ಇನ್ನೂ ಆಳದಲ್ಲಿದೆ, ಗೊತ್ತಾಯಿತೆ— ಇನ್ನೂ ಗೂಢವಾಗಿದೆ: ಅದು ಸಾಲೆಮನ್ನನ ಜೀವನ ಪರಿಸ್ಥಿತಿಯನ್ನು ಸೂಚಿಸುವುದಾಗಿದೆ. ಒಂದೋ ಎರಡೋ ಮಕ್ಕಳಿರುವವನ ವಿಷಯವನ್ನು ತೆಗೆದುಕೋ: ಅಂಥವನು ತನ್ನ ಮಕ್ಕಳನ್ನು ವ್ಯರ್ಥಮಾಡಿಕೊಳ್ಳುತ್ತಾನೆಯೆ? ಇಲ್ಲ, ಅವನು ಹಾಗೆ ಮಾಡುವುದಿಲ್ಲ, ಹಾಗೆ ಮಾಡಲಾರ. ಅವುಗಳನ್ನು ಬೆಲೆಕಟ್ಟುವ ರೀತಿ ಅವನಿಗೆ ಗೊತ್ತು. ಆದರೆ ಮನೆಯಲ್ಲಿ ಸುಮಾರು ಐವತ್ತು ಲಕ್ಷ ಮಕ್ಕಳು ಉರುಳಾಡುತ್ತಿರುವವನ ವಿಷಯವನ್ನು ತೆಗೆದುಕೋ, ಅವನ ಪರಿಸ್ಥಿತಿಯೇ ಬೇರೆ. ಅವನು ತನ್ನ ಮಗುವನ್ನು ಬೆಕ್ಕೆಂದು ಕಡೆಗಣಿಸಿ, ಎರಡು ಹೋಳುಗಳಾಗಿ ಕಡಿದುಹಾಕುತ್ತಾನೆ. ಏಕೆಂದರೆ ಅದು ಹೋದರೂ ಇನ್ನೂ ಯಥೇಚ್ಛ ವಾಗಿ ಮಕ್ಕಳಿವೆ ಅವನಿಗೆ ಒಂದೆರಡು ಮಕ್ಕಳು ಹೆಚ್ಚಿದರೂ ಕಡಿಮೆಯಾದರೂ ಸಾಲೆಮನ್ನನಿಗೆ ವ್ಯತ್ಯಾಸವೇ ತೋರಲಿಲ್ಲ, ದೇವರಾಣೆಗೂ!"

ನಾನಂಥ ನೀಗ್ರೋವನ್ನೇ ನೋಡಿಲ್ಲ. ಯಾವುದಾದರೂ ಯೋಚನೆ ಅವನ ತಲೆಯಲ್ಲಿ ಸುಳಿದರೆ, ಅದನ್ನು ಆಚೆಗೋಡಿಸುವುದಕ್ಕೇ ಆಗುತ್ತಿರಲಿಲ್ಲ. ಸಾಲೆಮನ್ನಿನ ಮೇಲೆ ಯಾವ ನೀಗ್ರೋವಿಗೂ ಇವನಿಗಿರುವಷ್ಟು ಸಿಟ್ಟಿರಲಿಲ್ಲ. ಆದ್ದರಿಂದ ನಾನು ಸಾಲೆಮನ್ನನ್ನು ಕೈಬಿಟ್ಟು ಇತರ ದೊರೆಗಳ ಸುದ್ದಿಗೆ ಬಾಯಿಹಾಕಿದೆ. ಬಹುಕಾಲದ ಹಿಂದೆ ಫ್ರಾನ್ಸಿನಲ್ಲಿ ಶಿರಚ್ಛೇದಗೊಂಡ ಹದಿನಾರಾನೆಯ ಲೂಯಿಯ ವಿಷಯವನ್ನು

ಹೇಳಿದೆ; ಅವನ ಪುಟ್ಟ ಮಗನ, ರಾಜಕುಮಾರನ-ತನ್ನನ್ನು ಅವರು ಎಳೆದುಕೊಂಡು ಹೋಗಿ ಸೆರೆಗೆ ಹಾಕದಿದ್ದರೆ, ದೊರೆಯಾಗಬಹುದಿತ್ತಲ್ಲ, ಅವನ ಕಥೆಯನ್ನೂ ಹೇಳಿದೆ. ಅವನು ಅಲ್ಲೇ ಸತ್ತುಹೋದನೆಂದೂ ಕೆಲವರು ಹೇಳುತ್ತಾರೆ.

"ಪುಟ್ಟ ಹುಡುಗ, ಪಾಪ!"

"ಆದರೆ ಅವನು ತಪ್ಪಿಸಿಕೊಂಡು ಓಡಿಹೋದನೆಂದೂ, ಆಮೇಲೆ ಅಮೆರಿಕಕ್ಕೆ ಬಂದನೆಂದೂ ಕೆಲವರು ಹೇಳುತ್ತಾರೆ."

"ಒಳ್ಳೆಯದೇ ಆಯಿತು! ಆದರೆ ಅವನು ಒಬ್ಬೊಂಟಿಗನಾಗುತ್ತಾನೆ— ಇಲ್ಲಿ ದೊರೆಗಳೇ ಇಲ್ಲ! ಇದ್ದಾರೆಯೇ ಹಕ್?"

"ಇಲ್ಲ."

"ಹಾಗಾದರೆ ಅವನಿಗಿಲ್ಲಿ ಯಾವ ಸದವಕಾಶವೂ ಸಿಕ್ಕದು. ಅವನು ಮಾಡುವುದೇನು?"

"ನನಗದು ತಿಳಿಯದು ಅವರಲ್ಲಿ ಕೆಲವು ಮಂದಿ ಪೊಲೀಸಿಗೆ ಸೇರುತ್ತಾರೆ, ಇನ್ನು ಕೆಲವರು ನಮ್ಮವರಿಗೆ ಫ್ರೆಂಚ್ ಭಾಷೆಯಲ್ಲಿ ಮಾತಾಡುವುದನ್ನು ಕಲಿಸುತ್ತಾರೆ."

"ಏನೆಂದು, ಹಕ್? ಫ್ರೆಂಚರು ಮಾತಾಡುವುದೂ ನಾವು ಮಾತಾಡುವುದೂ ಒಂದೇ ರೀತಿಯಲ್ಲಲ್ಲವೆ?"

"ಇಲ್ಲ, ಜಿಮ್; ಅವರು ಆಡುವ ಒಂದು ಮಾತನ್ನು-ಒಂದು ಮಾತನ್ನು ಕೂಡ-ನೀನು ಅರ್ಥಮಾಡಿಕೊಳ್ಳಲಾರೆ."

"ನನ್ನ ತಲೆಕಾಯಿ! ಅದು ಹೇಗಾಯಿತು ?"

"ನನಗೆ ತಿಳಿಯದು; ಅದು ಇರುವುದು ಹಾಗೆಯೇ. ನಾನು ಅವರ ಕೆಲವು ಮಾತನ್ನು ಯಾವುದೋ ಪುಸ್ತಕದಿಂದ ಕಲಿತೆ. ಯಾವನಾದರೂ ನಿನ್ನ ಬಳಿಗೆ ಬಂದು 'ಪಾಲಿ-ವೂ-ಫ್ರಾನ್ಸಿ' ಎಂದ ಅನ್ನು-ಅದು ಏನೆಂಬುದು ನಿನಗೆ ಗೊತ್ತೋ?"

"ನನಗೆ ಏನೂ ಗೊತ್ತಾಗುವುದಿಲ್ಲ. ನಾನು ಅವನನ್ನು ಹಿಡಿದುಕೊಂಡು ಬಂದು, ತಲೆಯನ್ನು ಒಡೆದುಹಾಕುತ್ತಿದ್ದೆ,—ಅಂದರೆ ಅವನು ಬಿಳಿಯನಲ್ಲದಿದ್ದರೆ. ನನ್ನನ್ನು ಹಾಗೆ ಕರೆಯಲು ನಾನು ಯಾವ ನೀಗ್ರೋವಿಗೂ ಅನುಮತಿಗೊಡುತ್ತಿರಲಿಲ್ಲ."

"ಥತ್, ಅದರಿಂದ ನಿನ್ನನ್ನು ಅವಹೇಳನಮಾಡಿದಂತಾಗುವುದಿಲ್ಲ. ಆ ಮಾತಿನ ಅರ್ಥ: ನೀನು ಫ್ರೆಂಚಿನಲ್ಲಿ ಮಾತಾಡಬಲ್ಲೆಯ, ಎಂದಿಷ್ಟೇ."

"ಹಾಗಾದರೆ ಅವನು ಹಾಗೆಯೇ ಏಕೆ ಕೇಳಬಾರದು?"

"ಅವನು ಕೇಳುತ್ತಿರುವುದೇ ಹಾಗೆ. ಫ್ರೆಂಚರು ಮಾತಾಡುವ ರೀತಿ ಅದು."

"ಅದು ತುಂಬಾ ಹಾಸ್ಯಾಸ್ಪದವಾದ ಶೈಲಿ. ನಾನದರ ವಿಷಯದಲ್ಲಿ ಇನ್ನೇನನ್ನೂ ಕೇಳಬಯಸೆನು. ಅದು ಅರ್ಥಹೀನವಾದುದು."

"ಇಲ್ಲಿ ನೋಡು, ಜಿಮ್ : ಬೆಕ್ಕು ನಮ್ಮಂತೆ ಮಾತಾಡುತ್ತದೆಯೋ ?"

"ಇಲ್ಲ, ಬೆಕ್ಕು ಹಾಗೆ ಮಾತಾಡದು."

"ಸರಿ, ಹಸುವೊ?"

"ಹಸುವೂ ಹಾಗೆ ಮಾತಾಡದು."

"ಬೆಕ್ಕು ಹಸುವಿನಂತೆ ಮಾತಾಡುತ್ತದೆಯೇ, ಅಥವಾ, ಹಸು ಬೆಕ್ಕಿನಂತೆ ಮಾತಾಡುತ್ತದೆಯೋ?"

"ಇಲ್ಲ, ಇಲ್ಲ."

"ಒಂದೊಂದೂ ಬೇರೆಬೇರೆ ರೀತಿಯಲ್ಲಿ ಮಾತಾಡುವುದು ಸಹಜವೂ, ಯುಕ್ತವೂ ಆದುದಲ್ಲವೆ?"

"ಹೌದು."

"ನಾವು ಮಾತಾಡುವುದಕ್ಕಿಂತ ಬೇರೆಯ ರೀತಿಯಲ್ಲಿ ಬೆಕ್ಕೂ, ಹಸುವೂ ಮಾತಾಡಿಕೊಳ್ಳುವುದು ಸಹಜವೂ ಯುಕ್ತವೂ ಆದುದಲ್ಲವೆ?"

"ಅದರಲ್ಲಿ ಯಾವ ಅನುಮಾನವೂ ಇಲ್ಲ."

"ಹಾಗೆಯೇ, ಫ್ರೆಂಚರು ನಮಗಿಂತ ಬೇರೆಯ ರೀತಿಯಲ್ಲಿ ಮಾತಾಡುವುದು ಸಹಜವೂ, ಯುಕ್ತವೂ ಆಗಲಿಲ್ಲವೆ? ಇದಕ್ಕೆ ಉತ್ತರ ಕೊಡು."

"ಬೆಕ್ಕು ಮನುಷ್ಯನೇ, ಹಕ್ ?"

"ಇಲ್ಲ."

"ಆದಕಾರಣ ಬೆಕ್ಕು ಮನುಷ್ಯನಂತೆ ಮಾತಾಡುವುದರಲ್ಲಿ ಅರ್ಥವಿಲ್ಲ. ಹಸು ಮನುಷ್ಯನೆ?–ಅಥವಾ ಹಸು ಬೆಕ್ಕೆ?"

"ಅದು ಎರಡೂ ಅಲ್ಲ."

"ಆದ್ದರಿಂದ ಅದು ಇದರಂತಾಗಲಿ ಅವನಂತಾಗಲಿ ಮಾತಾಡಲು ಕಾರಣವೇ ಇಲ್ಲ. ಫ್ರೆಂಚರವನು ಮನುಷ್ಯನೋ?"

"ಹೌದು"

"ಸರಿ, ಹಾಗಾದರೆ. ಅವನಿಗೇನು ಬಂತು!-ಅವನೇಕೆ ಮನುಷ್ಯನಂತೆ ಮಾತಾಡುವುದಿಲ್ಲ? ಇದಕ್ಕೆ ಉತ್ತರ ಕೊಡು."

ಇನ್ನು ಮಾತನ್ನು ಬೆಳೆಸುವುದು ನಿಷ್ಪ್ರಯೋಜಕವೆಂಬುದನ್ನು ಕಂಡುಕೊಂಡೆ.— ನೀಗ್ರೋವಿಗೆ ವಾದವನ್ನು ಕಲಿಸುವುದು ಯಾರಿಂದಲೂ ಸಾಧ್ಯವಿಲ್ಲ. ನಾನದನ್ನು ಅಲ್ಲಿಗೇ ಬಿಟ್ಟೆ.

## ೧೫

ಇಲ್ಲಿನಾಯ್ಸ್‌ಗೆ ಕೆಳಭಾಗದಲ್ಲಿ ಓಹಿಯೋ ನದಿ ಬಂದು ಸೇರುವ ತಾಣದಲ್ಲಿರುವ ಕೈರೋವಿಗೆ ನಾವು ತಲಪಲು ಇನ್ನೂ ಮೂರು ರಾತ್ರಿಗಳ ಕಾಲ ಹಿಡಿದೀತೆಂದು ನಿರ್ಧರಿಸಿಕೊಂಡೆವು; ನಾವು ಹೋಗಬೇಕಾಗಿದ್ದುದಲ್ಲಿಗೇ. ಅಲ್ಲಿ ನಮ್ಮ ತೆಪ್ಪವನ್ನು ಮಾರಿ, ಹಬೆದೋಣಿಯೊಂದನ್ನು ಹತ್ತಿ, ಓಹಿಯೋವಿನ ಜಲಮಾರ್ಗವನ್ನನುಸರಿಸಿ ಅದರ ಮೇಲುಭಾಗದಲ್ಲಿರುವ 'ಸ್ವತಂತ್ರ ಸಂಸ್ಥಾನ'ಗಳಿಗೆ ಹೋಗಿ, ತೊಂದರೆಗಳಿಂದ ಪಾರಾಗಬೇಕಿತ್ತು.

ಎರಡನೆಯ ರಾತ್ರಿ ಇಬ್ಬನಿ ಸುರಿಯಲು ಮೊದಲಾಯಿತು; ಇಬ್ಬನಿಯಲ್ಲಿ ಪಯಣಿಸುವುದು ಅಪಾಯಕರವಾದ್ದರಿಂದ, ನಮ್ಮ ತೆಪ್ಪವನ್ನು ನದಿಯಂಚಿನಲ್ಲಿ ಕಟ್ಟಿಹಾಕಲು ನೆಲೆಯೊಂದನ್ನು ಹುಡುಕಿದೆವು. ಅದೇ ಉದ್ದೇಶದಿಂದ ನಾನು ಹಗ್ಗವನ್ನು ತೂಗುತ್ತಾ ಕಿರುದೋಣಿಯನ್ನು ಮೀಟಿಕೊಂಡು ಮುಂದೆಹೋದಾಗ ಅಲ್ಲಿ ನನಗೆ ಕಟ್ಟಿಹಾಕಲು ಸಣ್ಣ ಸಸಿಗಳಲ್ಲದೆ ಬೇರೇನೂ ಸಿಕ್ಕಲಿಲ್ಲ. ದಡದ ಅಂಚಿನ ಬಿರುಕಿನಲ್ಲಿ ಬೆಳೆದಿದ್ದ ಸಸಿಯೊಂದಕ್ಕೆ ಹಗ್ಗವನ್ನು ಸುತ್ತುಹಾಕಿದೆ. ಆದರೆ ಅಲ್ಲಿ ನೀರು ಅತಿ ರಭಸದಿಂದ ಹರಿಯುತ್ತಿದ್ದುದರಿಂದ ತೆಪ್ಪ ಮೊರೆಯುತ್ತಾ ದೌಡಾಯಿಸಿತು; ಆ ಸಸಿಯೋ! ನಿರ್ಮೂಲವಾಯಿತು. ಇಬ್ಬನಿ ದಟ್ಟವಾಗಿ ಇಳಿಯುತ್ತಿರುವುದನ್ನು ಕಂಡೆ; ಸುಮಾರು ನಿಮಿಷಾರ್ಧದ ತನಕ ನನಗೆ ಅತ್ತಿತ್ತ ಕದಲಲೂ ಕಷ್ಟವಾಯಿತು; ನನಗೆ ಅಷ್ಟು ಬೇಸರವೂ ಭಯವೂ ಉಂಟಾಯಿತು—ತೆಪ್ಪ ಕಣ್ಮರೆಯಾಯಿತು. ಇಪ್ಪತ್ತು ಗಜಗಳ ಆಚೆಗಿರುವುದು ಯಾವುದೂ ಕಾಣಿಸುತ್ತಿರಲಿಲ್ಲ ನಾನು ಕಿರುದೋಣಿಗೆ ನೆಗೆದೆ, ಅದರ ಹಿಂದಿನ ತುದಿಗೆ ಓಡಿದೆ, ಹುಟ್ಟನ್ನು ಎತ್ತಿಕೊಂಡು ಬಂದು ದೋಣಿಯನ್ನು ಮುನ್ನಡೆಸಲು ಹೆಣಗಿದೆ. ಅದು ಹೊರಡಲಿಲ್ಲ. ನಾನು ತುಂಬಾ ಆತುರದಲ್ಲಿದ್ದು, ಅದರ ಕಟ್ಟನ್ನು ಬಿಚ್ಚಿಯೇ ಇರಲಿಲ್ಲ. ಎದ್ದು, ಅದನ್ನು ಬಿಚ್ಚತೊಡಗಿದೆ. ನಾನು ತುಂಬಾ ಉದ್ರಿಕ್ತನಾಗಿದ್ದುದರಿಂದ ನನ್ನ ಕೈಗಳು ನಡುಗಿದವು. ಯಾವ ಕೆಲಸಕ್ಕೂ ಬಾರದೆಹೋದೆವು.

ಹೊರಟದ್ದೇ ತಡ, ನಾನು ತೆಪ್ಪವನ್ನು ನಿಲ್ದಾಣದ ಚಾಚಿನ ಉದ್ದಕ್ಕೂ ಬೆನ್ನಟ್ಟಿ ಹೋದೆ. ಒಂದಷ್ಟು ದೂರದ ಮಟ್ಟಿಗೆ ಹಾಗೆ ಮಾಡಿದ್ದು ಸರಿಹೋಯಿತು ಆದರೆ ಆ ಚಾಚು ಅರುವತ್ತು ಗಜಗಳಷ್ಟು ಉದ್ದವಾಗಿರಲಿಲ್ಲ. ನಾನದರ ಅಡಿಗೆ ಬಳಿಸಾರಿದ ನಿಮಿಷದಲ್ಲೇ ದಟ್ಟವಾದ ಬಿಳಿಯ ಇಬ್ಬನಿಯೊಳಗೆ ಸೇರಿಹೋಗಿದ್ದೆ. ಆಗ ನನ್ನ ಗತಿಯೂ, ಮುಂದೆ ತಾನೆಲ್ಲಿಗೆ ಹೋಗಲಿರುವೆನೆಂಬುದರ ಅರಿವೇ ಇರದ ಮೃತಜೀವದ ಗತಿಯೂ ಒಂದೇ ಆಗಿತ್ತು.

ಹುಟ್ಟುಹಾಕುವುದು ಕ್ಷೇಮವಲ್ಲ ಎಂದು ಯೋಚಿಸಿದೆ. ನಾನು ದಡದ ಏಣಿಗೋ, ಜಲಯಾನಗಳನ್ನು ಕಟ್ಟಿಹಾಕುವ ಕಿರುನಿಲ್ದಾಣಕ್ಕೋ ಇನ್ನಾವುದಕ್ಕೋ ನುಗ್ಗಿಬಿಡಬಹು

ದೆಂದು ಮೊದಲೇ ನನಗೆ ತಿಳಿದಿತ್ತು. ಸುಮ್ಮನೆ ಕುಳಿತು ತೇಲುವುದೇ ಸರಿ ಎಂದು ನಿರ್ಧರಿಸಿದೆ. ಅಂಥ ಸಮಯದಲ್ಲಿ ಕೈಕಟ್ಟಿ ಕೂರುವುದು ಬಲು ಆತಂಕದ ಕೆಲಸ. ಕೂಗಿದೆ, ಆಲಿಸಿದೆ, ದೂರದಲ್ಲೆಲ್ಲೋ ಒಂದು ಸಣ್ಣ ಕೂಗು ಎದ್ದುದು ನನ್ನ ಕಿವಿಗೆ ಬಿತ್ತು, ನನಗೆ ಹೋದ ಜೀವ ಬಂದಂತಾಯಿತು. ಆ ಬಳಿಗೇ ಕವಿಗೊಟ್ಟು, ನಾನು ಅತ್ತ ಧಾವಿಸಿದೆ. ಅದು ಮತ್ತೆ ಕೇಳಿಬಂದೀತೆಂದುಕೊಂಡೆ. ಅದು ಮತ್ತೆ ಕೇಳಿ ಬಂದಾಗ ನಾನದರೆಡೆಗೇ ನೇರ ಚಲಿಸುತ್ತಿರಲಿಲ್ಲ. ಅದರ ಬಲಪಕ್ಕದ ಕಡೆಗೆ ಹೋಗುತ್ತಿದ್ದೆ. ಮುಂದಿನ ಸಲ ಅದು ಕೇಳಿ ಬಂದಾಗ, ನಾನು ನೇರ ಅದರೆಡೆಗೇ ಚಲಿಸುತ್ತಿರದೆ ಅದರ ಎಡಗಡೆಗೆ ಹೋಗುತ್ತಿರುವುದು ಕಂಡುಬಂತು. ನಾನು ಚಲಿಸುತ್ತಿದ್ದ ವೇಗದಿಂದ ಅದನ್ನು ಸೋಕುವುದು ಆಗದ ಕೆಲಸವೆನ್ನಿಸಿತು, ಏಕೆಂದರೆ ನಾನು ಒಮ್ಮೆ ಈ ಕಡೆಗೆ ಇನ್ನೊಮ್ಮೆ ಆ ಕಡೆಗೆ ಬಳಸುತ್ತಲೇ ಹೋಗುತ್ತಿದ್ದೆ. ಅದು ಉದ್ದಕ್ಕೂ ನನಗಿಂತ ಮುಂದಾಗಿಯೇ ಓಡುತ್ತಿತ್ತು.

ಆ ಮೂರ್ಖ ತವರದ ತಟ್ಟೆಯೊಂದನ್ನು ಎಡೆಬಿಡದೆ ಬಡಿಯುತ್ತಿದ್ದರಾಗಿತ್ತು ಎಂದುಕೊಂಡೆ, ಆದರೆ ಅವನು ಹಾಗೆ ಮಾಡಲಿಲ್ಲ. ಬೊಬ್ಬೆಗಳ ನಡುವಣದ ನೀರವತೆಯ ತುಣುಕುಗಳಿಂದಲೇ ನನಗೆ ತೊಂದರೆಯೊದಗಿತು. ನಾನು ಹೊಯ್ದಾಡುತ್ತ ಹೋದೆ, ನೇರ ನನ್ನ ಹಿಂದೆಯೇ ಬೊಬ್ಬೆಯೆದ್ದುದನ್ನು ಕೇಳಿದೆ. ನನಗದು ದೊಡ್ಡ ಸಮಸ್ಯೆಯಾಯಿತು. ಇನ್ನು ಯಾರದೋ ಬೊಬ್ಬೆಯಾಗಿರಬೇಕು ಅದು, ಇಲ್ಲವಾದರೆ, ನಾನು ತೊಂದರೆಗೆ ಸಿಕ್ಕಿದ್ದೆ.

ನಾನು ಹುಟ್ಟನ್ನು ಬೀಸಾಡಿದೆ, ಆ ಬೊಬ್ಬೆ ಮತ್ತೆ ಕೇಳಿಸಿತು ನನಗೆ, ಅದು ನನ್ನ ಹಿಂದೆಯೇ, ಆದರೆ ಬೇರೆ ಸ್ಥಳದಲ್ಲಿ ಇತ್ತು. ಅದು ಬರುತ್ತಲೇ ಇತ್ತು, ತನ್ನ ನೆಲೆಯನ್ನು ಬದಲಾಯಿಸುತ್ತಿತ್ತು; ನಾನು ಉತ್ತರಕೊಡುತ್ತಲೇ ಇದ್ದೆ, ಕ್ರಮೇಣ ಅದು ನನ್ನೆದುರಿನಿಂದಲೇ ಬಂತು. ನೀರಿನ ಸೆಳವು ಕಿರುದೋಣಿಯ ಮುಖವನ್ನು ಹೊಳೆಯ ದಿಕ್ಕಿಗೇ ತಿರುಗಿಸಿದ್ದುದು ನನಗೆ ತಿಳಿಯಿತು. ಕೂಗುತ್ತಿರುವವನು ಬೇರೆ ತೆಪ್ಪದವನಾಗಿರದೆ, ಜಿಮ್ಮನೇ ಆಗಿದ್ದಲ್ಲಿ ನನಗೆ ಸರ್ವಕ್ಷೇಮವಾಯಿತು ಎಂದು ಭಾವಿಸಿದೆ. ಇಬ್ಬನಿಯೊಳಗಿನ ಧ್ವನಿಗಳ ಬಗೆಗೆ ಏನನ್ನು ಹೇಳುವುದೂ ನನ್ನಿಂದಾಗಲಿಲ್ಲ; ಏಕೆಂದರೆ ಇಬ್ಬನಿಯೊಳಗಿನ ಯಾವ ಪದಾರ್ಥವೂ ಸ್ವಾಭಾವಿಕವಾಗಿ ಗೋಚರಿಸುವುದಿಲ್ಲ, ಯಾವುದರ ಧ್ವನಿಯೂ ಸ್ವಾಭಾವಿಕವಾಗಿ ಕೇಳಿಬರುವುದಿಲ್ಲ.

ಬೊಬ್ಬೆ ಕೇಳಿಬರುತ್ತಲೇ ಇತ್ತು. ಒಂದು ನಿಮಿಷದಲ್ಲಿ ನಾನು ಹೆಮ್ಮರಗಳ ಹೊಗೆ-ಹಿಡಿದ ದೆವ್ವಗಳಿಂದಾವೃತವಾಗಿದ್ದ ಸೀಳು-ದಡದ ಕೆಳಕ್ಕೆ ತೂರಿಬಂದಿದ್ದೆ. ನೀರ ಸೆಳವು ನನ್ನನ್ನು ಅದರ ಎಡಪಕ್ಕಕ್ಕೆ ಎಸೆಯಿತು; ನನ್ನ ಪಕ್ಕದಲ್ಲೇ ರಭಸದಿಂದ ಸಾಗಿತು, ಅಬ್ಬರಿಸುತ್ತಿದ್ದ ಅಡ್ಡಿ ತಡೆಗಳನ್ನು ಕಿತ್ತೊಗೆದಿತ್ತು.

ಇನ್ನೊಂದೆರಡು ಸೆಕೆಂಡುಗಳಲ್ಲಿ ದೃಶ್ಯ ಮತ್ತೆ ದಟ್ಟಬಿಳುಪಿಗೆ ತಿರುಗಿ ನೀರವ ವಾಯಿತು. ನನ್ನೆದೆಯ ತುಡಿತವನ್ನು ಕೇಳಂತ್ತಾ ನಾನು ಅಲುಗಾಡದೆ ಕುಳಿತೆ. ಅದು ನೂರು ಸಲ ತುಡಿಯುವ ತನಕ ನಾನು ಒಂದುಸಿರನ್ನೂ ಎಳೆಯಲಿಲ್ಲವೆಂದು ತೋರು ತ್ತದೆ.

ಆ ಬಳಿಕ ನನಗೆ ಭಯ ಹೋಯಿತು. ಸಂದರ್ಭವೇನೆಂಬುದು ನನಗೆ ಗೊತ್ತಾಗಿ ಹೋಯಿತು. ಆ ಸೀಳುದಡ ಒಂದು ದ್ವೀಪವಾಗಿತ್ತು. ಜಿಮ್ ಅದರ ಇನ್ನೊಂದು ಪಕ್ಕದಲ್ಲಿ ಹೋಗಿದ್ದನು, ಅದರ ಅಂಚಿನಲ್ಲೇ ಹತ್ತು ನಿಮಿಷಗಳ ಮಟ್ಟಿಗೆ ತೇಲುತ್ತಿ ರೋಣವೆಂದರೆ ಅಲ್ಲಿ ನಿಲ್ಲಲೂ, ದೋಣಿಯನ್ನು ಕಟ್ಟಿಹಾಕಲೂ ಎಡೆಯಿರಲಿಲ್ಲ. ಎಲ್ಲ ದ್ವೀಪಗಳಲ್ಲಿರುವಂತೆ ಅದರಮೇಲೂ ದಟ್ಟವಾಗಿ ಹೆಮ್ಮರಗಳು ಬೆಳೆದಿದ್ದವು. ಅದು ಐದು ಆರು ಮೈಲಿ ಉದ್ದವೂ, ಅರ್ಧಮೈಲಿಗಿಂತ ಹೆಚ್ಚು ಅಗಲವೂ ಇದ್ದಿರಬಹುದು.

ಸುಮಾರು ಹದಿನೈದು ನಿಮಷಗಳ ತನಕ ಎಂದು ತೋರುತ್ತದೆ. ನಾನು ಕಿವಿಯೆತ್ತಿ ಸುಮ್ಮನಿದ್ದೆ. ನಾನು ಗಂಟೆಗೆ ನಾಲ್ಕು ಐದು ಮೈಲಿಗಳ ವೇಗದಲ್ಲಿ ತೇಲುತ್ತಲೇನೋ ಇದ್ದೆ ; ಹಾಗೆ ನಿಮಗದು ತೋರುವುದೇ ಇಲ್ಲ, ನಿಮಗೆ ನೀರಮೇಲೆ ಇದ್ದಲ್ಲೆ ನಿಂತಿರು ವಂತೆ ಅನುಭವವಾಗುತ್ತದೆ. ಯಾವುದಾದರೂ ಒಂದು ಕೊಳೆಯ ಇಣುಕು ನಿಮ್ಮ ಪಕ್ಕ ದಲ್ಲಿ ಜಾರಿದಂತೆ ಕಂಡರೆ, ನೀವು ಎಷ್ಟು ವೇಗವಾಗಿ ಚಲಿಸುತ್ತಿರುವಿರೆಂಬುದೇ ನಿಮಗೆ ತಿಳಿಯುವುದಿಲ್ಲ. ನೀವು ಉಸಿರು ಕಟ್ಟುತ್ತೀರಿ, ಎಲಾ ನನ್ನ ! ಆ ಕೊಳೆ ಎಷ್ಟು ದುಡುಕಿ ನಿಂದ ನೀರನ್ನು ಸೀಳುತ್ತಿದೆ ಎಂದು ಯೋಚಿಸುತ್ತೀರಿ. ರಾತ್ರಿಯಹೊತ್ತು ಇಬ್ಬನಿ ಯೊಳಗೆ ನೀವು ಸೇರಿಹೋಗಿರುವಾಗ ಆ ಒಂಟಿತನದ ದುಗುಡದ ಅನುಭವ ನಿಮಗೆ ಬರುವುದಿಲ್ಲ ಎಂದು ಯೋಚಿಸುವುದಾದರೆ, ನೀವು ಒಂದು ಸಲ ಪ್ರಯತ್ನಮಾಡಿ ನಿಮಗೇ ಗೊತ್ತಾಗುತ್ತದೆ.

ಆಮೇಲೆ ಸುಮಾರು ಅರ್ಧಗಂಟೆಯತನಕ ನಾನು ಆಗೀಗ ಬೊಬ್ಬೆಹಾಕುತ್ತಲೇ ಇದ್ದೆ. ಕಟ್ಟಕಡೆಗೆ ನನಗೆ ಬಲುದೂರದಿಂದ ಉತ್ತರ ಕೇಳಿಸಿತು. ನಾನದರ ನೇರ ಹೋಗಲು ಪ್ರಯತ್ನಿಸಿದೆ; ಅದು ನನಗೆ ಸಾಧ್ಯವಾಗಲಿಲ್ಲ. ಕೂಡಲೇ ನಾನು ಮುಂಚಾಚು ಗಳ ಪೊದೆಯೊಂದನ್ನು ಹೊಕ್ಕಿರುವುದು ನಿಶ್ಚಯವೆನಿಸಿತು. ಏಕೆಂದರೆ ನನ್ನ ಇಕ್ಕೆಲ ದಲ್ಲೂ ಅವುಗಳ ತುಸು ಮಬ್ಬಾದ ಇಣುಕುನೋಟ ನನಗೆ ಕಂಡಬಂತು–ಕೆಲವೊಮ್ಮೆ ಆ ನಡುವೆ ಹಾದುಹೋಗುತ್ತಿರುವ ಒಂದು ಇಕ್ಕಟ್ಟಾದ ಕಾಲುವೆಯೂ, ಕೆಲವು ನನ್ನ ಕಣ್ಣಿಗೆ ಬೀಳದ ಯಾವಯಾವುದೋ ವಸ್ತುಗಳೂ ಇದ್ದವು. ಅವು ಇದ್ದುದು ಹೇಗೆ ತಿಳಿಯಿತೆಂದರೆ, ಹೊನಲಿನ ನೀರು ನುಗ್ಗಿ ದಡಗಳಮೇಲೆ ಬೆಳೆದಿದ್ದ ಪೊದೆಗಿದೆಗಳಮೇಲೆ ಅಪ್ಪಳಿಸುತ್ತಿದ್ದುದು ನನಗೆ ಕೇಳಿಸಿತು. ಆ ಕಟ್ಟೆಗಳ ನೆಲೆಯಲ್ಲಿ ಸೇರಿಕೊಂಡು ಹಾಕು ತ್ತಿದ್ದ ಬೊಬ್ಬೆಗಳಲ್ಲಿ ಅಷ್ಟು ಪೋಲಾಗಲಿಲ್ಲ. ನಾನು ಅವುಗಳನ್ನು ತಲುಪಲು ಸ್ವಲ್ಪ

ಹೊತ್ತು ಪ್ರಯತ್ನವನ್ನೇನೋ ಮಾಡಿದೆ. ಆದರೆ ಕೊಳ್ಳಿದೆವ್ವವನ್ನು ಹಿಡಿಯುವುದಕ್ಕಿಂತಲೂ ಅದು ಪ್ರಯಾಸಕರವಾಗಿತ್ತು. ಧ್ವನಿ ಅಷ್ಟು ಬೇಗ ನುಣುಚಿಕೊಳ್ಳುವುದೂ ಅಷ್ಟು ಸಲ ಸ್ಥಳ ಬದಲಾಯಿಸುವುದೂ ನಿಮಗೆ ತಿಳಿದ ವಿಷಯವೇ ಅಲ್ಲ. ನಡುಗಡ್ಡೆಗಳನ್ನು ನದಿಯಾಚೆಗೆ ಕಿತ್ತೊಗೆಯದಿರಲು ನಾನು ನಾಲ್ಕೈದುಬಾರಿ ಬಲು ಜೋರಾಗಿ ನೀರನ್ನು ಬಗಿದು ದಡದಿಂದ ದೂರ ಸರಿಯಬೇಕಾಯಿತು; ಆದ್ದರಿಂದ ತೆಪ್ಪ ಪದೇಪದೇ ದಡಕ್ಕೆ ನುಗ್ಗುತ್ತಿರಬೇಕೆಂದೂ, ಇಲ್ಲವಾದರೆ ಇನ್ನೂ ಮುಂದೆ ಹೋಗುತ್ತಿತ್ತೆಂದೂ ಕೇಳ್ಮೆಯಾಚೆಗೆ ಮರೆಯಾಗುತ್ತಿತ್ತೆಂದೂ ತೀರ್ಮಾನಿಸಿದೆ–ಅದೂ ನನಗಿಂತಲೂ ಹೆಚ್ಚು ವೇಗವಾಗಿ ತೇಲುತ್ತಿತ್ತು.

ಸರಿ. ಆಮೇಲಾಮೇಲೆ ನಾನು ಮತ್ತೆ ವಿಶಾಲ ನದಿಯಲ್ಲಿರುವಂತೆ ನನಗೆತೋರಿತು. ಆದರೆ ಎಲ್ಲಿಂದಲೂ ನನಗೆ ಬೊಬ್ಬೆಯು ಸುಳಿವೇ ಕೇಳಿಬರಲಿಲ್ಲ, ಜಿಮ್ಮನಿಗೆ ನಿದ್ದೆ ಬಂದಿರಬಹುದೆಂದೂ, ಕ್ಷೇಮವಾಗಿದ್ದಾನೆಂದೂ ಎಣಿಸಿದೆ. ನಾನೂ ಚೆನ್ನಾಗಿದ್ದೆ ಆದರೆ ದಣಿದಿದ್ದೆ; ಆದ್ದರಿಂದ ಕಿರುದೋಣಿಯಲ್ಲಿ ಮಲಗಿಕೊಂಡೆ, ಇನ್ನು ಯಾವುದಕ್ಕೂ ಚಿಂತಿಸುವುದಿಲ್ಲ ಎಂದುಕೊಂಡೆ. ನನಗೆ ನಿದ್ದೆಮಾಡುವುದು ಬೇಕಾಗಿರಲಿಲ್ಲ, ನಿಜ; ಆದರೂ ನನ್ನ ಹತೋಟಿಗೆ ಮೀರಿದಷ್ಟು ನಿದ್ದೆ ನನಗೆ ಬರುವುದರಲ್ಲಿತ್ತು; ಆದ್ದರಿಂದ ಒಂದು ನಿಮಿಷದವರೆಗೆ ಕಣ್ಣು ಮುಚ್ಚೋಣ ಎಂದು ಯೋಚಿಸಿದೆ.

ಆದರೆ ಅದು ಕಿರುನಿದ್ದೆಗಿಂತಲೂ ಹೆಚ್ಚಿನದಾಗಿತ್ತೆಂದು ನನ್ನೆಣಿಕೆ; ಏಕೆಂದರೆ ನನಗೆ ಎಚ್ಚರವಾದಾಗ ನಕ್ಷತ್ರಗಳು ಪ್ರಕಾಶಮಾನವಾಗಿ ಥಳಥಳಿಸುತ್ತಿದ್ದವು, ಇಬ್ಬನಿ ಪೂರ್ತಿ ತೊಲಗಿತ್ತು. ಹಿಂದುಮುಂದಾಗಿ ಒಂದು ದೊಡ್ಡ ತಿರುವಿನಲ್ಲಿ ನಾನು ತೂರುತ್ತಿದ್ದೆ, ನಾನೆಲ್ಲಿದ್ದೇನೆಂಬುದೇ ಮೊದಲು ನನಗೆ ತಿಳಿಯಲಿಲ್ಲ; ಕನಸು ಕಾಣುತ್ತಿದ್ದೇನೆ ಎಂದು ಭಾವಿಸಿದೆ; ನನಗೆ ನೆನಪು ಹಿಂದಿರುಗಲು ಮೊದಲಾದಾಗ, ಅವು ಕಳೆದ ವಾರದ ತಳದಿಂದ ಮಬ್ಬಾಗಿ ಬರುತ್ತಿರುವಂತೆ ತೋರಿತು.

ಈ ಸ್ಥಳದಲ್ಲಿ ಅದು ಅತಿ ದೊಡ್ಡ ನದಿಯಾಗಿತ್ತು, ಎರಡೂ ದಡಗಳಮೇಲೆ ಅತಿ ದಟ್ಟವಾದ ಕಾಡು ಬೆಳೆದಿತ್ತು. ತಾರೆ ಬೆಳಕಿನಲ್ಲಿ ನನಗೆ ಕಂಡಮಟ್ಟಿಗೆ ಅದೊಂದು ಗಟ್ಟಿಗೋಡೆಯಂತೆಯೇ ಇತ್ತು. ಕೆಳಹೊನಲಾಚೆಗೆ ನಾನು ಕಣ್ಣು ಸುಳಿಸಿದೆ, ನೀರ ಮೇಲೊಂದು ಕಪ್ಪುಮಚ್ಚೆ ಕಾಣಿಸಿತು. ಅದರೆಡೆಗೆ ನುಗ್ಗಿದೆ. ಹತ್ತಿರಕ್ಕೆ ಹೋದಾಗ ಅದು ಕೆಲವು ಕೊಯ್ದ ತೊಲೆಗಳನ್ನು ಬಿಗಿದ ಒಂದು ಕಟ್ಟಲ್ಲದೆ ಮತ್ತೇನೂ ಆಗಿರಲಿಲ್ಲ, ಬಳಿಕ ಇನ್ನೊಂದು ಮಚ್ಚೆಯನ್ನು ಕಂಡೆ. ಅದನ್ನು ಬೆನ್ನುಹತ್ತಿದೆ; ಆಮೇಲೆ ಇನ್ನೊಂದು ಈ ಸಲ ನನ್ನೆಣಿಕೆ ಸರಿಯಾಯಿತು. ಅದೇ ತೆಪ್ಪವಾಗಿತ್ತು.

ನಾನು ಅದನ್ನು ಹಿಡಿದುಕೊಂಡಾಗ, ಜಿಮ್ ತನ್ನ ಮಂಡಿಗಳ ನಡುವೆ ತಲೆಬಾಗಿ ಕುಳಿತು ತನ್ನ ಬಲತೋಳನ್ನು ಮುಂಭಾಗದ ಹುಟ್ಟಿನಮೇಲೆ ಇಳಿಯಬಿಟ್ಟು ನಿದ್ರಾಧೀನನಾಗಿದ್ದನು. ಇನ್ನೊಂದು ಹುಟ್ಟು ಮುರಿದುಹೋಗಿತ್ತು, ತೆಪ್ಪ ಎಲೆಗಳಿಂದಲೂ

ಕೊಂಬೆಗಳಿಂದಲೂ ಹೊಲಸಿನಿಂದಲೂ ಹದಗೆಟ್ಟಿತ್ತು. ಅದಕ್ಕೆ ಬಲು ಕಷ್ಟಕಾಲ ಒದಗಿದ್ದುದು ನಿಜವೆನ್ನಿಸಿತು.

ನಾನು ತಡಮಾಡದೆ ತೆಪ್ಪವನ್ನು ಹತ್ತಿ ಜಿಮ್ಮನ ಮೂಗಿನ ಕೆಳಗೇ ಮಲಗಿ ಕಾಲು ನೀಡಿದೆ; ನನ್ನ ಮುಷ್ಟಿಯನ್ನು ಅವನ ಮುಖದೆದುರಿಗೆ ಹಿಡಿದು ಹೇಳಿದೆ:

"ಓಯ್, ಜಿಮ್, ನಾನು ನಿದ್ದೆಮಾಡುತ್ತಿದ್ದೇನೆಯೆ? ನೀನೇಕೆ ನನ್ನನ್ನು ಎಬ್ಬಿಸಲಿಲ್ಲ?"

"ಅಯ್ಯೋ ನನ್ನ—ನೀನೆ, ಹಕ್? ನೀನು ಸತ್ತಿಲ್ಲ, ಮುಳುಗಿಹೋಗಿಲ್ಲ–ಮತ್ತೆ ಬಂದೆಯಾ ನೀನು? ಇದನ್ನು ನಂಬುವುದಕ್ಕೇ ಆಗುವುದಿಲ್ಲ, ಚಿನ್ನಾ. ಇದನ್ನು ನಂಬುವುದಕ್ಕೆ ಆಗುವುದಿಲ್ಲ, ಎಲ್ಲಿ, ನಿನ್ನನ್ನು ನೋಡುತ್ತೇನೆ, ಮಗು, ನನ್ನನ್ನು ಮುಟ್ಟುತ್ತೇನೆ, ಇಲ್ಲ ನೀನು ಸತ್ತಿಲ್ಲ! ನೀನು ಮರಳಿ ಬಂದಿರುವೆ, ಬದುಕಿ ದೃಢಕಾಯನಾಗಿ! ಅದೇ ಹಳೆಯ ಹಕ್-ಅದೇ ಹಳೆಯ ಹಕ್, ದೈವಕೃಪೆ!"

"ನಿನಗೇನಾಗಿದೆ ಜಿಮ್? ನೀನಿನ್ನೂ ಕುಡಿಯುತ್ತಿದ್ದೀಯಾ?"

"ಕುಡಿತವೆ? ನಾನು ಕುಡಿಯುತ್ತಿದ್ದೇನೆಯೆ? ಕುಡಿಯುವ ಒಂದಾದರೂ ಅವಕಾಶ ನನಗಿತ್ತೆ?"

"ಸರಿ ಹಾಗಾದರೆ, ನೀನು ಹೀಗೆ ಯದ್ವಾತದ್ವಾ ಮಾತಾಡಲು ಕಾರಣವೇನು?"

"ನನ್ನ ಮಾತು ಯದ್ವಾತದ್ವಾ ಆಗಿರುವುದು ಹೇಗೆ?"

"ಹೇಗೆ? ಏಕೆ, ನೀನು ನಾನು ಮರಳಿ ಬಂದದ್ದು ಮುಂತಾದ ಆ ವಿಷಯಗಳನ್ನೆಲ್ಲ ಎತ್ತಿಕೊಂಡು, ನಾನು ಹೊರಟೇಹೋಗಿರುವೆನೆಂಬಂತೆ ಮಾತಾಡುತ್ತಿಲ್ಲವೆ?"

"ಹಕ್–ಹಕ್‌ಫಿನ್, ನೀನು ನನ್ನ ಕಣ್ಣನ್ನೇ ನೋಡು; ನನ್ನ ಕಣ್ಣನ್ನೇ ನೋಡು; ನೀನು ಹೊರಟುಹೋಗಲಿಲ್ಲವೆ?"

"ಹೊರಟುಹೋಗುವುದೆ? ಏಕೆ, ಈ ಭೂಮಿಯ ಮೇಲೆ ನಿನ್ನ ಮಾತಿಗೆ ಅರ್ಥವೇನು? ನಾನೆಲ್ಲಿಯೂ ಹೋಗಿರಲಿಲ್ಲ, ನಾನೆಲ್ಲಿಗೆ ಹೋಗುವುದು?"

"ಹಾಗಾದರೆ ಇಲ್ಲಿ ನೋಡು, ಒಡೆಯ ಇದರಲ್ಲೇನೋ ತಪ್ಪಿದೆ, ಏನೋ ತಪ್ಪಿದೆ. ನಾನು ನಾನೆ, ಅಥವಾ ನಾನು ಯಾರು? ನಾನು ಇಲ್ಲಿದ್ದೇನೆಯೆ; ಅಥವಾ ಎಲ್ಲಿದ್ದೇನೆ? ಈಗ ನನಗೆ ತಿಳಿಯಬೇಕಾಗಿದ್ದದು."

"ಸರಿ, ನೀನು ಇರುವುದಿಲ್ಲೇ ಎಂಬುದನ್ನು ನಾನು ಚೆನ್ನಾಗಿ ಬಲ್ಲೆ: ಆದರೆ ಜಿಮ್ ನೀನೊಬ್ಬ ಗೋಜಲು ಮೆದುಳಿನ ಮುದಿದಡ್ಡನೆಂಬುದನ್ನೂ ಬಲ್ಲೆ ನಾನು."

"ನಾನಿದ್ದೇನೆ, ಇದ್ದೇನೆ ನಾನು? ಹಾಗಾದರೆ ನನಗೆ ಇದಕ್ಕೆ ಉತ್ತರ ಕೊಡು; ದೋಣಿ-ಕಟ್ಟುವ ನೆಲೆಯೆಡೆಗೆ ಧಾವಿಸಲು ನೀನು ಕಿರುದೋಣಿಯಿಂದ ಹಗ್ಗವನ್ನು ಬೀಸಲಿಲ್ಲವೆ?"

"ಇಲ್ಲವಲ್ಲ; ನಾನು ಹಾಗೆ ಮಾಡಲಿಲ್ಲ. ಯಾವ ದೋಣಿ-ಕಟ್ಟುವ ನೆಲೆ? ನಾನು ಯಾವ ದೋಣಿ-ಕಟ್ಟುವ ನೆಲೆಯನ್ನೂ ಕಂಡಿಲ್ಲ."

"ನೀನು ಯಾವ ದೋಣಿ-ಕಟ್ಟುವ ನೆಲೆಯನ್ನು ನೋಡಲಿಲ್ಲ? ಇಲ್ಲಿ ನೋಡು, ಹಗ್ಗ ಬಿಚ್ಚಿಹೋಗಿ ತೆಪ್ಪ ಮೊರೆಯುತ್ತಾ ಕೆಳನದಿಗೆ ಜಾರಿ ಹೋಗಲಿಲ್ಲವೆ, ನಿನ್ನನ್ನೂ ಕಿರುದೋಣಿಯಲ್ಲಿ ಇಬ್ಬನಿಯೊಳಗೆ ಹಿಂದೆ ಬಿಟ್ಟು ಹೋಗಲಿಲ್ಲವೆ?"

"ಯಾವ ಇಬ್ಬನಿ?"

"ಏಕೆ, ಅದೇ ಇಬ್ಬನಿ!—ರಾತ್ರಿಯೆಲ್ಲಾ ಇಲ್ಲೆಲ್ಲಾ ಸುರಿಯುತ್ತಿತ್ತಲ್ಲ ಆ ಇಬ್ಬನಿ, ನಮ್ಮಲ್ಲೊಬ್ಬರು ದಾರಿತಪ್ಪಿ, ಇನ್ನೊಬ್ಬನ ಸ್ಥಿತಿ ತಾನೆಲ್ಲಿರುವೆನೆಂಬುದೇ ನನಗೆ ತಿಳಿಯದೆ ದಾರಿ ತಪ್ಪಿದಷ್ಟೇ ಕಷ್ಟಮಯವಾಗಿ ನಾವು ನಡುಗಡ್ಡೆಗಳಲ್ಲಿ ಸಿಕ್ಕಿಕೊಳ್ಳುವವರೆಗೂ ನೀನು ಬೊಬ್ಬೆ ಹಾಕಲಿಲ್ಲವೆ, ನಾನೂ ಬೊಬ್ಬೆ ಹಾಕಲಿಲ್ಲವೆ? ನಾನು ಮತ್ತೆ ನಡುಗಡ್ಡೆಗಳ ಜಾಲದಲ್ಲಿ ಮತ್ತೆ ಸಿಕ್ಕಿಕೊಂಡು ಮುಳುಗಿಯೇ ಹೋದೆ ಎನ್ನುವಷ್ಟರವರೆಗೆ ತುಂಬಾ ಕಷ್ಟಪಡಲಿಲ್ಲವೆ? ಆದದ್ದು ಹೀಗಲ್ಲವೆ, ಒಡೆಯ—ಹೀಗಲ್ಲವೋ? ನೀನು ನನಗೆ ಅದಕ್ಕೆ ಉತ್ತರ ಕೊಡು."

"ನನಗೆ ಇದು ಅತಿಯಾಯಿತು, ಜಿಮ್. ನಾನು ಯಾವ ಇಬ್ಬನಿಯನ್ನೂ. ನಡುಗಡ್ಡೆಗಳನ್ನೂ, ಕೋಟಲೆಗಳನ್ನೂ. ಕಡೆಗೆ ಯಾವುದನ್ನೂ ನೋಡಿಲ್ಲ. ಸುಮಾರು ಹತ್ತು ನಿಮಿಷಗಳ ಹಿಂದೆ ನಿನಗೆ ನಿದ್ದೆ ಬಂತಲ್ಲ ಅಲ್ಲಿಯತನಕ ಇಡೀ ರಾತ್ರಿ ನಾನಿಲ್ಲಿ ನಿನ್ನೊಂದಿಗೆ ಮಾತಾಡುತ್ತಾ ಕುಳಿತಿದ್ದೇನೆ; ನಾನು ಮಾಡಿದ್ದು ಇದನ್ನೇ ಎಂದು ನನ್ನೆಣಿಕೆ, ನೀನು ಆ ವೇಳೆಯಲ್ಲಿ ಕುಡಿದಿರುವುದು ಸಾಧ್ಯವಿರಲಿಲ್ಲ; ಆದ್ದರಿಂದ ನೀನು ಕನಸು ಕಾಣುತ್ತಿದ್ದೀಯೆ."

"ಅದರ ಮನೆ ಹಾಳಾಗ, ಹತ್ತು ನಿಮಿಷಗಳಲ್ಲಿ ಅಷ್ಟೆಲ್ಲವನ್ನೂ ನಾನು ಕನಸು ಕಾಣುವುದು ಹೇಗೆ?"

"ಬಿಡು ಆ ಮಾತನ್ನು, ನೀನು ಕಂಡದ್ದು ಕನಸೇ, ಏಕೆಂದರೆ ಇದರಲ್ಲಿ ಯಾವುದೂ ನಡೆಯಲೇ ಇಲ್ಲ."

"ಇರಬಹುದು, ಹಕ್, ಅದೆಲ್ಲವೂ ನನಗೆ ಎಷ್ಟು ದಿಟವೆನ್ನಿಸಿದೆ—"

"ಅದು ಹೇಗಿದ್ದರೂ ಒಂದೇ. ಅದು ಪೊಳ್ಳು. ನನಗೆ ಗೊತ್ತು,

ಏಕೆಂದರೆ ನಾನು ಅಷ್ಟು ಕಾಲವೂ ಇಲ್ಲೇ ಇದ್ದೇನೆ,"

ಜಿಮ್ ಸುಮಾರು ಐದು ನಿಮಿಷಗಳ ತನಕ ಏನೂ ಹೇಳಲಿಲ್ಲ, ಅದನ್ನೇ ಯೋಚಿಸುತ್ತ ಕುಳಿತ. ಆ ಮೇಲೆ ಹೇಳಿದ:

"ಸರಿಯಾಯಿತು. ನಾನು ಕಂಡದ್ದು ಕನಸೇ ಎನ್ನುತ್ತೇನೆ, ಹಕ್; ನಾನು ಅಂಥಾ ಅತ್ಯಂತ ಪ್ರಭಾವಶಾಲಿಯಾದ ಕನಸನ್ನು ಹಿಂದೇಧಾದರೂ ಕಂಡಿದ್ದರೆ ನನಗೆ ಬೇರೆ

ಹೆಸರಿಡು. ಇದರಂತೆ ನನ್ನನ್ನು ಸುಸ್ತುಮಾಡಿದ ಯಾವೊಂದು ಕನಸನ್ನೂ ನಾನು ಹಿಂದೆಂದೂ ಕಂಡಿಲ್ಲ."

"ಓ, ಸರಿ, ಅದೆಲ್ಲಾ ಸರಿಯೇ ; ಏಕೆಂದರೆ ಕೆಲವು ಸಲ ಕನಸು ಉಳಿದೆಲ್ಲದರಂತೆ ಎಂಥವರನ್ನೂ ಸುಸ್ತುಮಾಡಿಯೇ ತೀರುತ್ತದೆ, ಆದರೆ ಇದೊಂದು ಹೊಡೆತದ ಕನಸು. ಅದರ ವಿಷಯವೆಲ್ಲವನ್ನೂ ನನಗೆ ಹೇಳು, ಜಿಮ್."

ಬಳಿಕ ಜಿಮ್ ಮೊದಲುಮಾಡಿದ, ಉದ್ದಕ್ಕೂ ನಡೆದುದೆಲ್ಲವನ್ನೂ, ಅದು ನಡೆದಂತೆಯೇ ನನಗೆ ಹೇಳಿದ ; ಅದಕ್ಕೆ ಬಹಳ ಬಣ್ಣವನ್ನೂ ಕಟ್ಟಿದ ; ಅಷ್ಟೆ. ತಾನು ಅದನ್ನು ಒಳಹೊಕ್ಕು ಅದಕ್ಕೆ ವ್ಯಾಖ್ಯಾನ ಮಾಡಬೇಕಾಗಿದೆಯೆಂದೂ, ಏಕೆಂದರೆ ಅದೊಂದು ಮುನ್ನೆಚ್ಚರಿಕೆಯಾಗಿ ಒದಗಿದ್ದುದೆಂದೂ ಅವನು ಹೇಳಿದ. ಮೊದಲನೆಯ ದೋಣಿ-ಕಟ್ಟುವ ನೆಲೆ, ನಮಗಿಷ್ಟು ಒಳ್ಳೆಯದನ್ನ ಮಾಡಲೆಳಸುವ ಮನುಷ್ಯನನ್ನು ಪ್ರತಿನಿಧಿಸಿತ್ತೆಂದೂ, ಆದರೆ ಪ್ರವಾಹ ನಮ್ಮನ್ನು ಅವನಿಂದ ದೂರಕ್ಕೆಳೆದೊಯ್ವ ಇನ್ನೊಬ್ಬ ಮನುಷ್ಯನೆಂದೂ ಅವನು ಹೇಳಿದ. ಬೊಬ್ಬೆಗಳು ನಮಗೆ ಆಗಾಗ ಬಂದ ಮುನ್ನೆಚ್ಚರಿಕೆಗಳೆಂದೂ ನಾವು ಅವುಗಳನ್ನು ಅರ್ಥಮಾಡಿಕೊಳ್ಳಲು ಶ್ರಮಪಡದಿದ್ದರೆ ಅವು ನಮ್ಮನ್ನು ದುರದೃಷ್ಟದಿಂದ ರಕ್ಷಿಸುವ ಬದಲು, ಅದರ ಬಳಿಗೇ ತಳ್ಳಿಕೊಂಡು ಹೋಗುತ್ತವೆ ಎಂದೂ ಅವನ ಅಭಿಪ್ರಾಯವಾಗಿತ್ತು, ದೋಣಿ ಕಟ್ಟುವ ನೆಲೆಗಳ ಜಾಲಗಳು ನಾವು ಎಲ್ಲಾ ಬಗೆಯ ತುಂಟರು ಜಗಳಗಂಟಿಗಳೊಂದಿಗೆ ಸಿಕ್ಕಿಬಿದ್ದು ಪಡಬೇಕಾಗುವ ಕಷ್ಟಜಾಲಗಳು. ನಮ್ಮ ಕೆಲಸ ನಮಗಿರಲೆಂದುಕೊಂಡು ನಾವು, ಎದುರು ವಾದಿಸದೆ ಅವರನ್ನು ಕೆರಳಿಸದಿದ್ದರೆ, ಸುಸೂತ್ರವಾಗಿ ಇಬ್ಬನಿಯಿಂದ ಪಾರಾಗಿ ಸ್ವತಂತ್ರ ಪ್ರದೇಶಗಳನ್ನು ಪ್ರತಿನಿಧಿಸುವ ನಿಷ್ಕಂಟಕ ಮಹಾನದಿಯನ್ನು ಸೇರಬಹುದು, ಆಮೇಲೆ ನಮಗೆ ಯಾವ ತೊಂದರೆಯೂ ಇರುವುದಿಲ್ಲ.

ನಾನು ತೆಪ್ಪವನ್ನು ಹತ್ತಿದ ಸಮಯಕ್ಕೆ ಸರಿಯಾಗಿ ಬಲು ಕಪ್ಪುಮುಗಿಲು ಕವಿದಿತ್ತು, ಈಗದು ಮತ್ತೆ ಚೆದರುತ್ತ ತಿಳಿವಾಗುತ್ತಿತ್ತು.

"ಓ, ಬಿಡು, ಅದೆಲ್ಲಕ್ಕೂ ಅದರಮಟ್ಟಿಗೆ ಸಾಕಷ್ಟು ಚೆನ್ನಾಗಿಯೇ ವ್ಯಾಖ್ಯಾನ ಮಾಡಿದ್ದಾಗಿದೆ, ಜಿಮ್" ಎಂದೆ ನಾನು ; "ಆದರೆ ಇವು ಏನನ್ನು ಪ್ರತಿನಿಧಿಸುವುವು ?"

ತೆಪ್ಪದ ಮೇಲಿದ್ದ ಎಲೆಗಳನ್ನೂ ಕಸವನ್ನೂ ಮುರಿದುಬಿದ್ದಿದ್ದ ಹುಟ್ಟನ್ನೂ ತೋರಿಸುತ್ತ ಆಡಿದ ಮಾತಿದು. ನೀವು ಅವುಗಳನ್ನೀಗ ಅತಿಸ್ಪಷ್ಟವಾಗಿ ನೋಡಬಹುದಿತ್ತು.

ಜಿಮ್ ಆ ತಿಪ್ಪೆಯನ್ನು ನೋಡಿದನು, ಬಳಿಕ ನನ್ನನ್ನು ನೋಡಿದನು, ಮತ್ತೆ ತಿಪ್ಪೆಯ ಕಡೆಗೆ ಕಣ್ಣು ಸುಳಿಸಿದನು. ಕನಸು ಅವನ ತಲೆಯಲ್ಲಿ ಬಲು ಭದ್ರವಾಗಿ ನಾಟಿತ್ತು ; ಅದನ್ನು ಕದಲಿಸಿ ಒಗೆಯುವುದೂ, ಅದರ ಸ್ಥಾನದಲ್ಲಿ ನಿಜಾಂಶಗಳನ್ನು ನೆಲೆಗೊಳಿಸುವುದೂ ಅವನಿಗೆ ಸಾಧ್ಯವಾಗಲಿಲ್ಲ, ಇದರ ಬಗೆಗೆ ಸರಿಯಾದ ತಿಳಿವು ತನಗೆ

ಬಂದಾಗ ಅವನು ಒಂದಿಷ್ಟೂ ನಗದೆ ನಟ್ಟದಿಟ್ಟಿಯಲ್ಲಿ ನನ್ನನ್ನು ನೋಡುತ್ತಾ ಹೀಗೆ ಹೇಳಿದನು :

"ಅವು ಏತರ ಪ್ರತಿನಿಧಿಗಳೆ ? ನಾನು ನಿನಗೆ ಹೇಳಲಿದ್ದೇನೆ. ದಂಡಿದು ದುಡಿದು ನಿನಗಾಗಿ ಕೂಗಿ ಕೂಗಿ ಬಲು ದಣಿದು ನಾನು ನಿದ್ದೆಯಲ್ಲಿ ಮುಳುಗಿದಾಗ ನಿನ್ನನ್ನು ಕಳೆದು ಕೊಂಡೆನಲ್ಲ ಎಂದು ನನ್ನೆದೆ ಒಡೆದುಹೋಗುವುದರಲ್ಲಿತ್ತು. ನನಗಾಗಲೀ ನನ್ನ ದೋಣಿ ಗಾಗಲೀ ಯಾವ ಗತಿಯೊದಗಿತೆಂದು ಯೋಚಿಸಲೇ ಇಲ್ಲ. ನನಗೆ ಎಚ್ಚರವಾದಾಗ ನೋಡಿದರೆ ನೀನು ನನ್ನೆದುರಿಗೆ ಸುರಕ್ಷಿತವಾಗಿ ಬಂದು ಕುಳಿತಿದ್ದೆ, ನನಗೆ ಕಣ್ಣೀರು ಬಂತು. ನಿನಗೆ ನಮಸ್ಕಾರಮಾಡಿ ನಿನ್ನ ಪಾದಕ್ಕೆ ಮುತ್ತಿಡಬೇಕೆಂದಿದ್ದೆ. ಈ ಭಾಗ್ಯ ಕ್ಕಾಗಿ ನಾನು ಅಷ್ಟು ಕೃತಜ್ಞನಾದೆ, ನೀನೋ – ಏನಾದರೊಂದು ಸುಳ್ಳು ಹೇಳಿ ಹಳೆಯ ಜಿಮ್ಮನ್ನ ಹೆಡ್ಡನಾಗಿ ಮಾಡುವುದೆಂತು ಎಂಬುದೊಂದನ್ನೇ ನೀನು ಯೋಚಿಸುತ್ತಿದ್ದುದು ಅಲ್ಲಿರುವುದಷ್ಟೂ ಕಸ; ಜನ ತಮ್ಮ ಸ್ನೇಹಿತರ ಮೇಲಿಟ್ಟು ಮುಖಭಂಗವಾಗುವಂತೆ ಮಾಡುವುದು ಕಸವನ್ನೇ."

ಇಷ್ಟಲ್ಲದೆ ಮತ್ತೇನನ್ನೂ ಹೇಳದೆ ಅವನು ನಿಧಾನವಾಗಿ ಮೇಲೆದ್ದು ತನ್ನ ಡೇರೆ ಯೊಳಕ್ಕೆ ಹೋದ. ಅಷ್ಟು ಸಾಕಾಗಿತ್ತು. ತನ್ನ ಮಾತನ್ನು ಅವನು ಹಿಂತೆಗೆದುಕೊಳ್ಳು ವಂತೆ ಮಾಡಲು ಅವನ ಪಾದಕ್ಕೆ ನಾನು ಮುತ್ತಿಡಹೋಗುವಷ್ಟು ಕೀಳಾದೆ ನಾನು ಎಂದುಕೊಂಡೆ

ನೀಗ್ರೋ ಒಬ್ಬನಿಗೆ ನಾನು ತಲೆತಗ್ಗಿಸಿಕೊಳ್ಳುವುದಕ್ಕೆ ನಾನು ಸಿದ್ಧವಾಗಬೇಕಾದರೆ ಹದಿನೈದು ನಿಮಿಷ ಹಿಡಿಯಿತು; ಆದರೂ ನಾನು ಅದನ್ನೇ ಮಾಡಿದೆ. ಆಮೇಲೆ ಹಾಗೆ ಮಾಡಿದೆನಲ್ಲ ಎಂದು ನಾನೆಂದೂ ವ್ಯಥೆಪಡಲಿಲ್ಲ. ಆದಾದಮೇಲೆ ನಾನು ಅವ ನನ್ನು ಇನ್ನಾವ ಕುತಂತ್ರಕ್ಕೂ ಒಳಪಡಿಸಲಿಲ್ಲ. ಅವನ ಮನಸ್ಸು ಹಾಗೆ ನೋಯುವು ದೆಂದು ನನಗೆ ಮೊದಲು ತಿಳಿದಿದ್ದರೆ, ನಾನು ಆ ಇದನ್ನೂ ಮಾಡುತ್ತಿರಲಿಲ್ಲ.

## ೧೬

ನಾವು ಹಗಲೆಲ್ಲಾ ನಿದ್ದೆಮಾಡಿದೆವು; ರಾತ್ರಿಯಲ್ಲಿ ಬಲು ಉದ್ದದ ಮೆರವಣಿಗೆ ಯಂತೆ ಸಾಗುತ್ತಿದ್ದ ಒಂದು ಭಾರಿ ಉದ್ದವಾದ ತೆಪ್ಪದ ಹಿಂದೆಯೇ ಹೊರಟೆವು ಅದರ ಒಂದೊಂದು ಕೊನೆಯಲ್ಲೂ ನಾಲ್ಕು ಉದ್ದವಾದ ಕಮಾನುಗಳಿದ್ದವು; ಆದ್ದರಿಂದ ಅದರಲ್ಲಿ ಸುಮಾರು ಮೂವತ್ತು ಮಂದಿ ಇರುವುದು ಸಂಭವ ಎಂದು ತೀರ್ಮಾನಿಸಿದೆವು. ಅದರಮೇಲೆ ಪರಸ್ಪರ ದೂರವಾಗಿ ಐದು ದೊಡ್ಡ ಡೇರಾಗಳೂ ನಡುವೆ ಒಂದು ಶಿಬಿ

ರಾಗ್ನಿಯೂ, ಒಂದೊಂದು ಕೊನೆಯಲ್ಲೂ ಒಂದು ಎತ್ತರವಾದ ಧ್ವಜಸ್ತಂಭವೂ ಇದ್ದವು. ಅದರದ್ದೇ ಒಂದು ಅದ್ಭುತರೀತಿಯಾಗಿತ್ತು. ಅದರಂಥ ಒಂದು ಯಾನಪಾತ್ರದ ಅಂಬಿಗನಾಗಿರುವುದು ಸಾಮಾನ್ಯ ಗಣ್ಯತೆಯಲ್ಲ.

ನಾವೊಂದು ದೊಡ್ಡ ತಿರುವಿನಲ್ಲಿ ತೇಲಿ ಹೋಗುತ್ತಿದ್ದೆವು ; ಮೋಡ ಕವಿದ ರಾತ್ರಿ ಇಳಿದಿತ್ತು, ಸೆಕೆಯಾಯಿತು. ನದಿ ತುಂಬಾ ಅಗಲವಾಗಿತ್ತು, ಅದರ ಇಕ್ಕೆಲಗಳಲ್ಲೂ ದಟ್ಟಡವಿಯ ಗೋಡೆ ಹಬ್ಬಿತ್ತು. ನೀವದರಲ್ಲಿ ಒಂದು ಬಿರುಕನ್ನಾಗಲೀ ಒಂದು ಬೆಳಕನ್ನಾಗಲೀ ಎಂದೂ ಕಾಣುವಂತಿರಲಿಲ್ಲ. ನಾವು ಕೈರೋ ಬಗೆಗೆ ಮಾತಾಡಿಕೊಂಡೆವು, ಆ ಪಟ್ಟಣದ ಹತ್ತಿರಕ್ಕೆ ನಾವು ಹೋದರೂ ನಮಗದು ಕೈರೋ ಎನ್ನುವುದು ಗೊತ್ತಾದೀತೆ ಎಂದು ಶಂಕಿಸಿದೆವು. ಪ್ರಾಯಶಃ ಗೊತ್ತಾಗುವುದಿಲ್ಲ ಎಂದೆ ನಾನು ; ಏಕೆಂದರೆ ಅಲ್ಲಿ ಹತ್ತೇ ಮನೆಗಳಿರುವುದನ್ನು ನಾನು ಕೇಳಿದ್ದೆ. ಮತ್ತು ಅವರು ಯಾರೂ ದೀಪಗಳನ್ನೇ ಹಚ್ಚಿರದಿದ್ದರೆ ನಾವು ಒಂದು ಊರ ಮುಂದೆಯೇ ಹೋಗುತ್ತಿದ್ದೇವೆಂಬುದು ನಮಗೆ ತಿಳಿಯುವುದು ತಾನೆ ಹೇಗೆ? ಮಹಾನದಿಗಳೆರಡೂ ಅಲ್ಲಿ ಸಂಗಮಿಸಿರುವುದಾದರೆ, ನಮಗೆ ತಿಳಿಯುವುದು ಎಂದ ಜಿಮ್. ಆದರೆ ನಾನು ಹೇಳಿದೆ, ಪ್ರಾಯಶಃ ನಾವು ದ್ವೀಪವೊಂದರ ಪಾದವನ್ನು ದಾಟುತ್ತಿದ್ದೇವೆಂದೂ ಮತ್ತೆ ಅದೇ ಹಳೆಯ ನದಿಯನ್ನು ಪ್ರವೇಶಿಸುತ್ತಿದ್ದೇವೆಂದೂ ನಮಗೆ ತೋರಲೂಬಹುದು ಎಂದು. ಅದು ಜಿಮ್ಮನ ಮನಸ್ಸಿನಲ್ಲಿ ಗೊಂದಲವೆಬ್ಬಿಸಿತು ; ನನಗೂ ಹಾಗೆಯೇ ಆಯಿತು. ಆದ್ದರಿಂದ ಪ್ರಶ್ನೆ ಮಾಡುವುದೇನು? ಮೊದಲ ದೀಪ ಕಂಡ ಕೂಡಲೇ ದಡಕ್ಕೆ ಮೀಟಿಕೊಂಡು ಹೋಗು, ಅಪ್ಪ ವ್ಯಾಪಾರಿ-ದೋಣಿಯೊಂದರಲ್ಲಿ ಹಿಂದೆ ಬರುತ್ತಿದ್ದನೆಂದೂ, ಅವನು ವ್ಯಾಪಾರವ್ಯವಹಾರದಲ್ಲಿ ಸಾಚಾಮನುಷ್ಯ ಅವನಿಗೆ ಕೈರೋ ಇಲ್ಲಿಗೆ ಎಷ್ಟುದೂರವೆಂಬುದು ತಿಳಿಯಬೇಕಾಗಿದೆಯೊಂದೂ ಹೇಳು ಎಂದೆ ನಾನು. ಜಿಮ್ಮನಿಗೂ ಅದು ಒಳ್ಳೆಯ ಸಲಹೆಯೆನಿಸಿತು. ಆದ್ದರಿಂದ ನಾವು ಹೊಗೆ ಸೇದುತ್ತಾ ಹಾಗೆಯೇ ಕಾದಿದ್ದೆವು.

ಪಟ್ಟಣಕಾಗಿ ಕಣ್ಣಿಟ್ಟು ನೋಡುತ್ತಿರುವುದೂ, ಅದನ್ನು ನೋಡದೆ ಹೋಗಿ ಬಿಡದಂತಿರುವುದೂ ಇವೆರಡಲ್ಲದೆ ನಮಗೆ ಮಾಡಲು ಬೇರೆಯ ಕೆಲಸವೇ ಇರಲಿಲ್ಲ. ತಾನು ಅದನ್ನು ಕಂಡುಕೊಳ್ಳುವುದು ಬಲು ಖಚಿತವೆಂದೂ, ಇದಕ್ಕೆ ಕಾರಣ ತಾನು ಅದನ್ನು ಕಂಡಕೂಡಲೇ ಸ್ವತಂತ್ರನಾಗುವುದು ಎಂದೂ ; ಒಂದು ವೇಳೆ ತನಗದು ತಪ್ಪಿ ಹೋದರೆ ತಾನು ಮತ್ತೆ ದಾಸ್ಯ ಪ್ರದೇಶವೊಂದನ್ನು ಹೋಗುವುದರಿಂದ ಸ್ವಾತಂತ್ರ್ಯದ ಉಸಿರನ್ನೆ ಎತ್ತುವಂತಿಲ್ಲವೆಂದೂ ಜಿಮ್ ಹೇಳಿದ. ಕ್ಷಣಕ್ಷಣಕ್ಕೂ ಅವನು ಕುಣಿದೆದ್ದು ಹೇಳುತ್ತಿದ್ದನು:

"ಅದಲ್ಲವೆ?"

ಆದರೆ ಅದಲ್ಲ. ಅದೊಂದು ಕೊಳ್ಳಿಯ ದೆವ್ವವೋ ಅಥವಾ ಮಿಂಚು-ಹುಳುಗಳ ಹಾರಾಟವೋ. ಆಗ ಅವನು ಮತ್ತೆ ಕೂರುತ್ತಿದ್ದನು ಹಿಂದಿನಂತೆಯೇ ಅದಕ್ಕಾಗಿ

ಕಾಯುತ್ತಿದ್ದನು. ಬಿಡುಗಡೆಗೆ ಅಷ್ಟು ಹತ್ತಿರ ಬಂದಿರುವುದು ತನಗೆ ಮೈನಡುಕವನ್ನೂ ಜ್ವರವನ್ನೂ ತಂದಿದೆ ಎಂದನವನು. ಅವನು ಇನ್ನೇನು ಸ್ವತಂತ್ರನಾದಂತೆಯೇ ಎಂಬ ಭಾವನೆ ನನ್ನ ಮನಸ್ಸಿಗೆ ಬರತೊಡಗಿದ್ದರಿಂದ ಅವನ ಮಾತನ್ನು ಕೇಳುವುದು ನನಗೂ ಹಾಗೆಯೇ ಮೈನಡುಕವನ್ನೂ ಜ್ವರವನ್ನೂ ತಂದಿತೆಂದು ನಾನು ನಿಮಗೆ ಹೇಳಬಲ್ಲೆ.— ಅದಕ್ಕೆ ಯಾರನ್ನು ದೂರುವುದು? ಯಾರನ್ನೇಕೆ, ನನ್ನನ್ನು. ನಾನು ಅದನ್ನು ಯಾವ ಬಗೆಯಿಂದಾಗಲೀ ಯಾವಮಾರ್ಗದಿಂದಾಗಲೀ ನನ್ನ ಅಂತಸ್ಸಾಕ್ಷಿಯಿಂದ ಹೊರಹಾಕಲಾಗಲಿಲ್ಲ. ನನ್ನ ಚಿತ್ತಶಾಂತಿಯನ್ನು ಕೆಡಿಸುವ ಮಟ್ಟಿಗೆ ಅದು ನನ್ನನ್ನು ಕಾಡಿತು; ನಾನು ಒಂದೇ ಬಳಿ ತೆಪ್ಪನೆ ನಿಲ್ಲಲಾಗಲಿಲ್ಲ. ನಾನು ಮಾಡುತ್ತಿರುವ ಕೆಲಸವಿದೇನೆಂಬುದು ಹಿಂದೆಂದೂ ನನ್ನ ಮನಸ್ಸಿಗೆ ಬಂದಿರಲಿಲ್ಲ. ಅದೀಗ ಹೊಳೆಯಿತು, ನನ್ನಲ್ಲಿ ನೆಲೆಗೊಂಡಿತು, ನನ್ನನ್ನು ಹೆಚ್ಚು ಹೆಚ್ಚಾಗಿ ದಹಿಸತೊಡಗಿತು. ನಾನೇನು ಅವನನ್ನ ತನ್ನ ನ್ಯಾಯವಾದ ಮಾಲಿಕನಿಂದ ಓಡಿಬರುವಂತೆ ಮಾಡಿಲ್ಲವಾದ್ದರಿಂದ ನನ್ನನ್ನು ಯಾರೂ ಆಕ್ಷೇಪಿಸುವಂತಿಲ್ಲ ಎಂದು ನನಗೆ ನಾನೆ ತಿಳಿಯಹೇಳತೊಡಗಿದೆ. ಅದರಿಂದ ಏನೂ ಪ್ರಯೋಜನವಾಗಲಿಲ್ಲ. ನನ್ನ ಆತ್ಮಸಾಕ್ಷಿ ಪ್ರತಿಸಲವೂ "ಅವನು ಸ್ವತಂತ್ರನಾಗಲು ಪರಾರಿಯಾಗುತ್ತಿರುವನೆಂಬುದು ನಿನಗೆ ಗೊತ್ತು, ನೀನು ದಡಕ್ಕೆ ಮೀಟಿಕೊಂಡು ಹೋಗಿ ಯಾರಿಗಾದರೂ ತಿಳಿಸಬೇಕಾಗಿತ್ತು" ಎಂದು ಹೇಳುತ್ತಿತ್ತು. ಹಾಗಿರುವಾಗ ನಾನು ಹೇಗೂ ಬಚಾವಾಗುವುದು ಸಾಧ್ಯವಿರಲಿಲ್ಲ. ಅದು ನನ್ನನ್ನು ಭಾಧಿಸುತ್ತಿತ್ತು ಅಲ್ಲೇ ಆತ್ಮಸಾಕ್ಷಿ ನನಗೆ ಹೇಳಿತು, "ನಿನ್ನ ಕಣ್ಣೆದುರಿಗೇ ತನ್ನ ನೀಗ್ರೋ ಓಡಿಹೋಗುವಂತೆ, ಆ ಬಗೆಗೆ ನೀನು ಒಂದು ಮಾತನ್ನೂ ಆಡದಿರುವಂತೆ ಆ ಒಡವೆ ಮಿ, ವ್ಯಾಟ್‌ಸನ್ನಳಾದರೂ ನಿನಗೆ ಮಾಡಿದ್ದೇನು ?" ಅಷ್ಟು ನಿಕೃಷ್ಟವಾಗಿ ನೀನು ಅವಳನ್ನು ಪರಿಗಣಿಸಲು ಆ ಬಡ ಮುದುಕಿ ನಿನಗೆ ಮಾಡಿದ್ದಾದರೂ ಏನು? ಏಕೆ, ಅವಳು ನಿನಗೆ ನಿನ್ನ ಪುಸ್ತಕ ಓದುವುದನ್ನು ಕಲಿಸಲು ಪ್ರಯತ್ನಿಸಿದಳು, ನಿನಗೆ ನಿನ್ನ ನಡತೆಯನ್ನು ಕಲಿಸಲು ಪ್ರಯತ್ನಿಸಿದಳು, ತಾನು ಬಲ್ಲ ಎಲ್ಲ ವಿಧಗಳಲ್ಲೂ ನಿನಗೆ ಒಳ್ಳೆಯದನ್ನು ಮಾಡಲು ಪ್ರಯತ್ನಿಸಿದಳು. ಅವಳು ಮಾಡಿದ್ದು ಅದನ್ನು."

ಎಂಥಾ ನೀಚ ಎಂಥಾ ಪಾಪಿ ನಾನು, ನಾನು ಸತ್ತಿದ್ದರಾಗಿತ್ತು ಎಂದು ನನಗೆ ಖಂಡಿತವಾಗಿಯೂ ಅನಿಸಿತು. ನನ್ನನ್ನು ನಾನೇ ಶಪಿಸಿಕೊಳ್ಳುತ್ತ ತೆಪ್ಪದ ಮೇಲೆ ನಾನು ತಲ್ಲಣಗೊಂಡು ಇಲ್ಲಿಂದಲ್ಲಿಗೆ ಟಳಾಯಿಸುತ್ತಿದ್ದೆ, ಜಿಮ್ಮನೂ ತಲ್ಲಣಗೊಂಡು ಅಲ್ಲಿಂದಿಲ್ಲಿಗೆ ನನ್ನ ಪಕ್ಕದಲ್ಲೇ ಟಳಾಯಿಸುತ್ತಿದ್ದ. ನನಗಾಗಲೀ ಅವನಿಗಾಗಲೀ ಸ್ವಸ್ಥವಾಗಿದ್ದುಬಿಡುವುದು ಸಾಧ್ಯವಾಗಲಿಲ್ಲ. ಪ್ರತಿಸಲವೂ ಅವನು "ಅದು ಕೈರೋ !" ಎಂದು ಹಿಗ್ಗಿ ಕುಣಿದು ಹೇಳಿದಾಗಲೆಲ್ಲ, ಅದು ನನ್ನನ್ನು ಗುಂಡಿನೇಟಿನಂತೆ ಭೇದಿಸಿಕೊಂಡು ಹೋಗುತ್ತಿತ್ತು. ಅದು ಕೈರೋವೆ ಆಗಿದ್ದರೆ, ನಾನು ನಿರ್ಗತಿಕನಾಗಿ ಸಾಯುವೆನೆಂದುಕೊಂಡೆ.

ನಾನು ನನ್ನಷ್ಟಕ್ಕೆ ಮಾತಾಡಿಕೊಳ್ಳುತ್ತಿದ್ದರೆ, ಜಿಮ್ ಉದ್ದಕ್ಕೂ ಗಟ್ಟಿಯಾಗಿ ಮಾತಾಡುತ್ತಿದ್ದ. ಅವನು ಹೇಳುತ್ತಾ ಇದ್ದುದು: "ನಾನು ಸ್ವತಂತ್ರ ಪ್ರದೇಶ ವೊಂದಕ್ಕೆ ಕಾಲಿಟ್ಟ ಕೂಡಲೇ ಮಾಡುವ ಮೊದಲ ಕೆಲಸವೆಂದರೆ—ಹಣಕೂಡಿಡಲು ತೊಡಗುವುದು, ಒಂದು ಸೆಂಟನ್ನು ಕೂಡ ವೆಚ್ಚಮಾಡದಿರುವುದು, ಮತ್ತು ಸಾಕಷ್ಟು ಕೈಗೆ ಬಂದಾಗ, ಮಿಸ್ ವ್ಯಾಟ್‌ಸನ್ನಳ ಮನೆಯ ಹತ್ತಿರದಲ್ಲೇ ಇರುವ ಒಂದು ಹೊಲ ದಲ್ಲಿ ಜೀತಕ್ಕಿರುವ ತನ್ನ ಹೆಂಡತಿಯನ್ನು ಹಣ ತೆತ್ತು ಬಿಡಿಸಿಕೊಳ್ಳುವುದು; ಬಳಿಕ ತಾವಿ ಬ್ಬರೂ ದುಡಿದು ಮಕ್ಕಳಿಬ್ಬರನ್ನೂ ಹಣ ತೆತ್ತು ಬಿಡಿಸಿಕೊಳ್ಳುವುದು, ಮತ್ತು ಒಂದು ವೇಳೆ ಅವರ ಯಜಮಾನ ಹಣಕ್ಕೆ ಬಿಟ್ಟುಕೊಡಲೊಪ್ಪದಿದ್ದರೆ, ದಾಸತ್ವ ವಿರೋಧಿ ಯೊಬ್ಬನನ್ನು ಕಳಿಸಿ ಅವರನ್ನು ಕದ್ದು ತರಿಸುವುದು" ಎಂದು.

ಅಂಥಾ ಮಾತನ್ನು ಕೇಳಿ ನನ್ನ ಮೈ ಸೆಡೆತುಕೊಂಡಂತಾಯಿತು. ಅವನಿಗೆ ತನ್ನ ಜೀವನದಲ್ಲಿ ಆ ಹಿಂದೆ ಎಂದೂ ಅಂಥಾ ಮಾತನ್ನಾಡುವ ಧೈರ್ಯವಿರಲಿಲ್ಲ. ತಾನಿನ್ನು ಸ್ವತಂತ್ರನಾಗುವೆನೆಂದು ತನಗೆ ತೋರಿದ ಗಳಿಗೆಯಲ್ಲಿ ಅದು ಅವನಲ್ಲಿ ಎಂಥಾ ಬದಲಾವಣೆ ಯನ್ನುಂಟುಮಾಡಿತೆಂಬುದನ್ನು ನೀವೇ ನೋಡಿ. ಅದು ಗಾದೆಯಂತೆಯೆ ಇತ್ತು: "ನೀಗ್ರೋವಿಗೆ ಬೆರಳನ್ನು ತೋರಿದರೆ ಹಸ್ತವನ್ನೇ ನುಂಗುತ್ತಾನೆ." ನಾನು ಯೋಚನೆ ಮಾಡದಿದ್ದುದರ ಫಲವಿದು ಎಂದುಕೊಂಡೆ. ಆ ಮಕ್ಕಳು ನನಗೆ ಗೊತ್ತೇ ಇಲ್ಲದ ಮನುಷ್ಯನೊಬ್ಬನಿಗೆ ಸೇರಿದವು; ಅವನು ಎಂದೂ ನನಗೆ ತೊಂದರೆ ಮಾಡಿಲ್ಲ; ಅವನ ವಶದಲ್ಲಿರುವ ತನ್ನ ಮಕ್ಕಳನ್ನು ಕದಿಯುವುದಾಗಿ ಹೇಳುತ್ತಿದ್ದಾನೆ ಬಲು ನಿರಾತಂಕನಾಗಿ ಈ ನೀಗ್ರೋ!— ನಾನು ಇಂಥವನ ಪಲಾಯನಕ್ಕೆ ನೆರವಾಗುವಮಟ್ಟಿಗೆ ಹೋದೆ.

ಜಿಮ್ ಅದನ್ನು ಹೇಳಿದ್ದನ್ನು ಕೇಳಿ ನನಗೆ ವ್ಯಸನವಾಯಿತು, ಅಷ್ಟು ಕೀಳು ಮಟ್ಟಕ್ಕೆ ಅವನಿಳಿದುಹೋಗಿದ್ದ. ನನ್ನ ಅಂತಸ್ಸಾಕ್ಷಿಯೋ ಎಂದಿಗಿಂತ ಹೆಚ್ಚಾಗಿ ನನ್ನನ್ನು ಕಲಕತೊಡಗಿತು. ಕಡೆಗೆ ನಾನು ಅದಕ್ಕೆ ಹೇಳಿದೆ: "ನನ್ನನ್ನು ನಂಬು ನೀನು —ಈಗಲೂ ಕಾಲ ಮಿಂಚಿಲ್ಲ—ಮೊದಲ ದೀಪ ನನ್ನ ಕಣ್ಣಿಗೆ ಬಿದ್ದಕೂಡಲೆ ನಾನು ದಡಕ್ಕೆ ತಲಪಿ, ಹೇಳಿಬಿಡುತ್ತೇನೆ." ಆಗ ನನ್ನ ಮನಸ್ಸಿಗೆ ನೆಮ್ಮದಿಯಾಯಿತು, ಸಂತೋಷವಾಯಿತು; ಥಟ್ಟನೆ ಹಗುರವಾಯಿತು, ಹಕ್ಕಿ ಗರಿಯಂತೆ ನನ್ನ ಎಲ್ಲಾ ಕಷ್ಟಗಳೂ ತೊಲಗಿದವು. ನನ್ನಷ್ಟಕ್ಕೆ ನಾನು ಹಾಡಿಕೊಳ್ಳುತ್ತಾ ದೀಪದರ್ಶನಕ್ಕಾಗಿ ಆ ಕಡೆಗೇ ನೋಡುತ್ತಿದ್ದೆ. ಕ್ರಮೇಣ ಒಂದು ದೀಪ ಕಾಣಿಸಿಕೊಂಡಿತು. ಜಿಮ್ ಹಿಗ್ಗಿ ಹಾಡಿದ:

"ನಾವು ಸುರಕ್ಷಿತರು, ಹಕ್, ನಾವು ಸುರಕ್ಷಿತರು! ಎಗರಿನೋಡು, ಹಿಮ್ಮಡಿಯ ಮೇಲೆ ನಿಂತು! ಕಡೆಗೂ ಸಿಕ್ಕಿತು ಪುಣ್ಯನಗರಿ ಕೈರೋ, ನನಗದು ಗೊತ್ತು!"

ನಾನು ಹೇಳಿದೆ:

"ನಾನು ಕಿರುದೋಣಿಯನ್ನು ತೆಗೆದುಕೊಂಡು ಹೋಗಿ ನೋಡುತ್ತೇನೆ, ಜಿಮ್, ಅದು ಕೈರೋ ಅಲ್ಲದಿರಬಹುದು, ನೋಡು."

ಅವನು ಹಾರಿದ, ಕಿರುದೋಣಿಯನ್ನು ಸಿದ್ಧಗೊಳಿಸಿದ, ನನಗೆ ಅದರಮೇಲೆ ಕೂರಲು ತನ್ನ ಹಳೆಯುಂಗಿಯನ್ನು ಹಾಸಿದ, ನನ್ನ ಕೈಗೆ ಹುಟ್ಟನ್ನು ಕೊಟ್ಟ. ನಾನು ಹೊರಡುತ್ತಿದ್ದ ಹಾಗಿಯೇ ಅವನು ಹೇಳಿದ :

"ಶೀಘ್ರದಲ್ಲೇ ನಾನು ಆನಂದ ಘೋಷವನ್ನು ಮಾಡಲಿದ್ದೇನೆ, ಇಷ್ಟೆಲ್ಲಕ್ಕೂ ಕಾರಣ ಹಕ್ ಎಂದೇ ಹೇಳುತ್ತೇನೆ; ನಾನು ಸ್ವತಂತ್ರನಾಗಿದ್ದೇನೆ, ಹಕ್ ಇಲ್ಲದೆಹೋಗಿದ್ದರೆ ನಾನೆಂದಿಗೂ ಸ್ವತಂತ್ರನಾಗುತ್ತಿರಲಿಲ್ಲ; ಹಕ್ ಮಾಡಿದ ಉಪಕಾರವಿದು. ಜಿಮ್ ನಿನ್ನನ್ನೆಂದಿಗೂ ಮರೆಯುವುದಿಲ್ಲ, ಹಕ್; ಜಿಮ್ಮನ ಗೆಳೆಯರಲ್ಲಿ ಅತಿ ಶ್ರೇಷ್ಠನಾದವ ನೀನು; ಸದ್ಯದಲ್ಲಿ ಜಿಮ್ಮನಿಗಿರುವ ಗೆಳೆಯ ನೀನೊಬ್ಬನೇ."

ಅವನಿಗೆ ಉತ್ತರ ಕೊಡಲು ನನ್ನ ಮೈ ತುಂಬಾ ಬೆವರಿಡುತ್ತಿತ್ತು; ಅವನಿಂದ ದೂರದೂರಕ್ಕೆ ಮೀಟಿಕೊಂಡು ಹೋಗುತ್ತಿದ್ದೆ. ಅವನ ಈ ಮಾತಿಗೆ ನನ್ನ ಜಂಘಾಬಲವೇ ಬಿದ್ದುಹೋಯಿತು. ನಾನು ನಿದಾನವಾಗಿಯೇ ಚಲಿಸುತ್ತಿದ್ದೆ; ನಾನು ಹೊರಟಿದ್ದರಿಂದ ನನಗೆ ಸಂತೋಷವಾಯಿತೋ ಆಗಲಿಲ್ಲವೋ ಎಂಬುದು ನನಗೆ ನಿರ್ದಿಷ್ಟವಾಗಿ ಖಚಿತವಾಗಿರಲಿಲ್ಲ. ನಾನು ಐವತ್ತು ಗಜಗಳ ದೂರ ಸರಿದಮೇಲೆ ಜಿಮ್ ಹೇಳಿದ :

"ಹೋಗಿಬರುವೆಯ ನನ್ನ ಹಳೆಯ ನೆಚ್ಚಿನ ಹಕ್ ? ಹಳೆ ಜಿಮ್ಮನಿಗೆ ಕೊಟ್ಟ ಮಾತನ್ನು ಎಂದಿಗೂ ಉಳಿಸಿಕೊಳ್ಳುವ ಏಕೈಕ ಬಿಳಿಯನೆಂದರೆ ನೀನೇ."

ನನ್ನ ಮನಸ್ಸು ಅಸ್ವಸ್ಥವಾಯಿತು. ನಾನು ಅದನ್ನು ಮಾಡಲೇಬೇಕು—ನನಗೆ ಅದರಿಂದ ಬಿಡುಗಡೆಯೇ ಇಲ್ಲ ಎಂದುಕೊಂಡೆ ಆ ಸಮಯಕ್ಕೆ ಅಲ್ಲಿಗೊಂದು ಹಾಯಿ-ದೋಣಿ ಬಂತು; ಅದರಲ್ಲಿ ಬಂದೂಕಧಾರಿಗಳಾದ ಇಬ್ಬರಿದ್ದರು. ಅವರೂ ನಿಂತರು, ನಾನೂ ನಿಂತೆ. ಅವರಲ್ಲೊಬ್ಬ ಕೇಳಿದ :

"ಅಲ್ಲಿ ಬರುತ್ತಿರುವುದೇನು ?"

"ಒಂದು ತೆಪ್ಪದ ತುಕಡಿ" ಎಂದೆ ನಾನು.

"ನೀನು ಅದಕ್ಕೆ ಸೇರಿದವನೋ ?"

"ಹೌದು, ಸ್ವಾಮಿ"

"ಅದರಲ್ಲಿ ಯಾರಿದ್ದಾರೆ?"

"ಒಬ್ಬನಿದ್ದಾನೆ, ಸ್ವಾಮಿ."

"ಆ ತಿರುವಿನ ಮೇಲುಗಡೆ ಆ ಬಳಿಯಲ್ಲಿ ಈ ರಾತ್ರಿ ಐವರು ನೀಗ್ರೋಗಳು ತಪ್ಪಿಸಿಕೊಂಡು ಓಡಿದ್ದಾರೆ. ನಿಮ್ಮವನು ಬಿಳಿಯನೋ, ಕರಿಯನೋ ?

ನಾನು ತತ್‌ಕ್ಷಣವೇ ಉತ್ತರ ಕೊಡಲಿಲ್ಲ. ಪ್ರಯತ್ನಪಟ್ಟೆ, ಆದರೆ ಮಾತು ಬಾರವು. ಒಂದೆರಡು ಸೆಕೆಂಡುಗಳ ಕಾಲ ಅಳೆದೂ ಸುರಿದೂ ಹೆಣಗಿದೆ. ಆ ಸಮಯಕ್ಕೆ

ತಕ್ಕಷ್ಟು ಗಡಸುತನ ನನ್ನಲ್ಲಿರಲಿಲ್ಲ—ಒಂದು ಮೊಲದ ಧೈರ್ಯ ಕೂಡ ನನಗಿರಲಿಲ್ಲ, ನಾನು ಶಕ್ತಿಗುಂದುತ್ತಿರುವುದು ನನಗೆ ಗೊತ್ತಾಯಿತು. ನನ್ನ ಹೆಣಗಾಟವನ್ನು ಕೈಬಿಟ್ಟೆ; ನೇರವಾಗಿ ನುಡಿದೆ :

"ಅವನು ಬಿಳಿಯ."

"ಅಲ್ಲಿಗೆ ಹೋಗಿ ನಾವೇ ನೋಡಿಬಿಡುವ ಎನ್ನುತ್ತೇನೆ."

"ಹಾಗೆ ಮಾಡಿರೆಂದೇ ನನ್ನ ಕೋರಿಕೆ. ಏಕೆಂದರೆ ಅಲ್ಲಿರುವವ ಅಪ್ಪ; ದೀಪವಿರುವ ಬಳಿ ದಡಕ್ಕೆ ತೆಪ್ಪವನ್ನು ಮುಟ್ಟಿಸಿ ಕಟ್ಟಿಹಾಕಲು ಪ್ರಾಯಶಃ ನಿಮ್ಮಿಂದ ನನಗೆ ನೆರವಾದೀತು. ಅವನು ಕಾಯಿಲೆಯಾಗಿದ್ದಾನೆ—ಅಮ್ಮನೂ ಮೇರಿ ಆ್ಯನ್ನಳೂ ಅಂತೆಯೇ ಕಾಯಿಲೆಯಾಗಿದ್ದಾರೆ."

"ಓ ಶನಿಯೆ! ನಾವು ಬೇಗ ಹೋಗಬೇಕಾಗಿದೆ, ಮಗು. ಆದರೂ ನೀನು ಹೇಳಿದಂತೆ ನಾವು ಮಾಡಲೇಬೇಕೆಂದು ನನಗೆ ತೋರುತ್ತದೆ. ಏಳು, ನಿನ್ನ ಹುಟ್ಟನ್ನು ಭದ್ರವಾಗಿ ಹಿಡಿದುಕೋ, ಮುಂದೆ ಹೋಗೋಣ."

ನಾನು ನನ್ನ ಹುಟ್ಟನ್ನು ಬಿಗಿಯಾಗಿ ಹಿಡಿದೆ; ಅವರು ತಮ್ಮವನ್ನೂ ಹಿಡಿದರು. ಒಂದೆರಡು ಮೀಟು ಹಾಕಿದ ಮೇಲೆ ನಾನು ಹೇಳಿದೆ :

"ಅಪ್ಪ, ನಿಮಗೆ ತುಂಬಾ ಕೃತಜ್ಞನಾಗಿರುತ್ತಾನೆಂದು ನಾನು ನಿಮಗೆ ಹೇಳಬಲ್ಲೆ. ತೆಪ್ಪವನ್ನು ದಡಕ್ಕೆ ಎಳೆದು ಕಟ್ಟಿ ಎಂದು ನಾನು ಕೇಳಿದರೆ ಎಲ್ಲರೂ ತಮ್ಮ ತಮ್ಮ ಪಾಡಿಗೆ ಹೊರಟುಹೋಗುತ್ತಾರೆ, ನಾನೊಬ್ಬನೇ ಅದನ್ನು ಮಾಡಲಾರೆ."

"ಅದು ಪೂರಾ ತುಂಟ ವರ್ತನೆ. ವಿಚಿತ್ರವೂ ಹೌದು, ಹೇಳು ಮಗು, ನಿಮ್ಮಪ್ಪನಿಗೇನಾಗಿದೆ ?"

"ಅದು ಒಂದು—ಅ—ಬಿಡಿ ಅದೇನು ಪ್ರಬಲವಾದದ್ದಲ್ಲ;"

ಅವರು ಹುಟ್ಟೆಳೆಯುವುದನ್ನು ನಿಲ್ಲಿಸಿದರು. ಆಗ ನಾವು ತೆಪ್ಪದ ಸಮೀಪಕ್ಕೇ ಬಂದಿದ್ದೆವು. ಒಬ್ಬ ಹೇಳಿದ ;

"ಏ ಮಗು, ಅದು ಸುಳ್ಳು. ನಿಮ್ಮಪ್ಪನಿಗೆ ಬಂದಿರುವ ರೋಗ ಯಾವುದು ? ಸರಿಯಾದ ಉತ್ತರವನ್ನು ಹೇಳು, ಅದರಿಂದ ನಿನಗೇ ಒಳ್ಳೆಯದು."

"ಹೇಳುತ್ತೇನೆ, ಸ್ವಾಮಿ, ಹೇಳುತ್ತೇನೆ ಪ್ರಾಮಾಣಿಕವಾಗಿ—ನಮ್ಮನ್ನು ದಯೆಮಾಡಿ ಕೈಬಿಡದಿರಿ. ಅದು — ಅದು — ಮಹನೀಯರೆ, ನೀವು ಮುಂದಕ್ಕೆ ದಯಮಾಡಿಸುವುದಾದರೆ, ನಿಮ್ಮನ್ನು ಮುಂಬದಿಗೆ ಒಯ್ಯಲು ನನಗೆ ಅನುಮತಿಗೊಡುವುದಾದರೆ, ನೀವು ತೆಪ್ಪದ ಬಳಿಗೆ ಬರುವ ಅಗತ್ಯವೇ ಇರುವುದಿಲ್ಲ—ದಯವಿಟ್ಟು ಹಾಗೆ ಮಾಡಿ.

"ಅದನ್ನು ಹಿಂದಕ್ಕೆಳೆ, ಜಾನ್, ಅದನ್ನು ಹಿಂದಕ್ಕೆಳೆ, ಎಂದ ಒಬ್ಬ.

"ದೂರ ಇರು, ಮಗು—ಸ್ವಲ್ಪ ಕೆಳಗೇ ಇರು. ಇದರ ಮುನೆ ಬೀಳ! ಗಾಳಿ ಅದನ್ನು ನಮ್ಮ ಬಳಿಗೇ ನೂಕಿದೆ ಎಂದು ನನ್ನ ನಿರೀಕ್ಷೆ. ನಿಮ್ಮಪ್ಪನಿಗೆ ಸಿಡುಬು ತಗುಲಿದೆ; ಅದು ನಿನಗೆ ಚೆನ್ನಾಗಿ ಗೊತ್ತು. ಮೊದಲೇ ನೀನು ಹಾಗೇಕೆ ಹೇಳಲಿಲ್ಲ? ಅದನ್ನು ಎಲ್ಲಾ ಕಡೆಗೂ ಹರಡಬೇಕೆಂದು ನಿನ್ನಿಷ್ಟವೇ ?"

ನಾನು ತೊದಲುತ್ತ ಹೇಳಿದೆ: "ಈ ಮುನ್ನ ನಾನು ಎಲ್ಲರಿಗೂ ಹಾಗೆಯೇ ಹೇಳಿದೆ. ಅವರೆಲ್ಲರೂ ನಮ್ಮನ್ನು ಬಿಟ್ಟು ಹೊರಟುಹೋದರು.

"ಪಾಪ! ಅದರಲ್ಲಿ ಸ್ವಲ್ಪ ಸತ್ಯಾಂಶವಿದೆ. ನಿನ್ನನ್ನು ಕಂಡರೆ ನಮಗೆ ತುಂಬಾ ವ್ಯಥೆಯಾಗುತ್ತದೆ—ಆದರೆ ಏನೇ ಆಗಲಿ ಸಿಡುಬನ್ನು ತಂದುಕೊಳ್ಳುವುದು ನಮಗೆ ಇಷ್ಟ ವಿಲ್ಲ. ಗೊತ್ತಾಯಿತೆ! ಮುಂದೇನು ಮಾಡಬೇಕೆಂಬುದನ್ನು ನಾನು ನಿನಗೆ ಹೇಳುತ್ತೇನೆ. ನೀನಾಗಿಯೇ ಎಲ್ಲೂ ದಡಸೇರಲು ಪ್ರಯತ್ನಪಡಬೇಡ; ಹಾಗೆ ಮಾಡಿದೆಯೋ ಎಲ್ಲವೂ ಚುಪ್ಪಾಚೂರಾಗಿಬಿಡುವುದು ಖಂಡಿತ. ನೀನು ಹಾಗೆಯೇ ತೇಲಿಕೊಂಡು ಸುಮಾರು ಇಪ್ಪತ್ತು ಮೈಲಿಗಳಷ್ಟು ದೂರ ಮುಂದೆಹೋಗು. ನದಿಯ ಎಡಪಕ್ಕಕ್ಕೆ ನಿನಗೊಂದು ಪಟ್ಟಣ ಸಿಕ್ಕುತ್ತದೆ. ಆಗ ಹಗಲು ಹುಟ್ಟಿ ಎಷ್ಟೋ ಹೊತ್ತಾಗಿರುತ್ತದೆ. ಅಲ್ಲಿ ನೀನು ಯಾರನ್ನಾದರೂ ಸಹಾಯಮಾಡಿರೆಂದು ಕೇಳುವಾಗ ನಿಮ್ಮ ಮನೆಯವರು ಚಳಿಜ್ವರ ಬಂದು ಮಲಗಿದ್ದಾರೆ ಎಂದು ಮಾತ್ರ ಹೇಳು, ಮತ್ತೆ ಹೆಡ್ಡನಾಗಬೇಡ, ಅವರಿಗೆ ಅನು ಮಾನವಾಗುವಂತೆ ನಡೆದುಕೊಳ್ಳಬೇಡ. ಆದರೆನಮಗೂ ನಿನಗೂ ನಡುವೆ ಇಪ್ಪತ್ತು ಮೈಲಿಗಳ ಅಂತರವಿರುವಂತೆ ಮಾತ್ರ ನೀನು ನೋಡಿಕೊಳ್ಳಬೇಕು; ಏಕೆಂದರೆ ನಾವಿಗ ನಿನಗೆ ಉಪಕಾರಮಾಡುತ್ತಿದ್ದೇನೆ, ನೀನು ಒಳ್ಳೆಯ ಹುಡುಗನೆನಿಸಿಕೊಳ್ಳಬೇಕು, ಆ ದೀಪ ವಿರುವ ಬಳಿಯಲ್ಲಿ ಇಳಿಯುವುದರಿಂದ ಪ್ರಯೋಜನವಿಲ್ಲ—ಏಕೆಂದರೆ ಅದೊಂದು ಮರ ಮುಟ್ಟುಗಳ ಮಳಿಗೆ. ನಿಮ್ಮ ತಂದೆ ಬಡವನೆಂದು ನನ್ನೆಣಿಕೆ; ಅಲ್ಲದೆ ತುಂಬಾ ದುಸ್ಥಿತಿ ಯಲ್ಲಿದ್ದಾನೆಂದೂ ನಾನು ಹೇಳಬೇಕಾಗಿದೆ. ಈ ಹಲಗೆಯ ಮೇಲೆ ಇಕೋ ನಾವಿಲ್ಲಿ ಇಪ್ಪತ್ತು-ಡಾಲರ್ ಚಿನ್ನದ ನಾಣ್ಯವೊಂದನ್ನು ಇಡುತ್ತೇನೆ. ನಿನ್ನ ಬಳಿಗೆ ತೇಲಿಬಂದು ಅದು ಕೈಗೆ ಸಿಕ್ಕುತ್ತದೆ. ನಿನ್ನನ್ನು ಇಲ್ಲಿ ಬಿಟ್ಟುಹೋಗುವುದು ತುಂಬಾ ಕೀಳುನಡೆಯಾ ದೀತು. ಆದರೆ ಸಿಡುಬಿನೊಂದಿಗೆ ಸರಸ ದೇವರಾಣೆಗೂ ಅಪಾಯಕರ, ನಿನ್ನ ಮನಸ್ಸಿಗೆ ಬಂತೆ?"

"ಸ್ವಲ್ಪ ನಿಲ್ಲು ಪಾರ್ಕರ್, ಆ ಹಲಗೆಯ ಮೇಲಿಡಲು ನನ್ನ ಪರವಾಗಿ ಇನ್ನಿಪ್ಪತ್ತು ಇಲ್ಲಿದೆ. ಹೋಗಿಬರುವೆಯಾ ಮಗು, ಮಿ. ಪಾರ್ಕರ್ ನಿನಗೆ ಹೇಳಿರುವ ಹಾಗೆ ಮಾಡು. ನಿನಗೆ ಎಲ್ಲವೂ ಒಳ್ಳೆಯದಾಗುತ್ತದೆ" ಎಂದನು ಇನ್ನೊಬ್ಬ.

"ಆಯಿತು ಮಗು,—ಹೋಗಿಬರುತ್ತೇವೆ. ಓಡಿಹೋಗಿರುವ ನೀಗ್ರೋಗಳಲ್ಲಿ ನಿನ್ನ ಕಣ್ಣಿಗೆ ಯಾರಾದರೂ ಬಿದ್ದರೆ. ನೀನು ಇತರರ ನೆರವನ್ನು ಪಡೆಯಬೇಕು, ಅವ ರನ್ನು ಹಿಡಿಯಬೇಕು.—ಅದರಿಂದ ನಿನಗೆ ಸ್ವಲ್ಪ ಹಣವೂ ಸಿಕ್ಕುತ್ತದೆ."

"ಹೋಗಿಬನ್ನಿ, ಸ್ವಾಮಿ; ಪರಾರಿಯಾಗಿರುವ ನೀಗ್ರೋಗಳು ನನ್ನ ಕೈಗೆಸಿಕ್ಕಿಬಿದ್ದರೆ ಅವರು ನುಣುಚಿಕೊಂಡು ಹೋಗದಂತೆ ನನ್ನ ಕೈಲಾದುದನ್ನು ಮಾಡುತ್ತೇನೆ" ಎಂದೆ ನಾನು.

ಅವರು ಹೊರಟರು; ನಾನು ಮಾಡಿದ್ದು ತಪ್ಪು ಕೆಲಸವೆಂದು ನನಗೆ ಖಚಿತವಾಗಿದ್ದುದರಿಂದ ನಾನು ಅಸ್ವಸ್ಥನಾಗಿ ಇಳಿಮನಸ್ಸಿನಿಂದಲೇ ತೆಪ್ಪವನ್ನು ಹತ್ತಿದೆ. ಯೋಗ್ಯ ರೀತಿಯಲ್ಲಿ ಕೆಲಸಮಾಡುವುದನ್ನು ಕಲಿಯುವುದರಿಂದ ನನಗೆ ಯಾವ ಪ್ರಯೋಜನವೂ ಇಲ್ಲವೆಂದುಕೊಂಡೆ. ಯಾರಿಗೆ ಚಿಕ್ಕಂದಿನಿಂದಲೇ ಸನ್ಮಾರ್ಗ ಪ್ರವರ್ತನೆಯನ್ನು ಕಲಿಸಿರುವುದಿಲ್ಲವೋ, ಮುಂದೆ ಅವರಿಗದು ಒಗ್ಗುವುದಿಲ್ಲ – ಅವನು ತೊಂದರೆಗೆ ಸಿಕ್ಕಿದಾಗ. ಅವನಿಗೆ ಬೆಂಬಲಕೊಟ್ಟು ತನ್ನ ಕೆಲಸಕ್ಕೆ ಅವನನ್ನು ಕಟ್ಟಿಹಾಕುವ ಆಸರೆ ಯಾವುದೂ ಇರುವುದಿಲ್ಲ/ಆದ್ದರಿಂದ ಅವನು ಏಟು ತಿನ್ನುತ್ತಾನೆ. ಆಗ ನಾನು ಒಂದು ನಿಮಿಷಕಾಲ ಯೋಜನೆ ಮಾಡಿದೆ. ನನ್ನಷ್ಟಕ್ಕೆ ಮಾತಾಡಿಕೊಂಡೆ. ತಡೆ; ಒಂದುವೇಳೆ ನೀನು ನೇರವಾಗಿಯೇ ವರ್ತಿಸಿ ಜಿಮ್ಮನನ್ನು ಬಿಟ್ಟುಕೊಟ್ಟಿದ್ದರೆ, ನಿನ್ನ ಮನಸ್ಸು ಹೀಗಿರುವುದಕ್ಕಿಂತ ಹೆಚ್ಚು ಹಾಯಾಗಿರುತ್ತಿತ್ತೆ ? ಇಲ್ಲ ಎಂದೆ ನಾನು; ಈಗಿನಂತೆಯೇ ನನಗೆ ಆಗಲೂ ವ್ಯಸನವಾಗುತ್ತಿತ್ತು. ಹಾಗಾದಮೇಲೆ, ಸತ್ಯವಾಗಿ ನಡೆಯುವುದನ್ನು ಕಲಿಯುವುದರಿಂದ ಪ್ರಯೋಜನವಾದರೂ ಏನು?—ಸತ್ಯವಾಗಿ ನಡೆಯುವುದರಿಂದ ತೊಂದರೆ ಬರುವುದರಿಂದ, ತಪ್ಪುಗೆಲಸಮಾಡುವುದರಿಂದ ತೊಂದರೆ ಬರುವುದಿಲ್ಲವಾದ್ದರಿಂದ. ಮತ್ತು ಫಲ ಒಂದೇ ಆಗಿರುವುದರಿಂದ, ನನಗೆ ದಿಗ್ಭ್ರಮೆಯಾಯಿತು. ಆದಕ್ಕೆ ಉತ್ತರ ಕೊಡಲಾಗಲಿಲ್ಲ ನನಗೆ. ಕಡೆಗೆ ಇದನ್ನು ಇನ್ನು ಮನಸ್ಸಿಗೆ ಹಚ್ಚಿಕೊಳ್ಳಬಾರದೆಂದೂ, ತರುವಾಯ ಆಗ ಕಾಲದಲ್ಲಿ ಯಾವುದು ಕೈಗೆ ಅನುಕೂಲವಾಗಿ ಒದಗುತ್ತದೆಯೋ ಅದರಂತೆ ನಡೆದರಾಯಿತೆಂದೂ ನಿರ್ಧರಿಸಿದೆ.

ಡೇರೆಯನ್ನು ಪ್ರವೇಶಿಸಿದೆ; ಜಿಮ್ ಅಲ್ಲಿರಲಿಲ್ಲ. ಸುತ್ತಲೂ ನೋಡಿದೆ; ಅವನು ಎಲ್ಲೂ ಇರಲಿಲ್ಲ. ನಾನು ಕೂಗಿದೆ.

"ಜಿಮ್!"

"ಹಕ್, ನಾನಿಲ್ಲಿದ್ದೇನೆ. ಅವರು ಕಣ್ಮರೆಯಾದರೋ ಇಲ್ಲವೊ? ಕೂಗಬೇಡ." ಅವನು ಹಿಂಬದಿಯ ಹುಟ್ಟಿನ ಕೆಳಗೆ ನದಿಯಲ್ಲಿ ಮುಳುಗಿದ್ದನು, ಅವನ ಮೂಗು ಮಾತ್ರ ನೀರಮೇಲಿತ್ತು. ಅವರು ಹೊರಟುಹೋದರೆಂದೂ, ಅವನು ಇನ್ನು ಹೊರಗೆ ಬಂದು ತೆಪ್ಪ ಹತ್ತಬಹುದೆಂದೂ ನಾನು ಹೇಳಿದೆ. ಅವನು ಹೇಳಿದ :—

"ಆ ಸಂಭಾಷಣೆಯೆಲ್ಲವನ್ನೂ ನಾನು ಕೇಳುತ್ತಲೇ ಇದ್ದೆ; ಅವರು ತೆಪ್ಪ ಹತ್ತಿದ್ದರೆ ನದಿಯಲ್ಲಿಳಿದಿದ್ದ ನಾನು ದಡಕ್ಕೆ ಹೋಗಿ ಸೇರಿಕೊಳ್ಳುತ್ತಿದ್ದೆ. ಅವರು ಹೊರಟುಹೋದ ಮೇಲೆ ಮತ್ತೆ ತೆಪ್ಪದೆಡೆಗೆ ಈಜಿ ಬರುತ್ತಿದ್ದೆ. ನಿನ್ನವರಿಗೆ ಎಂಥಾ ಟೋಪಿ ಹಾಕಿದೆ! ಒಳ್ಳುಬುದ್ಧಿವಂತಿಕೆಯ ತಂತ್ರವದು! ಅದು ಮುದಿಜಿಮ್ಮನನ್ನು ಕಾಪಾಡಿತೆಂದು ನನ್ನೆಣಿಕೆ

ಎನ್ನಲೇಬೇಕು ಕಂದ!—ಮುದಿಜಿಮ್ ಈ ನಿನ್ನ ಉಪಕಾರವನ್ನು ಎಂದಿಗೂ ಮರೆಯು ವುದಿಲ್ಲ, ಚಿನ್ನ!"

ಬಳಿಕ ನಾವು ಆ ಹಣದ ಬಗೆಗೆ ಮಾತಾಡಿಕೊಂಡೆವು. ಉಂಡೆಯಾಗಿ ಇಪ್ಪತ್ತು ಡಾಲರುಗಳು—ಸಾಕಷ್ಟು ಒಳ್ಳೆ ಸಂಪಾದನೆಯೇ. ನಾವಿನ್ನು ಮುಂದೆ ಹಬೆದೋಣಿಯ ಅಂತಸ್ತಿನಲ್ಲಿ ಆರಾಮವಾಗಿ ಕುಳಿತು ಪಯಣಿಸಬಹುದೆಂದೂ, ಕೈಲಿರುವ ಹಣ ಸ್ವತಂತ್ರ ಪ್ರದೇಶಗಳಲ್ಲಿ ಎಲ್ಲಿಯವರೆಗೆ ಬೇಕೋ ಅಲ್ಲಿಯವರೆಗೂ ಹೋಗಲು ಸಾಕೆಂದೂ ಜಿಮ್ ಹೇಳಿದನು ಇನ್ನು ಇಪ್ಪತ್ತೇ ಮೈಲಿಗಳ ಪಯಣ ತೆಪ್ಪಕ್ಕೆ ಕಷ್ಟವಾಗಬಾರದೆಂದೂ ಆದರೆ ಇಷ್ಟರೊಳಗೇ ಅಲ್ಲಿದ್ದರಾಗಿತ್ತೆಂದೂ ಅವನು ಹೇಳಿದನು.

ಹಗಲು ಹುಟ್ಟುವ ವೇಳೆಯ ಸುಮಾರಿನಲ್ಲಿ ನಾವು ತೆಪ್ಪವನ್ನು ಕಟ್ಟಿಹಾಕಿದೆವು; ತೆಪ್ಪವನ್ನು ಸುರಕ್ಷಿತವಾಗಿ ಬಚ್ಚಿಡುವುದರ ಬಗೆಗೆ ಜಿಮ್ಮನಿಗೆ ಬಲು ಆಸಕ್ತಿ. ಸಾಮಾನು ಗಳನ್ನು ಗಂಟು ಕಟ್ಟಲು, ತೆಪ್ಪವನ್ನು ಬಿಡಲು ಎಲ್ಲವನ್ನೂ ಸಿದ್ಧಪಡಿಸಲೂ ಅವನು ಹಗ ಲೆಲ್ಲಾ ದುಡಿದನು.

ಆ ರಾತ್ರಿ ಹತ್ತುಗಂಟೆಯ ಹೊತ್ತಿಗೆ ನಾವು ಎಡತಿರುವಿನ ಬಲುಕೆಳಗೆ ಪಟ್ಟಣ ವೊಂದರ ದೀಪಗಳು ಕಾಣಿಸುತ್ತಲಿದ್ದ ಬಳಿಗೆ ಬಂದೆವು.

ಅದರ ವಿಷಯವನ್ನು ತಿಳಿದುಕೊಳ್ಳಲು ನಾನು ಕಿರುದೋಣಿಯಲ್ಲಿ ಮುಂದೆ ಹೋದೆ. ಸ್ವಲ್ಪಹೊತ್ತಿಗೇ ಹಾಯಿದೋಣಿಯಲ್ಲಿ ಹೋಗುತ್ತಿದ್ದ ಒಬ್ಬಾನೊಬ್ಬ ಮನುಷ್ಯ ನನಗೆ ಸಿಕ್ಕಿದ, ಅವನ ಚಲನ ಅಡ್ಡಾದಿಡ್ಡಿಯಾಗಿತ್ತು ನಾನು ಅವನ ಬಳಿಗೆ ಹೋದೆ, ಕೇಳಿದೆ:

"ಆಯ್ಯಾ, ಅದು ಕೈರೋ ಪಟ್ಟಣವೆ?"

"ಕೈರೋ ? ಅದಲ್ಲ. ನೀನು ಪಕ್ಕಾ ದಡ್ಡನಿರಬೇಕು."

"ಯಾವ ಪಟ್ಟಣ ಅದು, ಹೇಳುವಿರಾ?"

"ನಿನಗದನ್ನು ತಿಳಿಯಬೇಕೆನಿಸಿದರೆ, ಹೋಗು ಪತ್ತೆಮಾಡು. ನೀನೇನಾದರೂ ಇನ್ನೊಂದರ್ಧನಿಮಿಷ ನನ್ನಸುತ್ತ ಪೀಡಿಸುತ್ತಾ ನಿಲ್ಲುವುದಾದರೆ ನಿನಗೆ ಇಷ್ಟವಿಲ್ಲ ದ್ದೊಂದು ಲಭಿಸುತ್ತದೆ."

ನಾನು ತೆಪ್ಪಕ್ಕೆ ಹಿಂತಿರುಗಿದೆ. ಜಿಮ್ಮನಿಗೆ ತುಂಬಾ ನಿರಾಶೆಯಾಗಿತ್ತು. ಆದರೆ ನಾನು ಹೇಳಿದೆ, ಹೋಗಲಿ ಬಿಡು, ಮುಂದಿನ ಪಟ್ಟಣ ಕೈರೋವೆ ಎಂದು ನನ್ನೆಣಿಕೆ, ಎಂದು.

ಹಗಲಿಗೆ ಮುನ್ನವೇ ನಾವು ಇನ್ನೊಂದು ಪಟ್ಟಣವನ್ನು ದಾಟಿದೆವು; ನಾನು ಮತ್ತೆ ಅಲ್ಲಿಗೆ ಹೊರಡುವುದರಲ್ಲಿದ್ದೆ; ಅದು ತುಂಬಾ ಎತ್ತರದಲ್ಲಿದ್ದುದರಿಂದ ಹೋಗಲಿಲ್ಲ ಕೈರೋ ಅಂಥಾ ದಿಬ್ಬದ ಮೇಲಿಲ್ಲ ಎಂದ ಜಿಮ್, ನನಗದು ಮರೆತು ಹೋಗಿತ್ತು ಎಡ ದಂಡೆಗೆ ಹತ್ತಿರದಲ್ಲಿದ್ದ ಒಂದು ಕಿರುನಿಲ್ದಾಣದ ಗೂಟಕ್ಕೆ ತೆಪ್ಪವನ್ನು ಕಟ್ಟಿಹಾಕಿ

ಹಗಲೆಲ್ಲ ಅಲ್ಲೇ ಉಳಿದುಕೊಂಡೆವು. ನನಗೆ ಏನೋ ಅನುಮಾನ ಬಂತು. ಜಿಮ್ಮ ನಿಗೂ ಹಾಗೆಯೇ ಆಯಿತು. ನಾನು ಹೇಳಿದೆ :

"ಆ ರಾತ್ರಿ ಇಬ್ಬನಿಯಲ್ಲಿ ನಾವು ಕೈರೋವನ್ನು ದಾಟಿಬಿಟ್ಟೆವೋ ಏನೊ !"

ಅವನು ಹೇಳಿದ :

"ಅದರ ವಿಷಯ ಮಾತಾಡುವುದು ಬೇಡ, ಹಕ್. ಬಡ ನೀಗ್ರೋಗಳು ಅದೃಷ್ಟ ಹೀನರು ಆ ಮಂಡಲದ ಹಾವಿನ ಪೊರೆಯ ಕಾಟ ಇನ್ನೂ ಮುಗಿದಿಲ್ಲವೆಂದೇ ನಾನು ಎಂದೂ ನಿರೀಕ್ಷಿಸಿದ್ದೆ."

"ನಾನು ಆ ಹಾವಿನ ಪೊರೆಯನ್ನು ನೋಡಲೇ ಬಾರದಾಗಿತ್ತು, ಜಿಮ್; –ನನ್ನ ಕಣ್ಣು ಅದರ ಮೇಲೆ ಬೀಳಲೇಬಾರದಾಗಿತ್ತು."

"ಅದು ನಿನ್ನ ತಪ್ಪಲ್ಲ ಹಕ್; ನಿನಗದು ತಿಳಿದಿರಲಿಲ್ಲ, ಅದಕ್ಕಾಗಿ ನಿನ್ನನ್ನು ನೀನೇ ಬೈದುಕೊಳ್ಳಬಾರದು."

ಹಗಲಾದಾಗ, ಎದುರಿಗೇ ಇತ್ತು ನಿರ್ಮಲ ಓಹಿಯೋ ತೀರ-ಜಲ ; ಅದು ಸಾಕಷ್ಟು ಖಚಿತವಾಗಿತ್ತು; ಹೊರಗಿತ್ತು ಎಂದಿನಂತೆಯೆ ತಪ್ಪದೆ ಕದಡಿದ ಜಲ, ಸರಿ ಹಾಗಾದರೆ, ಕೈರೋ ಹಿಂದೆಯೇ ಆಗಿಹೋಗಿತ್ತು.

ನಾವು ಮತ್ತೆ ಅದೇ ವಿಷಯದಲ್ಲಿ ಮಾತಾಡಿಕೊಂಡೆವು. ತೀರಕ್ಕೆ ಹೋಗುವುದು ಸರಿಯಲ್ಲವೆನಿಸಿತು. ನಾವು ಪ್ರವಾಹಕ್ಕೆ ಇದಿರಾಗಿ ತೆಪ್ಪವನ್ನು ತೆಗೆದುಕೊಂಡು ಹೋಗುವುದಂತೂ ಸಾಧ್ಯವಿರಲಿಲ್ಲ ರಾತ್ರಿಯಾಗುವ ತನಕ ಕಾಯುವುದೂ, ಆಮೇಲೆ ಕಿರು ದೋಣಿಯಲ್ಲಿ ಹೊರಟು ಸಮಯ ಕಾಯ್ದು ಬಂದದ್ದಕ್ಕೆ ತಲೆಯೊಡ್ಡುವುದೂ ಅನಿವಾರ್ಯ ವೆನಿಸಿತ್ತು. ಆ ಕೆಲಸಕ್ಕೆ ಅಗತ್ಯವಾದ ಚಟುವಟಿಕೆಯನ್ನು ಕೂಡಿಸಿಕೊಳ್ಳುವುದಕ್ಕಾಗಿ ನಾವು ಹಗಲೆಲ್ಲ ಹತ್ತಿಗಿಡಗಳ ಪೊದೆಯಲ್ಲಿ ಸೇರಿಕೊಂಡು ನಿದ್ದೆ ಮಾಡಿದೆವು ; ಕತ್ತಲಾಗುವ ಸಮಯಕ್ಕೆ ತೆಪ್ಪದ ಬಳಿಗೆ ಹೋದಾಗ ಕಿರುದೋಣಿಯೇ ಇರಲಿಲ್ಲ !

ಸುಮಾರು ಹೊತ್ತಿನ ತನಕ ನಾವು ಒಂದು ಮಾತನ್ನೂ ಆಡಲಿಲ್ಲ. ಹೇಳಲೇನೂ ಇರಲಿಲ್ಲ. ಅದು ಮಂಡಲದ ಹಾವಿನ ಪೊರೆಯ ಇನ್ನೊಂದು ಚೇಷ್ಟೆಯೇ ಎಂಬುದು ನಮ್ಮಿಬ್ಬರಿಗೂ ಚೆನ್ನಾಗಿಯೇ ತಿಳಿದಿತ್ತು; ಆದ್ದರಿಂದ ಆ ವಿಷಯದಲ್ಲಿ ಮಾತಾಡುವುದರಿಂದ ಏನು ಪ್ರಯೋಜನ? ನಾವು ಅದರಲ್ಲಿ ಯಾವುದಾದರೂ ತಪ್ಪನ್ನು ಕಂಡುಹಿಡಿಯ ಹೊರಟಿದ್ದೇವೆ ಎಂದಾಗುತ್ತಿತ್ತು; ಆದರಿಂದ ಮತ್ತಷ್ಟು ದುರದೃಷ್ಟವೇ ನಮಗೆ ಪ್ರಾಪ್ತವಾಗುತ್ತಿತ್ತು—ನಾವು ಸುಮ್ಮನಾಗುವ ತನಕ ದುರದೃಷ್ಟವೇ ಮುಂದುವರಿಯುತ್ತಿತ್ತು.

ನಾವು ಏನು ಮಾಡಿದರೆ ಸರಿಯಾದೀತೆಂಬುದನ್ನೇ ಕುರಿತು ಆಮೇಲಾಮೇಲೆ ಮಾತಾಡಿಕೊಂಡೆವು. ದಡ ಸೇರಲು ನಮಗಿನ್ನೊಂದು ಕಿರುದೋಣಿಯನ್ನು ಕೊಳ್ಳುವ ಅವಕಾಶ ಸಿಕ್ಕುವವರೆಗೂ ತೆಪ್ಪದ ಮೇಲೆ ಕುಳಿತು ತೇಲುತ್ತ ಹೋಗುವುದನ್ನು ಬಿಟ್ಟರೆ ಬೇರೆ ಮಾರ್ಗವೇ ಇಲ್ಲವೆನ್ನುವುದು ಸ್ಪಷ್ಟವಾಯಿತು. ಅಷ್ಟು ಮಾಡುವಂತೆ ಅದನ್ನು

ಸಾಲ ತರಲು, ಸುತ್ತ ಮುತ್ತ ಯಾರೂ ಇರಲಿಲ್ಲವಾದ್ದರಿಂದ, ನಾವು ಕಿರುದೋಣಿ ಯೊಂದನ್ನು ಸಾಲವಾಗಿ ತರುವಂತಿರಲಿಲ್ಲ; ಏಕೆಂದರೆ, ಹಾಗೆ ಮಾಡಿದ್ದಾದರೆ ಜನ ನಮ್ಮನ್ನು ಬೆನ್ನಟ್ಟಿ ಬರುವ ಸಂಭವವಿತ್ತು.

ಆದ್ದರಿಂದ ನಾವು ಕತ್ತಲಾದಮೇಲೆ ತೆಪ್ಪದ ಮೇಲೆ ಮುಂದೆ ಸಾಗಿದೆವು, ನಮಗೆ ಹಾವಿನ ಪೊರೆ ಇಷ್ಟೆಲ್ಲವನ್ನು ಮಾಡಿದ ಮೇಲೆಯೂ, ಹಾವಿನ ಪೊರೆಯನ್ನು ಎತ್ತಿ ಕೊಳ್ಳುವುದು ತಿಳಿಗೇಡಿತನವೆಂಬುದನ್ನು ನಂಬದಂಥವರು ಯಾರಾದರೂ ಇದ್ದಲ್ಲಿ, ಅವರು ನಮಗೆ ಅದರಿಂದ ಈ ಮುಂದೆ ಒದಗಿದ ಅನರ್ಥವನ್ನು ಓದಿಕೊಂಡು ಕಂಡು ಕೊಂಡು ನಂಬಲೇಬೇಕು,

ಕಿರುದೋಣಿಗಳನ್ನು ಕೊಳ್ಳುವ ಸ್ಥಳ ತೀರದಲ್ಲಿರುವ ತೆಪ್ಪಗಳಾಚೆಗೆ ಇತ್ತು; ಅಲ್ಲಿ ಯಾವ ತೆಪ್ಪಗಳಿರುವುದೂ ನಮಗೆ ಕಂಡುಬರಲಿಲ್ಲ; ಆದ್ದರಿಂದ ನಾವು ಮೂರು ಗಂಟೆಗಳಿಗೂ ಮೀರಿದಷ್ಟು ಕಾಲ ಮುಂದೆ ಹೋದೆವು. ಸರಿ, ಇರುಳು ದಟ್ಟ ಬಿಳಿಪಿಗೆ ತಿರುಗಿತ್ತು; ಅದು ಇಬ್ಬನಿಗೆ ಮಾತ್ರ ಎರಡನೆಯದಾದ ಅನಿಷ್ಟ. ನದಿಯು ಹ್ಯೆ ಹೇಗಿದೆ ಎಂಬುದು ನಿಮಗೆ ಹೇಳಬರುವುದಿಲ್ಲ; ಸ್ವಲ್ಪ ದೂರದಲ್ಲಿರುವುದೂ ನಿಮಗೆ ಕಾಣಿಸುವು ದಿಲ್ಲ. ಹೊತ್ತು ಮೀರಿತು, ಸದ್ದಡಗಿತು; ಆಗ ನದಿಯ ಮೇಲೆ ಹಬೆ–ದೋಣಿ ಯೊಂದು ಬರುತ್ತಿತ್ತು. ನಾವು ಲಾಂದ್ರ ಹಚ್ಚಿದೆವು; ಇದು ಅದಕ್ಕೆ ಕಾಣಿಸಬಹುದು ಎಂದುಕೊಂಡೆವು. ನದಿಯ ದಿಕ್ಕಿಗೆ ಇದಿರಾಗಿ ಹೋಗುವ ದೋಣಿಗಳು ನಮ್ಮ ಹತ್ತಿ ರಕ್ಕೆ ಬರಲೇ ಇಲ್ಲ. ಅವು ಸಾಮಾನ್ಯವಾಗಿ ಕಟಕಟೆಗಳನ್ನೇ ಅನುಸರಿಸಿಕೊಂಡು ಬಂಡೆಗಳ ಕೆಳಗಣ ಸುಲಭ ಜಲವನ್ನೇ ಹುಡುಕುತ್ತವೆ; ಆದರೆ ಇಂಥಾ ರಾತ್ರಿಗಳಲ್ಲಿ ಅವು ಇಡೀ ನದಿಯ ಆಕರ್ಷಣೆಗೆ ವಿರುದ್ಧವಾಗಿ ನೇರ ನಾಲೆಯೊಳಕ್ಕೆ ನುಗ್ಗಿಬಿಡುತ್ತವೆ,

ಅದು ದೊಪ್ ದೊಪ್ ಎಂದು ಬರುತ್ತಿರುವುದು ಕೇಳಿಸಿತು; ಆದರೆ ಬಲು ಹತ್ತಿ ರಕ್ಕೆ ಬರುವತನಕ ಸ್ಪಷ್ಟವಾಗಿ ಕಾಣಿಸಲಿಲ್ಲ; ಅದು ನೇರ ನಮ್ಮ ಕಡೆಗೇ ಬರುತ್ತಿತ್ತು. ತಗಲದಂತೆ ಎಷ್ಟು ಸಮೀಪಕ್ಕೆ ಬರಲಾದೀತು ಎಂಬುದನ್ನು ಕಂಡುಕೊಳ್ಳಲು ಅವರು ಹಲವೇಳೆ ಹಾಗೆ ಮಾಡುವುದುಂಟು. ಕೆಲವು ಸಲ ಚಕ್ರ ಮೂಲೆಯೊಂದನ್ನು ಮುರಿದು ಹಾಕುತ್ತದೆ, ಆಗ ಮಾರ್ಗದರ್ಶಕ ತನ್ನ ತಲೆಯನ್ನು ಹೊರಹಾಕಿ ನಗುತ್ತಾನೆ, ತಾನು ಬಲು ಬುದ್ಧಿವಂತನೆಂದು ತಿಳಿಯುತ್ತಾನೆ. ಬಂತದು, ಬಂತು; ನಮ್ಮನ್ನು ಅದು ಮುಗಿಸಿಬಿಡುತ್ತದೆ ಎಂದುವು. ಅದು ಯಾವ ಪಕ್ಕಕ್ಕೂ ಜರಗುವಂತೆಯೇ ನಮಗೆ ತೋರಲಿಲ್ಲ. ಭಾರೀ ದೋಣಿ ಅದೇ; ಸಾಲುಸಾಲದ ಮಿಂಚು-ಹುಳಗಳಿಂದಾವೃತ ವಾದ ಕಪ್ಪುಮುಗಿಲಂತೆ ರಭಸದಿಂದ ಬರುತ್ತಿತ್ತು. ಆದರೆ ಇದಕಿದ್ದಂತೆಯೇ ಭೂತ ದಂತೆ ಬೆದರಿಸುತ್ತ ಅದು ಎದುರಿಗೆ ನಿಂತಿತು; ಅದರ ತೆರೆದಿಟ್ಟ ಕುಲುಮೆ–ಬಾಗಿಲುಗಳ ದೀರ್ಘಪಂಕ್ತಿ ಕೆಂಗೆಂಡದ ಹಲ್ಲುಗಳಂತಿದ್ದವು, ಅದರ ರಾಕ್ಷಸಾಕಾರದ ಮೂತಿಗಳೂ ರಕ್ಷಣಾ ಪರಿಕರಗಳೂ ನಮ್ಮ ನೆತ್ತಿಯ ಮೇಲೆಯೇ ತೂಗುತ್ತಿದ್ದವು. ನಮ್ಮನ್ನು

ಕಂಡು ಅದು ಅರಚಿತು; ಎನ್ಜಿನ್ನನ್ನು ನಿಲ್ಲಿಸುವಂತೆ ಸೂಚಿಸಿ ಗೆಜ್ಜೆದನಿಗಳಾದವು; ಬೈಗುಳದ ಗದ್ದಲವೆದ್ದಿತು; ಹಬೆಯು ಶಿಲುಪಿ ಮೊರೆದು ಹಬೆಯನ್ನು ಹೊರದೂಡಿತು. ಜಿಮ್ ಒಂದು ಕಡೆಗೆ ನಾನಿನ್ನೊಂದು ಕಡೆಗೆ ನೀರಿಗೆ ಧುಮುಕಿದಾಗ, ಅದು ತೆಪ್ಪವನ್ನು ಭೇದಿಸಿ ಧ್ವಂಸಮಾಡುತ್ತಿತ್ತು. ನಾನು ಆಳಕ್ಕೆ ಮುಳುಗಿದೆ;—ನನ್ನ ಮೇಲೆ ಒಂದು ಮೂವತ್ತು ಅಡಿ ಉದ್ದವುಳ್ಳ ಚಕ್ರವಿದ್ದುದರಿಂದ ಅದರ ಚಲನಕ್ಕೆ ಯಥೇಚ್ಛವಾದಷ್ಟು ಸ್ಥಳವಿರಬೇಕೆಂದು ನನಗನ್ನಿಸಿದುದರಿಂದ ಆ ಹಬೆದೋಣಿಯ ತಳವನ್ನು ಕಂಡುಹಿಡಿಯು ವುದು ನನ್ನ ಉದ್ದೇಶವಾಗಿತ್ತು. ಒಂದು ನಿಮಿಷಕಾಲ ನೀರೊಳಗೆ ಮುಳುಗಿರುವುದು ನನಗೆ ಎಂದೂ ಸಾಧ್ಯವೇ; ಆದರೆ ಈ ಸಲ ಮಾತ್ರ ನಾನು ಒಂದೂವರೆ ನಿಮಿಷಕಾಲ ಇದ್ದೆನೆಂದು ನನ್ನೆಣಿಕೆ. ನನ್ನ ಉಸಿರುಕಟ್ಟಿ ಮೈ ಬಿರಿಯುವಂತಾದ್ದರಿಂದ ನಾನು ಅವ ಸರದಿಂದ ಮೇಲಕ್ಕೆ ಎಗರಿದೆ. ನನ್ನ ಕಂಕುಳ ಮೇಲುಭಾಗ ನೀರಮೇಲೆ ಕಾಣಿಸಿಕೊಳ್ಳುವ ಮಟ್ಟಿಗೆ ನಿಂತು, ಮೂಗು ಬಾಯಿಗಳಲ್ಲಿ ಸೇರಿದ್ದ ನೀರನ್ನು ತೆಗೆದುಹಾಕಿದೆ. ಅಬ್ಬರಿ ಸುವ ಪ್ರವಾಹವಿತ್ತು; ತೆಪ್ಪದಲ್ಲಿದ್ದವರ ಗತಿಯೇನಾಯಿತೆಂಬ ಯೋಚನೆಯೇ ಅವರಿಗಿರ ಲಿಲ್ಲವಾದ್ದರಿಂದ, ಹತ್ತು ಸೆಕೆಂಡುಗಳ ಮೇಲೆ ಎನ್‌ಜಿನ್ನುಗಳು ಮತ್ತೆ ಮೊರೆದವು, ದೋಣಿ ಸಾಗಿತು. ಈಗ ಅದು ಮೇಲುನದಿಯಲ್ಲಿ ನಡೆಯುತ್ತ ಸಾಗಿತ್ತು, ಮುಂದೆ ಮುಂದೆ ಮಬ್ಬಿನಲ್ಲಿ ಕಣ್ಣಿಗೆ ಕಾಣದೆ, ಅದರ ಸದ್ದು ಮಾತ್ರ ನನಗೆ ಕೇಳಿಬರುತ್ತಿತ್ತು.

ನಾನು ಜಿಮ್ಮನ ಹೆಸರುಹಿಡಿದು ಆರು ಸಲ ಕೂಗಿದೆ. ನನಗೆ ಉತ್ತರವೇ ಬರ ಲಿಲ್ಲ. ನಾನು ನೀರೊಳಗಿದ್ದಾಗ ನನಗೆ ಬಂದು ತಗುಲಿದ ಹಲಗೆಯೊಂದನ್ನು ಹಿಡಿದು ಕೊಂಡು ಮುಂದೆ ತಳ್ಳಿಕೊಂಡು ತೀರವನ್ನು ಸೇರ ಹೊರಟೆ. ಆದರೆ ಪ್ರವಾಹದ ಸೆಳೆವು ನನ್ನ ಎಡಪಕ್ಕದ ತೀರದ ಕಡೆಗಿರುವುದನ್ನು ಗಮನಿಸಿದೆ. ಅದರ ಅರ್ಥ ನಾನೊಂದು ದಾಟಿನಲ್ಲಿದ್ದೆನೆಂಬುದು. ಅದಕ್ಕಾಗಿ ನಾನು ದಿಕ್ಕು ಬದಲಿಸಿ ಆ ಕಡೆಗೇ ಚಲಿಸಿದೆ.

ದೀರ್ಘವೂ ವಕ್ರವೂ ಆದ ಎರಡು ಮೈಲಿಗಳವರೆಗಿನ ದಾಟು ಅದು. ಅದನ್ನು ದಾಟಿಹೋಗಲು ನನಗೆ ಬಹುಕಾಲ ಹಿಡಿಯಿತು. ಆದರೂ ನಾನು ಕ್ಷೇಮವಾಗಿ ತಡಿ ಸೇರಿದೆ, ದಡ ಹತ್ತಿದೆ. ಸ್ವಲ್ಪದೂರ ನನಗೇನೂ ಕಾಣಿಸಲಿಲ್ಲ. ಬಳಿಕ ಹಳ್ಳಿತಿಟ್ಟಿನ ನೆಲವನ್ನು ಉದ್ದಕ್ಕೂ ಕಾಲು ಮೈಲಿಯ ತನಕ ಹುಡುಕುತ್ತ ಹೋದೆ; ಅಲ್ಲಿ ನನಗೊಂದು ದೊಡ್ಡ ಹಳೆ-ಮಾದರಿಯ ಜೋಡಿ ತೊಲೆ-ಮನೆ, ನಾನು ಕಣ್‌ಬಿಡುವುದರೊಳಗೆ, ಸಿಕ್ಕಿತು. ಪಕ್ಕಕ್ಕೆ ನುಗ್ಗಿ ಓಡಿಹೋಗಲು ಹವಣಿಸಿದೆ; ಆದರೆ ನಾಯಿಗಳ ಹಿಂಡೊಂದು ಗುರುಗುಟ್ಟಿ ಬಗಳುತ್ತಾ ನನ್ನ ಕಡೆಗೇ ಅಟ್ಟಿಬಂದವು. ಆದ್ದರಿಂದ ಅಲ್ಲಿಂದ ಒಂದು ಹೆಜ್ಜೆ ಯಷ್ಟೂ ಕದಲದಿರುವುದೇ ಕ್ಷೇಮವೆನ್ನುವುದು ನನಗೆ ಚೆನ್ನಾಗಿ ತಿಳಿದಿತ್ತು.

## ೧೭

ನಿಮಿಷದೊಳಗಾಗಿ ಯಾರೋ ಕಿಟಕಿಯಿಂದ, ತಲೆಯನ್ನು ಹೊರಗೆ ತೋರಿಸದೆ, ಮಾತಾಡಿದರು. ಅವರು ಹೇಳಿದರು ;

"ನಿಲ್ಲಿಸಿ, ಹುಡುಗರಾ! ಯಾರಲ್ಲಿ ?"

ನಾನು ಹೇಳಿದೆ :—

"ನಾನು."

"ಯಾರು ನೀನು ?"

"ಜಾರ್ಜ್ ಜಾಕ್‌ಸನ್, ಸ್ವಾಮಿ."

"ಏನು ಬೇಕು ನಿನಗೆ ?"

"ನನಗೇನೂ ಬೇಡ. ನಾನು ಹೀಗೆಯೇ ಹೋಗುತ್ತಿದ್ದೆ, ನಾಯಿಗಳು ತಡೆದವು"

"ಏ—ರಾತ್ರಿಯ ಈ ವೇಳೆಯಲ್ಲಿ ನೀನು ಇಲ್ಲಿ ಸುಳಿದಾಡುತ್ತಿರುವುದು ಏಕೆ?"

"ನಾನು ಕದ್ದು ಸುಳಿಯುತ್ತಿರಲಿಲ್ಲ ಸ್ವಾಮಿ ಹಡವೆ ದೋಣಿಯಿಂದ ನಾನು ನೀರಿಗೆ ಜಾರಿಬಿದ್ದೆ"

"ಓ ಹಾಗೆ ಆಯಿತೆ, ಆಯಿತೇನು ? ಎಲ್ಲಿ ಯಾರಾದರೂ ಒಂದು ದೀಪವನ್ನು ಹಚ್ಚಿ. ನಿನ್ನ ಹೆಸರೇನೆಂದೆ ನೀನು ?"

"ಜಾರ್ಜ್ ಜಾಕ್‌ಸನ್, ಸ್ವಾಮಿ. ನಾನಿನ್ನೂ ಹುಡುಗ"

"ಇಲ್ಲಿ ನೋಡು, ನೀನು ನಿಜ ಹೇಳುತ್ತಿದ್ದರೆ ಹೆದರಬೇಕಾದ್ದಿಲ್ಲ—ಯಾರೂ ನಿನ್ನ ತಂಟೆಗೆ ಬರುವುದಿಲ್ಲ. ಆದರೆ ಕದಲದೆ ಹಾಗೇ ನಿಂತಿರು; ಎಲ್ಲಿದ್ದೀಯೋ ಅಲ್ಲೇ ಇರು. ಯಾರಾದರೂ ಹೋಗಿ ಬಾಬನ್ನೂ ಟಾಮನ್ನೂ ಎಬ್ಬಿಸಿ, ಬಂದೂಕಗಳನ್ನು ತನ್ನಿ. ಜಾರ್ಜ್‌ಜಾಕ್‌ಸನ್ ನಿನ್ನ ಜತೆ ಯಾರಾದರೂ ಇದ್ದಾರೇನು ?"

"ಇಲ್ಲ ಸ್ವಾಮಿ, ಯಾರೂ ಇಲ್ಲ"

ಮನೆಯೊಳಗೆ ಜನ ಅತ್ತಿತ್ತ ಚಲಿಸುವ ಸದ್ದು ಕೇಳಿಬಂತು, ಒಂದು ದೀಪವೂ ನನ್ನ ಕಣ್ಣಿಗೆ ಬಿತ್ತು. ಆ ಮನುಷ್ಯ ಕೂಗಿದ !

"ಆ ದೀಪವನ್ನು ಆಚೆಗೆ ತೊಲಗಿಸು ಬೆಟ್ಸಿ, ಮಂಕು ಹುಡುಗಿ ! ನಿನ್ನ ತಲೆಯಲ್ಲಿ ಬುದ್ಧಿ ಇಲ್ಲವೆ ? ಅದನ್ನು ಮುಂಬಾಗಿಲ ಹಿಂದೆ ನೆಲದ ಮೇಲಿಡು. ಬಾಬ್,ನೀನೂ ಟಾಮನೂ ಸಜ್ಜಾಗಿದ್ದರೆ ನಿಮ್ಮ ಜಾಗಕ್ಕೆ ಬಂದು ನಿಲ್ಲಿ."

"ಎಲ್ಲರೂ ಸಿದ್ಧವಾಗಿದ್ದೇವೆ."

"ಈಗ, ಜಾರ್ಜ್ ಜಾಕ್‌ಸನ್, ನಿನಗೆ ಷೆಪರ್ಡ್‌ಸನ್ನರು ಗೊತ್ತೆ ?"

"ಇಲ್ಲ ಸ್ವಾಮಿ ! ನಾನು ಅವರ ಹೆಸರನ್ನೇ ಕೇಳಿಲ್ಲ."

"ಸರಿಯೆ, ಅದು ಹಾಗೆಯೇ ಇರಬಹುದು, ಮತ್ತು ಇರಲಾರದು. ಈಗ ಎಲ್ಲರೂ ಸಿದ್ಧರಾಗಿರಿ. ಮುಂದಕ್ಕೆ ಬಾ, ಜಾರ್ಜ್ ಜಾಕ್‌ಸನ್, ಎಚ್ಚರಿಕೆ, ಅವಸರ ಮಾಡಬಾರದು – ಬಲು ನಿಧಾನವಾಗಿ ಬರಬೇಕು. ನಿನ್ನ ಜೊತೆಯಲ್ಲಿ ಯಾರಾದರೂ ಇದ್ದರೆ, ಅವನು ಹಿಂದೆಯೇ ಉಳಿದುಕೊಳ್ಳಲಿ—ಅವನು ಕಾಣಿಸಿಕೊಂಡಲ್ಲಿ ಗುಂಡಿಟ್ಟು ಕೊಲ್ಲುತ್ತೇವೆ ಈಗ ಬಾ. ನಿಧಾನವಾಗಿ ಬಾ. ನೀನು ಒಳಕ್ಕೆ ತೂರಿಕೊಳ್ಳಲು ಎಷ್ಟು ಬೇಕೋ ಅಷ್ಟೇ ಬಾಗಿಲನ್ನು ತಳ್ಳಿಕೊಂಡು ಒಳಗೆ ಬಾ, ಕಿವಿಗೆ ಬಿತ್ತೆ ?"

ನಾನು ಅವಸರಮಾಡಲಿಲ್ಲ ! ಮಾಡುವ ಇಷ್ಟವಿದ್ದರೂ, ಅದು ಸಾಧ್ಯವಿರಲಿಲ್ಲ. ಒಂದು ಸಲಕ್ಕೆ ಒಂದೇ ಹೆಜ್ಜೆಯಂತೆ ನಾನು ನಿದಾನವಾಗಿ ನಡೆಯುತ್ತಿದ್ದೆ ; ನನ್ನ ಎದೆ ಬಡಿತವೊಂದರ ಹೊರತು ಇನ್ನಾವ ಧ್ವನಿಯೂ ನನಗೆ ಕೇಳಿಸಿದಂತೆ ತೋರಲಿಲ್ಲ. ಆ ನಾಯಿಗಳೂ ಆ ಮನುಷ್ಯರಂತೆಯೇ ಸ್ತಬ್ಧವಾಗಿದ್ದವು, ಆದರೂ ಅವು ನನ್ನ ಹಿಂದೆಯೇ ಬರುತ್ತಿದ್ದವು. ಮೂರು ದಿಮ್ಮಿಗಳಿಂದ ಕಟ್ಟಿದ್ದ ಮೆಟ್ಟಲು ಬಳಿಗೆ ನಾನು ಬಂದಾಗ, ಅವರು ಬೀಗ ತೆರೆಯುತ್ತಿರುವುದೂ, ಗಡಾರಿ ಇಳಿಯಿಸುತ್ತಿರುವುದೂ, ಕೊಂಡಿ ತೆರೆಯ ೦ ತ್ತಿರುವುದೂ ನನಗೆ ಕೇಳಿಸಿತು. ನಾನು ಬಾಗಿಲ ಮೇಲೆ ಕೈಯಿಟ್ಟು ಸ್ವಲ್ಪ ನೂಕಿದೆ, ಇನ್ನೂ ಸ್ವಲ್ಪ ನೂಕಿದೆ ! ಕಡೆಗೆ ಯಾರೋ ಹೇಳಿದರು : "ಸಾಕು, ಅಷ್ಟು ಸಾಕು; ಈಗ ಒಳಕ್ಕೆ ತಲೆಹಾಕು". ನಾನು ಹಾಗೆಯೇ ಮಾಡಿದೆ ! ಅವರು ನನ್ನ ತಲೆಯನ್ನು ತೆಗೆದುಹಾಕುವರೆಂದೇ ಅಂದುಕೊಂಡೆ.

ನೆಲದ ಮೇಲೆ ಮೋಂಬತ್ತಿ ಉರಿಯುತ್ತಿತ್ತು. ಕಾಲು ನಿಮಿಷದವರೆಗೆ ಅವರೆಲ್ಲರೂ ನನ್ನನ್ನೆ ನೋಡುತ್ತಿದ್ದರು, ನಾನು ಅವರನ್ನೇ ನೋಡುತ್ತಿದ್ದೆ. ನನ್ನನ್ನು ಹಿಮ್ಮೆಟ್ಟುವಂತೆ ಮಾಡುತ್ತಿದ್ದ ಬಂದೂಕದ ಮೊನೆಗಳನ್ನು ನನ್ನ ಕಡೆಗೆ ಗುರಿಯಿಟ್ಟು ನಿಂತಿದ್ದ ಮೂವರು ಧಾಂಡಿಗರು: ಒಬ್ಬ ಸುಮಾರು ಅರುವತ್ತರ ಬಿಳಿತಲೆಯ ಮುದುಕ, ಇನ್ನಿಬ್ಬರೂ ಮೂವತ್ತರ ಮೇಲಿರಬಹುದು ಅವರಿಗೆ—ಲಕ್ಷಣವಾಗಿ ಸುಂದರನಾಗಿದ್ದವರು ಮತ್ತು ಬಲು ಮುದ್ದಾದ ಬಿಳಿತಲೆಯ ಮುದುಕಿ ಇನ್ನೊಬ್ಬಳು, ಅವಳ ಹಿಂದೆ ಇಬ್ಬರು ತರುಣಿಯರಿದ್ದರು; ನಾನು ಅವರನ್ನು ಸರಿಯಾಗಿ ನೋಡುವುದಕ್ಕಾಗಲಿಲ್ಲ. ಆ ವೃದ್ಧ ಮಹನೀಯ ಹೇಳಿದ :

"ಅಲ್ಲಿ, ಎಲ್ಲ ಸರಿ ಎಂದು ತೋರುತ್ತದೆ. ಬಾ ಒಳಗೆ"

ನಾನು ಒಳಗೆ ಬಂದ ಕೂಡಲೇ ಆ ವೃದ್ಧ ಮಹನೀಯ ಬಾಗಿಲಿಗೆ ಬೀಗ ಹಾಕಿದನು, ಗಡಾರಿಯನ್ನು ಭದ್ರಪಡಿಸಿದನು, ಕೊಂಡಿಯನ್ನು ಸೇರಿಸಿದನು. ತಮ್ಮ ಬಂದೂಕಗಳೊಂದಿಗೆ ಒಳಗೆ ಬರಬೇಕೆಂದು ಆ ತರುಣರಿಗೆ ಹೇಳಿದನು. ಹರುಕು ಜಮಖಾನ ಹಾಸಿದ್ದ ದೊಡ್ಡ ಕೋಣೆಯೊಂದನ್ನು ಎಲ್ಲರೂ ಪ್ರವೇಶಿಸಿದರು, ಮುಂಭಾಗದ ಕಿಟಕಿಗಳಿಗೆ ಬಲುದೂರದಲ್ಲಿದ್ದ ಮೂಲೆಯೊಂದರಲ್ಲಿ ಸೇರಿದರು ! ಉಳಿದ ಪಕ್ಕಗಳಲ್ಲಿ ಕಿಟಕಿಗಳೇ ಇರಲಿಲ್ಲ. ಮೋಂಬತ್ತಿ ದೀಪವನ್ನು ಎತ್ತಿ ಹಿಡಿದರು, ನನ್ನ ಮುಖವನ್ನು ಚೆನ್ನಾಗಿ

ವೀಕ್ಷಿಸಿದರು. ಎಲ್ಲರೂ ಹೇಳಿದರು "ಏಕೆ, ಇವನು ಷೆಪರ್ಡ್‌ಸನ್ ಮನೆತನದವ ನಲ್ಲ,—ಅಲ್ಲ, ಷೆಪರ್ಡ್‌ಸನ್ ಮನೆಯಂವರಲ್ಲಿ ಯಾರಂತೆಯೂ ಇವನಿಲ್ಲ." ಯಾವುದಾದರೂ ಆಯುಧಗಳನ್ನು ನಾನು ಬಚ್ಚಿಟ್ಟುಕೊಂಡಿಲ್ಲವೆಂಬುದನ್ನು ಖಾತರಿಪಡಿಸಿಕೊಳ್ಳುವುದಾಗಿ ನನ್ನ ಮೈಮೇಲೆ ಕೈಹಾಕಿ ಹುಡುಕಬೇಕಾಗಿರುವುದರಿಂದ ನಾನು ಏನೂ ತಿಳಿದುಕೊಳ್ಳಬಾರದೆಂದೂ ಹಾಗೆ ಮಾಡುವುದು ನನ್ನನ್ನು ತೊಂದರೆಪಡಿಸಲಲ್ಲವೆಂದೂ ಆ ಮುದುಕ ಹೇಳಿದ. ಅವನೇನು ನನ್ನ ಜೇಬಿಗೆ ಕೈ ಹಾಕಲಿಲ್ಲ, ಹೊರಗಡೆಯೇ ತಡವಿ ನೋಡಿದನು ; ಎಲ್ಲವೂ ಸರಿಯಾಗಿದೆ ಎಂದನು. ಆರಾಮವಾಗಿ ವಿಶ್ರಮಿಸಿಕೊಳ್ಳುವಂತೆಯೂ, ನನ್ನ ಕಥೆಯನ್ನೆಲ್ಲ ಹೇಳುವಂತೆಯೂ ನನ್ನನ್ನು ಕೇಳಿಕೊಂಡ ಆದರೆ ಮುದುಕಿ ಹೇಳಿದಳು :

"ಏನಂದಿರಿ, ಸಾರ್, ಬಡಮಗು ಒದ್ದೆಮುದ್ದೆಯಾಗಿದೆ. ಅವನು ಹಸಿದಿರುವನೆಂಬುದು ನಿಮಗೆ ಹೊಳೆದಿಲ್ಲವೆ ?"

"ನಿನಗೆ ಸಹಜವಾಗಿಯೇ ನೀನು ಹೇಳಿದೆ, ರಾಶೆಲ್—ನನಗೆ ಮರೆತು ಹೋಗಿತ್ತು."

ಬಳಿಕ ಮುದುಕಿ ಹೇಳಿದಳು :

"ಬೆಟ್ಸಿ (ನೀಗ್ರೊ ಹೆಣ್ಣಾಳಿವಳು), ಪಾಪ ಹಸಿದಿದೆ ನೀನು ಆದಷ್ಟು ಬೇಗ ಓಡಿ ಹೋಗಿ ಇವನಿಗೆ ತಿನ್ನಲು ಏನಾದರೂ ಅಷ್ಟನ್ನು ತಂದು ಕೊಡು ! ಲೇ ಹುಡುಗಿಯರಾ ನಿಮ್ಮಲ್ಲಿ ಯಾರಾದರೊಬ್ಬಳು ಹೋಗಿ ಬಕ್ಕನ್ನು ಎಬ್ಬಿಸಿ ಅವನಿಗೆ ಹೇಳಿ—ಓ ಅವನೇ ಬಂದ, ಬಿಡಿ. ಈ ಪುಟ್ಟ ಹೊಸಬನನ್ನು ಒಳಗೆ ಕರೆದುಕೊಂಡು ಹೋಗಿ ಅವನ ಒದ್ದೆಬಟ್ಟೆಗಳನ್ನು ತೆಗೆಸಿ ಹಾಕಿ, ಒಣಗಿರುವ ನಿನ್ನ ಕೆಲವು ಬಟ್ಟೆಗಳನ್ನು ಅವನಿಗೆ ತೊಡಿಸು",

ಬಕ್ ನನಗಿಂತ ಸ್ವಲ್ಪ ದಪ್ಪಕ್ಕಿದ್ದರೂ ಅವನಿಗೆ ಸುಮಾರು ನನ್ನಷ್ಟೇ ವಯಸ್ಸು—ಹದಿಮೂರೋ, ಹದಿನಾಲ್ಕೋ. ಅದರ ಹತ್ತಿರವೋ ಅಷ್ಟೆ. ಅವನು ಜುಬ್ಬಾ ಒಂದುವಿನಾ ಇನ್ನೇನನ್ನೂ ತೊಟ್ಟಿರಲಿಲ್ಲ, ಅವನ ತಲೆಬಲು ದುರ್ವಾಸನೆಯುದಾಗಿತ್ತು. ಅವನು ಆಕಳಿಸುತ್ತಾ, ಒಂದು ಮುಷ್ಟಿಯಿಂದ ಕಣ್ಣುಜ್ಜಿಕೊಳುತ್ತಾ ಒಳಕ್ಕೆ ಬಂದನು. ಇನ್ನೊಂದು ಹಿಡಿಯಲ್ಲಿ ಬಂದೂಕವನ್ನು ಎಳೆದುಕೊಂಡು ಬಂದನು. ಅವನು ಕೇಳಿದ :

"ಷೆಪರ್ಡ್‌ಸನ್ನರು ಯಾರು ಇಲ್ಲವೇನು ?"

ಇಲ್ಲ, ಅದೊಂದು ಸುಳ್ಳು ಬೆದರಿಕೆ, ಎಂದರವರು.

"ಅವರು ಯಾರಾದರೂ ಬಂದಿದ್ದರೆ ನಾನು ಒಬ್ಬನನ್ನು ಹಿಡಿಯುಬಹುದಾಗಿತ್ತು" ಎಂದನವನು.

ಅವರೆಲ್ಲರೂ ನಕ್ಕರು ! ಬಾಬ್ ಹೇಳಿದ :

"ಏಕೆ, ಬಕ್, ಅವರು ನಮ್ಮ ತಲೆ ತೆಗೆದುಹಾಕಿಬಿಡುತ್ತಿದ್ದರು, ನೀನು ಅಷ್ಟು ತಡವಾಗಿ ಬಂದಿದ್ದೀಯೆ"

"ಯಾರೂ ನನಗೆ ಬಂದು ಹೇಳಲಿಲ್ಲ, ಅದು ಸರಿಯಲ್ಲ. ನನ್ನನ್ನು ಯಾವಾಗಲೂ ಕಡಗಣಿಸುತ್ತಲೇ ಬಂದಿದ್ದೀರಿ, ನನಗೆ ತಮಾಷೆಯಾವುದೂ ಸಿಕ್ಕುವುದಿಲ್ಲ."

"ಚಿಂತಿಸಬೇಡ ಮಗು, ಬಕ್, ನೀನೂ ಸಕಾಲದಲ್ಲಿ ನಿನ್ನ ಸಾಮರ್ಥ್ಯವನ್ನು ತೋರಿಸಲು ಬೇಕಾದಷ್ಟು ಅವಕಾಶಗಳು ಒದಗುತ್ತವೆ. ಇದಕ್ಕಾಗಿ ನೀನು ಸಿಡಿಗುಟ್ಟುವ ಅಗತ್ಯವಿಲ್ಲ. ಈಗ ಹೊರಡು, ನಿಮ್ಮ ತಾಯಿ ಹೇಳಿದಂತೆ ಮಾಡು ಹೋಗು." ಎಂದನು ಮುಂದುಂಕ.

ಮಹಡಿಯ ಮೇಲಿನ ಅವನ ಕೋಣೆಗೆ ನಾವು ಹೋದ ಮೇಲೆ ಅವನು ನನಗೆ ತನ್ನ ಜುಬ್ಬವೊಂದನ್ನೂ ದೊಗಲೇ ಷರಾಯೊಂದನ್ನೂ ಕೊಟ್ಟನು. ನಾನು ಅವುಗಳನ್ನು ಧರಿಸಿದೆ. ನಾನು ಆ ಕೆಲಸ ಮಾಡುತ್ತಿದ್ದಾಗ ಅವನು ನನ್ನ ಹೆಸರೇನೆಂದು ಕೇಳಿದ; ನಾನು ಅದಕ್ಕೆ ಉತ್ತರಕೊಡುವ ಮೊದಲೇ ಅವನು ಆಚೆಮೊನ್ನೆಯದಿನ ಕಾಡಿನಲ್ಲಿ ಹಿಡಿದು ತಂದಿದ್ದ ಮೈನಾ ಹಕ್ಕಿಯ ಮತ್ತು ಎಳೆಯ ಮೊಲವೊಂದರ ವಿಷಯವಾಗಿ ವರ್ಣಿಸತೊಡಗಿದ; ಮತ್ತು ಮೋಸೆಸ್ ಕಾಡಿನಲ್ಲಿ ಮೋಂಬತ್ತಿ ಆರಿದ ವೇಳೆಯಲ್ಲಿ ಎಲ್ಲಿದ್ದನೆಂದು ಕೇಳಿದ. ನನಗೆ ತಿಳಿಯದು, ಎಂದೆ ನಾನು ಹಿಂದೆಂದೂ ಎಂತೂ ಆ ವಿಷಯವನ್ನು ಕೇಳಿಯೇ ಇರಲಿಲ್ಲ.

"ಸ್ವಲ್ಪ ಯೋಚನೆ ಮಾಡು" ಎಂದನವನು.

"ನಾನು ಯೋಚಿಸುವುದಾದರೂ ಹೇಗೆ, ಹಿಂದೆಂದೂ ಅದರ ವಿಷಯವನ್ನೇ ಕೇಳದಿರುವಾಗ ?" ಎಂದೆ ನಾನು.

"ಆದರೂ ನೀನು ಯೋಚನೆ ಮಾಡಬಲ್ಲೆ, ಅಲ್ಲವೆ ? ಅದು ಬಲು ಸುಲಭ."

"ಯಾವ ಮೋಂಬತ್ತಿ ?" ಎಂದೆ ನಾನು.

"ಏಕೆ, ಯಾವ ಮೋಂಬತ್ತಿಯಾದರೇನು ?" ಎಂದನವನು.

"ಅವನೆಲ್ಲಿದ್ದನೋ ನನಗೆ ತಿಳಿಯದು, ಅವನು ಎಲ್ಲಿದ್ದ ?" ಎಂದೆ ನಾನು.

"ಅವನಿದ್ದುದು ಕತ್ತಲೆಯಲ್ಲಿ ! ಅಲ್ಲಿ ಇದ್ದುದವನು !"

"ಹಾಗದರೆ, ಅವನೆಲ್ಲಿದ್ದನೆಂಬುದು ನಿನಗೇ ತಿಳಿದಿರುವಾಗ ನನ್ನನ್ನು ಕೇಳಿದ್ದು ಏಕೆ ?"

"ಬಿಡು, ಹಾಳಾಗಲಿ !, ಅದೊಂದು ಸಮಸ್ಯೆ, ನಿನಗೆ ತಿಳಿಯಿತೆ ? ಏ, ನೀನೆಷ್ಟು ದಿನ ಇಲ್ಲಿರುತ್ತೀಯೆ ? ನೀನು ಯಾವಾಗಲೂ ಇಲ್ಲೇ ಇದ್ದುಬಿಡಬೇಕು. ನಾನು ಸಡಗರದಿಂದ ಕಾಲ ಕಳೆಯಬಹುದು—ಈಗ ಶಾಲೆ ನಡೆಯುತ್ತಿಲ್ಲ. ನೀನು ಒಂದು ನಾಯಿಯನ್ನು ಸಾಕಿಕೊಂಡಿರುವೆಯ ? ನನ್ನ ಹತ್ತಿರ ಒಂದು ನಾಯಿ ಇದೆ.—ಅದು ನದಿಗೆ ಹೋಗಿ ಮುಳುಗಿ ನೀನೆಸೆದ ನಾಣ್ಯಗಳನ್ನು ತಂದು ಕೊಡುತ್ತದೆ. ನೀನು ಪ್ರತಿ

ರವಿವಾರವೂ ತಲೆಬಾಚಿಕೊಳ್ಳುತ್ತೀಯಾ ? ಅಂಥಾ ಅವಿವೇಕದ ಕೆಲಸಗಳನ್ನು ಮಾಡು ತ್ತೀಯಾ ? ಬೇಕಾದರೆ ಪಂದ್ಯವನ್ನು ಕಟ್ಟು, ನಾನು ಮಾಡುವುದಿಲ್ಲ, ಅಮ್ಮ ಬಂದು ಅದೆಲ್ಲವನ್ನೂ ಮಾಡಿಕೊಡುತ್ತಾಳೆ. ಹಾಳು ಈ ಹಳೆಯ ಷರಾಯಿ ! ನಾನು ಅದನ್ನು ತೊಡಬೇಕೆಂದು ತೋರುತ್ತದೆ : ತುಂಬಾ ಸೆಕೆಯಾದ್ದರಿಂದ ಅದನ್ನು ತೊರದಿರುವುದೇ ಮೇಲಾದೀತು. ನಿನ್ನ ಸಿದ್ಧತೆಯುಷ್ಟೂ ಮುಗಿಯಿತೋ ? ಸರಿ ಹಾಗಾದರೆ ಹಳೆಯ ಕುದುರೆಯೇ ಬಾ, ಹೊರಗೆ."

ತಣ್ಣಗಿರುವ ಚಿಕ್ಕ ಚಿಕ್ಕ ರೊಟ್ಟಿಯಚೂರುಗಳು, ತಣ್ಣಗಿರುವ ಗೋಮಾಂಸದ ಭಕ್ಷ್ಯಗಳು, ಬೆಣ್ಣೆ ಮತ್ತು ಮಜ್ಜಿಗೆ–ಇವೇ ನನಗವರು ಹಾಕಿದ ಊಟ. ಅದಕ್ಕಿಂತ ಉತ್ತಮವಾದುದನ್ನು ನಾನು ಈವರೆಗೂ ಕಂಡೇ ಇಲ್ಲ. ಬಕ್, ಅವನ ಅಮ್ಮ ಮತ್ತು ಎಲ್ಲರೂ–ಹೊರಟುಹೋಗಿದ್ದ ನೀಗ್ರೋ ಹೆಂಗಸನ್ನೂ, ಆ ತರುಣಿಯರಿಬ್ಬರನ್ನೂ ಬಿಟ್ಟು—ದುಂಡನೆಯ ಕೊಳವೆಯಿಂದ ಧೂಮಪಾನ ಮಾಡಿದರು. ಅವರೆಲ್ಲರೂ ಹೊಗೆ-ಸೇದಿದರು, ಹರಟಿದರು ; ನಾನೂ ಊಟ ಮಾಡಿದೆ, ಹರಟಿದೆ. ಆ ತರುಣಿ ಯರು ರಜಾಯಿಗಳನ್ನು ಹೊದ್ದಿದ್ದರು ; ಅವರ ತಲೆಗೂದಲು ಬೆನ್ನ ಮೇಲಿಳಿದಿತ್ತು–ಅವ ರೆಲ್ಲರೂ ನನ್ನನ್ನು ಪ್ರಶ್ನೆ ಕೇಳಿದರು. ಅಪ್ಪ, ನಾನು ಮತ್ತು ಮನೆಯವರೆಲ್ಲರೂ ಆರ್ಕನ್ಸಾ ಕೆಳಗಿನ ಚಿಕ್ಕ ಹೊಲವೊಂದರಲ್ಲಿ ವಾಸಮಾಡುತ್ತಿದ್ದೆವೆಂದೂ, ನನ್ನ ಸೋದರಿ ಮೇರಿ ಆ್ಯನ್ನ್ ಓಡಿಹೋಗಿ ಮದುವೆಯಾದಳು–ಆಮೇಲೆ ಅವಳ ಸುದ್ದಿಯೇ ಬರಲಿಲ್ಲ ವೆಂದೂ, ಬಿಲ್ ಅವರನ್ನು ಹುಡುಕಿಕೊಂಡು ಹೋದನು–ಅವನ ಸುದ್ದಿಯೂ ಬರಲಿಲ್ಲ ವೆಂದೂ, ಟಾಮ್ ಮತ್ತು ಮಾರ್ಕ್ ಸತ್ತರು–ನಾನು ಅಪ್ಪ ಇಬ್ಬರೇ ಉಳಿದುಕೊಂಡೆ ವೆಂದೂ, ಅವನು ಇದ್ದುದನೆಲ್ಲ ಕಳೆದುಕೊಂಡು ಕಷ್ಟಪಟ್ಟನೆಂದೂ, ಅವನು ಸತ್ತಮೇಲೆ —ಆ ಹೊಲ ನಮ್ಮದಲ್ಲವಾದ್ದರಿಂದ–ನಾನು ಉಳಿದುದನ್ನು ಎತ್ತಿಕೊಂಡು ಹಬೆದೋಣಿ ಯಲ್ಲಿ ನದೀ-ಪ್ರಯಾಣವನ್ನು ಮಾಡುತ್ತಿದ್ದಾಗ ಹೆಜ್ಜೆತಪ್ಪಿ ನೀರಿಗೆ ಬಿದ್ದೆನೆಂದೂ–ನಾನಿ ಲ್ಲಿಗೆ ಬಂದದು ಹೀಗೆಂದೂ ನಾನು ಉತ್ತರ ಕೊಟ್ಟೆ. ಅದಕ್ಕವರು 'ಎಷ್ಟುದಿನ ಬೇಕಾ ದರೂ ನೀನಿಲ್ಲಿಯೇ ಇದ್ದುಬಿಡಬಹುದು' ಎಂದರು. ಅಷ್ಟುಹೊತ್ತಿಗೆ ಹಗಲು ಮುಗಿಯಿತು, ಎಲ್ಲರೂ ಮಲಗಲು ಹೊರಟರು. ಬಕ್ಕನೊಂದಿಗೆ ನಾನು ಮಲಗಲು ಹೊರಟೆ. ಬೆಳಗ್ಗೆ ಎಚ್ಚರವಾದಗ, ಪ್ರಾರಬ್ಧವೇ !, ನನ್ನ ಹೆಸರೇ ನನಗೆ ಮರೆತು ಹೋಗಿತ್ತು. ಹಾಗೆಯೇ ಯೋಚನೆ ಮಾಡುತ್ತಾ ಮಲಗಿದ್ದೆ ; ಬಕ್ ಬಂದು ಎಬ್ಬಿಸಿ ದಾಗ ನಾನು ಕೇಳಿದೆ ;

"ಅಕ್ಷರ ಬಿಡಿಸಿ ಹೇಳುವುದು ನಿನಗೆ ಬರುವುದೆ, ಬಕ್?"

"ಬರುತ್ತದೆ" ಎಂದನವನು.

"ನನ್ನ ಹೆಸರಿನ ಅಕ್ಷರ ಬಿಡಿಸಿ ಹೇಳುವುದು ನಿನಗೆ ಖಂಡಿತ ಬಾರದು" ಎಂದೆ.

"ಧೈರ್ಯವಿದ್ದರೆ ಬಾಜಿಕಟ್ಟು. ನಾನು ಹೇಳಬಲ್ಲೆ" ಎಂದನವನು.

"ಆಗಬಹುದು. ಹೇಳು ನೋಡೋಣ" ಎಂದೆ.

"ಜಿ–ಇ–ಓ–ಆರ್–ಜಿ–ಇ ಜೆ-ಎ-ಎಕ್ಸ್-ಓ-ಎನ್" ಎಂದನವನು.

"ಸರಿಯೆ, ನೀನು ಗೆದ್ದೆ. ನಿನಗದು ಬರುವುದಿಲ್ಲ ಎಂದುಕೊಂಡಿದ್ದೆ ನಾನು." ಅದೇನು ಉಚ್ಚರಿಸಲು ಸೌಕರ್ಯವಾದಂಥ ಹೆಸರಲ್ಲ ಅದು-ತತ್‌ಕ್ಷಣವೇ, ಅಭ್ಯಾಸ ಮಾಡದೆ" ಎಂದೆ ನಾನು.

ನಾನು ಅಂತರಂಗದಲ್ಲಿ ಅದನ್ನು ಭದ್ರವಾಗಿಟ್ಟುಕೊಂಡೆ; ಏಕೆಂದರೆ ಮುಂದಿನ ಸಲ ಯಾರಾದರೂ ನನ್ನನ್ನು ಅದರ ಅಕ್ಷರ ಬಿಡಿಸಿ ಹೇಳೆಂದು ಕೇಳಬಹುದು; ಆದ್ದರಿಂದ ಅದು ಬಾಯೊಳಗೇ ಇರಬೇಕೆಂಬುದೂ, ನನ್ನ ಬಳಕೆಯಲ್ಲಿರುವಂತೆ ಕೇಳಿದ ಕೂಡಲೆ ಒದರುವುದೂ ಸಾಧ್ಯವಿರಬೇಕೆಂಬುದೂ ನನ್ನ ಅಪೇಕ್ಷೆಯಾಗಿತ್ತು.

ಅದು ತುಂಬಾ ಸೊಗಸಾದ ಸಂಸಾರ, ಆ ಮನೆಯೂ ತುಂಬಾ ಸೊಗಸಾಗಿತ್ತು. ನಮ್ಮ ಸೀಮೆಯಲ್ಲೇ ಅದರಷ್ಟು ಸೊಗಸಾದ, ಅಚ್ಚುಕಟ್ಟಾದ ಮನೆಯನ್ನೇ ನಾನು ಕಂಡಿರಲಿಲ್ಲ. ಅದರ ಮುಂಬಾಗಿಲಿಗೆ ಉಕ್ಕಿನ ಅಗಣಿಯೂ ಇರಲಿಲ್ಲ, ಜಿಂಕೆ ತೊಗಲ ಹುರಿಯನ್ನು ಕಟ್ಟಿದ ಮರದ ಅಗಣಿಯೂ ಇರಲಿಲ್ಲ; ಪಟ್ಟಣಗಳಿನ ಮನೆಗಳಲ್ಲಿರುವ ಹಾಗೆ ಹಿಡಿದು ತಿರುಗಿಸಲು ಹಿತ್ತಾಳೆಯ ಬುಗುಟೆಯೊಂದಿತ್ತು. ಕೂಡುವ ಕೋಣೆ ಯಲ್ಲಿ ಹಾಸುಗೆಯಿರಲಿಲ್ಲ; ಅದರ ಸುಳಿವೂ ಇರಲಿಲ್ಲ. ಆದರೆ ಪಟ್ಟಣಗಳಲ್ಲಿನ ಮನೆ ಗಳಲ್ಲಿ ಕುಪ್ಪೆ ಕುಪ್ಪೆ ಹಾಸುಗೆಗಳು ಬಿದ್ದಿರುತ್ತವೆ. ಇಟ್ಟಿಗೆಯ ತಳವುಳ್ಳ ಒಂದು ದೊಡ್ಡ ಬೆಂಕಿಗೂಡು ಅಲ್ಲಿತ್ತು; ಬೇರೆ ಇಟ್ಟಿಗೆಯೊಂದರಿಂದ ಆ ಇಟ್ಟಿಗೆಗಳನ್ನು ಉಜ್ಜಿ ನೀರಿ ನಿಂದ ತೊಳೆಯುತ್ತಿದ್ದುದರಿಂದ ಅವು ನಿರ್ಮಲವಾಗಿಯೂ ಕೆಂಪಾಗಿಯೂ ಇದ್ದವು. ಕೆಲವು ಸಲ ಪಟ್ಟಣಗಳಲ್ಲಿ ಮಾಡುವಂತೆ ಅವರು ಸ್ಪ್ಯಾನಿಷ್‌ಬ್ರೌನ್ ಎಂಬ ಕೆಂಬಣ್ಣ ವನ್ನು ನೀರಿಗೆ ಕದರಿಕೊಂಡು ಅವುಗಳನ್ನು ತೊಳೆಯುತ್ತಿದ್ದರು. ಕೊಯ್ದ ದಿಮ್ಮಿಯನ್ನು ಹೊರಬಲ್ಲಂಥ ಹಿತ್ತಾಳೆಯ ದೊಡ್ಡ ಸಲಾಕೆಗಳು ಅವರ ಬಳಿ ಇದ್ದವು. ಕಪಾಟಿನ ಮಧ್ಯದಲ್ಲೊಂದು ಗಡಿಯಾರವಿತ್ತು; ಅದರ ಗಾಜಿನ ಕೆಳ-ಅರ್ಧದ ಮೇಲೆ ಪಟ್ಟಣ ವೊಂದರ ಚಿತ್ರವಿತ್ತು, ಅದರ ಮಧ್ಯದಲ್ಲಿ ಬಿಸಿಲಿಗಾಗಿ ಬಿಟ್ಟಿದ್ದ ಒಂದು ವರ್ತುಳ ಸ್ಥಳ ವಿತ್ತು, ಅದರ ಹಿಂದೆ ಲಂಬಕ ತೂಗುವುದನ್ನು ನೀವು ಕಾಣಬಹುದಾಗಿತ್ತು. ಆ ಗಡಿ ಯಾರದ ಕಿರುದನಿ ಕಿವಿಗಿಂಪಾಗಿತ್ತು. ಕೆಲವೇಳೆ ಬೀದಿಯವ್ಯಾಪಾರಿಗಳು ಬಂದು ಅದನ್ನು ಬಿಚ್ಚಿಹಾಕಿ ಸರಿಪಡಿಸಿದಾಗ ಅದು ತನಗೆ ಸುಸ್ತಾಗುವತನಕ ನೂರೈವತ್ತು ಬಾರಿ ಗಂಟೆ ಹೊಡೆಯುತ್ತಿತ್ತು. ಸರಿಪಡಿಸಿದ್ದಕ್ಕಾಗಿ ಅವರು ಮಜೂರಿ ಕೇಳುತ್ತಿರಲಿಲ್ಲ.

ಗಡಿಯಾರದ ಎರಡೂ ಪಕ್ಕಗಳಲ್ಲಿ ಒಂದೊಂದು ವಿದೇಶಿ ಗಿಣಿಯನ್ನು ಕೂರಿಸ ಲಾಗಿತ್ತು; ಅದನ್ನು ಸೀಮೆಸುಣ್ಣದಿಂದಲೋ ಏನೋ ತಯಾರಿಸಿದ್ದರು, ಎದ್ದು ಕಾಣು ವಂತೆ ಬಣ್ಣ ಬಳಿದಿದ್ದರು. ಒಂದು ಗಿಣಿಯ ಪಕ್ಕದಲ್ಲಿ ಪಿಂಗಾಣಿಯ ಬೆಕ್ಕೊಂದನ್ನೂ ಇನ್ನೊಂದರ ಪಕ್ಕದಲ್ಲಿ ಪಿಂಗಾಣಿಯ ನಾಯಿಯೊಂದನ್ನೂ ಇರಿಸಿದ್ದರು. ಮೇಲಿನಿಂದ

ಅಮುಕಿದಾಗ ಅವು ಬಾಯಿ ಬಿಡದೆ, ಕಣ್ಣು ಹೊರಳಿಸದೆ, ಮುಖಭಾವವೇನನ್ನೂ ಸುಳಿಸದೆ, ಕುಯ್-ಗುಡುತ್ತಿದ್ದವು. ಆ ಸದ್ದು ಬರುತ್ತಿದ್ದುದು ಅವುಗಳ ಕೆಳಭಾಗದಿಂದ. ಅವುಗಳ ಹಿಂಭಾಗದಲ್ಲಿ ಒಂದೆರಡು ದೊಡ್ಡ ಕಾಡು-ಬಾತಿನ ರೆಕ್ಕೆಯಾಕಾರದ ಬೀಸಣಿಗೆಗಳನ್ನು ಬಿಚ್ಚಿಡಲಾಗಿತ್ತು. ಕೊಠಡಿಯ ಮಧ್ಯದಲ್ಲಿದ್ದ ಮೇಜಿನ ಮೇಲೆ ಒಂದು ರೀತಿಯ ಸುಂದರವಾದ ಪಿಂಗಾಣಿಯ ಬುಟ್ಟಿಯಿತ್ತು ; ಅದರಲ್ಲಿ ಸೇಬು ಕಿತ್ತಳೆ, ಪೀಚ್ ಮತ್ತು ದ್ರಾಕ್ಷಿಯ ಹಣ್ಣುಗಳು ತುಂಬಿದ್ದವು; ಅವು ನಿಜವಾದ ಹಣ್ಣುಗಳಿಗಿಂತ ಹೆಚ್ಚು ಕೆಂಪಾಗಿ ಹೆಚ್ಚು ಹಳದಿಯಾಗಿ ಹೆಚ್ಚು ಆಕರ್ಷಕವಾಗಿ ಇದ್ದವು; ಅವು ಕೃತಕವೆಂಬುದು ಹೇಗೆ ತಿಳಿಯಿತು ಎಂದರೆ ಅವುಗಳ ಸಿಪ್ಪೆ ಕಿತ್ತಿ ಹೋಗಿರುವೆಡೆಗಳಲ್ಲಿ ಕೆಳಗಿನ ಸೀಮೆಸುಣ್ಣವೋ ಮತ್ತೊಂದೋ ಇರುವುದನ್ನು ನೀವು ಕಾಣಬಹುದಿತ್ತು.

ಈ ಮೇಜಿನ ಮೇಲೆ ಸುಂದರವಾದೊಂದು ಮೇಣಗಪಟವನ್ನು ಹಾಸಿತ್ತು ! ಅದರ ಮೇಲೆ ಕೆಂಪು ನೀಲಿ ಬಣ್ಣಗಳ ಗರಿಗೆದರಿದ ಹದ್ದಿನ ಆಕೃತಿ ಚಿತ್ರಿತವಾಗಿತ್ತು ; ಅದಕ್ಕೆ ಸುತ್ತಲೂ ಬಣ್ಣದಂಚನ್ನು ಕಟ್ಟಲಾಗಿತ್ತು. ಅದನ್ನು ದೂರದ ಫಿಲಡೆಲ್ಫಿಯಾದಿಂದ ತಂದುದಾಗಿ ಅವರು ಹೇಳಿದರು. ಮೇಜಿನ ಪ್ರತಿಯೊಂದು ಮೂಲೆಯಲ್ಲೂ ಅಚ್ಚುಕಟ್ಟಾಗಿ ಪೇರಿಸಿದ ಹಲವಾರು ಪುಸ್ತಕಗಳೂ ಇದ್ದವು. ಒಂದು ಮನೆಯವರು ಬಳಸುತ್ತಿದ್ದ ಚಿತ್ರಮಯವಾದ ಬೈಬಲ್ ; ಇನ್ನೊಂದು, ಪಿಲ್ಗ್ರಿಮ್ಸ್ ಪ್ರಾಗ್ರೆಸ್,—ತನ್ನ ಸಂಸಾರವನ್ನು ಬಿಟ್ಟು ಹೊರಟುಹೋದವನ ಕಥೆ, ಅವನು ಏಕೆ ಹಾಗೆ ಮಾಡಿದನೆಂಬುದಕ್ಕೆ ಅದರಲ್ಲಿ ಉತ್ತರವಿಲ್ಲ. ಅದರಲ್ಲಿನ ಕೆಲವು ಪುಟಗಳನ್ನು ನಾನು ಆಗಾಗ ಓದಿಕೊಂಡೆ, ಅಲ್ಲಿನ ಹೇಳಿಕೆಗಳು ಸ್ವಾರಸ್ಯವಾಗಿದ್ದರೂ, ಅರ್ಥಮಾಡಿಕೊಳ್ಳುವುದು ಕಷ್ಟವೇ. ಮತ್ತೊಂದು, ಫ್ರೆಂಡ್‌ಷಿಪ್ಸ್ ಆಫರಿಂಗ್—ಸುಂದರವಾದ ಸರಕು, ಕವಿತೆ. ನಾನು ಕವಿತೆಯನ್ನು ಓದಲಿಲ್ಲ, ಮಗದೊಂದು, ಹೆನ್ರಿ ಕ್ಲೇಯ ಭಾಷಣಗಳ; ಜತೆಗೊಂದು, ಡಾ. ಗನ್ನರ ಫ್ಯಾಮಿಲಿ ಮೆಡಿಸಿನ್—ಯಾರಾದರೂ ಕಾಯಿಲೆ ಬಿದ್ದರೆ, ಸತ್ತುಹೋದರೆ ಏನು ಮಾಡಬೇಕೆಂಬುದನ್ನು ಅದರಲ್ಲಿ ನಿಮಗೆ ತಿಳಿಸಿದೆ. ಇವಲ್ಲದೆ ಒಂದು ಗೀತಾವಳಿಯೂ ರಾಸಿಗಟ್ಟಲೆ ಇತರ ಪುಸ್ತಕಗಳು ಇದ್ದವು ತಳದಲ್ಲಿ ಸಂದುಬಿಟ್ಟಿದ್ದ ಸೊಗಸಾದ ಕುರ್ಚಿಗಳಿದ್ದವು ; ಅವು ಗಟ್ಟಿಮುಟ್ಟಾಗಿದ್ದವು ಮಧ್ಯದಲ್ಲಿ, ಹಳೆಯ ಬುಟ್ಟಿಯಂತೆ ಅವುಗಳ ತಳ ನೆಲದ ಕಡೆಗೆ ಉಬ್ಬಿಕೊಂಡಿರಲಿಲ್ಲ, ಹರಿದಿರಲಿಲ್ಲ.

ಗೋಡೆಗಳ ಮೇಲೆ ಚಿತ್ರ-ಪಟಗಳನ್ನು ತೂಗುಹಾಕಿದ್ದರು—ವಾಷಿಂಗ್‌ಟನ್ನರ ಲಫೇಯೆಟ್ಟರ, ಕದನಗಳ ಮತ್ತು ಹೈಲೆಂಡ್ ಮೇರಿಯರ ಪ್ರಧಾನವಾಗಿದ್ದವು ; ಒಂದನ್ನು "ಘೋಷಣೆಗೆ ರುಜುವಿಡುವುದು" ಎಂದು ಹೆಸರಿಸಲಾಗಿತ್ತು. ಗತಿಸಿದ ಮಗಳೊಬ್ಬಳು ತನ್ನ ಹದಿನೈದನೆಯ ವರುಷದಲ್ಲಿಯೇ ತನ್ನ ಸ್ವಂತ ಕೈಗಳಿಂದಲೇ ಬರೆದಿದ್ದ ಬಣ್ಣದ ಪೆನ್‌ಸಿಲಿನ ಚಿತ್ರಗಳೂ ಕೆಲವಿದ್ದವು. ಅವು ನಾನು ಹಿಂದೆ ನೋಡಿದ್ದ ಚಿತ್ರಗಳೆಲ್ಲಕ್ಕಿಂತ ಬೇರೆಯಾಗಿ—ರೂಢಿಯಲ್ಲಿರುವುದಕ್ಕಿಂತ ಹೆಚ್ಚು ಕಪ್ಪಾಗಿ—ಇದ್ದವು. ಒಂದಂತೂ

ತೆಳುಗಪ್ಪಿನಂಡುಗೆಯ ಹೆಂಗಸೊಬ್ಬಳದು ; ಉಡುಗೆಯನ್ನು ಕಂಕುಳ ಬಳಿಬಿಗಿದುಕಟ್ಟಿತ್ತು; ಅದರ ತೋಳುಗಳ ಮಧ್ಯದಲ್ಲಿ ಕೋಸಿನಂಥ ಉಬ್ಬುಗಳಿದ್ದವು ; ತಲೆಗೊಂದು ಸಲಿಕೆಯಂತೆ ಟೊಪ್ಪಿಗೆ; ಮುಖಕ್ಕೆ ಕಪ್ಪು ಪರದೆ ; (ಒಂದರ ಮೇಲೊಂದು) ತೆಳ್ಳಗೆ ಬೆಳ್ಳಗಿದ್ದ ಪಾದದ ಕೀಲುಗಳನ್ನು ಕಪ್ಪು ಪಟ್ಟಿಯಿಂದ ಬಿಗಿಯಲಾಗಿತ್ತು ; ವಿಚಿತ್ರವಾದ, ಉಳಿಯಂತಿದ್ದ ಚಪ್ಪಲಿಗಳು; ಶೋಕಿಸುತ್ತಿದ್ದ ಲತೆಯೊಂದರ ಕೆಳಗೆ ಗೋರಿಕಲ್ಲಿನ ಮೇಲೆ ಮೊಣಕೈಯೂರಿ ಚಿಂತಾಕ್ರಾಂತಳಾಗಿ ಒರಗಿಕೊಂಡಿದ್ದಳು; ಅವಳ ಇನ್ನೊಂದು ಪಕ್ಕದಲ್ಲಿ ತೂಗುತ್ತಿದ್ದ ಇನ್ನೊಂದು ಕೈಯಲ್ಲಿ ಒಂದು ಬಿಳಿಯ ಕರವಸ್ತ್ರವನ್ನೂ ಕೈಚೀಲವನ್ನೂ ಹಿಡಿದಿದ್ದಳು; ಚಿತ್ರದ ಅಡಿಯಲ್ಲಿ 'ಹಾ! ನಿನ್ನನಿನ್ನೆಂದಿಗೂ ನಾನು ಕಾಂಬೆನೆ' ಎಂಬ ಉಲ್ಲೇಖವಿತ್ತು. ಇನ್ನೊಂದು ತರುಣಿಯೊಬ್ಬಳ ಚಿತ್ರ, ಅವಳು ತನ್ನ ತಲೆಗೂದಲಪ್ಪನ್ನೂ ನೆತ್ತಿಯ ಮೇಲಕ್ಕೆತ್ತಿ ಕಟ್ಟಿ ಕುರ್ಚಿಯ ಬೆನ್ನಿನಂತೆ ಬಾಚಣಿಗೆಯನ್ನು ಸಿಕ್ಕಿಸಿಕೊಂಡಿದ್ದಳು ; ತನ್ನ ಕರವಸ್ತ್ರವನ್ನು ಬಾಯಿಗೆ ಇಟ್ಟುಕೊಂಡು ಅಳುತ್ತಿದ್ದಳು ; ತನ್ನ ಇನ್ನೊಂದು ಕೈಯಲ್ಲಿ ಒಂದು ಸತ್ತ ಹಕ್ಕಿಯನ್ನು ಹಿಡಿದಿದ್ದಳು, ಅದು ಅಂಗತಂಗನಾಗಿತ್ತು ; ಆ ಚಿತ್ರದ ಅಡಿಯಲ್ಲಿ "ಹಾ! ನಿನ್ನ ಇಂಪಿದನಿಯನಿನ್ನೆಂದಿಗೂ ನಾನು ಕೇಳೆನು" ಎಂಬ ಬರಹವಿತ್ತು. ಇನ್ನೂ ಒಂದರಲ್ಲಿ, ತರುಣಿಯೊಬ್ಬಳು ಕಿಟಕಿಯ ಬಳಿ ನಿಂತು ಚಂದ್ರನನ್ನು ನೋಡುತ್ತಿದ್ದಳು ಕೆನ್ನೆಗಳ ಮೇಲೆ ಕಂಬನಿಯುರುಳುತ್ತಿತ್ತು ; ಅವಳು ಕೈಯಲ್ಲಿ ತೆರೆದ ಪತ್ರವೊಂದನ್ನು ಹಿಡಿದಿದ್ದಳು, ಅದರ ಒಂದಂಚಿನಲ್ಲಿ ಕಪ್ಪು ಅರಗಿನ ಗುರುತಿತ್ತು ; ತನ್ನ ಕೊರಳ ಸರಕ್ಕೆ ಹಾಕಿದ್ದ ಪದಕವನ್ನು ತನ್ನ ಬಾಯಿಯ ಮೇಲೆ ಒತ್ತಿಕೊಳ್ಳುತ್ತಿದ್ದಳು ; "ನೀನು ಗತಿಸಿದೆ ಹೌದು ನೀನು ಗತಿಸಿದೆ ಹಾ!" ಎಂದು ಚಿತ್ರದಡಿಯಲ್ಲಿ ಬರೆದಿತ್ತು. ಇವೆಲ್ಲವೂ ಸುಂದರವಾದ ಚಿತ್ರಗಳೆಂದೇ ನನ್ನೆಣಿಕೆ ; ಆದರೂ ಇವು ನನಗೆ ಹಿಡಿಸಲಿಲ್ಲ ; ಏಕೆಂದರೆ ನನ್ನ ಮನಸ್ಸು ಸ್ವಲ್ಪ ಅಸ್ವಸ್ಥವಾಗಿದ್ದಾಗ ಇವು ಕೆಟ್ಟ ಕನಸುಗಳನ್ನು ತರುತ್ತಿದ್ದವು. ಆ ಹೆಣ್ಣು ಸತ್ತಿದ್ದರಿಂದ ಎಲ್ಲರಿಗೂ ವ್ಯಥೆಯೇ; ಅದಕ್ಕೆ ಕಾರಣ, ಅವಳು ಇನ್ನೂ ಅನೇಕಾನೇಕ ಚಿತ್ರಗಳನ್ನು ಬರೆಯುವ ಯೋಚನೆಗಳನ್ನು ಇಟ್ಟುಕೊಂಡಿದ್ದಳು ; ಅವಳು ಮಾಡಿರುವ ಕೆಲಸಗಳನ್ನು ನೋಡಿದ ಯಾರಿಗೂ ಅವರಿಗಾದ ನಷ್ಟ ಎಂಥಾದ್ದೆಂಬುದು ಕಂಡುಬರುತ್ತಿತ್ತು. ಅವಳ ಮನೋಧರ್ಮವನ್ನು ನೋಡಿದರೆ-ನನಗನ್ನಿಸುತ್ತದೆ—ಇಲ್ಲಿಗಿಂತ ಸ್ಮಶಾನದಲ್ಲಿಯೇ ಅವಳು ಹೆಚ್ಚು ಸುಖವಾಗಿದ್ದಾಳೆ, ರೋಗ ತಗುಲಿದ ಸಮಯದಲ್ಲಿ ಅವಳು—ಇವರು ಹಾಗೆ ಹೇಳುತ್ತಾರೆ—ತನ್ನ ಮಹೋನ್ನತ ಚಿತ್ರವೊಂದರ ನಿರ್ಮಾಣಕ್ಕೆ ಕೈಹಾಕಿದ್ದಳಂತೆ ; ಅದು ಪೂರೈಸುವ ತನಕ ತನ್ನನ್ನು ಉಳಿಸಿಕೊಡು ಎಂಬುದೇ ಅವಳ ಪ್ರತಿ ಹಗಲಿನ ಮತ್ತು ಪ್ರತಿ ರಾತ್ರಿಯ ಪ್ರಾರ್ಥನೆಯಾಗಿತ್ತು ; ಆದರೆ ಆ ಅವಕಾಶ ಮಾತ್ರ ಅವಳಿಗೆ ಸಿಕ್ಕಲಿಲ್ಲ. ನೀಳವಾದ ಬಿಳಿಯ ಮೇಲಂಗಿಯನ್ನು ತೊಟ್ಟು ಸೇತುವೆಯೊಂದರ ಕಟಕಟ್ಟೆಯ ಮೇಲೆ ನಿಂತು, ತನ್ನ ತಲೆಗೂದಲಪ್ಪನ್ನೂ ಬೆನ್ನಮೇಲಿಳಿಸಿಕೊಂಡು, ಮುಖದ ಮೇಲೆ ಕಂಬನಿ ಸುರಿಸಿ

ಕೊಳ್ಳುತ್ತಾ ಚಂದ್ರನೆಡೆಗೆ ಕಣ್ಣೆತ್ತಿ ನೋಡುತ್ತಿದ್ದ ತರುಣಿಯೊಬ್ಬಳ ಚಿತ್ರ ಅದು. ಎದೆಯ ಮೇಲೆ ಅಡ್ಡಗಟ್ಟಿದ ಎರಡು ಕೈಗಳೂ, ಮುಂದಕ್ಕೆ ಚಾಚಿಕೊಂಡಿದ್ದ ಎರಡು ಕೈಗಳೂ, ಚಂದ್ರನೆಡೆಗೆ ಮೇಲೆತ್ತಿದ ಎರಡು ಕೈಗಳೂ ಅವಳಿಗಿದ್ದವು—ಇವುಗಳಲ್ಲಿ ಯಾವೊಂದು ಜೋಡಿ ಬಲು ಚೆನ್ನಾಗಿ ಒಪ್ಪುತ್ತದೆ ಎಂಬುದನ್ನು ನಿರ್ಧರಿಸಿಕೊಂಡು, ಉಳಿದೆಲ್ಲ ಕೈಗಳನ್ನೂ ಅಳಿಸಿಬಿಡುವುದೇ ಇದರ ಉದ್ದೇಶವಾಗಿತ್ತು : ಆದರೆ ಅವಳು, ಎಂದರೆ ಆ ಚಿತ್ರಗಾರಳು, ಇದನ್ನು ಇತ್ಯರ್ಥಪಡಿಸುವ ಮುನ್ನವೇ ಸತ್ತುಹೋದಳು. ಅವರು ಈ ಚಿತ್ರವನ್ನು ಅವಳ ಕೊಠಡಿಯ ಮಂಚದ ಮೇಲೆ ತಗುಲಿಹಾಕಿದ್ದರು; ಮತ್ತು ಅವಳ ಪ್ರತಿ ವಾರ್ಷಿಕ 'ಹುಟ್ಟಿದ ಹಬ್ಬ' ಬಂದಾಗ ಅದಕ್ಕೆ ಹೂಮಾಲೆಯನ್ನು ಹಾಕುತ್ತಿದ್ದರು. ಉಳಿದ ಕಾಲದಲ್ಲಿ ಅದನ್ನು ಒಂದು ಚಿಕ್ಕ ತೆರೆಯ ಹಿಂದೆ ಮರೆ ಮಾಡಿ ಇಡುತ್ತಿದ್ದರು. ಆ ಚಿತ್ರದಲ್ಲಿನ ತರುಣಿಯ ಮುಖವೇನೋ ಬಲು ಮುದ್ದಾಗಿತ್ತು, ಆದರೆ ಅಷ್ಟೊಂದು ಕೈಗಳಿದ್ದುದರಿಂದ ಒಟ್ಟು ದೃಶ್ಯ ನನಗೊಂದು ಜೇಡನಂತೆ ಕಾಣಿಸು ತ್ತಿತ್ತು.

ಈ ತರುಣಿ (ಒಂದು) ತಾನು ಬದುಕಿದ್ದಾಗ ಒಂದು ಪುಟ್ಟ ಪುಸ್ತಕವನ್ನು ಇಟ್ಟು ಕೊಂಡಿದ್ದಳು, ಮತ್ತು 'ಪ್ರಿಸ್ಬಿಟೆರಿಯನ್ ಅಬ್ಸರ್ವರ್' ಪತ್ರಿಕೆಯಲ್ಲಿ ಆಗಾಗ ಕಾಣಿಸಿ ಕೊಳ್ಳುತ್ತಿದ್ದ ಸಾವಿನ ಸುದ್ದಿಗಳನ್ನೂ, ಅಪಘಾತಗಳನ್ನೂ ಮತ್ತು ಅವುಗಳಲ್ಲಿ ಸಂಕಟ ಕ್ಕೀಡಾದವರ ವಿವರಗಳನ್ನೂ ತಿಳಿಸುವ ಪ್ರಕಟನೆಯ ತುಣುಕುಗಳನ್ನು ಕತ್ತರಿಸಿಕೊಂಡು ಆ ಪುಸ್ತಕದಲ್ಲಿ ಅಂಟಿಸುತ್ತಿದ್ದಳು; ಮತ್ತು ಅವುಗಳ ಮೇಲೆ ತನ್ನ ಬುದ್ಧಿಯಿಂದ ಕಟ್ಟಿದ ಕವಿತೆಯನ್ನು ಬರೆಯುತ್ತಿದ್ದಳು. ಅದು ಬಲು ಒಳ್ಳೆಯ ಕವಿತೆಯಾಗಿತ್ತು. ಬಾವಿಗೆ ಬಿದ್ದು ಮುಳುಗಿ ಸತ್ತ ಸ್ಟೀಫನ್ ಡೌಲಿಂಗ್ ಬಾಟ್ಸ್ ಎಂಬ ಹೆಸರಿನ ಹುಡುಗನೊಬ್ಬನ ಮೇಲೆ ಬರೆದದ್ದು ಇದು :

ಗತಿಸಿದ ಸ್ಟೀಫನ್ ಡೌಲಿಂಗ್ ಬಾಟ್ಸಿಗೆ ಅರ್ಪಿಸಿದ ಗಂಭೀರ ಗೀತ—

ಚಿಕ್ಕವ ಸ್ಟೀಫನ್ ಕಾಯಿಲೆ ಬಿದ್ದನೆ,
ಚಿಕ್ಕವ ಸ್ಟೀಫನ್ ಗತಿಸಿದನೆ ?
ದುಃಖಿಸುವೆದೆಗಳು ದಟ್ಟೈಸಿದವೆ,
ರೋದನಕಾರರು ಚೀರಿದರೆ ?

ಚಿಕ್ಕವ ಸ್ಟೀಫನ್ ಡೌಲಿಂಗ್ ಬಾಟ್ಸನ
ದುರ್ವಿಧಿ ಅದಲ್ಲ, ಅಂತಲ್ಲ ;
ದುಃಖಿಸುವೆದೆಗಳು ದಟ್ಟೈಸಿದರೂ,
ಸತ್ತುದು ಕಾಯಿಲೆಯಿಂದಲ್ಲ,
ನಾಯಿಕೆಮ್ಮು ವನ ಮುಂಗಿಸಿರಲಿಲ್ಲ ;
ಭೀಕರ ಕಲೆಗಳ ದಡಾರವಲ್ಲ ;

ಸ್ಟೀಫನ್ ಡೌಲಿಂಗ್ ಬಾಟ್ಸಿನ ಹೆಸರಿಗೆ
ಇವೊಂದೂ ಕಲಂಕ ತರಲಿಲ್ಲ.
ಮಾಕರಿಸಿದ ಒಲವಿನ ನೋವ ಹೊಡೆತವೂ
ಬೀಳಲಿಲ್ಲವಾ ಗುಂಗುರು ತಲೆಗೆ.
ಚಿಕ್ಕವ ಸ್ಟೀಫನ್ ಡೌಲಿಂಗ್ ಬಾಟ್ಸನು
ಕೆಡಹಲಿಲ್ಲ ಹೊಟ್ಟೆಯ ಶೂಲೆ.
ಇಲ್ಲ. ಇದನು ಹನಿಗಣ್ಣಿನಲಾಲಿಸಿ
ನುಡಿಯುತ್ತಿರೆ ನಾನವನ ದುರಂತವ.
ಅಪ್ಪನು ಬಾವಿಗೆ, ನಿರ್ದಯ ಲೋಕವ
ತೊರೆದು ಓಡಿದುದು ಆ ಜೀವ.
ಎತ್ತಿದರವನನು; ನೀರ ಕಕ್ಕಿಸಿದ-
ರಯ್ಯೋ ! ಮುಗಿದೇ ಹೋಗಿತ್ತು.
ಸಜ್ಜನ ಮಹಾತ್ಮರುನ್ನತ ಸೀಮೆಯ-
ಲಾಡಲು ಹೋಗಿತ್ತವನುಸಿರು.

ತನಗೆ ಹದಿನಾಲ್ಕು ತುಂಬುವುದರೊಳಗೇ, ಎಮ್ಮಲೀನ್ ಗ್ರ್ಯಾಂಜರ್‌ಫರ್ಡಿಗೆ ಈ ಮಟ್ಟದ ಕವಿತಾರಚನೆ ಸಾಧ್ಯವಿದ್ದಿತಾದರೆ, ಕಾಲಕ್ರಮೇಣ ಅವಳು ಮಾಡುತ್ತಿದ್ದಳೆಂಬುದನ್ನು ಹೇಳಲಾಗದು. ಅವಳು ನಿರರ್ಗಳವಾಗಿ ಕವಿತೆಯನ್ನು ಬಡಬಡಿಸಬಲ್ಲವಳಾಗಿದ್ದಳೆಂದು ಬಕ್ ಹೇಳಿದ. ಅವಳು ಒಂದು ಪಂಕ್ತಿಯನ್ನು ಅಪ್ಪಳಿಸುತ್ತಿದ್ದಳೆಂದೂ, ಅದಕ್ಕೆ ಪ್ರಾಸವಾಗುವಂಥ ಯಾವುದೂ ಸಿಕ್ಕದಿದ್ದಲ್ಲಿ ಅದನ್ನು ಸುಮ್ಮನೆ ಹೊಡೆದು ಹಾಕಿ ಇನ್ನೊಂದನ್ನು ಅಪ್ಪಳಿಸಿ ಸಾಗುತ್ತಿದ್ದಳೆಂದೂ ಅವನು ಹೇಳಿದ. ಅವಳು ಯಾವ ಉದ್ದೇಶವನ್ನೂ ಇಟ್ಟುಕೊಳ್ಳುತ್ತಿರಲಿಲ್ಲ, ದುಃಖಭಾರವಿರುವ ಯಾವ ವಿಷಯವನ್ನೇ ಆಗಲಿ ನೀವು ಸೂಚಿಸಿದ್ದೇ ಆದರೆ,ಅವಳು ಅದರ ಮೇಲೆಯೇ ಬರೆಯುಬಲ್ಲವಳಾಗಿದ್ದಳು. ಒಬ್ಬ ಗಂಡಸಾಗಲೀ ಒಬ್ಬಳು ಹೆಂಗಸಾಗಲೀ ಒಂದು ಮಗುವಾಗಲೀ ಸತ್ತಾಗಲೆಲ್ಲ ಅವಳು, ಆ ಹೆಣ ಇನ್ನೂ ತಣ್ಣಗಾಗುವುದಕ್ಕಿಲ್ಲ, ತನ್ನ "ಕಾಣಿಕೆ" ಯೊಂದಿಗೆ ಸಿದ್ಧವಾಗಿರುತ್ತಿದ್ದಳು. ಆ ರಚನೆಗಳನ್ನು ಅವಳು ಕಾಣಿಕೆಗಳೆಂದು ಕರೆಯುತ್ತಿದ್ದಳು. ಯಾರಾದರೂ ಸತ್ತಾಗ ಮೊದಲು ಬರುವವನು ವೈದ್ಯ, ಬಳಿಕ ಎಮ್ಮಲೀನ್, ಆಮೇಲೆ ಶವಸಂಸ್ಕಾರ ಮಾಡುವವನು ಎನ್ನುತ್ತಿದ್ದರು ನೆರೆಹೊರೆಯವರು ;—ಶವಸಂಸ್ಕಾರ ಮಾಡುವವನು, ಒಂದೇ ಸಂದರ್ಭದಲ್ಲಿ ವಿನಾ, ಎಂದೂ ಅವಳಿಗಿಂತ ಮುಂದಾಗಿ ಬಂದುದಿಲ್ಲವಂತೆ. ಆ ಸಂದರ್ಭದಲ್ಲಿ ಏನಾಯಿತೆಂದರೆ, ಮೃತನ ಹೆಸರು ವ್ಹಿಸ್ಲರ್ ಎಂದಿದ್ದು ಅವಳು ಅದಕ್ಕೆ ಪ್ರಾಸಹೊಂದಿಸುವುದು ನಿಧಾನವಾಯಿತು ಅಷ್ಟೆ. ಅದಾದಮೇಲೆ ಅವಳು ಹಿಂದಿನಂತೆ ಇರಲೇ ಇಲ್ಲ; ಅವಳು ಎಂದೂ ದೂರಲಿಲ್ಲವಾದರೂ, ಕೊರಗಿ

ಕೃಶಳಾದಳು, ಹೆಚ್ಚು ಕಾಲ ಬದುಕಲಿಲ್ಲ. ಪಾಪ ! ಅವಳ ಚಿತ್ರಗಳು ನನ್ನನ್ನು ಕೆರಳಿಸುತ್ತಿದ್ದಾಗ ಮತ್ತು ನಾನು ಅವಳ ವಿಷಯದಲ್ಲಿ ಕೊಂಚ ಅಪ್ರಿಯವಾಗಿ ನಡೆದುಕೊಂಡಿದ್ದಾಗ, ಅನೇಕ ವೇಳೆ ನಾನು ಅವಳದಾಗಿದ್ದ ಆ ಚಿಕ್ಕ ಕೊಠಡಿಗೆ ಹೋಗಲೂ, ಅವಳ ಹಳೆಯ ಚಿಕ್ಕ ಪುಸ್ತಕವನ್ನು ಈಚೆಗೆ ತೆಗೆದು ಓದಿದ್ದೇನೆ. ನಾನು ಆ ಸಂಸಾರದಲ್ಲಿ ಎಲ್ಲರನ್ನೂ–ಸತ್ತವರನ್ನೂ ಸೇರಿಸಿ ಎಲ್ಲರನ್ನೂ–ಮೆಚ್ಚಿಕೊಂಡಿದ್ದೇನೆ ! ನನ್ನ ಅವರ ನಡುವೆ ಒಡಕು ಹುಟ್ಟುವುದಕ್ಕೆ ನಾನು ಎಷ್ಟೂ ಎಡೆಗೊಡುತ್ತಿರಲಿಲ್ಲ. ಬಡಪಾಯಿ ಎಮ್ಮಲೀನ್ ತಾನು ಬದುಕಿದ್ದ ಕಾಲದಲ್ಲಿ ಸತ್ತವರೆಲ್ಲರ ಮೇಲೂ ಕವಿತೆ ಕಟ್ಟಿದ್ದಳು ! ಈಗ ಅವಳು ಗತಿಸಿರುವಾಗ ಅವಳ ಮೇಲೆ ಕೆಲವು ಪಂಕ್ತಿ ಬರೆಯಲು ಯಾರೂ ಇಲ್ಲದೆ ಹೋದದ್ದು ಅನ್ಯಾಯವೆಂದು ತೋರಿತು. ಆದ್ದರಿಂದ ನಾನು ಸ್ವತಃ ಬಲು ಶ್ರಮಪಟ್ಟು ಒಂದೆರಡು ಪದ್ಯಗಳನ್ನು ಹೆಣೆಯಲು ಪ್ರಯತ್ನಿಸಿದೆ ; ಆದರೆ ಏಕೋ ಏನೋ ಅದು ಸಾಗಲಿಲ್ಲ. ಅವರು ಎಮ್ಮಲೀನಳ ಕೊಠಡಿಯನ್ನು ಚೊಕ್ಕಟವಾಗಿಯೂ ಅಂದವಾಗಿಯೂ ಇಟ್ಟುಕೊಂಡಿದ್ದರು ; ಅಲ್ಲಿನ ವ್ಯವಸ್ಥೆ ಅವಳು ಬದುಕಿದ್ದಾಗ ಹೇಗಿರಬೇಕೆಂದು ಆಶಿಸುತ್ತಿದ್ದಳೋ ಹಾಗೆಯೇ ಇತ್ತು ; ಅಲ್ಲಿ ಯಾರೂ ಮಲಗುತ್ತಿರಲಿಲ್ಲ. ಮುದುಕಿ, ಮನೆಯಲ್ಲಿ ಬೇಕಾದಷ್ಟು ಜನ ನೀಗ್ರೋಗಳಿದ್ದರೂ, ತಾನೇ ಸ್ವತಃ ಆ ಕೊಠಡಿಯ ಅಚ್ಚುಕಟ್ಟಿಗೆ ಗಮನ ಕೊಡುತ್ತಿದ್ದಳು ; ಅವಳ ಹೊಲಿಗೆ ಕೆಲಸದ ಹೆಚ್ಚು ಪಾಲೂ ಬೈಬಲ್ ಪಠಣವೂ ಬಹುಮಟ್ಟಿಗೇ ಅಲ್ಲಿಯೇ ನಡೆಯುತ್ತಿದ್ದವು.

ಸರಿ, ಆ ಕೊಠಡಿಯ ವಿಷಯ ಹೇಳುತ್ತಿದ್ದೆನಲ್ಲವೆ,—ಅದರ ಕಿಟಕಿಗಳ ಮೇಲೆ ಸುಂದರವಾದ ಪರದೆಗಳನ್ನು ಇಳಿಯಬಿಟ್ಟಿದ್ದರು ; ಬಿಳಿಯ ಪರದೆಗಳು, ಅವುಗಳ ಮೇಲೆ ಲತೆಗಳಿಂದಾವೃತವಾದ ಗೋಡೆಗಳುಳ್ಳ ಹರ್ಮ್ಯಗಳನ್ನೂ ಮತ್ತು ನೀರು ಕುಡಿಯಲು ಇಳಿದು ಬರುತ್ತಿರುವ ಗೋವುಗಳನ್ನೂ ಚಿತ್ರಿಸಲಾಗಿತ್ತು. ಚಿಕ್ಕದೊಂದು ಹಳೆಯ ಪಿಯಾನೋ ಕೂಡ ಅಲ್ಲಿತ್ತು, ಅದರಲ್ಲಿ ತಗಡಿನ ತಾಜಂಗಳಿದ್ದವು, ಎಂದು ನನ್ನಣಿಕೆ ; ತರುಣಿಯರು "ಕಡೆಯ ಕೊಂಡಿ ಮುರಿದಿದೆ" ಎಂದು ಹಾಡುವುದನ್ನೂ, "ಪ್ರಾಗ್ ನಗರದ ಕದನ"ವನ್ನು ಬಾರಿಸುವುದನ್ನೂ ಕೇಳುವುದಕ್ಕಿಂತ ಮಧುರವಾದುದು ಇನ್ನೊಂದಿರಲಿಲ್ಲ. ಎಲ್ಲಾ ಕೋಣೆಗಳ ಗೋಡೆಗಳಿಗೂ ಗಿಲಾವು ಮಾಡಲಾಗಿತ್ತು, ಅನೇಕ ಕೋಣೆಗಳಲ್ಲಿ ಜಮಖಾನಗಳನ್ನು ಹಾಸಲಾಗಿತ್ತು ; ಇಡೀ ಮನೆಯ ಹೊರಗೋಡೆಗಳಿಗೆ ಸುಣ್ಣತೊಡೆಯಲಾಗಿತ್ತು.

ಅದೊಂದು ಜೋಡಿ-ಮನೆ ; ಎರಡರ ನಡುವಣ ವಿಶಾಲವಾದ ತೆರವಿಗೆ ಛಾವಣಿ ಹೊದಿಸಿ, ಅದರ ನೆಲಕ್ಕೆ ಗಾರೆ ಹಾಕಿಸಿದ್ದರು. ಕೆಲವೇಳೆ ಅದರ ಮಧ್ಯಭಾಗವಲ್ಲಿ ಊಟಕ್ಕಾಗಿ ಮೇಜುಗಳನ್ನು ಜೋಡಿಸಿದ್ದರು. ಅದೊಂದು ತಂಪಾದ, ಸುಖಕರವಾದ

ಸ್ಥಳವಾಗಿತ್ತು. ಆದರೆ ಅಡಿಗೆ ತಾನೆ ಹೇಗಿತ್ತು, ಅದನ್ನು ಯಥೇಚ್ಛವಾಗಿ ತಂದು ಬಡಿಸುತ್ತಿದ್ದುದೋ !

## ೧೮

ಕರ್ನಲ್ ಗ್ರ್ಯಾಂಜರ್‌ಫರ್ಡ್ ದೊಡ್ಡಮನುಷ್ಯ, ಕಂಡಿರಾ, ಅವನು ಪೂರಾ ದೊಡ್ಡ ಮನುಷ್ಯ; ಅವನ ಮನೆಯವರೂ ಹಾಗೆಯೇ. ಒಳ್ಳೆಯ ಹುಟ್ಟು ಅವನದು ನಾಣ್ನುಡಿ ಯಂತೆ,–ಅದು ಕುದುರೆಯಲ್ಲಿ ಹೇಗೋ ಮನುಷ್ಯನಲ್ಲೂ ಹಾಗೆಯೇ ಎನ್ನುತ್ತಿದ್ದಳು ವಿಧವೆ ಡಗ್ಲಾಸ್; ನಮ್ಮೂರಿನ ಮೊದಲಶ್ರೇಣಿಯ ಕುಲೀನರಲ್ಲಿ ಒಬ್ಬಳವಳೆಂಬುದನ್ನು ಯಾರೂ ಎಂದೂ ಅಲ್ಲಗಳೆದಿಲ್ಲ. ತಾನೇ ಸಾಮಾನ್ಯ ಮಿಸ್ಸಿಸ್ಸಿಪಿಯನಿಗಿಂತ ಹೆಚ್ಚು ಉತ್ತಮನಲ್ಲ ದಿದ್ದರೆ ಕೂಡ, ಅಪ್ಪನೂ ಸದಾ ಹಾಗೆಯೇ ಹೇಳುತ್ತಿದ್ದನು, ಕರ್ನಲ್ ಗ್ರ್ಯಾಂಜರ್ ಫರ್ಡ್ ಬಲು ಎತ್ತರದ, ಬಲು ತೆಳ್ಳನೆಯ ಆಳು, ಅವನ ಮೈಬಣ್ಣ ಮಾಸಲುಕಪ್ಪಾ ಗಿದ್ದು, ಅದರಲ್ಲೆಲ್ಲಿಯೂ ಕೆಂಪಿನ ಸುಳಿವೇ ಇರಲಿಲ್ಲ; ಪ್ರತಿದಿನವೂ ಬೆಳಗಾಗುತ್ತಲೆ ಶುಭ್ರವಾಗಿ ಕ್ಷೌರಮಾಡಿದ ತೆಳುಮುಖ, ಬಲು ತೆಳ್ಳನೆಯ ಮೂಗಿನ ಹೊಳ್ಳೆಗಳು, ಎತ್ತರವಾದ ಮೂಗು, ಭಾರವಾದ ಹುಬ್ಬುಗಳು, ಮತ್ತು ಗುಹೆಯಾಳದಿಂದ ನೋಡು ತ್ತಿವೆಯೆನ್ನಬಹುದಾದಷ್ಟು ಆಳವಾದ ಬಲು ಕಪ್ಪು ಕಣ್ಣುಗಳು ಅವನವು. ಎತ್ತರವಾದ ಹಣೆ; ಅವನ ತಲೆಗೂದಲು ಬೆಳ್ಳಗಿದ್ದು ನೇರವಾಗಿ ಭುಜಗಳಮೇಲೆ ಜೋಲುತ್ತಿದ್ದವು. ಅವನ ಕೈಗಳು ಉದ್ದವಾಗಿ, ತೆಳ್ಳಗಿದ್ದವು; ಪ್ರತಿದಿನವೂ ಅವನು ಶುಭ್ರವಾದ ಒಳ-ಅಂಗಿ ಯೊಂದನ್ನೂ, ಆಪಾದಮಸ್ತಕ ಮುಚ್ಚುವ ಉಡುಪನ್ನೂ ಧರಿಸುತ್ತಿದ್ದನು; ಆ ಉಡುಪು ಹತ್ತಿಯದಾಗಿದ್ದು ನಮ್ಮ ಕಣ್ಣುಗಳನ್ನು ಕೊರೈಸುವಷ್ಟು ಬಿಳಿಯದಾಗಿತ್ತು. ಭಾನುವಾರ ಗಳಲ್ಲಿ ಅವನು ಹಿತ್ತಾಳೆಯ ಗುಂಡಿಗಳನ್ನು ಹಾಕಿದ್ದ ಮತ್ತು ಹಿಂಭಾಗದಲ್ಲಿ ಎರಡುಪಟ್ಟಿ ಗಳನ್ನು ಇಳಿಯಬಿಟ್ಟಿದ್ದ ನೀಲಿಯ ಬಣ್ಣದ ಮೇಲಂಗಿಯನ್ನು ಧರಿಸುತ್ತಿದ್ದನು. ಅವನ ಕೈಯ್ಯಲ್ಲೊಂದು ಬೆಳ್ಳಿ ಹಿಡಿ ಹಾಕಿದ ಮಹಾಗನಿಯ ನಡೆಗೋಲಿರುತ್ತಿತ್ತು. ಅವನ ವಿಷಯದಲ್ಲಿ ಕ್ಷುಲ್ಲಕವಾದುದೇನೂ; ಒಂದಿಷ್ಟೂ, ಇರಲಿಲ್ಲ: ಅವನೆಂದೂ ಗಟ್ಟಿಯಾಗಿ ಮಾತಾಡಿದ್ದೇ ಇಲ್ಲ, ಅವನು ತನ್ನ ಕೈಲಾದಮಟ್ಟಿಗೂ ದಯಾಪರನಾಗಿದ್ದನು–ಅದು ನಿಮ್ಮ ಅನುಭವಕ್ಕೆ ಬರುತ್ತಿತ್ತು, ಆದ್ದರಿಂದ ನೀವದನ್ನು ನಂಬಬಹುದಿತ್ತು. ಕೆಲವೇಳೆ ಅವನು ಕಿರುನಗೆಯನ್ನು ಸುಳಿಸುತ್ತಿದ್ದನು, ಅದು ನೋಡಲು ಚೆನ್ನಾಗಿರುತ್ತಿತ್ತು; ಸ್ವಾತಂತ್ರ್ಯಸ್ತಂಭವೊಂದರಂತೆ ಅವನು ಬಿಗಿದು ನಿಂತಾಗ ಮತ್ತು ಅವನ ಕಣ್ಣಹುಬ್ಬುಗ ಳಡಿಯಿಂದ ಮಿಂಚು ಚಂಚಲಿಸತೊಡಗಿದಾಗ ನಿಮಗೆ 'ಮೊದಲು ಯಾವುದಾದರೊಂದು

ಮರವನ್ನು ಹತ್ತಿಕೊಳ್ಳೋಣ, ಆಮೇಲೆ ಉಳಿದಂದನ್ನು ನೋಡಿಕೊಳ್ಳೋಣ' ಎನ್ನಿಸುತ್ತಿತ್ತು. ಅವನು ಯಾರು ಯಾರು ಹೇಗೆ ಹೇಗೆ ನಡೆದುಕೊಳ್ಳಬೇಕೆಂದು ಹೇಳುವುದು ಬೇಕೇ ಇರಲಿಲ್ಲ–ಅವನಿದ್ದ ಬಳಿ ಎಲ್ಲರೂ ಯಾವಾಗಲೂ ಯೋಗ್ಯರೀತಿಯಲ್ಲಿಯೇ ನಡೆದು ಕೊಳ್ಳುತ್ತಿದ್ದರು. ಅವನ ಸಹವಾಸ ಎಲ್ಲರಿಗೂ ಪ್ರಿಯವೆನಿಸಿತ್ತು. ಸುಮಾರು ಎಲ್ಲ ಕಾಲಗಳಲ್ಲೂ ಅವನು ಹಗಲು ಬೆಳಕಿನಂತೆ ಇರುತ್ತಿದ್ದನು–ತನ್ನ ಸುತ್ತುಮುತ್ತಣ ಹವೆ ಹಿತಕರವಾಗಿ ತೋರುವಂತೆ ಮಾಡುತ್ತಿದ್ದನು ಎಂದು ನನ್ನ ಅಭಿಪ್ರಾಯ. ಅವನು ಕರಿ ಮುಗಿಲ ಅಂಚಾಗಿ ಪರಿವರ್ತನೆಗೊಂಡಾಗ ಮಾತ್ರ; ಅದು ನಿಮಿಷಾರ್ಧದ ಮಟ್ಟಿಗೆ ಅಂಧಕಾರಮಯವಾಗುತ್ತಿತ್ತು; ಅಷ್ಟೇ ಸಾಕಾಗುತ್ತಿತ್ತು; ಆಮೇಲಿನ ಒಂದು ವಾರದ ತನಕ ಯಾವುದೂ ತಪ್ಪುದಾರಿ ಹಿಡಿಯುತ್ತಿರಲಿಲ್ಲ.

ಅವನೂ ಆ ವೃದ್ಧೆಯೂ ಬೆಳಗಾಗ ಎದ್ದು ಹೊರಬಂದರೆಂದರೆ ಮನೆಯವರೆಲ್ಲರೂ ತಮ್ಮ ಕುರ್ಚಿಗಳಿಂದೆದ್ದು ನಿಂತು ಅವರಿಗೆ ಗೌರವ ಸಲ್ಲಿಸುತ್ತಿದ್ದರು: ಮತ್ತು ಅವರಿಬ್ಬರೂ ಕುಳಿತುಕೊಳ್ಳುವತನಕ ಇವರು ಯಾರೂ ಕುಳಿತುಕೊಳ್ಳುತ್ತಿರಲಿಲ್ಲ, ಆಗ ಟಾಮ್ ಮತ್ತು ಬಾಬ್ ಸೆರೆ ಸೀಸೆಯಿದ್ದ ಪಕ್ಕದ ಕಪಾಟಿನತ್ತ ಹೋಗಿ ಮದಿರವನ್ನು ಒಂದು ಲೋಟದಲ್ಲಿ ಅಣಿಮಾಡಿಕೊಂಡು ತಂದು ಅವನ ಕೈಗೆ ಸಲ್ಲಿಸುತ್ತಿದ್ದರು. ಟಾಮನ ಮತ್ತು ಬಾಬನ ಮದಿರ ಲೋಟಗಳು ಸಿದ್ಧವಾಗಿ ಅವರ ಕೈಗೆಬರುವವರೆಗೂ ಅವನು ತನ್ನದನ್ನು ಹಾಗೆಯೇ ಹಿಡಿದಿರುತ್ತಿದ್ದನು.ಆಗ ಅವರೆಲ್ಲರೂ ತಲೆಬಾಗಿ"ಯಜಮಾನ ಯಜಮಾನಿಯರಾದ ತಮಗೆ ನಮ್ಮ ಕರ್ತವ್ಯವಿದು" ಎನ್ನುತ್ತಿದ್ದರು; ಇಬ್ಬರೂ ಅದಕ್ಕೆ ಉತ್ತರವಾಗಿ ನೆಲತನಕ ಬಾಗಿ "ನಿಮಗೆ ವಂದನೆಗಳು" ಎಂದು ಹೇಳಿದ ಮೇಲೆ ಮೂವರೂ ಕುಡಿಯುತ್ತಿದ್ದರು. ಟಾಮ್ ಮತ್ತು ಬಾಬ್ ಒಂದಿಷ್ಟು ಸಕ್ಕರೆಗೆ ಒಂದು ಚಮಚ ನೀರು ಹಾಕಿ ತಮ್ಮ ಲೋಟಗಳ ತಳದಲ್ಲಿದ್ದ ಸ್ವಲ್ಪ ವಿಸ್ಕಿಯನ್ನೋ ಸೇಬು–ಬ್ರಾಂದಿಯನ್ನೋ ಸೇರಿಸಿ ನನಗೂ ಬಕ್ಕನಿಗೂ ಕೊಡುತ್ತಿದ್ದರು; ನಾವು ಆ ಹಿರಿಯರಾಗಿ ಸ್ವಸ್ತಿಪಾನಮಾಡುತ್ತಿದ್ದೆವು.

ಬಾಬ್ ಹಿರಿಯ, ಟಾಮ್ ಅವನ ಬಳಿಕದವನು–ಇಬ್ಬರೂ ಎತ್ತರವಾಗಿದ್ದರು ಸ್ಫುರದ್ರೂಪಿಗಳು ವಿಶಾಲವಾದ ಭುಜಗಳು, ಕಂದುಬಣ್ಣದ ಮುಖಗಳು, ನೀಳವಾದ ಕಪ್ಪುಗೂದಲು, ಕಪ್ಪುಕಣ್ಣುಗಳು. ಆ ವೃದ್ಧ ಯಜಮಾನನಂತೆಯೇ ಅವರೂ ಆಪಾದ ಮಸ್ತಕ ಬಿಳಿಯ ಹತ್ತಿಯ ಬಟ್ಟೆಯ ಉಡುಪನ್ನೂ ಅಗಲವಾದ ಪನಾಮಾ ಟೋಪಿಯನ್ನೂ ಧರಿಸುತ್ತಿದ್ದರು.

ಇನ್ನು ಮಿಸ್ ಚಾರ್ಲಟ್; ಅವಳಿಗೂ ಇಪ್ಪತ್ತೈದರ ವಯಸ್ಸು. ಎತ್ತರವಾದ, ದೊಡ್ಡ ಹಟ್ಟಿನ ಹೆಣ್ಣು, ಜಂಬಗಾತಿ; ಅವಳನ್ನು ಕೆರಳಿಸದೆ ಹೋದರೆ, ತನ್ನ ಕೈಲಾದ ಮಟ್ಟಿಗೂ ಅವಳು ಒಳ್ಳೆಯವಳೇ ಆಗಿದ್ದಳು. ಅವಳಿಗೇನಾದರೂ ಕೋಪಬಂತೋ–ತನ್ನ ತಂದೆಯ ಹಾಗೆಯೇ ಅವಳು–ನಿಮ್ಮನ್ನು ಕೈಕಾಲು ಕೆಡಿಸುತ್ತಿದ್ದಳು. ಅವಳು ಚೆಲುವೆ,

ಅವಳ ಸೋದರಿ ಮಿಸ್ ಸೋಫಿಯಾ ಕೂಡ ಹಾಗೆಯೇ, ಆದರೆ ಇವಳ ರೀತಿ ಬೇರೆ, ಅಷ್ಟೆ. ಅವಳು ಪಾರಿವಾಳದ ಹಕ್ಕಿಯಂತೆ ನಯವಾಗಿ ಮುದ್ದಾಗಿದ್ದಳು. ಇನ್ನೂ ಇವಳಿಗೆ ಇಪ್ಪತ್ತು ವರುಷ.

ಒಬ್ಬೊಬ್ಬರಿಗೆ ಒಬ್ಬೊಬ್ಬ ನೀಗ್ರೋ ಸೇವಕನಿದ್ದನು—ಬಕ್ಕನಿಗೆ ಕೂಡ. ನನ್ನ ಸೇವೆಗೆ ನೇಮಕಗೊಂಡಿದ್ದ ನೀಗ್ರೋವಿನ ಕೆಲಸ ಬಲು ಸರಾಗವಾಗಿತ್ತು, ಏಕೆಂದರೆ ನನ ಗೋಸ್ಕರ ಇನ್ನೊಬ್ಬರಿಂದ ದುಡಿಸಿಕೊಳ್ಳುವ ಅಭ್ಯಾಸವೇ ನನಗಿರಲಿಲ್ಲ.

ಬಕ್ಕನಾದರೋ ಉದ್ದಕ್ಕೂ ಎಗರಾಡುತ್ತಲೇ ಇದ್ದನು. ಆ ಸಂಸಾರದಲ್ಲಿ ಇದ್ದ ವರು ಇಷ್ಟೇ ಜನ ಈಗ-ಹಿಂದೆ ಹೆಚ್ಚು ಜನ ಇರುತ್ತಿದ್ದರು—ಮೂವರು ಗಂಡುಮಕ್ಕಳು ಅವರು ಕೊಲೆಯಾದರು; ಮತ್ತು ಗತಿಸಿದ ಎಮ್ಮಲೀನ್.

ಆ ವೃದ್ಧ ಮಹನೀಯನು ಬೇಕಾದಷ್ಟು ಭೂಮಿಕಾಣೆಗೂ, ನೂರಾರು ನೀಗ್ರೋ ಗಳಿಗೂ ಒಡೆಯನಾಗಿದ್ದನು ಸುತ್ತ ಹತ್ತು ಹದಿನೈದು ಮೈಲಿಗಳಿಂದ ಅಲ್ಲಿಗೆ ಕುದುರೆ ಯೇರಿಕೊಂಡು ಹಿಂಡು ಜನ ಕೆಲವೇಳೆ ಬರುತ್ತಿದ್ದರು, ಐದಾರುದಿನಗಳ ಕಾಲ ಅಲ್ಲೇ ಉಳಿದುಕೊಂಡು ಆ ಸುತ್ತುಮುತ್ತಿನ ಸ್ಥಳಗಳಲ್ಲಿ ಮತ್ತು ನದಿಯಮೇಲೆ ಹಗಲಿನಲ್ಲಿ ವಿಹಾರಪ್ರವಾಸಗಳನ್ನೂ, ಕುಣಿತಗಳನ್ನೂ, ವನಭೋಜನಗಳನ್ನೂ ಇಟ್ಟುಕೊಳ್ಳುತ್ತಿದ್ದರು; ರಾತ್ರಿಯ ಹೊತ್ತಿನಲ್ಲಿ ಮನೆಯೊಳಗೆ ನೃತ್ಯವಿನೋದಗಳು ನಡಯುತ್ತಿದ್ದವು. ಇವರಲ್ಲಿ ಹೆಚ್ಚುಪಾಲು ಈ ಸಂಸಾರದ ನಂಟರಿಷ್ಟರಾಗಿದ್ದರು; ಬರುವಾಗ ಜತೆಯಲ್ಲಿ ಬಂದೂಕಗಳನ್ನು ತರುತ್ತಿದ್ದರು. ಬಲು ಶ್ರೇಷ್ಠತರಗತಿಯ ಜನರ ಕೂಟದವರೆಂದು ನಾನು ಹೇಳಬಲ್ಲೆ

ಅಲ್ಲೇ ಇನ್ನೊಂದು ಶ್ರೀಮಂತ ಬುಡಕಟ್ಟು ಇತ್ತು-ಐದಾರು ಸಂಸಾರಗಳವು— ಅವರಲ್ಲಿ ಹೆಚ್ಚುಮಂದಿ ಷೆಪರ್ಡ್‌ಸನ್ ಎಂಬ ಅಂಕಿತವನ್ನು ಇಟ್ಟುಕೊಂಡಿದ್ದರು. ಅವರೂ ಈ ಗ್ರಾಂಜರ್‌ಫರ್ಡ್ ಬುಡಕಟ್ಟಿನವರಷ್ಟೇ ಶ್ರೇಷ್ಠರೂ ಆಗರ್ಭಶ್ರೀಮಂತರೂ ಗೌರವಾರ್ಹರೂ ಆಗಿದ್ದರು ಷೆಪರ್ಡ್‌ಸನ್ನರೂ ಗ್ರಾಂಜರ್‌ಫರ್ಡರೂ-ಇಬ್ಬರೂ, ನಮ್ಮ ಮನೆಗೆ ಸುಮಾರು ಎರಡು ಮೈಲಿಗಳ ದೂರದಲ್ಲಿದ್ದ ಒಂದೇ ಹಬೇ-ದೋಣಿ-ನಿಲ್ದಾಣವನ್ನು ಬಳಸುತ್ತಿದ್ದರು. ಹೀಗಿರುವುದರಿಂದ ನಾನು ನಮ್ಮವರನ್ನು ಗುಂಪುಕೂಡಿಸಿಕೊಂಡು ಅಲ್ಲಿಗೆ ಹೋದಾಗ, ಅಲ್ಲಿ ತಮ್ಮ ಉತ್ತಮಾವರ್ಗದ ಕುದುರೆಗಳನ್ನೇರಿದ ಅನೇಕ ಷೆಪರ್ಡ್‌ಸನ್ನರನ್ನು ನಾನು ಕೆಲವೇಳೆ ಕಾಣುತ್ತಿದ್ದೆನು.

ಒಂದಾನೊಂದು ದಿನ ಬಕ್ಕನೂ ನಾನೂ ಬೇಟೆಗಾಗಿ ಕಾಡಿಗೆ ಹೋದೆವು, ಒಂದು ಕುದುರೆ ಆ ಬಳಿಗೆ ಬರುತ್ತಿದ್ದುದು ನಮಗೆ ಕೇಳಿಸಿತು. ನಾವು ದಾರಿಯ ಒಂದು ಅಂಚಿನಿಂದ ಇನ್ನೊಂದು ಅಂಚಿಗೆ ದಾಟುತ್ತಿದ್ದೆವು, ಬಕ್ ಹೇಳಿದ:

"ಬೇಗ! ಕಾಡಿಗೆ ಹಾರು!"

ಹಾಗೆಯೇ ಮಾಡಿದೆವು ; ಬಳಿಕ ಕಾಡಿನೊಳಗೆ ಅವಿತುಕೊಂಡು ಎಲೆಗಳ ಮರೆಯಿಂದ ಇಣಿಕಿದೆವು ಸ್ವಲ್ಪ ಕಾಲದಲ್ಲೇ ಸುಂದರ ತರುಣನೊಬ್ಬನು ಕುದುರೆಯನ್ನು ದೌಡಾಯಿಸಿಕೊಂಡು ಆ ದಾರಿಯಲ್ಲಿ ಬರುತ್ತಿದ್ದನು; ಲೀಲಾಜಾಲವಾಗಿ ಸವಾರಿ ಮಾಡುತ್ತಿದ್ದನು, ಒಬ್ಬ ಯೋಧನಂತೆ ಕಾಣಿಸುತ್ತಿದ್ದನು. ತನ್ನ ಕತ್ತಿಯ ಹಿಡಿಯು ಗುಂಡಿಗೆ ಅಡ್ಡಲಾಗಿ ತನ್ನ ಬಂದೂಕವನ್ನಿಟ್ಟುಕೊಂಡಿದ್ದನು. ಇದಕ್ಕೆ ಹಿಂದೆಯೇ ನಾನು ಅವನನ್ನು ನೋಡಿದ್ದೆ. ಅವನೇ ತರುಣ ಹಾರ್ನಿ ಷೆಪರ್ಡ್‌ಸನ್, ನನ್ನ ಕಿವಿಯ ಪಕ್ಕದಲ್ಲೇ ಬಕ್ಕನ ಬಂದೂಕದ ಗುಂಡು ಹಾರಿದುದು ನನಗೆ ಕೇಳಿಸಿತು ; ಹಾರ್ನಿಯ ಟೋಪಿ ಅವನ ತಲೆಯಿಂದ ಕೆಳಗೆ ಉರುಳಿತು. ಅವನು ಕೂಡಲೇ ತನ್ನ ಬಂದೂಕವನ್ನು ತುಡುಕಿ ಹಿಡಿದು ನಾವು ಅವಿತುಕೊಂಡಿದ್ದ ಸ್ಥಳಕ್ಕೆ ನೇರ ನುಗ್ಗಿದನು. ನಾವೇನು ಕಾಯುತ್ತ ಕುಳಿತಿರಲಿಲ್ಲ. ಕಾಡಿನೊಳಗೆ ಓಡತೊಡಗಿದೆವು. ಕಾಡು ಅಷ್ಟೇನೂ ದಟ್ಟವಾಗಿರಲಿಲ್ಲ; ಆದ್ದರಿಂದ ಗುಂಡಿನೇಟಿನಿಂದ ತಪ್ಪಿಸಿಕೊಳ್ಳಲು ನಾನು ಎರಡು ಸಲ ಹೆಗಲ ಹಿಂದಕ್ಕೆ ಕಣ್ಣುಹಾಯಿಸಿದಾಗ ಬಕ್ ಹಾರ್ನಿಯ ಬಂದೂಕದ ಗುರಿಯೊಳಗಿದ್ದುದನ್ನು ಕಂಡೆ. ಆಮೇಲೆ ಅವನು–ತನ್ನ ಟೋಪಿಯನ್ನು ಎತ್ತಿಕೊಳ್ಳಲೆಂದಿರಬಹುದು, ನಾನದನ್ನು ಚೆನ್ನಾಗಿ ನೋಡಲಿಲ್ಲ–ತಾನು ಬಂದ ದಾರಿಯಲ್ಲೇ ಹಿಂತಿರುಗಿದನು. ಎಲ್ಲೂ ನಿಲ್ಲದೆ ಓಡಿ ಓಡಿ ಮನೆಗೆ ತಲಪಿದೆವು. ಆ ವೃದ್ಧ ಯಜಮಾನನ ಕಣ್ಣುಗಳು ಒಂದು ನಿಮಿಷ ಕಾಲ ಮಿಂಚುತ್ತಿದ್ದವು—ಅದು ಸಂತೋಷದಿಂದಲೇ ಎಂದು ನನ್ನ ಭಾವನೆ; ಆ ಬಳಿಕ ಅವನ ಮುಖ ಗಂಭೀರವಾಯಿತು. ಅವನು ಮೃದುವಾಗಿ ಹೇಳಿದ :

"ಪೊದೆಯ ಮರೆಯಿಂದ ಗುಂಡುಹಾರಿಸಿದುದನ್ನು ನಾನು ಮೆಚ್ಚಲಿಲ್ಲ. ನೀನು ದಾರಿಗೇ ಏಕೆ ನುಗ್ಗಲಿಲ್ಲ, ಮಗು?"

"ಷೆಪರ್ಡ್‌ಸನ್ನರು ಹಾಗೆ ಮಾಡುವುದಿಲ್ಲ, ಅಪ್ಪ. ಅವರು ಯಾವಾಗಲೂ ತಮಗೆ ತೋರಿದಂತೆ ಮಾಡುತ್ತಾರೆ."

ಮಿಸ್ ಚಾರ್ಲಟ್ ರಾಣಿಯಂತೆ ತಲೆಯೆತ್ತಿದಳು, ಬಕ್ ನಡೆದ ಸಂಗತಿಯನ್ನು ವರ್ಣಿಸುತ್ತಿದ್ದಾಗ, ಅವಳ ಮೂಗಿನ ಹೊಳ್ಳೆಗಳು ಅರಳಿದವು, ಕಣ್ಣುಗಳು ಥಟ್ಟನೆ ಮುಚ್ಚಿಕೊಂಡವು. ಇಬ್ಬರು ತರುಣರ ಮುಖವೂ ಕಪ್ಪಿಟ್ಟಿತು, ಅವರು ಏನನ್ನೂ ಹೇಳಲಿಲ್ಲ. ಮಿಸ್ ಸೋಫಿಯಾಳ ಮುಖ ಕಾಂತಿಹೀನವಾಯಿತು ; ಆ ಮನುಷ್ಯನಿಗೆ ಅಪಾಯವೇನೂ ಆಗಲಿಲ್ಲ ಎಂಬುದು ಅವಳಿಗೆ ತಿಳಿದ ಮೇಲೆ ಅವಳ ಮುಖ ಮತ್ತೆ ಗೆಲವಾಯಿತು.

ಮತ್ತೆ ಬಕ್ ನನಗೆ ವೃಕ್ಷಗಳ ಕೆಳಗಣ ಪಯಿರ ತೆನೆಗಳ ನಡುವೆ ಒಬ್ಬೊಂಟಿಗನಾಗಿ ಸಿಕ್ಕಿದಾಗ ತತ್‌ಕ್ಷಣ ನಾನು ಕೇಳಿದೆ :

"ಬಕ್, ಅವನನ್ನು ಕೊಲ್ಲಬೇಕೆಂದಿದ್ದೆಯೊ ನೀನು ?"

"ನನ್ನಾಣೆಗೂ ಹೌದು, ಹಾಗೆಯೇ ಮಾಡಬೇಕೆಂದಿದ್ದೆ."

"ಅವನು ನಿನಗೆ ಏನು ಮಾಡಿದ ?"

"ಅವನೆ ? ಅವನು ನನಗೆ ಎಂದೂ ಏನೂ ಮಾಡಿಲ್ಲ."

"ಹಾಗಾದರೆ ನೀನೇಕೆ ಅವನನ್ನು ಕೊಲ್ಲಬೇಕೆಂದಿದ್ದೆ ?"

"ಉದ್ದೇಶದ ಪ್ರಶ್ನೆಯೇ ನಿಲ್ಲ— ಎರಡೂ ಮನೆತನಗಳಿಗಿರುವ ಪರಸ್ಪರ ವೈರಕ್ಕಾಗಿ, ಅಷ್ಟೆ"

"ಪರಸ್ಪರ ವೈರವೆಂದರೇನು ?"

"ಏ ನೀನು ಯಾವ ಸೀಮೆಯವ ? ಪರಸ್ಪರ ವೈರವೆಂದರೇನು ನಿನಗೆ ತಿಳಿಯಂದೆ ?"

"ನಾನು ಅದನ್ನು ಹಿಂದೆ ಕೇಳಿಯೇ ಇಲ್ಲ— ಅದರ ವಿಷಯವನ್ನು ಹೇಳು ನನಗೆ "

"ಪರಸ್ಪರ ವೈರವೆಂದರೆ ಏನೆನ್ನುತ್ತಿಯಾ ? ಹೀಗೆ : ಒಬ್ಬ ಮನುಷ್ಯ ಇನ್ನೊಬ್ಬನೊಂದಿಗೆ ಜಗಳವಾಡುತ್ತಾನೆ, ಅವನನ್ನು ಕೊಲ್ಲುತ್ತಾನೆ, ಎನ್ನು. ಬಳಿಕ ಆ ಇನ್ನೊಬ್ಬನ ಅಣ್ಣನೋ ತಮ್ಮನೋ ಇವನನ್ನು ಕೊಲ್ಲುತ್ತಾನೆ. ಆಮೇಲೆ ಅವನ ಮತ್ತು ಇವನ ಉಳಿದ ಸೋದರರು ಒಬ್ಬರ ಮೇಲೊಬ್ಬರು ಕಾದಾಡುತ್ತಾರೆ—ಕ್ರಮೇಣ ಅವರ ದಾಯಾದಿಗಳೂ ಬಂದು ಸೇರಿಕೊಳ್ಳುತ್ತಾರೆ—ಎಲ್ಲರೂ ಹತರಾಗುತ್ತಾರೆ. ಅಲ್ಲಿಗೆ ವೈರದ ಪರಿಸಮಾಪ್ತಿ. ಇದು ಸ್ವಲ್ಪ ನಿಧಾನವಾಗಿ ನಡೆಯುವ ಕೆಲಸ—ಇದಕ್ಕೆ ಬಹಳ ಕಾಲ ಹಿಡಿಯುತ್ತದೆ"

"ನಿಮ್ಮ ಅವರ ಈ ವೈರ ಬಹಳಕಾಲದಿಂದಲೂ ಬಂದಿದ್ದೆ, ಬಕ್?"

"ನನಗೆ ಹಾಗೆಯೇ ತೋರುತ್ತದೆ. ಸುಮಾರು ಮೂವತ್ತು ವರುಷಗಳ ಹಿಂದೆಯೇ ಏನೋ ಅದು ಪ್ರಾರಂಭವಾಯಿತು. ಏತರ ವಿಷಯದಲ್ಲೋ ಒಂದು ತೊಂದರೆ ಹುಟ್ಟಿಕೊಂಡಿತು ; ಅದರ ಇತ್ಯರ್ಥಕ್ಕಾಗಿ ನ್ಯಾಯಾಲಯಕ್ಕೆ ಹೋದರು ; ತೀರ್ಪು ಒಬ್ಬನಿಗೆ ವಿರೋಧವಾಗಿತ್ತು, ಅವನು ಸಿಡಿದೆದ್ದು ಈ ವ್ಯವಹಾರದಲ್ಲಿ ಗೆದ್ದವನನ್ನು ಗುಂಡಿಟ್ಟು ಕೊಂದನು—ಅವನು ಹಾಗೆ ಮಾಡುವನೆಂಬುದು ನಿರೀಕ್ಷಿತವೇ ಆಗಿತ್ತು. ಯಾರಾದರೂ ಹಾಗೆಯೇ ಮಾಡುತ್ತಿದ್ದರು.

"ಬಕ್ ಆ ತೊಡಕು ಹುಟ್ಟಿದ್ದು ಏತರ ವಿಷಯದಲ್ಲಿ—ಜಮೀನಿನ ವಿಷಯದಲ್ಲೇ?"

"ಇರಬಹುದೇನೋ—ನನಗೆ ತಿಳಿಯದು."

"ಹಾಗಾದರೆ ಗುಂಡಿಟ್ಟು ಕೊಂದವನು ಯಾರು ? ಗ್ರಾಂಜರ್ ಫರ್ಡರ ಪೈಕಿಯವನೆ, ಇಲ್ಲ ಷೆಪರ್ಡ್‌ಸನ್ನರ ಪೈಕಿಯವನೆ ?"

"ಸದ್ಯ, ನಾನು ಹೀಗೇ ಎಂದು ಹೇಗೆ ಹೇಳಲಿ ? ಅದು ನಡೆದುದು ಬಲು ಹಿಂದೆ."

"ಅದು ಯಾರಿಗೂ ತಿಳಿಯದೆ ?"

"ಓ, ಅದು ಅಪ್ಪನಿಗೂ ಇನ್ನು ಕೆಲವರು ಮುದುಕರಿಗೂ ತಿಳಿದಿದೆಯೆಂದು ನನ್ನೆಣಿಕೆ; ಆದರೂ ಮೊದಲಲ್ಲಿ ಆ ವ್ಯಾಜ್ಯ ಏತಕ್ಕಾಗಿ ಹುಟ್ಟಿತೆಂಬುದು ಅವರಿಗೆ ಈಗ ತಿಳಿಯದು."

"ಬಹಳ ಜನ ಹತರಾದರೇನು ಆ ಜಗಳದಲ್ಲಿ, ಬಕ್ ?"

"ಹೌದು; ಶವಸಂಸ್ಕಾರಕ್ಕೆ ಕೂಡ ಸಾಕಷ್ಟು ಅವಕಾಶವಿರಲಿಲ್ಲ. ಆದರೆ ಅವರು ಯಾವಾಗಲೂ ಕೊಲ್ಲುತ್ತಿರಲಿಲ್ಲವಂತೆ. ಅಪ್ಪನ ಮೈಯಲ್ಲಿ ಕೆಲವು ಗುಂಡು ನಾಟಿತು; ಅವನೇನಷ್ಟು ಭಾರವಾದ ಮನುಷ್ಯನಲ್ಲವಾದ್ದರಿಂದ ವ್ಯಥೆಪಡಲಿಲ್ಲ; ಬಾಬನಿಗೆ ಒಂದೆರಡು ಚೂರಿಯಿರಿತಗಳು ಒದಗಿದವು; ಟಾಮನಿಗೆ ಒಂದೆರಡುಸಲ ಗಾಯಗಳಾದವು"

"ಈ ವರುಷದಲ್ಲಿ ಯಾರದಾದರೂ ಕೊಲೆ ನಡೆಯಿತೆ, ಬಕ್?"

"ಆಯಿತು; ನಮ್ಮಲ್ಲಿ ಒಬ್ಬನನ್ನು ಅವರು ಕೊಂದರು, ಅವರಲ್ಲಿ ಒಬ್ಬನನ್ನು ನಾವೂ ಕೊಂದೆವು. ಮೂರುತಿಂಗಳ ಹಿಂದೆ ನಮ್ಮ ಚಿಕ್ಕಪ್ಪನ ಮಗ ಕೇವಲ ಹದಿನಾಲ್ಕು ವರುಷದ ಹುಡುಗ ಬಡ್‌ನದಿಯ ಆಚೆಯಿಂದಡೆಯ ಕಾಡಿನಲ್ಲಿ ನಿರಾಯುಧನಾಗಿ ಕುದುರೆ ಸವಾರಿಮಾಡುತ್ತಿದ್ದನು—ಅದೇ ಅವನ ಶುದ್ಧ ತಿಳಿಗೇಡಿತನವಾಗಿದ್ದುದು; ಆಗ ಒಂದು ನಿರ್ಜನಸ್ಥಳದಲ್ಲಿ ತನ್ನ ಹಿಂದಿನಿಂದ ಕುದುರೆಯೊಂದು ಬರುತ್ತಿರುವ ಸದ್ದು ಅವನಿಗೆ ಕೇಳಿಸಿತು, ಮತ್ತು ಮುದಿಯ ಬಾಲ್ಡಿ ಷೆಪರ್ಡ್‌ಸನ್ ಕೈಯಲ್ಲಿ ಬಂದೂಕವನ್ನು ಹಿಡಿದು ತನ್ನ ಬಿಳಿಗೂದಲನ್ನು ಗಾಳಿಯಲ್ಲಿ ತೂರುತ್ತಾ ಹಿಂದೆಯೇ ಬೆನ್ನಟ್ಟಿಬರುತ್ತಿರುವುದನ್ನು ನೋಡಿದನು, ಕುದುರೆಯಿಂದ ನೆಗೆದು ಪೊದರಿನಲ್ಲಿ ಅವಿತುಕೊಳ್ಳುವುದಕ್ಕೆ ಬದಲಾಗಿ ದೌಡು ಹಾಕುವುದೇ ಯುಕ್ತವೆಂದು ಬಡ್ ತಿಳಿದನು, ಹೀಗಾಗಿ ಒಬ್ಬನ ಹೆಗಲ ಪಕ್ಕದಲ್ಲೆ ಇನ್ನೊಬ್ಬ ಏರಿಬರುತ್ತಾ ಐದು ಮೈಲಿಗಳಿಗೂ ಮೀರಿದಷ್ಟುದೂರ ಕುದುರೆಗಳನ್ನು ಓಡಿಸಿಕೊಂಡು ಹೋದರು; ಮೊದಲು ಹಿಂದೆ ಬಿದ್ದಿದ್ದ ಮುದುಕ ಇವನ ಸಮಕ್ಕೇ ಬಂದಿದ್ದ: ಕಡೆಗೆ ಹೀಗೆಮಾಡುವುದು ನಿಷ್ಫಲವೆಂದು ಯೋಚಿಸಿ ಬಡ್ ದಾರಿಯಲ್ಲೇನಿಂತು ಹಿಂತಿರುಗಿದನು. ಗುಂಡುಗಳು ಅವನ ಮುಖಕ್ಕೆ ನಾಟಿದವು,–ಗೊತ್ತಾಯಿತೆ? ಮುದುಕ ಹತ್ತಿರಕ್ಕೆ ಬಂದು ಮತ್ತೊಂದುಸಲ ಗುಂಡು ಹಾರಿಸಿ ಅವನನ್ನು ಉರುಳಿಸಿದನು. ತಾನು ಮಾಡಿದ ಕೆಲಸಕ್ಕಾಗಿ ಹಿಗ್ಗುತ್ತಾ ಹೆಚ್ಚುಕಾಲ ಬದುಕಿರಲು ನಾವು ಮುದುಕನಿಗೆ ಅವಕಾಶ ಕೊಡಲಿಲ್ಲ; ಒಂದು ವಾರದೊಳಗಾಗಿ ನಮ್ಮವರು ಅವನನ್ನು ಕೊಂದು ಕೆಡಹಿದರು.

"ಆ ಮುದುಕ ಪಕ್ಕಾ ಹೇಡಿಯೆಂದು ನನಗೆ ತೋರುತ್ತದೆ, ಬಕ್."

"ಅವನು ಹೇಡಿಯಲ್ಲವೆಂದು ನನಗೆ ತೋರುತ್ತದೆ. ಹೇಗೆ ನೋಡಿದರೂ ಅಲ್ಲ ಷೆಪರ್ಡ್‌ಸನ್ನರಲ್ಲಿ ಹೇಡಿಗಳಿಲ್ಲ-ಒಬ್ಬನೂ ಇಲ್ಲ. ಗ್ರ್ಯಾಂಜರ್‌ಫರ್ಡರಲ್ಲಿಯೂ ಯಾವನೂ ಹೇಡಿಯಲ್ಲ. ಅಷ್ಟೇಕೆ, ಆ ಮುದುಕ ಇದ್ದನಲ್ಲ ಅವನು ಒಂದು ದಿನ ಮೂವರು ಗ್ರ್ಯಾಂಜರ್ ಫರ್ಡರೊಡನೆ ಒಂದೂವರೆ ಗಂಟೆಗಳಕಾಲ ಹೋರಾಡಿ ಕಡೆಗೂ ತಾನೇ ಗೆದ್ದನು. ಅಶ್ವಾರೋಹಿಗಳ ಕದನವದು; ಅವನು ಕುದುರೆಯಿಂದ ಇಳಿದು ಒಂದು

ಸಣ್ಣ ಸೌದೆಯ ರಾಶಿಯ ಹಿಂದೆ ಹೋಗಿ ತನ್ನ ಮುಂದೆ ಕುದುರೆಯನ್ನು ನಿಲ್ಲಿಸಿಕೊಂಡು ಗುಂಡುಗಳು ತನಗೆ ತಗುಲದಂತೆ ಮಾಡಿಕೊಂಡನು. ಆದರೆ ಗ್ರ್ಯಾಂಜರ್‌ಫರ್ಡರು ಕುದುರೆಗಳಮೇಲೆಯೇ ಇದ್ದುಕೊಂಡು ಅವನನ್ನು ಸುತ್ತುಗಟ್ಟಿ ಅವನಮೇಲೆ ಗುಂಡಿನ ಮಳೆಗರೆದರು; ಅವನು ಅವರಮೇಲೆ ಗುಂಡಿನ ಮಳೆಗರೆದನು. ಅವನೂ ಅವನ ಕುದುರೆಯೂ ತುಂಬಾ ಗಾಸಿಪಟ್ಟು ಕುಂಟುತ್ತ ಮನೆ ಸೇರಿದರು. ಗ್ರ್ಯಾಜರ್‌ಫರ್ಡರನ್ನಾದರೋ ಮನೆಗೆ ಹೊತ್ತು ಸಾಗಿಸಬೇಕಾಯಿತು ; ಅವರಲ್ಲಿ ಒಬ್ಬನಾಗಲೇ ಸತ್ತಿದ್ದ ; ಇನ್ನೊಬ್ಬ ಮರುದಿನ ಸತ್ತುಹೋದ. ಇಲ್ಲ ಸ್ವಾಮಿ; ಹೇಡಿಗಳನ್ನು ಹುಡುಕಲು ತೊಡಗುವವರು ಯಾರೂ ಷೆಫರ್ಡ್‌ಸನ್ನರಲ್ಲಿ ಅಂಥವರನ್ನು ಹುಡುಕುತ್ತ ಕಾಲಹರಣ ಮಾಡಬಯಸುವುದಿಲ್ಲ. ಏಕೆಂದರೆ ಆ ವಂಶದ ರಕ್ತದಲ್ಲಿ ಅಂಥವರು ಹುಟ್ಟುವುದೇ ಇಲ್ಲ.

ಮಾರನೆಯ ಭಾನುವಾರ ನಾವೆಲ್ಲರೂ ಕುದುರೆಯೇರಿಸುಮಾರು ಮೈಲಿಯಾಚೆಗಿದ್ದ ಚರ್ಚಿಗೆ ಹೋದೆವು. ಬಕ್ಕನೂ ಸೇರಿ ಎಲ್ಲರೂ ತಮ್ಮ ತಮ್ಮ ಬಂದೂಕಗಳನ್ನು ತಂದಿದ್ದರು; ಕೆಲವರು ಅದನ್ನು ತಮ್ಮ ಮಂಡಿಗಳ ನಡುವೆ ಇಟ್ಟುಕೊಂಡಿದ್ದರು, ಇನ್ನು ಕೆಲವರು ಕೈಗೆಟುಕುವಂತೆ ಗೋಡೆಗೆ ಒರಗಿಸಿದ್ದರು ಅಲ್ಲಿ ಪಠಿಸಲಾಗಿದ್ದುದು ಒಂದು ಸಾಮಾನ್ಯವಾದ ಉಪದೇಶವಾಗಿತ್ತು–ಸೋದರಪ್ರೇಮ ಮುಂತಾದ ಬೇಸರ ತರುವ ವಿಷಯಗಳೇ ಅಲ್ಲಿದ್ದುದು. ಆದರೆ ಎಲ್ಲರೂ ಅವನ್ನು ಸೊಗಸಾದ ಪ್ರಾರ್ಥನೆಯೆಂದು ಕರೆದರು, ಮನೆಗೆ ಹೋಗುತ್ತ ಉದ್ದಕ್ಕೂ ಅದನ್ನೇ ಕುರಿತು ಮಾತಾಡಿಕೊಂಡರು, ಧರ್ಮ ಧಾರ್ಮಿಕಕಾರ್ಯಗಳು ಭಗವತ್–ಕೃಪೆ ದೈವಸಂಕಲ್ಪ ಮುಂತಾದ ಏನೇನನ್ನೋ ಕುರಿತು ಹೇಳಬೇಕಾದ ಬಹಳ ವಿಷಯಗಳಿದ್ದವು ಅವರಲ್ಲಿ ಎಂದು ತೋರುತ್ತದೆ. ನನ್ನ ಪಾಲಿಗೆ ಅದೊಂದು ಬಲು ತೊಡಕಿನ ಭಾನುವಾರವೆಂದು ತೋರಿತು.

ರಾತ್ರಿಯೂಟವಾದ ಒಂದುಗಂಟೆಯಮೇಲೆ ಎಲ್ಲರೂ ತೂಕಡಿಸುತ್ತಿದ್ದರು,—ಕೆಲವರು ತಮ್ಮ ಕುರ್ಚಿಗಳಲ್ಲಿ, ಕೆಲವರು ತಮ್ಮ ಕೊಠಡಿಗಳಲ್ಲಿ ; ತುಂಬಾ ಬೇಸರವಾಯಿತು. ಬಕ್ಕನೂ ನಾಯಿಯೂ ಬಿಸಿಲಿನಲ್ಲಿ ಹುಲ್ಲಿನಮೇಲೆ ಗಾಢನಿದ್ರೆಯಲ್ಲಿ ಮಲಗಿದ್ದರು, ನನಗೂ ನನ್ನ ಕೋಣೆಗೆ ಹೋಗಿ ಸ್ವಲ್ಪ ನಿದ್ದೆಮಾಡೋಣ ಎನ್ನಿಸಿತು. ನನ್ನ ಕೋಣೆಯ ಬಾಗಿಲ ಪಕ್ಕದ ಬಾಗಿಲಬಳಿ ಮಿಸ್ ಸೋಫಿಯಾ ನಿಂತಿರುವುದನ್ನು ಕಂಡೆ. ಅವಳು ನನ್ನನ್ನು ತನ್ನ ಕೋಣೆಯೊಳಕ್ಕೆ ಕರೆದುಕೊಂಡು ಹೋದಳು, ಮೆಲ್ಲಗೆ ಬಾಗಿಲನ್ನು ಹಾಕಿಕೊಂಡಳು. ನನ್ನನ್ನು ಕಂಡರೆ ನಿನಗೆ ಆಗುತ್ತದೆಯೆ ಎಂದು ಕೇಳಿದಳು, ನಾನು ಹೌದು ಎಂದೆ. ಸರಿ ಹಾಗಾದರೆ ನನಗೊಂದು ಕೆಲಸವನ್ನು ಮಾಡಿಕೊಡುತ್ತಿಯಾ, ಯಾರಿಗೂ ಹೇಳುವುದಿಲ್ಲವಲ್ಲ ಎಂದಳು. ನಾನು ಆಗಲಿ ಎಂದೆ. ತಾನು ತನ್ನ ಒಡಂಬಡಿಕೆಯ ಪ್ರತಿಯನ್ನು ಮರೆತು ಚರ್ಚಿನಲ್ಲಿ ತಾನು ಕುಳಿತಿದ್ದ ಸ್ಥಳದಲ್ಲಿ ಇನ್ನೆರಡುಪುಸ್ತಕಗಳ ನಡುವೆ ಇಟ್ಟುಬಂದಿರುವುದಾಗಿಯೂ ನಾನು ಅದನ್ನು ಹೋಗಿ ತರಬೇಕೆಂದ ಯಾರಿಗೂ ಬಾಯಿಬಿಡಬಾರದೆಂದೂ ಕೇಳಿಕೊಂಡಳು. ನಾನು ಹಾಗೆ ಮಾಡು

ತ್ತೇನೆ ಎಂದೆ. ನಾನು ಅಲ್ಲಿಂದ ಸದ್ದು ಮಾಡದೆ ಹೊರಟು ಚರ್ಚಿನ ಬಳಿಗೆ ಹೋದೆ; ಅಲ್ಲಿ, ಒಂದೆರಡು ಹಂದಿಗಳನ್ನು ಬಿಟ್ಟರೆ. ಯಾರೂ ಇರಲಿಲ್ಲ. ಏಕೆಂದರೆ ಅದರ ಬಾಗಿಲಿಗೆ ಬೀಗ ಹಾಕಿರಲಿಲ್ಲ; ಅಲ್ಲದೆ ಹಂದಿಗಳಿಗೆ ಬೇಸಗೆಯ ಕಾಲದಲ್ಲಿ ಅಲ್ಲಿನ ನೆಲ, ಅದು ತಂಪಾಗಿರುವುದರಿಂದ, ಬಲು ಇಷ್ಟ. ನೀವು ಸೂಕ್ಷ್ಮವಾಗಿ ಗಮನಿಸುವುದಾದರೆ, ಜನ ಚರ್ಚಿಗೆ ಹೋಗುವುದು ತಾವು ಅಲ್ಲಿಗೆ ಹೋಗಲೇಬೇಕಾಗಿ ಬಂದಾಗ ಮಾತ್ರ; ಹಂದಿಯ ವಿಷಯ ಬೇರೆ.

ಇಲ್ಲಿ ಏನೋ ನಡೆಯುತ್ತಾ ಇದೆ ಎಂದುಕೊಂಡೆ; ಒಂದು ಒಡಂಬಡಿಕೆಯ ಪುಸ್ತಕಕ್ಕಾಗಿ ಹುಡುಗಿಯೊಬ್ಬಳು ಇಷ್ಟು ಆತಂಕಪಡುವುದು ಸಹಜವಲ್ಲ. ಆದ್ದರಿಂದ ನಾನದನ್ನು ಕೊಡಹಿ ನೋಡಿದೆ; ಒಂದು ಚಿಕ್ಕ ಕಾಗದದ ತುಂಡು ಕೆಳಗೆ ಬಿತ್ತು; ಅದರ ಮೇಲೆ "ಎರಡೂವರೆ" ಎಂದು ಸೀಸದಕಡ್ಡಿಯಿಂದ ಬರೆದಿತ್ತು; ನಾನು ಆ ಪುಸ್ತಕವನ್ನು ಅಮೂಲಾಗ್ರವಾಗಿ ಶೋಧಿಸಿದೆ; ಅದರಲ್ಲಿ ಇನ್ನೇನೂ ಇರಲಿಲ್ಲ, ಆ ಬರಹದ ಅರ್ಥವೇ ನನಗೆ ಹೊಳೆಯಲಿಲ್ಲ; ಆದ್ದರಿಂದ ಅದನ್ನು ಮತ್ತೆ ಪುಸ್ತಕದಲ್ಲಿಟ್ಟು, ಪುಸ್ತಕದೊಂದಿಗೆ ಮನೆಗೆ ಬಂದೆ. ಆಗ ಮಿಸ್ ಸೋಫಿಯಾ ಮಹಡಿಯಮೇಲೆ ತನ್ನ ಬಾಗಿಲ ಹತ್ತಿರದಲ್ಲೇ ನನಗಾಗಿ ಕಾದಿದ್ದಳು. ನನ್ನನ್ನು ಒಳಕ್ಕೆ ಕರೆದುಕೊಂಡುಹೋದಳು, ಬಾಗಿಲನ್ನು ಹಾಕಿದಳು. ತನ್ನ ಒಡಂಬಡಿಕೆಯ ಪುಸ್ತಕವನ್ನು ತೆರೆದು ನೋಡಿದಳು; ಆ ಚೀಟಿ ಅಲ್ಲಿರುವುದನ್ನು ಕಂಡುಕೊಂಡಳು. ಅದನ್ನು ಓದಿದಕೂಡಲೇ ಅವಳಿಗೆ ಸಂತೋಷವಾಯಿತು. ಯೋಚನೆ ಮಾಡುವಷ್ಟರಲ್ಲಿಯೇ ಅವಳು ನನ್ನನ್ನು ಬಳಿಗೆಳೆದುಕೊಂಡಳು; ಒಂದುಸಲ ಹಿಸುಕಿದಳು; ನಾನು ಇಡೀ ಪ್ರಪಂಚದಲ್ಲೇ ಬಲುಒಳ್ಳೆಯ ಹುಡುಗನೆಂದೂ, ನಡೆದ ಸಂಗತಿಯನ್ನು ಯಾರಿಗೂ ತಿಳಿಸಬಾರದೆಂದೂ ಹೇಳಿದಳು. ಅವಳ ಮುಖ ಕ್ಷಣಕಾಲ ಬಲು ಕೆಂಪಾಗಿತ್ತು, ಅವಳ ಕಣ್ಣುಗಳು ಜ್ವಲಿಸುತ್ತಿದ್ದವು; ಇವು ಅವಳಿಗೆ ಅತಿಶಯ ಸೌಂದರ್ಯವನ್ನು ತಂದಿದವು. ನನಗೆ ತುಂಬಾ ಆಶ್ಚರ್ಯವಾಯಿತು; ಯಥಾಸ್ಥಿತಿಗೆ ಬಂದಮೇಲೆ ನಾನು ಆಚೀಟಿಯ ವಿಷಯವೇನು ಎಂದು ಕೇಳಿದೆ. ನೀನು ಅದನ್ನು ಓದಿದ್ದೀಯಾ ಎಂದು ಅವಳು ಕೇಳಿದಳು. ನಾನು ಇಲ್ಲ ಎಂದೆ, ನಿನಗೆ ಬರೆದುದನ್ನು ಓದಲು ಬರುತ್ತದೆಯೆ ಎಂದು ಮತ್ತೆ ಕೇಳಿದಳು. ಇಲ್ಲ, ನನ್ನದು ಒರಟು ಕೈ, ಎಂದೆ ನಾನು. ಬಳಿಕ ಅವಳು ತಾನು ಪುಸ್ತಕವನ್ನು ಎಲ್ಲಿಯವರೆಗೆ ಓದಿದ್ದೇನೆ ಎಂಬುದನ್ನು ತಿಳಿಸುವ ಗುರುತು ಅದೆಂದೂ, ಇನ್ನಾವುದೂ ಅಲ್ಲವೆಂದೂ, ನಾನು ಇನ್ನು ಹೋಗಿ ಆಡಿಕೊಳ್ಳಬಹುದೆಂದೂ ಹೇಳಿದಳು,

ನಾನು ಈ ವಿಚಾರವನ್ನೇ ಯೋಚನೆಮಾಡುತ್ತಾ ನದಿಯ ಬಳಿಗೆ ಹೋದೆ. ಸ್ವಲ್ಪ ಕಾಲದಲ್ಲೇ ನನ್ನ ನೀಗ್ರೋ ಸೇವಕನೂ ನನ್ನ ಹಿಂದೆಯೇ ಬರುತ್ತಿರುವುದನ್ನು ಕಂಡೆ. ಮನೆ ಕಣ್ಮರೆಯಾಗುವವರೆಗೂ ಅವನು ಸುಮ್ಮನಿದ್ದ, ಬಳಿಕ ಕ್ಷಣಕಾಲ ಹಿಂದೆಮುಂದೆ ನೋಡಿದ, ಆಮೇಲೆ ನನ್ನಬಳಿಗೆ ಓಡುತ್ತ ಬಂದು ಹೇಳಿದ;

"ಮಿ ಜಾರ್ಜ್, ನೀವು ಸ್ವಲ್ಪ ಆ ಬದಿಯ ಕಡೆಗೆ ಬರುವುದಾದರೆ ನಿಮಗೆ ತೆಕ್ಕೆಗಟ್ಟಲೆ ಘೋರ ಜಲಸರ್ಪಗಳನ್ನು ತೋರಿಸುತ್ತೇನೆ."

ಅದು ಬಹಳ ಕುತೂಹಲಕಾರಿಯಾದುದು ಎಂದುಕೊಂಡೆ ನಾನು; ಅವನು ಹಿಂದಿನ ದಿನ ಹಾಗೆಯೇ ಹೇಳಿದ್ದ, ಅವುಗಳನ್ನು ಹುಡುಕಿಕೊಂಡು ಹೋಗುವಷ್ಟರಮಟ್ಟಿಗೆ ಜಲಸರ್ಪಗಳನ್ನು ಯಾರೂ ಪ್ರೀತಿಸುವುದಿಲ್ಲವೆಂಬುದು ಅವನಿಗೆ ತಿಳಿದಿರಬೇಕು, ಅದರೂ ಇವನು ಏನನ್ನು ಮಾಡಹೊರಟಿದ್ದಾನೆ ನೋಡಿಬಿಡೋಣ ಎಂದು ಮನಸ್ಸಿನಲ್ಲಿ ಮಾಡಿಕೊಂಡು. ನಾನು ಹೇಳಿದೆ:"

"ಸರಿಯೆ; ಹೋಗೋಣ ಹೆಜ್ಜೆ ಹಾಕು ಮುಂದೆ."

ನಾನು ಅರ್ಧಮೈಲಿಯವರೆಗೂ ಅವನನ್ನು ಹಿಂಬಾಲಿಸಿದೆ; ಅಮೇಲೆ ಅವನು ಕೆಸರಿಗೆ ನಡೆದ, ಇನ್ನರ್ಧಮೈಲಿಯ ದೂರ ಮಂಡಿಯುವರೆಗಿನ ಬದಿಯಲ್ಲಿ ಸಾಗಿದ. ಆಮೇಲೆ ನಾವು ಒಂದು ಚಪ್ಪಟೆಯಾದ, ಒಣಗಿದ್ದ. ಮತ್ತು ಗಿಡ ಬಳ್ಳಿ ಪೊದರುಗಳಿಂದ ಕೂಡಿದ ಸ್ಥಳವನ್ನು ತಲಪಿದೆವು.

"ನೀವು ಹೀಗೆಯೇ ಹತ್ತುಹೆಜ್ಜೆ ಮುಂದೆಹೋಗಿ ಮಿ. ಜಾರ್ಜ್; ಅಲ್ಲಿವೆ ಅವು. ನಾನು ಅವುಗಳನ್ನು ಹಿಂದೆಯೇ ನೋಡಿದ್ದೇನೆ; ಮತ್ತೆಂದೂ ಆ ಕಡೆ ನೋಡಲು ನಾನು ಇಷ್ಟಪಡೆನು."

ಇಷ್ಟುಹೇಳಿ ಅವನು ತಟ್ಟನೆ ತಿರುಗಿ ಹೊರಟುಹೋದನು. ಮತ್ತು ಮರಗಿಡಗಳು ಅವನನ್ನು ಬೇಗ ಮರೆಮಾಡಿದವು. ನಾನು ಮುನ್ನುಗ್ಗಿ ನಡೆದು ಬಳ್ಳಿಗಳಿಂದ ಸುತ್ತುವರಿದ ಮಲಗುವಕೋಣೆಯೊಂದರಷ್ಟು ದೊಡ್ಡದಾದ ತೆರವನ್ನು ತಲಪಿದೆ— ಅಲ್ಲೊಬ್ಬ ಮನುಷ್ಯ ಮಲಗಿ ನಿದ್ರಿಸುತ್ತಿರುವುದನ್ನು ಕಂಡೆ. ಅವನು ನನ್ನ ಪುಣ್ಯಕ್ಕೆ ನನ್ನ ಹಳೆಯ ಜಿಮ್ಮನೇ ಆಗಿದ್ದ!

ಅವನನ್ನು ಎಬ್ಬಿಸಿದೆ, ನನ್ನನ್ನು ಮತ್ತೆ ಕಂಡದ್ದು ಅವನಿಗೆ ಪರಮಾಶ್ಚರ್ಯವಾಗಿರಬೇಕೆಂದು ನನಗೆ ತೋರಿತು: ವಾಸ್ತವವಾಗಿ ಹಾಗಾಗಲಿಲ್ಲ, ತುಂಬಾ ಸಂತೋಷವಾಯಿತೆಂದು ಅವನು ಕಿರಿಚಿಬಿಡುವುದರಲ್ಲಿದ್ದ, ಅವನಿಗೆ ಆಶ್ಚರ್ಯವೇನೂ ಆಗಲಿಲ್ಲ. ಆ ರಾತ್ರಿ ತಾನು ನನ್ನ ಹಿಂದೆಯೇ ಈಜಿಕೊಂಡು ಬಂದುದಾಗಿಯೂ, ನಾನು ಸಲಸಲವೂ ಕೂಗುತ್ತಿದ್ದುದನ್ನು ತಾನು ಕೇಳಿದುದಾಗಿಯೂ, ಆದರೆ ಯಾರಾದರೂ ತನ್ನನ್ನು ಪತ್ತೆ ಹಿಡಿದು ಮತ್ತೆ ಜೀತಕ್ಕೆ ತಳ್ಳಿಯಾರೆಂಬ ಭೀತಿಯಿಂದ ತಾನು ಉತ್ತರ ಕೊಡದಿದ್ದುದಾಗಿಯೂ ಹೇಳಿದನವನು. ಜಿಮ್ ಹೇಳಿದ:

"ನನಗೆ ಸ್ವಲ್ಪ ಮೈನೋವಾಯಿತು; ಬೇಗಬೇಗ ಈಜುವುದು ನನಗೆ ಸಾಧ್ಯವಾಗಲಿಲ್ಲ, ಆದ್ದರಿಂದ ಕಡೆಕಡೆಗೆ ನಿನಗೆ ಸುಮಾರು ದೂರದ ಹಿಂದೆಯೇ ಉಳಿದಿದ್ದೆ. ನೀನು ದಡ ಸೇರಿದುದನ್ನು ಕಂಡಾಗ, ನಿನ್ನ ಹೆಸರೆತ್ತಿ ಗಟ್ಟಿಯಾಗಿ ಕೂಗುವ ಅಗತ್ಯವಿಲ್ಲದೆ ಅಲ್ಲೆ ಎಲ್ಲಾದರೂ ನಾನು ನಿನ್ನನ್ನು ಸೇರಿಕೊಳ್ಳಬಹುದೆಂದು ಯೋಚನೆ ಮಾಡಿದೆ,

ನಿನಗೆ ಅವರು ಹೇಳುತ್ತಿದ್ದುದು ನನ್ನ ಕಿವಿಗೇ ಬೀಳದಷ್ಟು ಬಲುದೂರದಲ್ಲಿ ನಾನಿದ್ದೆ—ನಾಯಿಗಳಿಗೆ ಹೆದರಿಕೊಂಡಿದ್ದೆ. ಆದರೆ ಎಲ್ಲವೂ ಶಾಂತವಾದ ಮೇಲೆ ನೀನು ಆ ಮನೆಯೊಳಕ್ಕೆ ಹೋಗಿರಬಹುದೆಂದುಕೊಂಡೆ, ಆದ್ದರಿಂದ ನಾನು ಹಗಲನ್ನು ಕಳೆಯಲು ಕಾಡಿಗೆ ಓಡಿಬಂದೆ. ಮುಂಜಾನೆಯಲ್ಲಿ ಕೆಲವರು ನೀಗ್ರೋಗಳು ತಮ್ಮ ತಮ್ಮ ಹೊಲಗಳಿಗೆ ಹೋಗುವ ಮಾರ್ಗದಲ್ಲಿ ಇತ್ತ ಬಂದರು. ಅವರು ಈ ಸ್ಥಳದ ಸುತ್ತಲೂ ನೀರಿರುವುದರಿಂದ ನಾಯಿಗಳು ಅಟ್ಟಿಸಿಕೊಂಡು ಬರಲಾರವೆಂದು ಹೇಳಿ ನನ್ನನ್ನು ಇಲ್ಲಿಗೆ ತಂದುಬಿಟ್ಟರು. ಪ್ರತಿರಾತ್ರಿಯೂ ಅವರು ನನಗೆ ಆಹಾರವನ್ನು ತಂದುಕೊಡುತ್ತಿದ್ದರು ನಿನ್ನ ಯೋಗಕ್ಷೇಮವನ್ನು ನನಗೆ ತಿಳಿಸುತ್ತಿದ್ದರು."

"ನನ್ನನ್ನು ಇಲ್ಲಿಗೆ ಕರೆದುಕೊಂಡು ಬರುವಂತೆ ನೀನು ಮೊದಲೇ ಏಕೆ ನಮ್ಮ ಜಾಕನ ಕೂಡ ಹೇಳಲಿಲ್ಲ ?"

ನಾವು ಸರಿಯಾದ ಏರ್ಪಾಡೊಂದನ್ನು ಮಾಡಲಾಗುವ ತನಕ "ನಿನಗೆ ತೊಂದರೆ ಕೊಡುವುದರಿಂದ ಪ್ರಯೋಜನವಾಗುತ್ತಿರಲಿಲ್ಲ, ಹಕ್,—ಬಿಡು, ಈಗ ನಾವು ಸರಿಯಾಗಿಯೇ ಇದ್ದೇವಲ್ಲ, ನಾನು ಸಮಯ ಸಿಕ್ಕಿದಾಗೆಲ್ಲ ಮಡಕೆಗಳನ್ನೂ ತಣಿಗೆಗಳನ್ನೂ ಇತರ ಪಾತ್ರೆಗಳನ್ನೂ ಕೊಳ್ಳುತ್ತಿದ್ದೇನೆ, ರಾತ್ರಿಯ ಹೊತ್ತಿನಲ್ಲಿ ತೆಪ್ಪವನ್ನು ಸರಿಪಡಿಸುತ್ತಿದ್ದೇನೆ—"

"ಯಾವ ತೆಪ್ಪ, ಜಿಮ್ ?"

"ನಮ್ಮ ಹಳೆಯ ತೆಪ್ಪ,"

"ನಮ್ಮ ಹಳೆಯ ತೇಪ್ಪ ಚುಪ್ಪಾಚೂರಾಗಿ ನಾಶವಾಗಲಿಲ್ಲವೆಂದೇ ನೀನು ಹೇಳುತ್ತಿರುವುದು ?"

"ಹೌದು, ಅದು ನಾಶವಾಗಲಿಲ್ಲ, ಹಲವಾರು ಎಡೆಗಳಲ್ಲಿ ಕಿತ್ತುಹೋಗಿತ್ತು—ಅದರ ಒಂದು ತುದಿ ಮಾತ್ರ. ಹೆಚ್ಚೇನೂ ಅಪಾಯ ತಟ್ಟಲಿಲ್ಲ; ನಮ್ಮ ಗಂಡಾರಗಳು ಮಾತ್ರ ಸಂಪೂರ್ಣವಾಗಿ ಧ್ವಂಸವಾಗಿದ್ದವು. ನಾವು ಅಷ್ಟು ಆಳಕ್ಕೆ ಮುಳುಗಿ ಅಷ್ಟು ದೂರ ನೀರೊಳಗೇ ಈಜುತ್ತ ಹೋಗಿರದಿದ್ದರೆ, ಆ ರಾತ್ರಿ ಅಷ್ಟು ಅಂಧಕಾರಮಯವಾಗಿರದಿದ್ದರೆ ಮತ್ತು ಅದರಿಂದ ನಮಗೆ ಅಷ್ಟೊಂದು ಅಂಜಿಕೆಯಾಗಿರದಿದ್ದರೆ, ಮತ್ತು ಗಾದೆಯಂತೆ ಅಷ್ಟು ಮಂದಮತಿಗಳಾಗಿರದಿದ್ದರೆ ನಾವು ತೆಪ್ಪವನ್ನು ಸುರಕ್ಷಿತವಾಗಿಟ್ಟುಕೊಳ್ಳಬಹುದಾಗಿತ್ತು. ಆದರೆ ಹಾಗೆ ಮಾಡದೆ ಹೋಗಿದ್ದರೂ ಮಾಡಿದ್ದರೂ ಈಗ ಒಂದೇ ಆಗುತ್ತಿತ್ತು; ಏಕೆಂದರೆ ಈಗ ಅದನ್ನು ಹೊಸ ತೆಪ್ಪವೇನ್ನುವಮಟ್ಟಿಗೆ ಮತ್ತೆ ಸರಿಪಡಿಸಿ ಸಜ್ಜುಗೊಳಿಸಲಾಗಿದೆ. ಕಳೆದುಹೋದ ಹಳೆಯ ಪದಾರ್ಥಗಳ ಬದಲಿಗೆ ನಾವೀಗ ಬೇಕಾದಷ್ಟು ಹೊಸತನ್ನು ತಂದಿದ್ದಾಗಿದೆ."

"ಮತ್ತೆ ತೆಪ್ಪ ನಿನ್ನ ವಶಕ್ಕೆ ಬಂದುದು ಹೇಗೆ, ಜಿಮ್,—ಅದನ್ನು ನೀನು ಹಿಡಿದೆಯ ?"

"ನಾನು ಕಾಡಿನಲ್ಲಿ ಸೇರಿಕೊಂಡಿರುವಾಗ, ಅದನ್ನು ಹಿಡಿಯುವುದು ನನ್ನಿಂದ ಹೇಗಾದೀತು ? ನಾನಲ್ಲ; ನದಿಯ ಈ ತಿರುವಿನಲ್ಲಿ ನೀರೊಳಗೆ ಮುಳುಗಿದ್ದ ಮರದ ಮೋಟಿಗೆ ಅದು ಸಿಕ್ಕಿಕೊಂಡಿರುವುದು ಕೆಲವು ನೀಗ್ರೋಗಳ ಕಣ್ಣಿಗೆ ಬಿತ್ತು. ಅವರು ಅದನ್ನೆಳೆದುತಂದು ನೀರ್ಗಿಡಗಳಿಂದಾವೃತವಾದ ಕೊಲ್ಲಿಯೊಂದರಲ್ಲಿ ಬಚ್ಚಿಟ್ಟರು. ಅದು ತಮ್ಮಲ್ಲಿ ಯಾರಿಗೆ ಸೇರಬೇಕೆಂಬ ವಿಷಯದಲ್ಲಿ ಅವರು ಕಚ್ಚಾಡುತ್ತಿದ್ದರು. ಅದೇ ಸಮಯಕ್ಕೆ ನಾನಿಲ್ಲಿಗೆ ಬಂದೆ, ಅದು ಅವರಲ್ಲಿ ಯಾರದೂ ಅಲ್ಲ ನಿನಗೂ ನನಗೂ ಸೇರಿದುದು ಎಂದು ಹೇಳಿ ತರುಣನಾದ ಶ್ವೇತವರ್ಣೀಯ ಗೌರವಸ್ಥನೊಬ್ಬನ ಒಡವೆಯನ್ನು ಅಪಹಾರ ಮಾಡುತ್ತೀರ, ಅದಕ್ಕಾಗಿ ಆಮೇಲೆ ಚರ್ಮ ಸುಲಿಸಿಕೊಳ್ಳುತ್ತೀರಾ ಎಂದು ಅವರೊಂದಿಗೆ ವಾದಿಸಿ ವ್ಯಾಜ್ಯವನ್ನು ಇತ್ಯರ್ಥಪಡಿಸಿದೆ. ಆಮೇಲೆ ನಾನವರ ಕೈಗೆ ಹತ್ತು ಸೆಂಟುಗಳ ನಾಣ್ಯವೊಂದನ್ನು ಹಾಕಿದೆ, ಅವರಿಗೆ ಭಾರೀ ತೃಪ್ತಿಯಾಯಿತು. ಹೀಗೆಯೇ ಮುಂದೆಯೂ ಹೆಚ್ಚುಹೆಚ್ಚಾಗಿ ತೆಪ್ಪಗಳು ಇತ್ತ ತೇಲಿಬಂದು ಸಿಕ್ಕಿಕೊಳ್ಳುತ್ತಿರಲಿ ತಮ್ಮನ್ನು ಶ್ರೀಮಂತರನ್ನಾಗಿ ಮಾಡಲಿ ಎಂದು ಕೋರಿದರು. ಈ ನೀಗ್ರೋಗಳು ನನ್ನನ್ನು ಕಂಡರೆ ತುಂಬಾ ಪ್ರೀತಿಯಿಂದ ನಡೆದುಕೊಳ್ಳುತ್ತಿದ್ದಾರೆ. ನನಗೆ ಅವರಿಂದ ಯಾವ ಕೆಲಸವಾದರೂ ಆಗಬೇಕಾದಾಗ ನಾನವರಿಗೆ ಮತ್ತೆ ಮತ್ತೆ ಹೇಳಬೇಕಾಗಿಯೇ ಇಲ್ಲ, ಚಿನ್ನಾ. ಆ ಜಾಕ್ ಇದ್ದಾನಲ್ಲ ಬಲು ಒಳ್ಳೆಯ ನೀಗ್ರೋ, ಬಲು ಜಾಣ."

"ಹೌದು, ಅವನು ಹಾಗೆಯೇ. ನೀನಿಲ್ಲಿರುವುದನ್ನು ನನಗವನು ಹೇಳಲೇ ಇಲ್ಲ; ತನ್ನೊಂದಿಗೆ ಬಾ ಎಂದನು, ಬೇಕಾದಷ್ಟು ಜಲಸರ್ಪಗಳನ್ನು ತೋರಿಸುವುದಾಗಿ ಹೇಳಿದನು, ಅಷ್ಟೆ. ಮುಂದೇನಾದರೂ ಅವನ ಮೇಲೆ ದೂರು ಬರುವುದಿಲ್ಲ ನಾವಿಬ್ಬರೂ ಒಂದಿಗಿದ್ದುದನ್ನು ತಾನು ನೋಡಿಯೇ ಇಲ್ಲವೆನ್ನಬಹುದವನು, ಅದು ಸತ್ಯವೂ ಆಗುವುದು."

ಮುಂದಿನ ದಿನದ ಬಗೆಗೆ ಹೆಚ್ಚು ಹೇಳುವ ಇಷ್ಟವಿಲ್ಲ ನನಗೆ. ನಾನು ಅದನ್ನು ಸಂಕ್ಷೇಪವಾಗಿ ಹೇಳಬಹುದೆಂದು ನನ್ನೆಣಿಕೆ. ಸೂರ್ಯೋದಯದ ಸುಮಾರಿಗೆ ನನಗೆ ಎಚ್ಚರವಾಯಿತು, ಮತ್ತೆ ಹೊರಳಬೇಕು ನಿದ್ದೆಮಾಡಬೇಕು ಎನ್ನುವುದರಲ್ಲಿದ್ದೆ; ಆಗ ಎಲ್ಲವೂ ತುಂಬಾ ನಿಶ್ಶಬ್ದವಾಗಿತ್ತು—ಯಾರೂ ಅಲುಗಾಡದಿರುವಂತೆ ತೋರಿತು. ಸಾಮಾನ್ಯವಾಗಿ ಎಂದೂ ಹೀಗಾಗುತ್ತಿರಲಿಲ್ಲ. ಬಕ್ ಎದ್ದು ಹೋಗಿರುವುದನ್ನು ಕಂಡೆನು. ಅಚ್ಚರಿಪಡುತ್ತ ನಾನೂ ಮೇಲೆದ್ದೆ, ಮೆಟ್ಟಿಲಿಳಿದು ನಡೆದೆ—ಒಬ್ಬನೂ ಇಲ್ಲ; ನನ್ನ ಕಣ್ಣಿಗೆ ಬಿದ್ದ ಪ್ರತಿಯೊಂದು ವಸ್ತುವೂ ಇಲಿಯಂತೆ ಸ್ತಬ್ಧವಾಗಿತ್ತು. ಹೊರಗೂ ಇದೇ ಪರಿಸ್ಥಿತಿ. ಇದರ ಅರ್ಥವೇನು ಎಂದು ಯೋಚನೆಮಾಡತೊಡಗಿದೆ. ದಿಮ್ಮಿಗಳನ್ನು ಒಟ್ಟಿದ್ದ ಸ್ಥಳದಲ್ಲಿ ನಮ್ಮ ಜಾಕ್ ನಿಂತಿದ್ದ. ನಾನವನ ಬಳಿಗೆ ಹೋಗಿ ಕೇಳಿದೆ:

"ಇದರ ಸಮಾಚಾರವೇನು ?"

ಅವನು ಹೇಳಿದ ;

"ನಿನಗೆ ತಿಳಿಯದೆ, ಮಿ. ಜಾರ್ಜ್ ?"

"ಇಲ್ಲ, ನನಗೆ ತಿಳಿಯದು" ಎಂದೆ ನಾನು.

"ಸರಿ ಹಾಗಾದರೆ : ಮಿ. ಸೋಫಿಯಾ ಓಡಿಹೋದಳು, ನಿಜವಾಗಿಯೂ ಓಡಿಹೋಗಿದ್ದಾಳೆ, ರಾತ್ರಿ ಒಂದು ಹೊತ್ತಿನಲ್ಲಿ ಅವಳು ಓಡಿಹೋಗಿದ್ದಾಳೆ—ಎಷ್ಟು ಹೊತ್ತಿಗೆ ಎನ್ನುವುದು ಯಾರಿಗೂ ತಿಳಿಯದು. ನೀನು ಬಲ್ಲ ಆ ತರುಣ ಹಾರ್ನಿಪೆ ಪರ್ಡ್‌ಸನ್ನನ್ನು ಮದುವೆ ಮಾಡಿಕೊಳ್ಳಲು ಅವಳು ಇಲ್ಲೆಲ್ಲೋ ಓಡಿಹೋದ ಳೆಂದು ನಿರೀಕ್ಷಿಸ ತ್ತಾರೆ. ಮನೆಯವರಿಗೆ ಈ ವಿಷಯ ಸುಮಾರು ಅರ್ಧ ಗಂಟೆಯ ಹಿಂದೆ ತಿಳಿಯಿತು—ಅಥವಾ ಇನ್ನೂ ಸ್ವಲ್ಪ ಹೊತ್ತಾಗಿರಬಹುದು ಅಷ್ಟೆ ; ಹೆಚ್ಚು ತಡವೇನೂ ಆಗಲಿಲ್ಲವೆಂದು ನಾನು ಹೇಳಬಲ್ಲೆ. ಇನ್ನಂಥಾ ತುಪಾಕಿಗಳ ಮತ್ತು ಕುದುರೆಗಳ ರಭಸದೋಟವನ್ನು ನೀನು ಎಂದೂ ಕಾಣಲಾರೆ ! ಹೆಂಗಸರೋ ಸುದ್ದಿ ಮುಟ್ಟಿಸಿ ಸಂಬಂಧಿಗಳನ್ನು ಕರೆತರಲು ಹೋಗಿದ್ದಾರೆ, ವೃದ್ಧ ಮಿ. ಸಾಲ್ ಮತ್ತು ಹುಡುಗರು ತಮ್ಮ ತುಪಾಕಿಗಳನ್ನು ಹಿಡಿದುಕೊಂಡು ಆ ತರುಣನನ್ನು, ಅವನು ಮಿ. ಸೋಫಿಯಾಳೊಂದಿಗೆ ನದಿಯನ್ನು ದಾಟುವುದರೊಳಗಾಗಿ, ಹಿಡಿದು ಕೊಲ್ಲಬೇಕೆಂದು ನದಿಯ ಬಳಿಗೆ ಧಾವಿಸಿದ್ದಾರೆ. ಬಲು ಕಷ್ಟಕಾಲ ಕಾದಿದೆಯೆಂದು ನನ್ನೆಣಿಕೆ."

"ಬಕ್ ನನ್ನನ್ನು ಎಬ್ಬಿಸದೆ ಹೊರಟುಹೋದ."

"ಹೌದು, ಅವನು ನಿನ್ನನ್ನು ಎಬ್ಬಿಸಲಿಲ್ಲ. ಈ ತೊಡಕಿಗೆ ನಿನ್ನನ್ನು ಸಿಕ್ಕಿಸುವುದು ಅವರಿಗೆ ಇಷ್ಟವಾಗಲಿಲ್ಲ. ಮಿ. ಬಕ್ ತುಪಾಕಿಯನ್ನು ಸಜ್ಜುಗೊಳಿಸಿಕೊಂಡು ಷೆಪರ್ಡ್‌ಸನ್ನೊಬ್ಬನನ್ನು ಮನೆಗೆ ಹಿಡಿದೇ ತರುತ್ತೇನೆ, ಇಲ್ಲ, ಮಡಿಯುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದಾನೆ. ಆ ಮನೆತನದವರು ಅಲ್ಲಿ ಬೇಕಾದ ಹಾಗೆ ಸಿಕ್ಕುತ್ತಾರೆಂದು ನನ್ನ ಎಣಿಕೆ ; ಅವಕಾಶ ಬಿದ್ದರೆ ಅವನು ಒಬ್ಬನನ್ನು ಹಿಡಿದು ತಂದೇ ತರುತ್ತಾನೆಂದು ನೀನು ಪಣತೊಡಬಹುದು.

ನಾನು ನದೀಮಾರ್ಗವನ್ನು ಹಿಡಿದು ನನ್ನ ಕೈಲಾದಷ್ಟು ಬೇಗಧಾವಿಸಿದೆ. ಹೋಗುತ್ತ ಹೋಗುತ್ತ ನನಗೆ ಸುಮಾರು ದೂರದಲ್ಲಿ ತುಪಾಕಿಗಳ ಸಿಡಿತ ಕೇಳಿಬಂತು. ಒಂದು ದಿಮ್ಮಿ ಮಳಿಗೆಯೂ ಮತ್ತು ಹಬೆದೋಣಿಗಳು ಬಂದು ನಿಲ್ಲುವೆಡೆಯಲ್ಲಿರುವ ದಿಮ್ಮಿ ರಾಶಿಯೂ ನನ್ನ ಕಣ್ಣಿಗೆ ಬಿದ್ದಾಗ ನಾನು ಮರಪೊದರುಗಳ ಅಂಚಿನಲ್ಲೇ ಹೋಗಿ ಒಂದು ಸುರಕ್ಷಿತವಾದ ಸ್ಥಳಕ್ಕೆ ತಲುಪಿದೆ. ಅಲ್ಲಿ ಬೆಳೆದಿದ್ದ ಹತ್ತಿಯ ಮರದ ಎತ್ತರದ ಕವಲು ಕೊಂಬೆಗೆ ಏರಿ ಕುಳಿತು ಸುತ್ತಲೂ ನೋಡಿದೆ. ಆ ಮರದ ಮುಂದೆ ಸಮೀಪದಲ್ಲೇ ನಾಲ್ಕು ಅಡಿಗಳೆತ್ತರದ ಒಂದು ದಿಮ್ಮಿಯ ಜೋಡಣೆಯಿತ್ತು. ಅದರ ಹಿಂದೆ ಅವಿತು ಕೊಳ್ಳಬೇಕೆಂದು ನಾನು ಮೊದಲು ಯೋಚಿಸಿದ್ದೆ ; ನಾನು ಹಾಗೆ ಮಾಡದಿದ್ದುದೇ ಕ್ಷೇಮ ವಾಯಿತೆನ್ನಬೇಕು. ದಿಮ್ಮಿ ಮಳಿಗೆಯ ಮುಂದಿನ ತೆರವಿನಲ್ಲಿ ನಾಲ್ಕೈದು ಜನರು ಕುದುರೆ ಯೇರಿ ಟಳಾಯಿಸುತ್ತಿದ್ದರು, ಹಬೆದೋಣಿಯ ನಿಲ್ದಾಣದ ಪಕ್ಕದಲ್ಲಿದ್ದ ದಿಮ್ಮಿ ಜೋಡ

ಹಿಂದಿದ್ದ ಕೆಲವರು ಚಿಕ್ಕಹುಡುಗರನ್ನು ಹಿಡಿಯುವುದಕ್ಕಾಗಿ ಪ್ರಯತ್ನಿಸುತ್ತ ರೇಗುತ್ತ ಕೂಗುತ್ತಿದ್ದರು. ಆದರೂ ಹತ್ತಿರಕ್ಕೆ ಬರುವುದು ಅವರಿಗೆ ಸಾಧ್ಯವಾಗಲಿಲ್ಲ. ಅವರಲ್ಲೊಬ್ಬನು ದಿಮ್ಮಿ ಜೋಡಣೆಯ ಹೊಳೆಯ ಕಡೆಗೆ ಬಂದನೆಂದರೆ ಗುಂಡಿನೇಟು ಬೀಳುತ್ತಿತ್ತು, ಸತ್ತು ಉರುಳುತ್ತಿದ್ದನು. ಆ ಜೋಡಣೆಯ ಹಿಂದೆ ಬೆನ್ನಿಗೆ ಬೆನ್ನು ಕೊಟ್ಟು ಇಬ್ಬರು ಹುಡುಗರು ಕುಳಿತಿದ್ದರು ; ಅವರಿಗೆ ಎರಡೂ ಕಡೆಗಳನ್ನು ನೋಡಿಕೊಳ್ಳುವುದು ಸಾಧ್ಯವಿತ್ತು.

ಕ್ರಮೇಣ ಜನ ಕುದುರೆಯೇರಿ ಟಳಾಯಿಸುವುದು ನಿಂತಿತು, ಕಿರಿಚುವುದೂ ನಿಂತಿತು. ಅವರು ಮಳಿಗೆಯ ಕಡೆಗೆ ಹೊರಟರು ; ಆಗ ಆ ಹುಡುಗರಲ್ಲಿ ಒಬ್ಬ ಎದ್ದು ನಿಂತು ಆ ದಿಮ್ಮಿ ರಾಶಿಯ ಮೇಲಿಂದ ಗುಂಡುಹಾರಿಸಿದ, ಅಶ್ವಾರೋಹಿಗಳಲ್ಲಿ ಒಬ್ಬ ನೆಲಕ್ಕುರುಳಿದ. ಎಲ್ಲರೂ ಕುದುರೆಗಳನ್ನು ನಿಲ್ಲಿಸಿ ಧುಮುಕಿದರು ; ಗಾಯಗೊಂಡವನನ್ನು ಎತ್ತಿಕೊಂಡು ಮಳಿಗೆಯ ಕಡೆಗೆ ಒಯ್ಯುತ್ತಿದ್ದರು. ಆ ಕ್ಷಣವೇ ಹುಡುಗರಿಬ್ಬರೂ ದೌಡುಹಾಕಿದರು. ಆ ಜನರು ಇವರನ್ನು ಗಮನಿಸುವುದರೊಳಗಾಗಿ ಇವರು ನಾನಿದ್ದ ಮರದ ಬಳಿಗೆ ಅರ್ಧದಾರಿ ಬಂದಿದ್ದರು. ಆ ಮೇಲೆ ಇವರನ್ನು ಕಂಡು ಆ ಜನರು ಮತ್ತೆ ಕುದುರೆಯೇರಿ ಅಟ್ಟಿಸಿಕೊಂಡು ಬಂದರು. ಹುಡುಗರು ಅವರಿಗಿಂತಲೂ ಬಲು ಮುಂದಾಗಿದ್ದುದರಿಂದ ಅವರು ಎಷ್ಟು ವೇಗವಾಗಿ ಬಂದರೂ ಪ್ರಯೋಜನವಾಗಲಿಲ್ಲ. ಹುಡುಗರು ನನ್ನ ಮರದ ಮುಂಭಾಗದಲ್ಲಿದ್ದ ದಿಮ್ಮಿಜೋಡಣೆಗೆ ತಲಪಿದ್ದರು, ಅದರ ಹಿಂದೆ ಅವಿತುಕೊಂಡರು. ಅವರಿಗಿಲ್ಲದ ಈ ವಿಶೇಷಾನುಕೂಲ ಈ ಹುಡುಗರಿಗೆ ಮತ್ತೆ ಲಭಿಸಿತು. ಹುಡುಗರಿಬ್ಬರಲ್ಲಿ ಒಬ್ಬ ಬಕ್, ಇನ್ನೊಬ್ಬ ಕೇವಲ ಹತ್ತೊಂಬತ್ತು ವರುಷ ವಯಸ್ಸಿನ ತೆಳ್ಳನೆಯ ತರುಣ.

ಆ ಜನರು ಸ್ವಲ್ಪ ಹೊತ್ತು ಸುತ್ತಲೂ ಹುಡುಕಿನೋಡಿದರು ; ಆ ಮೇಲೆ ಹೊರಟು ಹೋದರು, ಆ ಮೇಲೆ ಅವರು ಕಣ್ಮರೆಯಾಗುವುದೇ ತಡ ನಾನು ಕೂಗಿ ಕರೆದೆ, ಮೊದಮೊದಲು, ನನ್ನ ಧ್ವನಿ ಮರದಿಂದೆದ್ದು ಬರುತ್ತಿದ್ದುದರಿಂದಲೋ ಏನೋ, ನನ್ನ ಕೂಗೇ ಅವನಿಗೆ ಅರ್ಥವಾಗಲಿಲ್ಲ. ಅವನಿಗೆ ಪರಮಾಶ್ಚರ್ಯವಾಯಿತು. ಹುಷಾರಾಗಿ ನೋಡುತ್ತಿರಬೇಕೆಂದೂ ಆ ಜನರು ಮತ್ತೆ ಕಣ್ಣಿಗೆ ಬಿದ್ದರೆ ತನಗೆ ತಿಳಿಸಬೇಕೆಂದೂ ಬಕ್ ನನಗೆ ಹೇಳಿದ. ಅವರು ಎಂಥಾ ದುಷ್ಕೃತ್ಯಕ್ಕೂ ಸಿದ್ಧರಾದವರೆಂದೂ, ಸ್ವಲ್ಪ ಹೊತ್ತಿನಲ್ಲೇ ಬರುವರೆಂದೂ ತಿಳಿಸಿದ. ನಾನು ಆ ಮರದಲ್ಲಿ ಅಡಗಿಕೊಂಡಿರದಿದ್ದರೇ ಚೆನ್ನಾಗಿತ್ತೆನಿಸಿತು ; ಕೆಳಗಿಳಿವ ಧೈರ್ಯವೇ ನನಗಿರಲಿಲ್ಲ. ಬಕ್ ಅಳಲೂ ಕಿರಿಚಲೂ ಪ್ರಾರಂಭಿಸಿದ ; ತಾನೂ ತನ್ನ ಸೋದರಮಾವನಮಗನಾದ ಜೋವೂ ಇಂದಿನ ನಷ್ಟವನ್ನು ತುಂಬಿಕೊಡುವುದಾಗಿ ನಿರ್ಧರಿಸಿದನು. ತನ್ನ ತಂದೆಯೂ ಇಬ್ಬರು ಸೋದರರೂ ಹತರಾದರೆಂದೂ ಹಗೆಯ ಕಡೆಯೂ ಇಬ್ಬರೋ ಮೂವರೋ ಸತ್ತರೆಂದೂ ಅವನು ಹೇಳಿದನು. ಷೆಪರ್ಡ್‌ಸನ್ನರು ಅವರಿಗಾಗಿ ಹೊಂಚುಹಾಕುತ್ತಿದ್ದರೆಂದನು. ಷೆಪರ್ಡ್‌ಸನ್ನರನ್ನು ಹತ್ತಿಕ್ಕುವುದು ಅವ

ರಿಂದ ಸಾಧ್ಯವಿರಲಿಲ್ಲವೆಂದೂ, ತಮ್ಮ ಸಂಬಂಧಿಗಳು ಬರುವವರೆಗೂ ಕಾದಿರಬೇಕಾಗಿತ್ತೆಂದೂ ಬಕ್ ಹೇಳಿದನು. ತರುಣ ಹಾರ್ನಿ ಮತ್ತು ಮಿ. ಸೋಫಿಯಾರ ಗತಿ ಏನಾಯಿತೆಂದು ನಾನು ಕೇಳಿದೆ ಅವರು ಹೊಳೆ ದಾಟಿದ್ದಾರೆಂದೂ ಕ್ಷೇಮವಾಗಿರುವರೆಂದೂ ಹೇಳಿದನವನು. ಹಾಗಾದ್ದರಿಂದ ನನಗೆ ಸಂತೋಷವಾಯಿತು ; ಆದರೆ ಆ ದಿನ ಹಾರ್ನಿಯ ಕಡೆಗೆ ತಾನು ಗುಂಡು ಹಾರಿಸಿದಾಗ ಅವನನ್ನು ಕೊಲ್ಲವುದು ತನ್ನಿಂದ ಆಗದೆ ಹೋಗಿದ್ದರೂ, ಬಕ್ ಈ ಕೆಲಸ ಕೈಹಾಕಿದ್ದಿದೆಯಲ್ಲ—ಇಂಥಾದ್ದನ್ನು ನಾನೆಲ್ಲಿಯೂ ಕೇಳಿರಲಿಲ್ಲ.

ಇದ್ದಕ್ಕಿದ್ದಂತೆಯೇ ಬ್ಯಾಂಗ್ ! ಬ್ಯಾಂಗ್ ! ಬ್ಯಾಂಗ್ ! ಎಂದು ಮೂರು ನಾಲ್ಕು ತುಪಾಕಿಗಳು ಸಿಡಿಗುಟ್ಟುದವು—ಆ ಜನರು ಕುದುರೆಗಳನ್ನು ದೂರದಲ್ಲಿ ಬಿಟ್ಟು ಕಾಡಿನಲ್ಲಿ ನುಸುಳಿ ಹಿಂದಿನಿಂದ ಬಾದರು. ಗಾಯಗೊಂಡಿದ್ದ ಹುಡುಗರಿಬ್ಬರೂ ನದಿಗೆ ಧುಮುಕಿದರು. ಅವರು ಪ್ರವಾಹದ ದಿಕ್ಕಿನಲ್ಲಿ ಈಜುತ್ತಿದ್ದಾಗ ಆ ಜನರು ಅವರ ಕಡೆಗೆ ಗುಂಡು ಹಾರಿಸುತ್ತಾ "ಅವರನ್ನು ಕೊಲ್ಲಿ ! ಅವರನ್ನು ಕೊಲ್ಲಿ!" ಎಂದು ಕೂಗುತ್ತಾ ದಡದ ಉದ್ದಕ್ಕೂ ಓಡಿದರು. ನನಗೆ ತುಂಬಾ ವ್ಯಥೆಯಾಯಿತು ; ನಾನು ಮರದಿಂದ ಕೆಳಗೆ ಬೀಳುವುದರಲ್ಲಿದ್ದೆ. ಆಗ ನಡೆದದ್ದನ್ನೆಲ್ಲಾ ನಾನು ಹೇಳಹೊರಡುವುದಿಲ್ಲ—ಹಾಗೆ ಮಾಡಿದಲ್ಲಿ ನನಗೆ ಮತ್ತೆ ವ್ಯಥೆಯಾಗುತ್ತದೆ. ಇಂಥಾ ದೃಶ್ಯಗಳನ್ನು ನೋಡುವುದಕ್ಕಾಗಿ ನಾನು ಆ ರಾತ್ರಿ ಇಲ್ಲಿಗೆ ಬಂದು ತಲಪದೆ ಹೋಗಿದ್ದರೇ ಚೆನ್ನಾಗಿತ್ತು ಎಂದುಕೊಂಡೆ. ನಾನಂತು ಎಂದೂ ಅವುಗಳನ್ನು ಮರೆಯಲಾರೆ—ಅವು ಅನೇಕ ಸಲ ನನ್ನ ಕನಸಿನಲ್ಲಿ ಬರುತ್ತವೆ.

ಇಳಿಯಲು ಹೆದರಿ, ಕತ್ತಲಾಗುವತನಕ ನಾನು ಮರದಮೇಲೆಯೇ ಇದ್ದೆ ಕೆಲವು ಬಾರಿ ತುಪಾಕಿ ಸದ್ದು ಕಾಡಿನಲ್ಲೆಲ್ಲಿಂದಲೋ ಕೇಳಿಬರುತ್ತಿತ್ತು; ಎರಡುಬಾರಿ ತುಪಾಕಿ ಹಿಡಿದ ಅಶ್ವಾರೋಹಿಗಳ ಚಿಕ್ಕ ತಂಡಗಳು ದಿಮ್ಮಿ ರಾಶಿಯಾಚೆಗೆ ದೌಡಾಯಿಸುತ್ತಿದ್ದುದನ್ನು ಕಂಡೆ ನಾನು; ಅಪಾಯವಿನ್ನೂ ಮುಗಿದಂತಿಲ್ಲವೆಂದೆಣಿಸಿದೆ. ನನ್ನ ಮನಸ್ಸು ತುಂಬಾ ಇಳಿದುಹೋಯಿತು; ನಾನಿನ್ನು ಆ ಮನೆಯ ಬಳಿಗೆ ಮತ್ತೆ ಹೋಗುವುದಿಲ್ಲವೆಂದು ತೀರ್ಮಾನಿಸಿದೆ: ಏಕೆಂದರೆ ಇಷ್ಟಕ್ಕೆಲ್ಲ ನಾನೇ ಕಾರಣವೆಂದು ನನ್ನೆಣಿಕೆ. ಮಿಸ್ ಸೋಫಿಯಾ ಎರಡೂವರೆ ಗಂಟೆಗೆ ಹಾರ್ನಿಯನ್ನು ಎಲ್ಲೋ ಸಂಧಿಸಿ ಪಲಾಯನ ಮಾಡಬೇಕೆಂಬುದೇ ಆ ಚೀಟಿಯ ಅರ್ಥವೆಂದು ನನಗೆ ಆಗ ಹೊಳೆಯಿತು. ಆ ಚೀಟಿಯ ವಿಷಯವನ್ನೂ, ಅವಳು ವಿಚಿತ್ರವಾಗಿ ನಡೆದುಕೊಂಡುದನ್ನೂ ನಾನು ಅವಳ ತಂದೆಗೆ ತಿಳಿಸಬೇಕಾಗಿತ್ತೆಂದೂ, ಆಗ ಅವನು ಅವಳನ್ನು ಕೂಡಿಹಾಕುತ್ತಿದ್ದನೆಂದೂ, ಈ ಭಯಂಕರ ಪ್ರಸಂಗ ನಡೆಯುತ್ತಲೇ ಇರಲಿಲ್ಲವೆಂದೂ ನನ್ನ ಮನಸ್ಸಿನಲ್ಲಿ ಮಾಡಿಕೊಂಡೆ.

ನಾನು ಮರದ ಮೇಲಿಂದ ಧುಮುಕಿದೆ. ನದಿಯ ದಡದ ಉದ್ದಕ್ಕೂ ತೆವಳಿಕೊಂಡು ಹೋದೆ, ನೀರಿನ ಅಂಚಿನಲ್ಲಿ ಎರಡು ಹೆಣಗಳು ಬಿದ್ದಿರುವುದನ್ನು ಕಂಡೆ, ಅವು

ಗಳನ್ನು ಮೇಲಕ್ಕೆಳೆದುತಂದೆ, ಅವುಗಳ ಮುಖವನ್ನು ಮುಚ್ಚಿದೆ, ಆದಷ್ಟುಬೇಗ ಅಲ್ಲಿಂದ ತಪ್ಪಿಸಿಕೊಂಡು ಬಂದೆ. ಬಕ್ಕನ ಮುಖದಮೇಲೆ ಬಟ್ಟೆಯನ್ನು ಮುಚ್ಚುತ್ತಿದಾಗ ನನಗೆ ಸ್ವಲ್ಪ ಅಳು ಬಂತು—ಅವನು ನನಗೆ ತುಂಬಾ ಒಳ್ಳೆಯವನಾಗಿದ್ದನು.

ಈಗ ಮತ್ತೆ ಕತ್ತಲಾಯಿತು. ನಾನು ಮನೆಯ ಬಳಿಗೆ ಹೋಗಲೇಇಲ್ಲ, ಕಾಡು ಹಾದಿಯನ್ನೇ ಅನುಸರಿಸಿ ಬದಿಯನ್ನು ತಲಪಿದೆ. ಜಿಮ್ ತನ್ನ ದ್ವೀಪದಲ್ಲಿರಲಿಲ್ಲ. ಕೊಲ್ಲಿಯ ಸಮೀಪಕ್ಕೆ ನಡೆದುಹೋದೆ, ದಡದಲ್ಲಿದ್ದ ಜೊಂಡುಗಳಲ್ಲಿ ತೂರಿದೆ, ಯಾವುದಾದರೂ ಯಾನವನ್ನು ಹತ್ತಿ ಆ ಪಾಪಿ ಸೀಮೆಯಿಂದ ಪಾರಾಗಲು ತುಂಬಾ ಕಾತರನಾಗಿದ್ದೆ. ತೆಪ್ಪ ಹೊರಟುಹೋಗಿತ್ತು! ನನಗೆ ತುಂಬಾ ಹೆದರಿಕೆಯಾಯಿತು. ಒಂದು ನಿಮಿಷದವುಟ್ಟಿಗೆ ಉಸಿರಾಡುವುದೇ ನನಗೆ ಕಷ್ಟವಾಯಿತು. ನಾನು ಜೋರಾಗಿ ಕಿರಿಚಿದೆ. ನಾನಿದ್ದ ಬಳಿಗೆ ಇಪ್ಪತ್ತೈದು ಅಡಿಗಳ ಅಂತರದೊಳಗೇ ಧ್ವನಿಯೊಂದು ಹೇಳಿತು:

"ದೈವಕೃಪೆ! ಅದು ನೀನೆ, ಚಿನ್ನಾ? ಸದ್ದು ಮಾಡಬೇಡ."

ಜಿಮ್ಮನ ಧ್ವನಿ ಅದು—ಅದರಷ್ಟು ಹಿತವಾದ ಧ್ವನಿಯನ್ನು ನಾನು ಹಿಂದೆಂದೂ ಕೇಳಿರಲಿಲ್ಲ. ನಾನು ದಡದ ಮೇಲೆ ಓಡಿಹೋದೆ, ಅವನಿದ್ದ ತೆಪ್ಪವನ್ನು ಹತ್ತಿದೆ, ಅವನು ನನನ್ನು ಸೆಳೆದಪ್ಪಿದನು, ಅವನಿಗೆ ನನ್ನನ್ನು ಕಂಡು ಅಷ್ಟು ಸಂತೋಷವಾಗಿತ್ತು. ಅವನು ಹೇಳಿದ:

"ದೇವರು ನಿನ್ನನ್ನು ಕಾಪಾಡಲಿ ಮಗು; ನೀನು ಮತ್ತೆ ಸತ್ತೇಹೋದೆಯೆಂದು ನಾನು ಸ್ಪಷ್ಟವಾಗಿ ತಿಳಿದಿದ್ದೆ. ಜಾಕ್ ಇಲ್ಲಿಗೆ ಬಂದಿದ್ದ; ನೀನು ಮನೆಗೆ ಬಾರದಿದ್ದುದನ್ನು ನೋಡಿ ನಿನ್ನನ್ನೂ ಗುಂಡಿಟ್ಟುಕೊಂದಿದ್ದಾರೆಂದು ಅವನಿಗೆ ತೋರಿತೆಂದು ಹೇಳಿದ, ಜಾಕ್ ಮತ್ತೆ ಇಲ್ಲಿಗೆ ಬಂದು ನೀನು ಸತ್ತಿರುವುದು ಖಚಿತವೆಂದು ಹೇಳಿದಕೂಡಲೇ ಇಲ್ಲಿಂದ ತೊಲಗಿಹೋಗಲು ಸಿದ್ಧವಾಗಿರುವುದಕ್ಕಾಗಿ ನಾನುಈಕ್ಷಣ ತೆಪ್ಪವನ್ನು ಕೊಲ್ಲಿಯ ಬಾಯಕಡೆಗೆ ಹೊರಡಿಸುವುದರಲ್ಲಿದ್ದೆ. ಸದ್ಯ, ನೀನಿಲ್ಲಿಗೆ ಹಿಂತಿರುಗಿರುವುದು ನನಗೆ ಬಲು ಸಂತಸವನ್ನು ತಂದಿದೆ, ಚಿನ್ನಾ."

ನಾನು ಹೇಳಿದೆ:

"ಸರಿಯೆ—ಬಲು ಒಳ್ಳೆಯದಾಯಿತು; ನನ್ನನ್ನು ಅವರು ಪತ್ತೆಹಚ್ಚಲಾರರು, ನಾನು ಹತನಾದೆನೆಂದೂ ನದಿಯಲ್ಲಿ ತೇಲಿ ಹೋದೆನೆಂದೂ—ಹಾಗೆ ಅವರು ತಿಳಿಯಲು ನೆರವಾಗುವ ಕಾರಣವೂ ಸ್ವಲ್ಪ ಇದೆ—ಭಾವಿಸುತ್ತಾರೆ. ಈಗ ನೀನು ಕಾಲಹರಣ ಮಾಡಲೇಬಾರದು, ಜಿಮ್, ಸಾಧ್ಯವಾದಷ್ಟು ಬೇಗ ತೆಪ್ಪವನ್ನು ಆಳವಾದ ನೀರಿರುವ ಕಡೆಗೆ ತಿರುಗಿಸು."

ತೆಪ್ಪ ಅಲ್ಲಿಂದ ಎರಡುಮೈಲಿಗಳ ಕೆಳಗೆ ಮತ್ತು ಮಿಸ್ಸಿಸಿಪ್ಪಿಯ ನಡುನೀರಿಗೆ ಬರುವ ತನಕ ನನ್ನ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಆಮೇಲೆ ನಾವು ನಮ್ಮ ನಿಶಾನೆ-ಲಾಂದ್ರವನ್ನು ತೂಗುಹಾಕಿದೆವು ಮತ್ತು ನಮಗೆ ಬಿಡುಗಡೆಯೂ ಸುರಕ್ಷಿತತೆಯೂ ಲಭಿಸಿದು

ವೆಂದುಕೊಂಡೆವು. ಹಿಂದಿನ ದಿನದೀಚೆಗೆ ನನಗೆ ತಿನ್ನಲೇನೂ ಸಿಕ್ಕಿರಲಿಲ್ಲ; ಇದನ್ನರಿತು ಜಿಮ್ ನನಗೆ ಕೆಲವು ಚಿಕ್ಕ ರೊಟ್ಟಿಗಳನ್ನೂ ಮಜ್ಜಿಗೆಯನ್ನೂ ಹಂದಿಯ ಮಾಂಸವನ್ನೂ, ಎಲೆಕೋಸು ಮತ್ತು ಸೊಪ್ಪುಗಳನ್ನೂ ತಂದುಕೊಟ್ಟನು — ಹದವಾಗಿ ಬೇಯಿಸಿದರೆ ಸೊಪ್ಪಿನಷ್ಟು ರುಚಿಯಾದದ್ದು ಈ ಪ್ರಪಂಚದಲ್ಲೇ ಮತ್ತೊಂದಿಲ್ಲ. ನಾನು ಊಟ ಮಾಡುತ್ತಿರುವಾಗ, ಇಬ್ಬರೂ ಮಾತಾಡಿದೆವು, ಹರ್ಷದಿಂದ ಕಾಲ ಕಳೆದೆವು. ಈ ಮನೆತನಗಳ ವೈರದಿಂದ ಪಾರಾದುದಕ್ಕೆ ನನಗೂ, ಬದಿಯಿಂದ ಪಾರಾದುದಕ್ಕೆ ಜಿಮ್ಮಿಗೂ ಬಲು ಆನಂದವಾಯಿತು. ಏನೇ ಆದರೂ, ತೆಪ್ಪದಂಥ ಹಾಯಾದ ಮನೆ ಇನ್ನೊಂದಿಲ್ಲವೆಂದೆವು. ಇತರ ಸ್ಥಳಗಳು ಇಕ್ಕಟ್ಟಾಗಿರುತ್ತವೆ, ಉಸಿರು ಕಟ್ಟಿಸುತ್ತವೆ. ತೆಪ್ಪ ಹಾಗಲ್ಲ ತೆಪ್ಪದಮೇಲೆ ನೀವು ಸ್ವತಂತ್ರವಾಗಿ, ಹಾಯಾಗಿ, ಸುಖವಾಗಿರುತ್ತೀರಿ.

## ೧೯

ಎರಡೋ ಮೂರೋ ಅಹೋರಾತ್ರಿಗಳುರುಳಿದವು; ಅವು ಪಕ್ಕದಲ್ಲೇ ಈಜುತ್ತ ಹೋದವೆನ್ನಲುಬಹುದೆಂದು ನನ್ನೆಣಿಕೆ; ಅವು ಅಷ್ಟು ನಿಶ್ಶಬ್ದವಾಗಿ, ನುಣುಪಾಗಿ, ಸುಂದರವಾಗಿ ಜಾರಿದವು. ನಾವು ಕಾಲಕಳೆದ ಬಗೆ ಹೀಗೆ. ಆ ಸ್ಥಳದಲ್ಲಿ ಇದು ಬೃಹನ್ಮಹಾನದಿಯೇ ;-ಕೆಲವೇಳೆ ಅದರ ಅಗಲ ಒಂದುವರೆಮೈಲಿಯಷ್ಟು; ನಮ್ಮ ಪಯಣವೆಲ್ಲ ಇರುಳಿನಲ್ಲೆ; ಹಗಲ ಹೊತ್ತಿನಲ್ಲಿ ನಾವು ಅವಿತುಕೊಂಡು ಮಲಗಿರುತ್ತಿದ್ದೆವು. ಇರುಳು ಕಳೆದ ಕೂಡಲೆ ನಾವು ನದೀಪ್ರಯಣವನ್ನು ನಿಲ್ಲಿಸಿ ಅಂಚಿನ ಕಿರು ನಿಲ್ದಾಣವೊಂದರಲ್ಲಿ ನಿಂತ ನೀರಿನಲ್ಲಿ ತೆಪ್ಪವನ್ನು ಕಟ್ಟಿಹಾಕುತ್ತಿದ್ದೆವು; ಹತ್ತಿಯಗಿಡಗಳನ್ನೂ ಜೊಂಡನ್ನೂ ಕೊಯ್ದು ತಂದು ಒಟ್ಟಿ ತೆಪ್ಪವನ್ನು ಮರೆಮಾಡುತ್ತಿದ್ದೆವು. ಬಳಿಕ ನೀರಿನಲ್ಲಿ ಗಾಳಗಳನ್ನು ಇಳಿಯಬಿಡುತ್ತಿದ್ದೆವು. ಅನಂತರ ನದಿಗೆ ಧುಮುಕಿ ಆಯಾಸ ಪರಿಹಾರಕ್ಕಾಗಿಯೂ ಲವಲವಿಕೆಯನ್ನು ಗಳಿಸಲು ಈಜುತ್ತಿದ್ದೆವು. ಆಮೇಲೆ ಮಂಡಿಯುದ್ದ ನೀರಿರುವ ಮಳಲತಡಿಯಲ್ಲಿ ಕುಳಿತು ಹಗಲು ಹುಟ್ಟುವುದನ್ನೇ ಕಾಯುತ್ತಿದ್ದೆವು. ಎಲ್ಲೂ ಒಂದು ಹನಿ ಸದ್ದಿಲ್ಲ—ಎಲ್ಲೆಡೆಯೂ ಪರಮಮೌನ—ಇಡೀ ಪ್ರಪಂಚವೇ ನಿದ್ರಾಧೀನವಾಗಿದ್ದಂತೆ; ಕೆಲವೇಳೆ ಮಾತ್ರ ಕಪ್ಪೆಗಳು ವಟಗುಟ್ಟುತ್ತಿರಬಹುದು ಅಷ್ಟೆ. ದೂರ ನೀರ ಹರಹಿನತ್ತ ಕಣ್ಣೆಸೆದಾಗ ಮೊಟ್ಟಮೊದಲು ಗೋಚರಿಸುತ್ತಿದ್ದದು ಒಂದು ಬಗೆಯ ಅಸ್ಪಷ್ಟರೇಖೆಯೊಂದೇ—ಅದು ಆಚೆಯ ದಡದ ಕಾನನಪಂಕ್ತಿ; ನೀವು ಅದಕ್ಕೆ ಇನ್ನಾವ ಅರ್ಥವನ್ನು ಕಲ್ಪಿಸಿಕೊಳ್ಳುವುದೂ ಸಾಧ್ಯವಿರಲಿಲ್ಲ; ಆಮೇಲೆ ಗಗನಮಂಡಲದಲ್ಲೊಂದು

ಪಾಂಡುರವಲಯ; ಅಬಳಿಕ ಇನ್ನಷ್ಟು ಪಾಂಡುರವರ್ಣ ಸುತ್ತಲೂ ಹರಡಿಕೊಳ್ಳುತ್ತಿತ್ತು; ಅದಾದಮೇಲೆ ದೂರದಲ್ಲಿ ಮೃದುವಾಗಿ ಉಬ್ಬಿ ಕಾಣಿಸುವ ನದಿ-ಕಪ್ಪಿನ ಸೋಕೇ ಇನ್ನಿಲ್ಲದೆ-ಬೂದಿಬಣ್ಣಕ್ಕೆ ತಿರುಗುತ್ತಿತ್ತು. ಅತಿದೂರದಲ್ಲಿ ಚಿಕ್ಕ ಕಪ್ಪುಮಚ್ಚೆಗಳಂತೆ ವ್ಯಾಪಾರಿ ದೋಣಿಗಳೂ,ಉದ್ದವಾದ ಕಪ್ಪುಗೆರೆಗಳಂತೆ ತೆಪ್ಪಗಳೂ ಕೆಳನದಿಗೆ ತೇಲಿಹೋಗುತ್ತಿರುವುದನ್ನು ನೀವು ಕಾಣಬಹುದಿತ್ತು; ಕೆಲವೇಳೆ ನೀವು ಜಲಯಾನಗಳ ಮುಂಚಾಚುಂಗಳು ಕಿರುಗುಟ್ಟುವುದನ್ನು ಗಲಿಬಿಲಿ ಧ್ವನಿಗಳನ್ನೂ ಕೇಳಬಹುದಿತ್ತು, ಏಕೆಂದರೆ ಎಲ್ಲವೂ ಅಷ್ಟು ನಿಶ್ಶಬ್ದವಾಗಿತ್ತು. ಧ್ವನಿಗಳು ದೂರದಿಂದ ದಾಟಿಬರುತ್ತಿದ್ದವು; ಕ್ರಮೇಣ ನೀವು ನೀರ ಮೇಲೊಂದು ಗೆರೆಯೂರಿರುವುದನ್ನು ಕಂಡು ಪ್ರವಾಹದಲ್ಲೊಂದು ಮರದ ಮೋಟು ಎದ್ದುಕೊಂಡಿದೆಯೆಂದೂ, ಪ್ರವಾಹ ಅದಕ್ಕೆ ಬಡಿಯುವುದರಿಂದ ಆ ಗೆರೆ ಹಾಗೆ ಕಾಣುತ್ತಿದೆಯೆಂದೂ ತಿಳಿಯಬಹುದಾಗಿತ್ತು; ನೀರಮೇಲೆ ಸುರುಳಿಸುರುಳಿಯಾಗಿ ಮಂಜು ಏಳುವುದನ್ನೂ, ಮೂಡಲ ಬಾನೂ ನದಿಯೂ ಕೆಂಪೇರುವುದನ್ನೂ ನೀವು ನೋಡುವಿರಿ; ಕಾಡಿನ ಅಂಚಿನಲ್ಲಿ ದಿಮ್ಮಿಯ ಕುಟೀರವೊಂದಿರುವುದನ್ನು ಗುರುತಿಸುವಿರಿ; ಅ ಕುಟೀರ ಆಚೆಯ ದಡೆಯಲ್ಲಿದ್ದು ಪ್ರಾಯಶಃ ಅದೊಂದು ಮರಮಟ್ಟಿನ ಮಳಿಗೆಯಾಗಿದ್ದಿತು. ದಿಮ್ಮಿಗಳು ಪೇರಿಕೆ ಅಂಥ ಭ್ರಮೆ ಹುಟ್ಟಿಸುವುದು; ಬಳಿಕ ಮೃದುವಾದ ತಂಬೆಲರು ಮೇಲೇಳುತ್ತದೆ ಮತ್ತು ವನಪುಷ್ಪಗಳತ್ತಣಿಂದ ತಂಪಾದ ನವಸೌರಭವನ್ನು ಹೊತ್ತು ತಂದು ನಿಮ್ಮಮೇಲೆ ಬೀಸುತ್ತ ಹೋಗುತ್ತದೆ; ಕೆಲವು ಸಲ ಹಾಗಾಗುವುದಿಲ್ಲ, ಏಕೆಂದರೆ ಬಗೆಬಗೆಯ ಸತ್ತ ಮೀನುಗಳನ್ನು ಜನ ಹರಡಿಹೋಗಿರುತ್ತಾರೆ, ಅವು ಬಲು ಕೆಟ್ಟವಾಸನೆಯನ್ನು ಬೀರುತ್ತವೆ; ಆಮೇಲೆ ಇಡೀ ಹಗಲು ನಿಮ್ಮ ಮುಂದಿರುತ್ತದೆ, ಎಲ್ಲವೂ ಬಿಸಿಲಿನಲ್ಲಿ ನಸುನಗುತ್ತಿರುತ್ತವೆ, ಹಾಡು-ಹಕ್ಕಿಗಳು ಲವಲವಿಕೆಯಿಂದ ಹಾರಾಡುತ್ತವೆ!

ಈಗ ಸ್ವಲ್ಪ ಹೊಗೆಯೆದ್ದರೂ ಯಾರೂಗಮನಿಸಲಾರರು ಎನಿಸಿದಾಗ ನಾವು ಗಾಳದಿಂದ ಕೆಲವು ಮೀನನ್ನು ತಂದು ಬಿಸಿಬಿಸಿಯಾದ ಬೆಳಗಿನ ಉಪಹಾರವನ್ನು ಬೇಯಿಸುತ್ತಿದ್ದವು. ಅನಂತರ ಒಂದುಬಗೆಯ ಸೋಮಾರಿತನದಿಂದ ನಾವು ನದಿಯ ಏಕಾಂತತೆಯನ್ನು ವೀಕ್ಷಿಸುತ್ತಿದ್ದೆವು; ಕ್ರಮೇಣ ನಿದ್ದೆಯ ಮಡುಲಿಗೆ ಜಾರುತ್ತಿದ್ದೆವು. ಆಮೇಲೆ ಎಚ್ಚರಗೊಂಡು ಏನು ನಡೆಯುತ್ತಿದೆ ಎಂದು ನೋಡುತ್ತಿದ್ದೆವು. ಅದು ಮೇಲುನದಿಗೆ ಕೆಮ್ಮುತ್ತ ಬರುತ್ತಿರುವ ಹಬೆದೋಣಿಯಾಗಿರಬಹುದು; ಆಚೆಯ ದಡಕ್ಕೆ ಅದು ಎಷ್ಟು ಹತ್ತಿರವಿರಬಹುದೆಂದರೆ ನೀವು ಇಲ್ಲಿಂದ ನೋಡಿ ಆ ಹಬೆದೋಣಿ ಹಿಂಭಾಗದಲ್ಲಿ ಚಕ್ರವುಳ್ಳ ಜಾತಿಯದ್ದೋ ಇಲ್ಲವೇ ಪಕ್ಕದಲ್ಲಿ ಚಕ್ರವುಳ್ಳ ಜಾತಿಯದ್ದೋ ಎನ್ನುವುದೊಂದರ ಹೊರತು ಇನ್ನೇನನ್ನೂ ಹೇಳಲಾಗುತ್ತಿರಲಿಲ್ಲ, ಆಮೇಲೆ ಇನ್ನೊಂದು ಗಂಟೆಯ ತನಕ ಕೇಳಲು ಯಾವ ಸದ್ದೂ ಕಾಣಲು ಯಾವ ದೃಶ್ಯವೂ ಇರುತ್ತಿರಲಿಲ್ಲ-ಸ್ಥಿರ ಏಕಾಂತತೆಯೊಂದೇ. ಬಳಿಕ ಎಲ್ಲೋ ದೂರದಲ್ಲೊಂದು ತೆಪ್ಪ ಬರುತ್ತಿರುವುದನ್ನು ನೀವು ನೋಡುತ್ತಿದ್ದೀರಿ. ಅದರಮೇಲೊಬ್ಬ ಪ್ರಾಯಶಃ ಅನಾಗರಿಕನೆನ್ನಬಹುದಾದವನು

ಏನನ್ನೋ ಕೊಚ್ಚುತ್ತಲಿರಬಹುದು. ಏಕೆಂದರೆ ಸಾಮಾನ್ಯವಾಗಿ ಜನ ತೆಪ್ಪದಮೇಲಿರು ವಾಗ ಆ ಕೆಲಸವನ್ನು ಮಾಡುತ್ತಾರೆ. ಅವನ ಕೊಡಲಿ ಹೊಳೆದು ಕೆಳಗಿಳಿಯುವುದನ್ನು ಮಾತ್ರ ನೀವು ನೋಡುತ್ತಿದ್ದಿರಿ, ಯಾವ ಸದ್ದೂ ನಿಮ್ಮ ಕಿವಿಗೆ ಬೀಳುತ್ತಿರಲಿಲ್ಲ. ಮತ್ತೆ ಕೊಡಲಿ ಮೇಲೇರುವುದನ್ನು ನೋಡುವಿರಿ. ಅದು ಅವನ ತಲೆಯಮೇಲಕ್ಕೂ ಏರಿ ದಾಗ 'ಕ್-ಛಂಕ್' ಎಂಬ ಸದ್ದನ್ನು ಕೇಳುವಿರಿ-ನೀರಮೇಲೆ ದಾಟಿಬರಲು ಅದಕ್ಕೆ ಅಷ್ಟು ಹೊತ್ತು ಹಿಡಿಯಿತು. ಹೀಗೆ ನಾವು ಸೋಮಾರಿಗಳಾಗಿ ಅಲೆಯುತ್ತಾ ನಿಶ್ಶಬ್ದತೆಗೆ ಕಿವಿ ಗೊಡುತ್ತಾ ಹಗಲನ್ನು ಕಳೆಯುತ್ತಿದ್ದೆವು. ಒಂದುಸಲ ದಟ್ಟವಾಗಿ ಇಬ್ಬನಿ ಬಿತ್ತು, ಆಗ ನಮ್ಮ ಪಕ್ಕದಲ್ಲೆ ಸಾಗಿಸಿದ ತೆಪ್ಪಗಳೂ, ದೋಣಿಗಳೂ ತಮ್ಮಮೇಲೆ ಹಡಗುದೋಣಿಗಳು ನುಗ್ಗಿ ಹೋಗದಿರಲೆಂದು ತಗಡನ್ನು ಬಡಿಯುತ್ತಿದ್ದವು. ಒಂದು ದೋಣಿಯೋ ಅಥವಾ ಒಂದು ತೆಪ್ಪವೋ ನಮ್ಮ ಒತ್ತಿನಲ್ಲೇ ಹೋಯಿತು.—ಅದರಲ್ಲಿದ್ದ ಜನ ಮಾತಾಡುವು ದನ್ನೂ ಬೈಯ್ಯುವುದನ್ನೂ ನಗುವುದನ್ನೂ ನಾವು ಸ್ಪಷ್ಟವಾಗಿ ಕೇಳಿದೆವು. ನಮಗೆ ಅವರು ಅಲ್ಲಿರುವುದು ಕಾಣಿಸಲೇ ಇಲ್ಲ. ಆದ್ದರಿಂದ ನನಗೆ ಬಲು ಹೆದರಿಕೆಯಾಯಿತು. ಅದು ದೆವ್ವಗಳ ಚೇಷ್ಟೆಯಂತಿತ್ತು. ಅದು ದೆವ್ವಗಳೆಂದೇ ಜಿಮ್ಮನ ನಂಬಿಕೆಯಾದರೂ ಅವನು ಹೇಳಿದನು;

"ಹಾಗಲ್ಲ, ದೆವ್ವಗಳು ಎಂದೂ 'ಹಾಳು ಇಬ್ಬನಿ ಹಾಳಾಗ' ಎನ್ನುವುದಿಲ್ಲ." ಬೇಗ ರಾತ್ರಿಯಾದುದರಿಂದ ನಾವು ಹೊರಟೆವು; ತೆಪ್ಪವನ್ನು ನದಿಯ ಮಧ್ಯಕ್ಕೆ ತಂದು ಪ್ರವಾಹ ಅದನ್ನು ಬೇಕಾದಲ್ಲಿಗೆ ಒಯ್ಯಲೆಂದು ಅದರಪಾಡಿಗೆ ಬಿಟ್ಟೆವು. ನಮ್ಮ ಕಾಲುಗಳನ್ನು ನೀರೊಳಗೆಬಿಟ್ಟುಕೊಂಡು ನಾವುಸೀದುಗೊಳವೆಗೆ ಬೆಂಕಿತೋರಿ ಧೂಮಪಾನಮಾಡುತ್ತಾ ಅನೇಕ ವಿಷಯಗಳನ್ನು ಎತ್ತಿಕೊಂಡು ಮಾತಾಡುತ್ತಿದೆವು. ನಮ್ಮನ್ನು ಸೊಳ್ಳೆಗಳು ಕಾಡದಿದ್ದಾಗೆಲ್ಲ, ಹಗಲಾಗಲಿ ಇರುಳಾಗಲಿ, ಬರಿಮೈಯ್ಯಲ್ಲೇ ಇರುತ್ತಿದ್ದೆವು. ಬಕ್ಕನ ಮನೆಯವರು ನನಗೆ ಒದಗಿಸಿದ್ದ ಉಡುಗೆಗಳು ಒಳ್ಳೆಯವಾಗಿದ್ದರೂ, ಧರಿಸಲು ಹಿತ ವಾಗಿರಲಿಲ್ಲ ಅಲ್ಲದೆ ಅವು ಹೇಗೇ ಇದ್ದರೂ, ನಾನು ಬಟ್ಟೆಗಳ ವಿಷಯಕ್ಕೆ ಹೆಚ್ಚು ಗಮನ ಕೊಡುತ್ತಿರಲಿಲ್ಲ.

ಕೆಲವು ವೇಳೆ ಅತಿ ದೀರ್ಘಕಾಲದವರೆಗೆ ಆ ಇಡೀ ನದಿ ನಮ್ಮಿಬ್ಬರದೇ ಸ್ವತ್ತಾಗಿ ಬಿಡುತ್ತಿತ್ತು. ನೀರಾಚೆಗೆ ದಡಗಳೂ ದ್ವೀಪಗಳೂ ಇದ್ದವು; ಪ್ರಾಯಶಃ ಜತೆಗೊಂದು ಕಿಡಿ-ಕುಟೀರದ ಕಿಟಕಿಯಲ್ಲಿ ಉರಿಯುತ್ತಿದ್ದ ಮೋಂಬತ್ತಿಯದು; ಮತ್ತೆ ಕೆಲವುಸಲ ನೀವು ನೀರಮೇಲೂ ಒಂದೆರಡು ಕಿಡಿಗಳನ್ನು ನೋಡಬಹುದಾಗಿತ್ತು-ತೆಪ್ಪದಮೇಲೆಯೋ ಅಥವಾ ದೋಣಿಯ ಮೇಲೆಯೋ; ಆ ಯಾನಗಳಲ್ಲೊಂದರಿಂದ ಹಾದುಬರುತ್ತಿರುವ ಪಿಟೀಲು ವಾದನವನ್ನೋ, ಗಾಯನವನ್ನೋ ನೀವು ಒಂದೊಂದುಸಲ ಕೇಳಬಹುದಾ ಗಿತ್ತು. ತೆಪ್ಪದಮೇಲಿನ ಬದುಕು ರಮ್ಯವಾದದ್ದು. ಮೇಲೆ ನೋಡಿದರೆ ತಾರಾ ಸಿಂಚಿತ ಗಗನ; ನಾವು ಅಂಗತಂಗನಾಗಿ ಮಲಗಿ ತಾರೆಗಳತ್ತ ಕಣ್ಣು ಹಾಯಿಸುತ್ತಿದ್ದೆವು,

ಮತ್ತು ತಾರೆಗಳನ್ನು ಯಾರಾದರೂ ಸೃಷ್ಟಿಸಿದರೋ, ಇಲ್ಲ, ಅವು ತಮ್ಮಷ್ಟಕ್ಕೆ ತಾನೇ ಉದ್ಭವವಾದವೋ ಎಂದು ಚರ್ಚಿಸುತ್ತಿದ್ದೆವು. ಅವುಗಳನ್ನು ಯಾರೋ ಸೃಷ್ಟಿಸಿದ ರೆಂದು ಜಿಮ್ಮನ ನಂಬಿಕೆ; ಅವು ತಮ್ಮಷ್ಟಕ್ಕೆ ತಾವೇ ಉದ್‌ಭವಿಸಿದವೆಂದು ನನ್ನ ತೀರ್ಮಾನ. ಅಷ್ಟೊಂದನ್ನು ಸೃಷ್ಟಿಸಲು ಯುಗಯುಗಗಳೆ ಬೇಕಾದಾವೆಂದು ನನ್ನೆಣಿಕೆ. ಚಂದ್ರನೇ ಅವುಗಳನ್ನು ಮೊಟ್ಟೆಯಾಗಿಟ್ಟಿರಬಾರದೇಕೆ ಎಂದು ಜಿಮ್ಮನ ಪ್ರಶ್ನೆ. ಅವನ ಮಾತು ಸಮಂಜಸವೆಂದು ತೋರಿತು; ಏಕೆಂದರೆ ಕಪ್ಪೆ ಅಸಂಖ್ಯಾತವಾಗಿ ಮೊಟ್ಟೆಯಿಕ್ಕು ವುದನ್ನು ನಾನು ಕಂಡಿದ್ದೆ, ಆದ್ದರಿಂದ ಇದೂ ಸಾಧ್ಯವಿರಬಹುದೆಂದುಕೊಂಡು ನಾನು ಅವನ ಮಾತಿಗೆ ಇದಿರಾಡಲಿಲ್ಲ. ನಕ್ಷತ್ರಗಳು ಬೀಳುವುದನ್ನು ನಾವು ವೀಕ್ಷಿಸುತ್ತಿದೆವು, ಅವು ಮೇಲಿಂದ ಕೆಳಗಿನತನಕ ಬಾನಿನಲ್ಲಿ ಬೆಳಕಿನ ಗೆರೆ ಬರೆಯುವುದನ್ನು ನೋಡಿದ್ದೆವು. ಅವು ಕೊಳೆತ ಮೊಟ್ಟೆಗಳೆಂದೂ, ಆದ್ದರಿಂದ ಅವುಗಳನ್ನು ಗೂಡಾಚೆಗೆ ಎಸೆಯಲಾಯಿ ತೆಂದೂ ಜಿಮ್ ನಂಬಿದ್ದನು.

ರಾತ್ರಿಯ ಹೊತ್ತಿನಲ್ಲಿ ಒಂದೆರಡು ಸಲ ಹಬೆದೋಣಿ ಕತ್ತಲೆಯಲ್ಲಿ ಸರಿಯುವು ದನ್ನು ನಾವು ಕಾಣುತ್ತಿದ್ದೆವು; ಒಮ್ಮೊಮ್ಮೆ ಅದು ತನ್ನ ಚಿಮಣಿಗಳಾಚೆಗೆ ಕಿಡಿಗಳ ಇಡೀ ಪ್ರಪಂಚವನ್ನೇ ಕಾರುತ್ತಿತ್ತು, ಮತ್ತು ಆ ಕಿಡಿಗಳು ಮತ್ತೆ ಬೆಂಕಿಯ ಮಳೆಹನಿ ಗಳಂತೆ ನದಿಗೆ ಬೀಳುತ್ತಿದ್ದವು. ಆ ದೃಶ್ಯ ಪರಮ ಸುಂದರವಾದುದು. ಹಬೆದೋಣಿ ಮುಂದೆ ಇನ್ನೊಂದು ತಿರುವಿನಲ್ಲಿ ಕಣ್ಮರೆಯಾಗುತ್ತಿತ್ತು; ಆಗ ಅದರ ದೀಪಗಳು ಮರೆ ಯಾಗಿ, ಅದರ ಗದ್ದಲ ಅಡಗಿ, ಮತ್ತೆ ನದಿ ನೀರವವಾಗುತ್ತಿತ್ತು. ಅದು ಹೊರಟು ಹೋದ ಎಷ್ಟೋ ಹೊತ್ತಿನ ಮೇಲೆ, ಅದರ ದಿಕ್ಕಿನಿಂದ ಅಟ್ಟಿಬಂದ ಅಲೆಗಳು ನಮ್ಮ ಬಳಿಗೆ ಬಂದು ತೆಪ್ಪವನ್ನು ಎತ್ತಿತ್ತ ತೂಗುತ್ತಿದ್ದವು. ಅದಾದ ಮೇಲೆ ಕಪ್ಪೆಗಳದೋ ಇನ್ನು ಏತರದೋ ಒರಲಿಕೆಯೊಂದನ್ನು ಬಿಟ್ಟರೆ, ಅನಿರ್ದಿಷ್ಟಕಾಲದವರೆಗೆ ನಿಮ್ಮ ಕಿವಿಗೆ ಇನ್ನಾವ ಸದ್ದೂ ಬೀಳುತ್ತಿರಲಿಲ್ಲ.

ನಟ್ಟಿರುಳು ಕಳೆದ ಮೇಲೆ ತೀರವಾಸಿಗಳು ಮಲಗಿಬಿಡುತ್ತಿದ್ದರು. ಆ ಬಳಿಕ ಎರಡು ಮೂರು ಗಂಟೆಗಳಾದ ಮೇಲೆ ತೀರಪ್ರದೇಶಗಳು ಅಂಧಕಾರಮಯವಾಗು ತ್ತಿದ್ದವು—ಕುಟೀರಗಳ ಕಿಟಕಿಗಳಲ್ಲಿದ್ದ ಬೆಳಕಿನ ಕುಡಿಗಳು ಇಲ್ಲವಾಗುತ್ತಿದ್ದವು. ಈ ಬೆಳಕಿನ ಕುಡಿಗಳೇ ನಮಗೆ ಗಡಿಯಾರವಾಗಿತ್ತು;—ಅದು ಮತ್ತೆ ನಮ್ಮ ಕಣ್ಣಿಗೆ ಬಿತ್ತೆಂ ದರೆ ಇನ್ನೇನು ಬೆಳಗಾಗುವುದರಲ್ಲಿದೆ ಎಂಬ ಸೂಚನೆ ಬಂದಂತೆಯೇ. ಆಗ ನಮ್ಮ ತೆಪ್ಪವನ್ನು ಬಚ್ಚಿಡಲೂ, ನಾವು ಅವಿತುಕೊಳ್ಳಲೂ ಸ್ಥಳವನ್ನು ಹುಡುಕುತ್ತಿದ್ದೆವು.

ಒಂದು ದಿನ ಹಗಲು ಮೂಡುವ ಹೊತ್ತಿಗೆ ಕಿರುದೋಣಿಯೊಂದು ತೇಲುತ್ತಿರು ವುದನ್ನು ನಾನು ಕಂಡೆನು; ಮತ್ತು ಅದನ್ನೇರಿಕೊಂಡು, ಬಲುರಭಸದಿಂದ ಇಳಿಯುತ್ತಿದ್ದ ನೀರ ಧಾರೆಯೊಂದನ್ನು ದಾಟಿ ಪ್ರಧಾನತೀರದೆಡೆಗೆ–ಅದು ಅಲ್ಲಿಗೆ ಕೇವಲ ಇನ್ನೂರು ಗಜಗಳಾಚೆಗೆ ಇತ್ತು—ಹುಟ್ಟು ಮೀಟುತ್ತ ಸುಮಾರು ಒಂದುಮೈಲಿಯವರೆಗೂ ಶೋಕ

ವೃಕ್ಷಗಳಿಂದ ಮರೆಯಾಗಿದ್ದ ಕೊಲ್ಲಿಯೊಂದನ್ನು ಅನುಸರಿಸಿ ಹೋದೆ. ತಿನ್ನಲು ಏನಾದರೂ ಹಣ್ಣುಗಳು ಸಿಕ್ಕಬಹುದೆಂದು ಅಲ್ಲಿಗೆ ಹೋದೆ. ಹಾಗೆಯೇ ಮುಂದೆ ಹೋಗುತ್ತ ಕೊಲ್ಲಿಗೆ ಅಡ್ಡಲಾಗಿ ಕಾಲುಹಾದಿಯೊಂದು ಬರುವ ಸ್ಥಳದಲ್ಲಿ ಯಾರೋ ಕೆಲವರು ತಮ್ಮ ಬಲವನ್ನೆಲ್ಲಾ ಬಿಟ್ಟು ದೊಪ್ ದೊಪ್ ಎಂದು ಹೆಜ್ಜೆ ಹಾಕುತ್ತ ಓಡಿಬರುತ್ತಿರುವುದನ್ನು ಕಂಡೆ. ನನ್ನ ಕಥೆ ಮುಗಿದೇ ಹೋಯಿತು ಎಂದು ತಿಳಿದೆ ; ಏಕೆಂದರೆ, ಯಾರೋ ಇನ್ನು ಯಾರನ್ನೋ ಹುಡುಕಿಕೊಂಡು ಬರುತ್ತಿದ್ದಾರೆ ಎಂದಾಗಲಿಲ್ಲ, ಅವರು ಹುಡುಕುತ್ತಿರುವುದು ನನ್ನನ್ನೇ—ಇಲ್ಲವೇ, ಪ್ರಾಯಶಃ ಜಿಮ್ಮನನ್ನೇ—ಎಂದು ನಾನು ತಿಳಿಯುತ್ತಿದ್ದೆ. ನಾನು ಬೇಗ ಅಲ್ಲಿಂದ ನುಸುಳಿ ಜಾರಿಕೊಳ್ಳಬೇಕು ಎನ್ನುವಷ್ಟರಲ್ಲಿ ನನ್ನ ಸಮೀಪಕ್ಕೆ ಬಂದು ಬಿಟ್ಟಿದ್ದ ಅವರು ಕೂಗಿಕೊಂಡರು, ತಮ್ಮನ್ನು ರಕ್ಷಿಸಬೇಕೆಂದು ನನ್ನನ್ನು ಬೇಡಿಕೊಂಡರು, ತಾವು ನಿರಪರಾಧಿಗಳಾದರೂ ತಮ್ಮನ್ನು ಯಾರೋ ಬೆನ್ನಟ್ಟಿ ಬರುತ್ತಾ ಇರುವರೆಂದೂ, ಮತ್ತು ಜನರೂ ನಾಯಿಗಳೂ ತಮ್ಮ ಹಿಂದೆಯೇ ಬರಲಿರುವರೆಂದೂ ಹೇಳಿಕೊಂಡರು. ಅವರು ನನ್ನ ಕಿರುದೋಣಿಗೆ ಧುಮುಕಬೇಕೆಂದಿದ್ದರು. ಆದರೆ ನಾನು ಹೇಳಿದೆ :

"ನೀವು ಹಾಗೆ ಮಾಡಕೂಡದು. ನಾಯಿಗಳ ಬಗುಳಿಕೆಯಾಗಲೀ, ಕುದುರೆಗಳ ಹೆಜ್ಜೆ ಸದ್ದಾಗಲೀ ನನಗೆ ಇನ್ನೂ ಕೇಳಿಬಂದಿಲ್ಲ, ಪೊದರಂಗಳನ್ನು ಹೊಕ್ಕು, ಕೊಲ್ಲಿಯ ಅಂಚಿಗೆ ಬರಲು ನಿಮಗೆ ಸಾಕಾದಷ್ಟು ಕಾಲಾವಕಶವಿದೆ. ಆ ಮೇಲೆ ನೀವು ನೀರಿಗೆ ಧುಮುಕಿ ನನ್ನ ಬಳಿಗೆ ಬಂದು ಕಿರುದೋಣಿಗೆ ಹತ್ತುವುದಾಗುತ್ತದೆ.—ಹಾಗೆ ಮಾಡಿದರೆ, ನಾಯಿಗಳು ನಿಮ್ಮ ವಾಸನೆ ಹಿಡಿದು ಬಾರದಂತೆ ಮಾಡಬಹುದು."

ಅವರು ಹಾಗೆಯೇ ಮಾಡಿದರು. ನನ್ನ ಕಿರುದೋಣಿಗೆ ಅವರು ಹತ್ತಿ ಬಂದ ಕೂಡಲೇ ನಾನು ನಮ್ಮ ಕಿರುನಿಲ್ದಾಣದ ಬಳಿಗೆ ಹೊರಟೆ. ಸುಮಾರು ಐದಾರು ನಿಮಿಷಗಳ ತನಕ ದೂರದಲ್ಲಿ ನಾಯಿಗಳು ಬಗಳುತ್ತಿರುವುದೂ, ಜನರ ಕೂಗಾಟ ಓಡಾಟಗಳೂ ನಮಗೆ ಕೇಳಿಬಂದವು. ಅವರು ಕೊಲ್ಲಿಯ ಬಳಿಗೆ ಬರುತ್ತಿರುವುದು ನಮಗೆ ಕೇಳಿಸಿತಾದರೂ ಕಾಣಿಸಲಿಲ್ಲ. ಅವರು ಅಲ್ಲೇ ನಿಂತು ಕೊಂಚ ಹೊತ್ತು ಇಲ್ಲಲ್ಲಿ ಹುಡುಕಿದರೆಂದು ತೋರುತ್ತದೆ. ಆ ಬಳಿಕ ನಾವು ಮುಂದೆ ಮುಂದೆ ಹೋದಂತೆಲ್ಲ ಅವರ ಧ್ವನಿ ನಮಗೆ ಕೇಳಿಸಲೇ ಇಲ್ಲ. ಕಾಡಾಚೆಗೆ ಒಂದು ಮೈಲಿಯು ದೂರ ಸಾಗಿ ನಾವು ನದಿಯ ಹತ್ತಿರಕ್ಕೆ ಬಂದಾಗ ಎಲ್ಲವೂ ನೀರವವಾಗಿತ್ತು ; ಕಿರುನಿಲ್ದಾಣದೆಡೆಗೆ ನಾವು ಹುಟ್ಟು ಮೀಟಿಕೊಂಡು ಹೋಗಿ ಹತ್ತಿಯಗಿಡಗಳ ನಡುವೆ ಅವಿತುಕೊಂಡವು ; ಅಪಾಯವನ್ನು ದಾಟಿದ್ದೆವು.

ಈ ಮಂದಿಯಲ್ಲಿ ಸುಮಾರು ಎಪ್ಪತ್ತು ವರ್ಷಗಳಿಗೂ ಮೀರಿದ ವಯಸ್ಸಿನ ಬಕ್ಕತಲೆಯ ಬಿಳಿ ಮೀಸೆಯ ಮುದುಕನೊಬ್ಬನಿದ್ದನು. ಹರಿದು ತೂತಾಗಿದ್ದ ಅವಲಕ್ಷಣವಾದ ಹಳೆಯ ಟೋಪಿಯೊಂದನ್ನೂ, ಮಣುಕು ಹಿಡಿದ ನೀಲಿಯ ಉಣ್ಣೆಯ ಒಳ–

ಅಂಗಿಯೊಂದನ್ನೂ ಧರಿಸಿದ್ದನು; ಹಳೆಯ ಚೀದಿಯ ನೀಲಿ ಷರಾಯಿಯೊಳಗೆ ತನ್ನ ಕಾಲುಗಳನ್ನು ತೂರಿಸಿದ್ದನು, ಅವು ಅವನ ಪಾದರಕ್ಷೆಗಳ ಮೇಲಂಚಿನೊಂದಿಗೆ ಗಿಡಿದಂತಿದ್ದವು; ಮನೆಯಲ್ಲಿ ಕಸೂತಿ ಹಾಕಿದ ಪತ್ತು-ಪಟ್ಟಿಗಳು ಅವನ ಷರಾಯನ್ನು ಬಿಗಿಹಿಡಿದಿದ್ದವು— ಪಟ್ಟಿಗಳು ಅಲ್ಲ, ಒಂದೇ ಪಟ್ಟಿ. ಹಳೆಯದಾದ, ಉದ್ದನೆಯ ಬಾಲವುಳ್ಳ ನೀಲಿ ಯಂಗಿಯನ್ನು ಧರಿಸಿದ್ದನು; ಆದರ ಭುಜಗಳ ಮೇಲೆ ಹಿತ್ತಾಳೆಯ ಗುಂಡಿಗಳು ಹೊಳೆಯುತ್ತಿದ್ದವು; ಆ ಭುಜಗಳಿಗೆ ದೊಡ್ಡದಾದ, ಉಬ್ಬಿದ, ವಿಕಾರವಾದ ಜಮಖಾನದ ಚೀಲಗಳನ್ನು ತಗುಲಿಸಿಕೊಂಡಿದ್ದನು.

ಇನ್ನೊಬ್ಬನ ವಯಸ್ಸು ಸುಮಾರು ಮೂವತ್ತಿರಬಹುದು; ಅವನ ಉಡುಪು ಸಾಮಾನ್ಯರೀತಿಯದು. ಬೆಳಗಿನ ಉಪಾಹಾರವಾದ ಮೇಲೆ ನಾವೆಲ್ಲರೂ ಪರಸ್ಪರ ಮಾತಾಡಿಕೊಂಡೆವು. ಈ ಜನರು ಪರಸ್ಪರ ಪರಿಚಿತರಲ್ಲವೆಂಬುದೇ ನಮಗೆ ಮೊತ್ತ ಮೊದಲು ವ್ಯಕ್ತವಾದ ವಿಷಯ.

ಬಕ್ಕತಲೆಯವನು ಆ ಕಿರಿಯನನ್ನು ಕುರಿತು "ಈ ಕಷ್ಟಕ್ಕೆ ನೀವು ಸಿಕ್ಕಿಕೊಂಡದ್ದಕ್ಕೆ ಕಾರಣ ?" ಎಂದನು.

"ಹಲ್ಲುಗಳಲ್ಲಿ ಉಂಟಾಗುವ ಕಲ್ಮಷಲೇಪವನ್ನು ತೆಗೆದುಹಾಕುವ ಪದಾರ್ಥವೊಂದನ್ನು ನಾನು ಮಾರುತ್ತಿದ್ದೆ—ಅದು ಹಲ್ಲುಗಳನ್ನು ಸ್ವಚ್ಛಮಾಡುವುದೇನೋ ದಿಟವೇ, ಆದರೆ ಜತೆಗೆ ಗಿಲಾಯಿಯನ್ನೂ ಅದು ಸಾಮಾನ್ಯವಾಗಿ ತೊಡೆದುಹಾಕುತ್ತದೆ. ನಾನು ಆ ಸ್ಥಳದಲ್ಲಿ ಎಷ್ಟು ದಿನಗಳಕಾಲ ಉಳಿದಿದ್ದರೆ ಸರಿಯೆನ್ನಬಹುದಿತ್ತೋ, ಅದಕ್ಕಿಂತ ಒಂದೇ ರಾತ್ರಿ ಹೆಚ್ಚಾಗಿ ತಂಗಿದುದು ನನ್ನ ತಪ್ಪು; ಅಲ್ಲಿಂದ ನಾನು ಕಳಚಿಕೊಂಡು ಬರುವುದರಲ್ಲಿದ್ದಾಗ ಊರಿನ ಈ ಭಾಗದಲ್ಲಿ ದಾರಿಯೊಂದನ್ನು ಹುಡುಕುತ್ತಿದ್ದಾಗ ನೀನು ನನಗೆ ಸಿಕ್ಕಿಬಿದ್ದೆ. ಅವರು ಬರುತ್ತಿರುವರೆಂದು ಹೇಳಿದೆ, ಪಾರಾಗಲು ನನಗೆ ನೆರವಾಗಬೇಕೆಂದು ನೀನು ನನ್ನನ್ನು ಕೇಳಿಕೊಂಡೆ. ಆಗ ನಾನೇ ತೊಂದರೆಗೆ ಸಿಕ್ಕುವುದರಲ್ಲಿದ್ದೇನೆಂದೂ ನಿನ್ನನ್ನೂ ಕಟ್ಟಿಕೊಂಡು ಪಲಾಯನಮಾಡುವುದಾಗಿಯೂ ನಾನು ಹೇಳಿದೆ. ನನ್ನ ಕಥೆ ಇಷ್ಟೇ—ನಿನ್ನದು ?"

"ಮಿತಪಾನವನ್ನು ಪುನರುಜ್ಜೀವನಗೊಳಿಸುವ ಸಣ್ಣ ಉದ್ಯಮವೊಂದನ್ನು ನಾನಲ್ಲಿ ಸುಮಾರು ಒಂದು ವಾರದವರೆಗೆ ನಡಸುತ್ತಿದ್ದೆ; ಅಲ್ಲಿನ ದೊಡ್ಡವರೂ ಚಿಕ್ಕವರೂ ಸೇರಿ ಎಲ್ಲಾ ಹೆಂಗಸರಿಗೂ ನಾನು ಬಲು ಮೆಚ್ಚಾಗಿದ್ದೆ. ಏಕೆಂದರೆ, ಜನಸಾಮಾನ್ಯಕ್ಕೆ ತುಂಬಾ ಅನುಕೂಲವನ್ನು ಒದಗಿಸಿದ್ದೆ, ನೋಡು. ಪ್ರತಿರಾತ್ರಿಯೂ ನಾನು ಐದಾರು ಡಾಲರುಗಳನ್ನು—ತಲೆಗೆ ಹತ್ತು ಸೆಂಟುಗಳಂತೆ, ಮಕ್ಕಳಿಗೂ ನೀಗ್ರೋಗಳಿಗೂ ಪುಕ್ಕಟೆ—ಸಂಪಾದಿಸುತ್ತಿದ್ದೆ. ನನ್ನ ವ್ಯಾಪಾರ ದಿನೇ ದಿನೇ ಅಭಿವೃದ್ಧಿಗೊಂಡಿತು. ಆಗ ಏಕೋ ಏನೋ ನಾನು ಯಾವುದೋ ಒಂದು ತಂತ್ರಗಾರ ವ್ಯಾಪಾರಿಸಂಸ್ಥೆಯೊಂದಿಗೆ ಸಂಪರ್ಕವಿಟ್ಟುಕೊಂಡಿದ್ದೇನೆಂದು ಊರೊಳಗೆ ಪಿಸುಮಾತು ಹಬ್ಬಿಕೊಂಡಿತು. ಈ ದಿನ ಬೆಳ

ಗಾಗುತ್ತಲೆ ನೀಗ್ರೋ ಒಬ್ಬನು ನನ್ನನ್ನು ಎಬ್ಬಿಸಿ, ಊರ ಜನರು ತಮ್ಮ ನಾಯಿಗಳನ್ನೂ ಕುದುರೆಗಳನ್ನೂ ಜತೆಗೂಡಿಸಿಕೊಂಡು ಸದ್ದಿಲ್ಲದೆ ಗುಂಪುಕಟ್ಟುತ್ತಿದ್ದಾರೆಂದೂ, ಬೇಗನೆ ನನ್ನ ನಿವಾಸದ ಬಳಿಗೆ ಬರಲಿದ್ದಾರೆಂದೂ, ಇಲ್ಲಿಂದ ಕದಲಲು ನನಗೆ ಅರ್ಧಗಂಟೆಯ ಅವಕಾಶ ಮಾತ್ರ ಇರುವುದೆಂದೂ ಹೇಳಿದನು; ಆಮೇಲೆ ಅವರು ಸಾಧ್ಯವಾದಲ್ಲಿ ನನ್ನನ್ನು ಅಟ್ಟಿಸಿಕೊಂಡು ಬರುವುದೂ, ಅವರ ಕೈಗೆ ನಾನು ಸಿಕ್ಕಿಬಿದ್ದರೆ ನನಗೆ ಮಸಿ ಬಳಿದು ರೆಕ್ಕೆಪುಕ್ಕ ಕಟ್ಟಿ ಮೆರವಣಿಗೆ ಮಾಡುವುದು ಖಚಿತವೆಂದೂ ತಿಳಿಸಿದನು. ಇದನ್ನು ಕೇಳಿದ ಮೇಲೆ ನಾನು ಬೆಳಗಿನ ಉಪಾಹಾರಕ್ಕಾಗಿ ಕಾಯುತ್ತ ನಿಲ್ಲಲಿಲ್ಲ—ನನಗೆ ಹಸಿವಾಗಿರಲಿಲ್ಲ."

ಚಿಕ್ಕವನು ಹೇಳಿದ : ಮುದುಕಪ್ಪ, ನಾವಿಬ್ಬರೂ ಜತೆಗೂಡಿ ಅವರನ್ನೆದುರಿಸ ಬಹುದೆಂದು ತೋರುತ್ತದೆ. ನಿನಗೆ ಹೇಗೆ ತೋರುತ್ತದೆ ?"

"ನನಗೇನು ಆ ಇಷ್ಟವಿಲ್ಲದಿಲ್ಲ. ನಿನ್ನ ಉದ್ಯೋಗ ಯಾವುದು-ಮುಖ್ಯವಾಗಿ ?"

"ಮುಖ್ಯವಾಗಿ ನಾನು ಮುದ್ರಕ; ಸಿದ್ಧೌಷಧಗಳ ತಯಾರಿಕೆಯನ್ನೂ ಸ್ವಲ್ಪ ಇಟ್ಟುಕೊಂಡಿದ್ದೇನೆ; ರಂಗಮಂದಿರದ ನಟ - ರುದ್ರನಾಟಕ ಎನ್ನಿ; ಆಗಾಗ ಇಂದ್ರಜಾಲಕ್ಕೂ ಒಂದು ವಿಶೇಷ ರೀತಿಯ ಮನಶ್ಶಾಸ್ತ್ರಪ್ರಯೋಗಗಳಿಗೂ ಕೈಹಾಕುವುದುಂಟು ಕೆಲವು ವೇಳೆ ಬದಲಾವಣೆಗಾಗಿ ಗಾನಪದ್ಧತಿಗೆ ಭೂಗೋಳಶಾಸ್ತ್ರವನ್ನು ಅಳವಡಿಸಿ ಕೊಂಡು ಪಾಠ ಹೇಳುತ್ತೇನೆ. ಭಾಷಣಗಳನ್ನೂ ಬಿಗಿಯುತ್ತೇನೆ—ಓ ನಾನು ಬೇಕಾದಷ್ಟು ಕೆಲಸಗಳನ್ನು ಮಾಡುತ್ತೇನೆ—ಯಾವುದು ಕೈಗೆ ಒದಗುತ್ತದೆಯೋ ಅದನ್ನು ಮಾಡುತ್ತೇನೆ. ಇಂಥುದೇ ಉದ್ಯೋಗವೆಂದಲ್ಲ. ನಿನ್ನ ಸಮಾಚಾರವೇನು ?"

"ನಾನೂ ನನ್ನ ಕಾಲದಲ್ಲಿ ಸ್ವಲ್ಪ ವೈದ್ಯವೃತ್ತಿಯನ್ನು ನಡೆಸಿದ್ದೇನೆ. ಏಡಿಹುಣ್ಣು, ಲಕ್ವಾ, ಮುಂತಾದ ರೋಗಗಳಿಗೆ ಈಡಾದವರನ್ನು ಥಟ್ಟನೆ ಹಿಡಿದು ಚಿಕಿತ್ಸೆ ನಡೆಸುವುದೇ ನನ್ನ ಪ್ರಮುಖೋದ್ಯೋಗ. ಯಾರಾದರೂ ಸುದ್ದಿಗಳನ್ನು ಸಂಗ್ರಹಿಸಿ ನನಗೆ ಒದಗಿಸುವವರು ಸಿಕ್ಕಿದಲ್ಲಿ, ನಾನು ಭವಿಷ್ಯವನ್ನೂ ಬಲು ಚೆನ್ನಾಗಿ ಹೇಳಬಲ್ಲೆ. ನಾನು ಬೋಧಕನೂ ಹೌದು ; ಶಿಬಿರ ಸಭೆಗಳನ್ನು ನಡೆಸುತ್ತೇನೆ, ಮತಪ್ರಚಾರವನ್ನೂ ಮಾಡುತ್ತೇನೆ."

ಬಳಿಕ ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ; ಆಮೇಲೆ ನಿಟ್ಟುಸಿರುಬಿಡುತ್ತಾ ಆ ತರುಣ ಹೇಳಿದ :

"ಅಯ್ಯೋ !"

ಬಕ್ಕತಲೆಯವನು ಕೇಳಿದ : "ನೀನೇಕೆ 'ಅಯ್ಯೋ!' ಎನ್ನುತ್ತಿರುವೆ ?"

"ಏನಿಲ್ಲ, ಎಂಥಾ ಬಾಳನ್ನು ಹೊರೆಯುವುದಕ್ಕಾಗಿ ನಾನು ಉಳಿದುಕೊಂಡಿದ್ದೇನೆ, ಮತ್ತು ಎಂಥವರ ಸಹವಾಸದ ಅಧೋಗತಿಗೆ ನಾನು ಬಿದ್ದೆ ಎಂದು ಯೋಚಿಸಿ ಹಾಗೆಂದೆ." ಹೀಗೆಂದವನು ಬಟ್ಟೆಹರುಕಿನಿಂದ ತನ್ನ ಕಡೆಗಣ್ಣನ್ನು ಒರಸಿಕೊಳ್ಳಲು ಪ್ರಾರಂಭಿಸಿದನು.

"ನಿನ್ನ ಮಾತಿಗೆ ಮಂಗಳಾರತಿ ಎತ್ತ, ಏನಯ್ಯ ಈ ಸಹವಾಸ ನಿನ್ನ ಅಂತಸ್ತಿಗೆ ತಕ್ಕುದಲ್ಲವೆ ?" ಎಂದು ಆ ಬಕ್ಕತಲೆಯವನು ಸ್ವಲ್ಪ ಉದ್ಧಟತನದಿಂದಲೂ, ಸ್ವಪ್ರತಿಷ್ಠೆಯಿಂದಲೂ ಕೇಳಿದ.

"ನಿನ್ನ ಪ್ರಶ್ನೆ ಸರಿ, ಈ ಸಹವಾಸ ನನಗೆ ತಕ್ಕುದಾಗಿದೆ; ನನ್ನ ಅರ್ಹತೆಗೆ ತಕ್ಕುದೇ ಆಗಿದೆ. ಮೇಲಿದ್ದ ನನ್ನನ್ನು ಕೆಳಕ್ಕೆ ಬೀಳಿಸಿದವರು ಯಾರು? ನಾನೇ. ಮಹನೀಯರೇ, ನಾನು ನಿಮ್ಮನ್ನು ದೂರುತ್ತಿಲ್ಲ—ಇಲ್ಲವೇ ಇಲ್ಲ, ನಾನು ಯಾರನ್ನೂ ದೂರುತ್ತಿಲ್ಲ. ಈ ಶಿಕ್ಷೆಗೆ ನಾನು ಸರ್ವಥಾ ಅರ್ಹನೇ. ಈ ನಿರ್ದಯ ಪ್ರಪಂಚದಿಂದ ನನಗೆ ಎಷ್ಟು ಕೇಡು ಬರುತ್ತದೆಯೋ ಅಷ್ಟೂ ಬರಲಿ; ಒಂದಂತೂ ನನಗೆ ಗಟ್ಟಿ—ನನಗೂ ಒಂದು ಗೋರಿ ಎಲ್ಲೋ ಕಾದಿದೆ. ಈ ಪ್ರಪಂಚ ತಾನು ಎಂದೂ ಮಾಡುತ್ತಿರುವಂತೆಯೇ ಮುಂಬರಿಯಬಹುದು, ನನ್ನ ಸರ್ವಸ್ವವನ್ನೂ—ಪ್ರಿಯಜನರನ್ನೂ ಆಸ್ತಿಪಾಸ್ತಿಗಳನ್ನೂ—ಕಸಿದುಕೊಳ್ಳಬಹುದು; ಅದನ್ನು ಮಾತ್ರ ಕಿತ್ತುಕೊಳ್ಳಲಾರದು. ಎಂದಾದರೊಂದು ದಿನ ನಾನು ಹೋಗಿ ಅದರಲ್ಲಿ ಮಲಗಿ, ಎಲ್ಲವನ್ನೂ ಮರೆತುಬಿಡುತ್ತೇನೆ, ನನ್ನ ದುರ್ದೈವಿ ಭಗ್ನ ಹೃದಯ ಶಾಂತವಾಗುತ್ತದೆ." ಅವನು ಅಳುತ್ತಲೇ ಇದ್ದನು.

"ಅಯ್ಯೋ ನಿನ್ನ ದುರ್ದೈವಿ ಭಗ್ನ ಹೃದಯವೆ ? ನೀನು ದುಃಖವನ್ನೇಕೆ ನಮ್ಮ ಮೇಲೆ ಎರೆಯುತ್ತಿರುವೆ ? ನಾವು ಏನನ್ನೂ ಮಾಡಲಿಲ್ಲವಲ್ಲ" ಎಂದನು ಬಕ್ಕತಲೆಯವನು.

"ಇಲ್ಲ. ನೀವೇನೂ ಮಾಡಿಲ್ಲವೆಂಬುದು ನನಗೆ ಗೊತ್ತು, ಮಹನೀಯರೆ, ನಾನು ನಿಮ್ಮನ್ನು ದೂರುತ್ತಿಲ್ಲ. ನಾನು ದುರ್ಗತಿಗಿಳಿದುದು ನನ್ನಿಂದಲೇ–ಹೌದು, ನನಗೆ ಅದನ್ನು ನಾನೇ ತಂದುಕೊಂಡೆ. ಅದಕ್ಕಾಗಿ ನಾನು ಸಂಕಟವನ್ನನುಭವಿಸಬೇಕಾದದ್ದು ನ್ಯಾಯವೇ—ಶುದ್ಧಾಂಗವಾಗಿ ನ್ಯಾಯವೇ ; ನಾನು ಎಷ್ಟೂ ಅಳುವುದಿಲ್ಲ."

"ನೀನು ಈ ಗತಿಗಿಳಿವ ಮುನ್ನ ಏನಾಗಿದ್ದೆ ? ಎಲ್ಲಿಂದ ನೀನು ಬಿದ್ದುದು ಈ ಗತಿಗೆ ?"

"ಅಃ, ನೀವು ನನ್ನನ್ನ ನಂಬದಿರಬಹುದು ; ಈ ಪ್ರಪಂಚ ಎಂದೂ ನಂಬುವುದಿಲ್ಲ—ಅದು ಹೋಗಲಿ—ಅದು ಮುಖ್ಯ ವಿಷಯವಲ್ಲ. ನನ್ನ ಹುಟ್ಟಿನ ಗುಟ್ಟು–"

"ನಿನ್ನ ಹುಟ್ಟಿನ ಗುಟ್ಟು ! ನೀನು ಹೇಳಲುದ್ದೇಶಿಸಿರುವುದು—"

"ಮಹನೀಯರೆ, ನಿಮ್ಮಲ್ಲಿ ನಾನು ನಂಬಿಕೆಯಿಡಬಹುದೆಂದು ನನಗೆ ತೋರುವುದರಿಂದ ನಾನೀಗ ನಿಮಗೆ ಅದನ್ನು ಬಯಲುಮಾಡುವೆನು. ಜನ್ಮತಃ ನಾನೊಬ್ಬ ಡ್ಯೂಕ್ (ಇಂಗ್ಲೆಂಡಿನ ಶ್ರೇಷ್ಠ ಸರದಾರ ಮನೆತನವೊಂದಕ್ಕೆ ಸೇರಿದವನು)." ಎಂದು ಆ ತರುಣನು ಗಂಭೀರವಾಗಿ ನುಡಿದನು.

ಇದನ್ನು ಕೇಳಿ ಜಿಮ್ ಕಣ್ಣಗಲಿಸಿದನು ; ನನಗೂ ಹಾಗೆಯೇ ಆಯಿತೆಂದು ನನ್ನೆಣಿಕೆ. ಆಗ ಬಕ್ಕತಲೆಯವನು ಹೇಳಿದ : "ಇಲ್ಲ ! ಅದಾಗಿರಲಾರದು ಏನು ?"

"ಹೌದು, ಅದೇ. ಡ್ಯೂಕ್ ಆಫ಼ ಬ್ರಿಡ್ಜ್‌ವಾಟರಿನ ಜ್ಯೇಷ್ಠ ಪುತ್ರನಾದ ನನ್ನ ಮುತ್ತಾತ ಕಳೆದ ಶತಮಾನದ ಮುಗಿವಿನ ಹೊತ್ತಿಗೆ ಈ ನಾಡಿಗೆ ನಿರ್ಮಲವಾದ ಸ್ವಾತಂತ್ರ್ಯದ ಆವರಣದಲ್ಲಿ ಉಸಿರಾಡುವ ಉದ್ದೇಶದಿಂದ ಓಡಿಬಂದನು ; ಇಲ್ಲೇ ಮದುವೆಯಾದನು, ಅವರಿಗೊಂದು ಗಂಡು ಮಗು ಹುಟ್ಟಿತು. ಆಮೇಲೆ ನನ್ನ ಮುತ್ತಾತ ತೀರಿಕೊಂಡನು ; ಮತ್ತು ಅದೇ ಸುಮಾರಿಗೆ ಅವನ ತಂದೆಯೂ ತೀರಿ ಕೊಂಡನು. ಗತಿಸಿದ ಡ್ಯೂಕನ ಎರಡನೆಯ ಮಗನು ಬಿರುದು ಬಾವಲಿಗಳನ್ನೂ ಆಸ್ತಿ ಪಾಸ್ತಿಗಳನ್ನೂ ಆಕ್ರಮಿಸಿಕೊಂಡನು—ಇನ್ನೂ ಮಗುವಾಗಿದ್ದ ನಿಜವಾದ ಡ್ಯೂಕನ್ನು ಎಲ್ಲರೂ ಕಡೆಗಣಿಸಿ ಮರೆತುಬಿಟ್ಟರು. ಆ ಮಗುವಿನ ನೇರ ಸಂತತಿಯವನು ನಾನು—ನ್ಯಾಯವಾಗಿ ಡ್ಯೂಕ್ ಆಫ್ ಬ್ರಿಡ್ಜ್‌ವಾಟರ್ ಎಂದರೆ ನಾನೇ, ಇಲ್ಲಿದ್ದೇನೆ ನಾನು, ಅನಾಥನಾಗಿ, ನನ್ನ ಉನ್ನತ ಪದವಿಗೆ ಅತಿದೂರನಾಗಿ, ಅವರಿವರ ಕಾಟಕ್ಕೆ ಪಕ್ಕಾಗಿ, ನಿರ್ದಯ ಪ್ರಪಂಚದಿಂದ ತಿರಸ್ಕೃತನಾಗಿ, ಚಿಂದಿಯುಟ್ಟು, ಕೃಶನಾಗಿ, ಭಗ್ನ ಹೃದಯಿಯಾಗಿ, ತೆಪ್ಪದ ಮೇಲೆ ದರೋಡೆಕಾರರ ಸಹವಾಸದ ಕೀಳ್ಗತಿಗಿಳಿದು !"

ಜಿಮ್ ಅವನಿಗಾಗಿ ತುಂಬಾ ಮರುಗಿದನು ; ನಾನೂ ಹಾಗೆಯೇ ನೊಂದು ಕೊಂಡೆ. ನಾವು ಅವನನ್ನು ಸಂತೈಸಲೆಳಸಿದೆವು; ಹಾಗೆ ಮಾಡುವುದರಿಂದ ಪ್ರಯೋಜನವಿಲ್ಲವೆಂದೂ, ತನಗೆ ಹೆಚ್ಚು ಸಮಾಧಾನವನ್ನು ತರುವುದು ನಮ್ಮಿಂದ ಸಾಧ್ಯವಿಲ್ಲವೆಂದೂ ಅವನು ಹೇಳಿದನು. ತನ್ನನ್ನು ನಾವು ಆ ಪದವಿಯವನು ಎಂದು ಅಂಗೀಕರಿಸುವುದಾದರೆ ತನಗೆ ಅದು ಉಳಿದೆಲ್ಲಕ್ಕಿಂತಲೂ ಹೆಚ್ಚು ಹಿತಕರವೆನ್ನಿಸುವುದು ಎಂದನು ; ಅದನ್ನು ಆಚರಣೆಗೆ ತರುವ ರೀತಿಯನ್ನು ನಮಗೆ ತಿಳಿಸುವುದಾದರೆ ನಾವು ಹಾಗೆಯೇ ಮಾಡುತ್ತೇವೆ ಎಂದು ಒಪ್ಪಿಕೊಂಡೆವು. ಅವನೊಂದಿಗೆ ಮಾತಾಡುವಾಗೆಲ್ಲ ನಾವು ತಲೆಬಗ್ಗಿಸಬೇಕೆಂದೂ, "ಮಹಾಸ್ವಾಮಿ" ಅಥವಾ "ನನ್ನೊಡೆಯ" ಅಥವಾ "ಮಹಾ ಪ್ರಭೋ" ಎನ್ನಬೇಕು ಎಂದನು . ಆದರೆ ಸುಮ್ಮನೆ "ಬ್ರಿಡ್ಜ್‌ವಾಟರ್" ಎಂದರೂ ತಾನು ಅನ್ಯಥಾ ಭಾವಿಸುವುದಿಲ್ಲವೆಂದೂ, ಏಕೆಂದರೆ ಅದೊಂದು ಬಿರುದೇ ವಿನಾ ಅಂಕಿತವಲ್ಲವೆಂದೂ, ತಾನು ಊಟ ಮಾಡುತ್ತಿರುವಾಗ ನಮ್ಮಲ್ಲಿ ಯಾರಾದರೊಬ್ಬ ಅವನ ಸೇವೆಗೆ ನಿಲ್ಲಬೇಕೆಂದೂ, ತಾನು ಬೇಕೆನ್ನುವ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿಕೊಡಬೇಕೆಂದೂ ತಿಳಿಸಿದನು.

ಆ ಮುದುಕನಾದರೋ ಉದ್ದಕ್ಕೂ ಮೌನವಾಗಿದ್ದನು ; ಅವನಿಗೆ ಹೇಳುವುದೇನೂ ಇರಲಿಲ್ಲವೇನೋ, ಆ ಡ್ಯೂಕಿನ ಸುತ್ತ ನಡೆಯುತ್ತಿದ್ದ ವಿಶೇಷೋಪಚಾರಗಳನ್ನು ಕಂಡು ಅವನಿಗೆ ಅಷ್ಟೇನೂ ಸಂತೋಷವಾಗಿರಲಿಲ್ಲವೆಂದು ತೋರಿತು. ಅವನ ಮನಸ್ಸಿನಲ್ಲಿ ಏನೋ ಇತ್ತು. ಅಪರಾಹ್ನ ಕಳೆದ ಮೇಲೆ ಅವನು ಹೇಳಿದನು :

“ಇಲ್ಲಿ ನೋಡು ಬಿಲ್ಜ್‌–ವಾಟರ್, ನಿನಗಾಗಿ ನಾನು ತುಂಬಾ ವ್ಯಥೆಪಡುತ್ತೇನೆ; ನಿಜ ; ಆದರೆ ಈ ಬಗೆಯ ಕಷ್ಟಗಳಿಗೆ ಸಿಕ್ಕಿದವನು ನೀನೊಬ್ಬನೇ ಅಲ್ಲ.”

“ನಾನೊಬ್ಬನೇ ಅಲ್ಲವೆ ?”

“ಇಲ್ಲ, ನೀನೊಬ್ಬನೇ ಅಲ್ಲ ಉನ್ನತಸ್ಥಾನದಿಂದ ಅನ್ಯಾಯವಾಗಿ (ಕದಲಿಸಿ ಕೆಡಹಿದವರಲ್ಲಿ) ನೀನೊಬ್ಬನೇ ಅಲ್ಲ.”

“ಅಯ್ಯೋ !”

“ಅಲ್ಲ, ತನ್ನ ಹುಟ್ಟಿಗೆ ಸಂಬಂಧಿಸಿದ ರಹಸ್ಯವೊಂದನ್ನು ಇಟ್ಟಿಕೊಂಡಿರುವವನೂ ನೀನೊಬ್ಬನೇ ಅಲ್ಲ.” ಹಾಗೆನ್ನುತ್ತಲೇ, ಹಣೆಯ ಬರಹವೇ !, ಅವನು ಅಳ ತೊಡಗಿದನು.

“ನಿಲ್ಲು, ನಿಲ್ಲು ! ನಿನ್ನ ಮಾತಿನ ಮರ್ಮವೇನು ?”

“ಬಿಲ್ಜ್‌ವಾಟರ್, ನಾ ನಿನ್ನನ್ನು ನಂಬಲಾದೀತೆ ?” ಎಂದನು ಮುಂದೀಕ ; ಬಿಕ್ಕಿ ಬಿಕ್ಕಿ ಅತ್ತನು.

“ನನ್ನ ದಾರುಣವಾದ ಸಾವಿನ ಪರ್ಯಂತವೂ !” ಎಂದನು ತರುಣ. ಮುದುಕನ ಕೈಯನ್ನು ಹಿಡಿದುಕೊಂಡನು, ಹಿಂಡಿದನು, ಬಳಿಕ ಕೇಳಿದನು : “ನಿನ್ನ ಹುಟ್ಟಿನ ಆ ರಹಸ್ಯವೇನು : ಹೇಳಿಬಿಡು !”

“ಬಿಲ್ಜ್‌ವಾಟರ್, ಕಣ್ಮರೆಯಾದ ಫ್ರಾನ್ಸಿನ ರಾಜಕುಮಾರ ನಾನು !” ಆಗ ಜಿಮ್ಮನೂ ನಾನೂ ಅವನನ್ನೇ ದುರುಗುಟ್ಟಿ ನೋಡಿದೆವೆಂದರೆ ನೀವು ಶಂಕಿಸಬೇಕಾದ್ದಿಲ್ಲ, ಬಳಿಕ ಡ್ಯೂಕ್ ನುಡಿದ :

“ನೀನು ಏನು ?”

“ಹೌದು, ನನ್ನ ಗೆಳೆಯ; ಅದು ಪರಮಸತ್ಯ—ನಿಮ್ಮ ಕಣ್ಣುಗಳು ಈ ನಿಮಿಷದಲ್ಲಿ ನೋಡುತ್ತಿರುವುದು ಹದಿನಾರನೆಯ ಲೂಯಿ ಮತ್ತು ಮೇರಿ ಅಂಟೋಯಿನೆಟ್ಟರ ಮಗನಾದ ಹದಿನೇಳನೆಯ ಲೂಯಿಯಾದ ಕಣ್ಮರೆಯಾದ ಅದೃಷ್ಟ ಹೀನ ಡಾಫಿನ್ನನ್ನೇ.”

“ನೀನೆ ! ಈ ವಯಸ್ಸಿನಲ್ಲಿ ನಿನಗೆ ! ಇಲ್ಲ ! ಇನ್ನಿಲ್ಲವಾದ ಷಾರ್ಲ್‌ಮೇನ್ ನೀನೆಂದು ಹೇಳುತ್ತಿರುವೆಯೇನು ? ನಿನಗೆ ಎಷ್ಟು ಕಡಿಮೆಯೆಂದರೂ ಆರೇಳು ಶತಮಾನಗಳ ವಯಸ್ಸಾಗಿರಬೇಕು”

“ಕಷ್ಟಗಳು ಬಂದರೆ ಹಾಗಾಗುತ್ತದೆ, ಬಿಲ್ಜ್‌ವಾಟರ್, ಕಷ್ಟಗಳು ಬಂದರೆ ಆಗುವುದೇ ಹಾಗೆ. ಈ ಬಿಳಿಗೂದಲುಗಳೂ ಈ ಅಕಾಲದ ಬಕ್ಕತಲೆಯೂ ಕಷ್ಟಗಳಿಂದ ಆದವು. ಹೌದು, ಮಹನೀಯರೇ, ನೀವು ನೋಡುತ್ತಿರುವುದು ನಿಮ್ಮ ಮುಂದೆ ನೀಲಿಯುಡುಗೆಯುಟ್ಟು ದುಃಸ್ಥಿತಿಯಲ್ಲಿರುವ, ರಾಜ್ಯ ಭ್ರಷ್ಟನೂ, ಅಲೆಮಾರಿಯೂ, ನಿಕೃಷ್ಟನೂ, ದುಃಖಾರ್ತನೂ ಆಗಿರುವ ಫ್ರಾನ್ಸಿನ ನಿಜವಾದ ರಾಜನನ್ನೇ.”

ಸರಿ ಅವನು ಅಳುವನ್ನು ನಿಲ್ಲಿಸಲೇ ಇಲ್ಲ ; ನನಗೂ ಜಿಮ್ಮನಿಗೂ ದಿಕ್ಕೇ ತೋರಲಿಲ್ಲ, ನಮಗೆ ಅಷ್ಟು ವ್ಯಥೆಯಾಯಿತು— ಮತ್ತು ನಮ್ಮೊಂದಿಗೆ ಅವನು ಬಂದು ಸೇರಿದ್ದಾನಲ್ಲ ಎಂದು ನಮಗೆ ಸಂತೋಷವೂ ಹೆಮ್ಮೆಯೂ ಉಂಟಾದವು. ಹಿಂದೆ ಡ್ಯೂಕಿಗೆ ನಾವು ಮಾಡಿದಂತೆಯೇ, ಇವನಿಗೂ ಸಮಾಧಾನ ಹೇಳತೊಡಗಿದೆವು. ಅದು ತನಗೆ ನಿಷ್ಫಲವೆಂದೂ, ತಾನು ಸತ್ತು ತೊಲಗಿಹೋಗುವುದೊಂದಲ್ಲದೆ ಇನ್ನಾವ ಪರಿಹಾರವೂ ತನಗಿಲ್ಲವೆಂದೂ, ಅವನು ಹೇಳಿದನು ! ಆದರೂ ತಾನು ಬದುಕಿರುವಷ್ಟು ಕಾಲ ಜನರು ತನ್ನ ಹಕ್ಕುಗಳನ್ನು ಗೌರವಿಸಿದರೆ ತನಗೆ ಸ್ವಲ್ಪಮಟ್ಟಿಗೆ ಹಿತವಾದೀತೆಂದೂ ತಿಳಿಸಿದನಲ್ಲದೆ, ತನ್ನೊಂದಿಗೆ ಮಾತಾಡುವಾಗ ಜನರು ಮಂಡಿಯತನಕ ತಲೆಬಾಗಬೇಕೆಂದೂ ತನ್ನನ್ನು ಯಾವಾಗಲು "ಮಹಾ ವೈಭವಾನ್ವಿತರೆ" ಎನ್ನಬೇಕೆಂದೂ ಭೋಜನಕಾಲದಲ್ಲಿ ತನಗೆ ಅಗ್ರಸ್ಥಾನವಿರಬೇಕೆಂದೂ, ತನ್ನೆದುರಿನಲ್ಲಿ ನಿಂತಿರುವ ಯಾರೂ ತನ್ನ ಅಪ್ಪಣೆಯಿಲ್ಲದೆ ಕುಳಿತುಕೊಳ್ಳಬಾರದೆಂದೂ ಸೂಚಿಸಿದನು. ಅದಕ್ಕಾಗಿ ನಾನೂ ಜಿಮ್ಮನೂ ಅವನನ್ನು ಮಹಾವೈಭವಕ್ಕೆ ಉಬ್ಬಿಸುತ್ತ, ಬಗೆಬಗೆಯಾಗಿ ಉಪಚಾರ ಮಾಡುತ್ತಾ, ಅವನು 'ಇನ್ನು ನೀವು ಕುಳಿತುಕೊಳ್ಳಬಹುದು' ಎನ್ನುವ ತನಕ ನಿಂತೇ ಇರುತ್ತಾ ಅವನ ಪದವಿಗೆ ತಕ್ಕಂತೆ ನಡೆದುಕೊಂಡೆವು. ಇದರಿಂದ ಅವನಿಗೆ ತುಂಬಾ ಒಳ್ಳೆಯದಾಯಿತು. ಸಂತೋಷವೂ ಸೌಖ್ಯವೂ ಲಭಿಸಿದವು. ಆದರೆ ಡ್ಯೂಕಿಗೆ ಇದೇಕೋ ಹಿಡಿಸಲಿಲ್ಲ. ಈ ನಡವಳಿಕೆಗಳಿಂದ ಅವನಿಗೆ ಸ್ವಲ್ಪವೂ ತೃಪ್ತಿಯಾಗಲಿಲ್ಲವೆಂದು ತೋರಿತು. ಅದು ಹೇಗಿದ್ದರೂ ರಾಜನೇನೋ ಅವನ ವಿಷಯದಲ್ಲಿವಾಸ್ತವವಾಗಿಯೂ ಸ್ನೇಹದಿಂದ ನಡೆದುಕೊಂಡನು; ಬಿಲ್ಜ್‌ವಾಟರಿನ ಡ್ಯೂಕನ ಮುತ್ತಾತನೂ ಮತ್ತು ಇತರ ಡ್ಯೂಕರುಗಳೆಲ್ಲರೂ ತನ್ನ ತಂದೆಯ ಎಣಿಕೆಯಲ್ಲಿ ತುಂಬಾ ಮರ್ಯಾದಿತರೆಂದೂ, ಅವರು ಅನೇಕ ವೇಳೆ ಅರಮನೆಗೆ ಬರುತ್ತಿದ್ದರೆಂದೂ ಹೇಳಿದನು. ಆದರೆ ಡ್ಯೂಕ್ ಕೊಂಚಕಾಲ ಇಳಿವೇಗದಿಂದಲೇ ಇದ್ದನು. ರಾಜ ಹೇಳಿದನು :

"ಈ ತೆಪ್ಪದ ಮೇಲೆಯೇ ನಾವು, ಇಷ್ಟವಿರಲಿ ಇಲ್ಲದಿರಲಿ, ಹೆಚ್ಚು ಕಾಲ ಒಟ್ಟಿಗಿರಬೇಕಾದುದರಿಂದ, ನೀನು ಹೀಗೆ ಕೋಪಿಸಿಕೊಂಡರೆ ಪ್ರಯೋಜನವೇನು ? ಅದು ನಮ್ಮನ್ನು ಇನ್ನಷ್ಟು ಅಸುಖಿಗಳನ್ನಾಗಿ ಮಾಡುತ್ತದೆ. ಒಬ್ಬ ಡ್ಯೂಕನಾಗಿ ಹುಟ್ಟಿದಿದ್ದುದು ನನ್ನ ತಪ್ಪೂ ಅಲ್ಲ ; ಒಬ್ಬ ರಾಜನಾಗಿ ಹುಟ್ಟದಿದ್ದುದು ನಿನ್ನ ತಪ್ಪೂ ಅಲ್ಲ.— ಅದ್ದರಿಂದ ಹೀಗೆ ಕೊರಗುವುದರಿಂದ ಫಲವೇನು ? ನಿನಗೆ ಸಿಕ್ಕಿದ ಅವಕಾಶಗಳನ್ನು ನೀನು ನಿನ್ನ ಪೂರ್ಣಲಾಭಕ್ಕಾಗಿ ದುಡಿಸಿಕೊಳ್ಳಬೇಕು—ನನ್ನ ಸೂತ್ರ ಇದೇ. ನಮಗಿಲ್ಲಿ ಯಾವುದೂ ಕೆಟ್ಟದ್ದಾಗಿಲ್ಲ—ಸಮೃದ್ಧಿಯಾದ ಉಣಿಸು, ಸುಖಜೀವನ ಬಾ, ಬಾ, ನಿನ್ನ ನೆರವೂ ನಮಗಿರಲಿ, ಡ್ಯೂಕ್, ನಾವೆಲ್ಲರೂ ಸ್ನೇಹಿತರಂತೆ ಬಾಳೋಣ "

ಡ್ಯೂಕ್ ಹಾಗೇಯೇ ಮಾಡಿದ, ಅದನ್ನು ಕಂಡು ಜಿಮ್ಮನಿಗೂ ನನಗೂ ಬಲು ಸಂತೋಷವಾಯಿತು. ಅದು ನಮ್ಮ ಅನನುಕೂಲತೆಗಳೆಲ್ಲವನ್ನೂ ನೀಗಿತು, ಬಲು

ಒಳ್ಳೆಯದಾಯಿತು ಎಂದುಕೊಂಡೆವು; ಏಕೆಂದರೆ ತೆಪ್ಪದ ಮೇಲೆ ಯಾವ ರೀತಿಯ ವಿರೋಧವನ್ನು ಕಟ್ಟಿಕೊಂಡರೂ ತುಂಬಾ ತಾಪತ್ರಯಕ್ಕಿಟ್ಟುಕೊಳ್ಳುತ್ತಿತ್ತು. ತೆಪ್ಪದ ಮೇಲಿರುವಾಗ ನಿಮಗೆ ಎಲ್ಲಕ್ಕೂ ಮಿಗಿಲಾಗಿ ಬೇಕಾದುದೆಂದರೆ, ಪ್ರತಿಯೊಬ್ಬನೂ ತೃಪ್ತಿಯಿಂದಿರುವುದು. ಮತ್ತು ಪರಸ್ಪರ ನ್ಯಾಯದಿಂದಲೂ ಅನುಕಂಪದಿಂದಲೂ ನಡೆದುಕೊಳ್ಳುವುದು.

ಈ ಸುಳ್ಳಿಗರು ಡ್ಯೂಕರೂ ಅಲ್ಲ ರಾಜರೂ ಅಲ್ಲ ನೀಚರಾದ ಠಕ್ಕರು ಮತ್ತು ಮೋಸಗಾರರು ಮಾತ್ರ ಎಂಬ ತೀರ್ಮಾನಕ್ಕೆ ಬರಲು ನನಗೆ ಹೆಚ್ಚು ಹೊತ್ತು ಬೇಕಾಗಲಿಲ್ಲ. ಆದರೆ ನಾನು ಏನನ್ನೂ ಹೇಳಲಿಲ್ಲ, ಬಿಟ್ಟುಕೊಡಲಿಲ್ಲ, ನನ್ನಲ್ಲೆ ಇಟ್ಟುಕೊಂಡಿದ್ದೆ. ಅದೇ ಅತಿ ಸೂಕ್ತಮಾರ್ಗ. ಹಾಗೆ ಮಾಡುವುದರಿಂದ ಜಗಳಗಳು ಹುಟ್ಟುವುದಿಲ್ಲ, ನೀವು ತೊಂದರೆಗೊಳಗಾಗುವುದಿಲ್ಲ ತಮ್ಮನ್ನು ಡ್ಯೂಕರು ರಾಜರು ಎನ್ನಬೇಕು ಎಂಬುದು ಅವರ ಅಪೇಕ್ಷೆಯಾಗಿದ್ದರೆ, ಅದು ತಂಡದ ಶಾಂತಿ ಪಾಲನೆಗೆ ಸಹಾಯಕವಾಗಿರುವ ತನಕ, ನನ್ನ ಅಭ್ಯಂತರವೇನೂ ಇರಲಿಲ್ಲ ; ಅದನ್ನು ಜಿಮ್ಮನಿಗೆ ಹೇಳಿ ಪ್ರಯೋಜನವಿರಲಿಲ್ಲ, ಆದ್ದರಿಂದ ನಾನು ಅವನಿಗೆ ತಿಳಿಸಲಿಲ್ಲ. ಅಪ್ಪನಿಂದ ನಾನು ಇನ್ನೇನನ್ನು ಕಲಿಯದೆ ಹೋಗಿದ್ದರೂ, ಅವನಂಥ ಜನರೊಂದಿಗೆ ಏಗಬೇಕಾಗಿರುವಾಗ ಅವರನ್ನು ಅವರ ದಾರಿಗೇ ಬಿಡುವುದು ಬಲು ಒಳ್ಳೆಯದೆಂಬುದನು ಕಲಿತಿದ್ದೆ.

## ೨೦

ಅವರು ನಮಗೆ ಅನೇಕ ಪ್ರಶ್ನೆಗಳನ್ನು ಹಾಕಿದರು ; ನಾವು ಹಾಗೆ ತೆಪ್ಪವನ್ನು ಗೋಪ್ಯವಾಗಿಟ್ಟುಕೊಂಡಿರುವುದಕ್ಕೆ ಕಾರಣವೇನು, ನಾವು ಹಗಲಿನಲ್ಲಿ ಓಡಾಡದೆ ಮಲಗಿ ನಿದ್ರಿಸುವುದೇಕೆ,— ಜಿಮ್ಮನು ತಪ್ಪಿಸಿಕೊಂಡು ಬಂದ ನೀಗ್ರೋವೆ ? ನಾನು ಹೇಳಿದೆ :

"ಅಯ್ಯೊ ದೇವರೆ ! ತಪ್ಪಿಸಿಕೊಂಡು ಬಂದ ನೀಗ್ರೋ ಯಾವನಾದರೂ ದಕ್ಷಿಣ ಭಾಗಕ್ಕೆ ಓಡಿಬರುತ್ತಾನೆಯೆ ?"

ಇಲ್ಲ, ಅವನು ಹಾಗೆ ಮಾಡಲಾರ ಎಂದುಕೊಂಡರು. ನಾನು ಯಾವುದಾದರೂ ಒಂದು ರೀತಿಯಲ್ಲಿ ವಿವರಣೆ ಕೊಡುವುದು ಅಗತ್ಯವೆನಿಸಿತು. ಅದಕ್ಕಾಗಿ ನಾನು ಹೇಳಿದೆ : "ನಾನು ಹುಟ್ಟಿದ ಪೈಕ್ ಜಿಲ್ಲೆಯ ಮಿಸ್ಸೂರಿಯಲ್ಲಿ ನಮ್ಮ ಮನೆಯವರು ಇದ್ದರು. ನಾನು, ಅಪ್ಪ, ಮತ್ತು ನನ್ನ ತಮ್ಮ ಐಕ್ ಈ ಮೂವರ ವಿನಾ ಉಳಿದವರೆಲ್ಲರೂ ಸತ್ತುಹೋದರು. ಚಿಕ್ಕಪ್ಪ ಬೆನ್‌ನಿಗೆ ಆರ್ಲಿಯನ್ಸ್ ನಗರಕ್ಕೆ ನಲವತ್ತುನಾಲ್ಕು

ಮೈಲಿ ದಕ್ಷಿಣಕ್ಕಿರುವ ನದಿಯ ಮೇಲಣ ಒಂದು ಚಿಕ್ಕ ಇಕ್ಕಟ್ಟಾದ ತೇಲು—ಮನೆ ಸೇರಿದೆ. ತಾನು ಅವನ ಜೊತೆ ಇದ್ದುಬಿಡುವುದಾಗಿ ಹೇಳಿ ಅಪ್ಪ ನಮ್ಮನ್ನು ಬಿಟ್ಟು ಹೊರಟು ಹೋಗಬೇಕೆಂದಿದ್ದ. ಅಪ್ಪ ತುಂಬಾ ಬಡವ; ಅವನು ಸ್ವಲ್ಪ ಸಾಲ ಸೋಲಗಳನ್ನೂ ಮಾಡಿಕೊಂಡಿದ್ದ. ಅವನು ಅವೆಲ್ಲವನ್ನೂ ತೀರಿಸಿದ ಮೇಲೆ ಉಳಿದ ಆಸ್ತಿಯೆಂದರೆ ಹದಿನಾರು ಡಾಲರುಗಳಷ್ಟು ಹಣ ಮತ್ತು ನಮ್ಮ ನೀಗ್ರೋ ಜಿಮ್, ಅಷ್ಟೆ ಅಷ್ಟು ಹಣ ಸಾವಿರದ ನಾಲ್ಕುನೂರು ಮೈಲಿಗಳ—ಯಾವ ಅಂತಸ್ತಿನಲ್ಲಿ ಪ್ರಯಾಣಮಾಡಿದರೂ ನದೀಪ್ರಯಾಣಕ್ಕೆ ನಮಗೆ ಸಾಲುತ್ತಿರಲಿಲ್ಲ. ಹೀಗಿರಲು ಒಮ್ಮೆ ನದಿ ಏರಿದಾಗ ಅಪ್ಪನ ದೆಸೆ ಕೂಡಿತು. ಅವನು ಈ ತೆಪ್ಪವನ್ನು ಹಿಡಿದ. ಅದರ ಮೇಲೆ ಆರ್ಲಿಯನ್ಸಿಗೆ ಹೋಗೋಣವೆಂದು ಮಾಡಿಕೊಂಡೆವು. ಅಪ್ಪನ ಅದೃಷ್ಟ ಒಳ್ಳೆಯದಾಗಿರಲಿಲ್ಲ; ಮಾರ್ಗದಲ್ಲಿ ಒಂದು ಹಬೆದೋಣಿ ರಾತ್ರಿಯ ಕತ್ತಲಲ್ಲಿ ನಮ್ಮ ತೆಪ್ಪದ ಮೂಕಿಯ ಮೇಲೆ ನುಗ್ಗಿತು! ನಾವೆಲ್ಲರೂ ನೀರಿಗುರುಳಿದೆವು, ಚಕ್ರದ ಕೆಳಗೆ ಮುಳುಗಿದೆವು. ಜಿಮ್ಮನೂ ನಾನೂ ಮೇಲೆದ್ದೆವು; ಅಪ್ಪ ಚೆನ್ನಾಗಿ ಕುಡಿದಿದ್ದ. ಐಕನೋ ನಾಲ್ಕೇವರುಷ ವಯಸ್ಸಿನ ಚಿಕ್ಕಹುಡುಗ. ಅವರು ಮುಳುಗಿಯೇಹೋದರು ಮುಂದಿನೆರಡು ದಿನಗಳಲ್ಲಿ ನಾವು ತುಂಬಾ ತೊಂದರೆಗೆ ಸಿಕ್ಕಿದೆವು, ಏಕೆಂದರೆ ಜನರು ಕಿರುದೋಣಿಗಳಲ್ಲಿ ಬರುತ್ತಲೇ ಇದ್ದರು, ಜಿಮ್ಮನೆ ತಪ್ಪಿಸಿಕೊಂಡು ಹೋದ ನೀಗ್ರೋವೆಂದು ತಿಳಿಸಿ ಅವನನ್ನು ನನ್ನಿಂದ ಬಿಡಿಸಿಕೊಂಡು ಹೋಗಲು ಯತ್ನಿಸುತ್ತಿದ್ದರು. ನಾವು ಹಗಲಹೊತ್ತಿನಲ್ಲಿ ಈಗೆಲ್ಲೂ ಕಾಣಿಸಿಕೊಳ್ಳುವುದಿಲ್ಲ; ರಾತ್ರಿಯ ಹೊತ್ತಿನಲ್ಲಿ ನಮಗೆ ಅವರಿಂದ ಕಾಟವಿಲ್ಲ.

ಡ್ಯೂಕ್ ಹೇಳಿದ:

"ನಮಗೆ ಹಗಲಿನ ಓಡಾಟ ಬೇಕಾದರೆ ಅದಕ್ಕೆ ದಾರಿಮಾಡುಕುವ ಪ್ರಶ್ನೆಯನ್ನು ನನಗೆ ಬಿಟ್ಟುಬಿಡಿ. ನಾನು ಆ ವಿಷಯವನ್ನು ಆಲೋಚಿಸುತ್ತೇನೆ—ಅದಕ್ಕೊಂದು ಯೋಚನೆಯನ್ನು ಸಿದ್ಧಪಡಿಸುತ್ತೇನೆ. ಈ ದಿನದ ಮಟ್ಟಿಗೆ ಆ ವಿಷಯವನ್ನು ಅಲ್ಲಿಗೆ ಬಿಡೋಣ, ಏಕೆಂದರೆ ಹಗಲ ಹೊತ್ತಿನಲ್ಲಿ ನಾವು ಆ ಪಟ್ಟಣದ ಸಮೀಪಕ್ಕೆ ಹೋಗುವುದು ಬೇಡ—ಅದು ಕ್ಷೇಮವಲ್ಲದಿರಬಹುದು."

ರಾತ್ರಿ ಸಮೀಪಿಸುತ್ತ ಬಂದು ಕತ್ತಲು ಕವಿಯಿತು, ಮಳೆ ಬರುವಂತೆ ತೋರಿತು. ಗಗನತಲದಲ್ಲಿ ಸಿಡಿಲು ಮಿಂಚು ಚಿಮ್ಮುತ್ತಿದ್ದವು. ಮರವೆಲೆಗಳು ತರತರಿಸ ತೊಡಗಿದ್ದವು—ತುಂಬಾ ಘೋರ ದೃಶ್ಯ ಬರಲಿದೆ ಎಂಬುದು ಸ್ಪಷ್ಟವಾಗಿ ಕಾಣುತ್ತಿತ್ತು. ರಾಜನೂ ಡ್ಯೂಕನೂ ನಮ್ಮ ಡೇರಾವನ್ನು ಸರಿಪಡಿಸಲೂ ಹಾಸುಗೆಗಳನ್ನು ಪರೀಕ್ಷಿಸಲೂ ಹೊರಟರು. ನನ್ನದು ಹುಲ್ಲಿನ ಹಾಸುಗೆ, ಜಿಮ್ಮನದು ಹೊಟ್ಟಿನ ಹಾಸುಗೆ; ನನ್ನದೇ ಎಷ್ಟೋ ಮೇಲು. ಹೊಟ್ಟಿನ ಹಾಸುಗೆಯಲ್ಲಿ ಜೇಡಗಳು ಸೇರಿಕೊಂಡಿರುತ್ತವೆ; ಅವು ನಿಮ್ಮನ್ನು ಚುಚ್ಚಿ ನೋಯಿಸುತ್ತವೆ. ಒಣಹೊಟ್ಟಿನ ಮೇಲೆ ಹೊರಳಿದಾಗ ನಿಮಗೆ

ತರಗೆಲೆಗಳ ರಾಶಿಯಮೇಲೆ ಹೊರಳಿದಂತಾಗುತ್ತದೆ; ಆ ಮರ್ಮರ ನಿಮಗೆ ನಿದ್ರಾ ಭಂಗ ಮಾಡುತ್ತದೆ. ಸರಿ, ಡ್ಯೂಕನೇನೋ ನನ್ನ ಹಾಸುಗೆಯನ್ನು ಒಪ್ಪಿಸಿಕೊಳ್ಳಲು ಸಮ್ಮತಿಸಿದ; ತಾನು ಅದಕ್ಕೆ ಒಪ್ಪುವುದಿಲ್ಲವೆಂದನು ರಾಜ. ಅವನು ಹೇಳಿದ:

"ನಮ್ಮಿಬ್ಬರ ಪದವಿಗಳಿಗಿರುವ ವ್ಯತ್ಯಾಸವೇ ಹೊಟ್ಟಿನ ಹಾಸುಗೆಯ ಮೇಲೆ ಮಲಗುವುದು ನನಗೆ ತಕ್ಕುದಲ್ಲವೆಂಬುದನ್ನು ಸೂಚಿಸಬಹುದೆನ್ನಬೇಕು ನಾನು. ಘನತೆವೆತ್ತ ಡ್ಯೂಕರೇ, ಈ ಹೊಟ್ಟಿನ ಹಾಸುಗೆಯನ್ನು ನೀವೇ ಒಪ್ಪಿಸಿಕೊಳ್ಳಬೇಕು"

ಜಿಮ್ಮನಿಗೂ ನನಗೂ ಮತ್ತೆ ಕ್ಷಣಕಾಲ ಮೈಬೆವರಿತು; ಇವರಿವರಿಗೆ ಏನೋ ಹೊತ್ತಿಕೊಳ್ಳುತ್ತದೆ ಎಂದು ಅಂಜಿದೆವು. ಆದರೆ ಡ್ಯೂಕನ ಉತ್ತರವನ್ನು ಕೇಳಿದ ಮೇಲೆ ನಮ್ಮ ಮನಸ್ಸು ಹಗುರವಾಯಿತು. ಅವನು ಹೇಳಿದ:

"ದಬ್ಬಾಳಿಕೆಯ ನಿಷ್ಠುರ ಪದತಲಕ್ಕೆ ಸಿಕ್ಕಿ ಕೆಸರಲ್ಲಿ ಹೂತುಹೋಗುವುದೇ ನನ್ನ ಹಣೆಯ ಬರಹವಾಗಿದೆ. ನನಗೂ ಒಂದು ಕಾಲದಲ್ಲಿ ಗರ್ವವಿತ್ತು; ದುರ್ವಿಧಿ ಅದನ್ನು ಮುರಿಯಿತು. ನಾನು ಸೋಲುತ್ತೇನೆ, ವಿಧೇಯನಾಗಿರುತ್ತೇನೆ; ಅದು ನನ್ನ ಹಣೆಯ ಬರಹ ಈ ಪ್ರಪಂಚದಲ್ಲೇ ನಾನು ಒಬ್ಬೊಂಟಿಗ—ಯಾತನೆಪಡುವುದು ನನ್ನ ಪಾಲಿಗಿರಲಿ—ನಾನದನ್ನು ಸಹಿಸಬಲ್ಲೆ."

ಕತ್ತಲಾದ ಕೂಡಲೆ ಅನುಕೂಲ ಸಮಯದಲ್ಲಿ ನಾವು ಮುಂಬರಿದೆವು. ನದಿಯ ಮಧ್ಯಭಾಗದ ಕಡೆಗೇ ನಾವು ಹೋಗುತ್ತಿರಬೇಕೆಂದೂ ಪಟ್ಟಣವನ್ನು ದಾಟಿ ಹೋಗುವ ತನಕ ದೀಪವನ್ನು ತೋರಿಸಬಾರದೆಂದೂ ರಾಜ ನಮಗೆ ಹೇಳಿದನು. ಕ್ರಮೇಣ ನಾವು ದೀಪಗಳ ಚಿಕ್ಕ ಗೊಂಚಲೊಂದನ್ನು ಕಂಡೆವು—ಅದೇ ಪಟ್ಟಣ—ಸರಿಯಾಗಿ ಅರ್ಧ ಮೈಲಿಯಾಚೆಗೆ ಹೋದೆವು ಊರು ಮುಕ್ಕಾಲು ಮೈಲಿ ಹಿಂದೆಯೇ ಆಯಿತೆಂದ ಮೇಲೆ ನಾವು ಲಾಂದ್ರವನ್ನು ಹಚ್ಚಿ ಎತ್ತರದಲ್ಲಿ ತಗುಲಿಸಿದೆವು. ಹತ್ತು ಗಂಟೆಯ ಸುಮಾರಿಗೆ ಮಳೆ ಬೀಳತೊಡಗಿತು; ಗುಡುಗು, ಗರ್ಜನೆ, ಮಿಂಚುಗಳೇ ಸರ್ವಸ್ವವಾಗಿದ್ದವು. ವಾತಾವರಣ ಸುಮುಖವಾಗುವತನಕ ನಾವಿಬ್ಬರೂ ಕಾದುಕೊಂಡಿರಬೇಕೆಂದು ರಾಜ ಸೂಚಿಸಿದನು. ಆಮೇಲೆ ರಾಜನೂ ಡ್ಯೂಕನೂ ಇರುಳನ್ನು ಕಳೆಯಲು ಗುಡಾರದೊಳಗೆ ಸೇರಿಕೊಂಡರು. ಹನ್ನೆರಡುಗಂಟೆಯವರೆಗೂ ನನ್ನ ಕಾವಲಿನ ಸರದಿ; ಒಂದು ವೇಳೆ ನನಗೂ ಒಂದು ಹಾಸುಗೆ ಅಣಿಯಾಗಿದ್ದರೂ ಕೂಡ ನಾನು ಒಳಗೆ ಹೋಗುತ್ತಿರಲಿಲ್ಲ; ಏಕೆಂದರೆ ನನ್ನ ದೀರ್ಘಾನುಭವದಲ್ಲಿ ಹೇಳುವುದಾದರೆ ಇಂಥದೊಂದು ಚಂಡಮಾರುತ ವಾರದಲ್ಲಿ ಪ್ರತಿದಿನವೂ ಕಾಣಿಸಿಕೊಳ್ಳುವುದಿಲ್ಲ ಅಬ್ಬ ಗಾಳಿ ಹೇಗೆ ಮೊರೆಯುತ್ತ ಬೀಸುತ್ತಿದೆ! ಸೆಕೆಂಡಿಗೊ ಎರಡು ಸೆಕೆಂಡುಗಳಿಗೋ ಒಮ್ಮೆ ಅರ್ಧಮೈಲಿ ಸುತ್ತಿನೊಳಗಿನ ಧವಳ ಶೃಂಗಗಳನ್ನು ಬೆಳಗಿಸುವ ಹೊಳಪು ಹಬ್ಬುತ್ತಿದೆ; ಮತ್ತು ನಿಮ್ಮ ದೃಷ್ಟಿ ಮಳೆಯನ್ನು ಹಾಯ್ದುಹೋದಾಗ ದ್ವೀಪಗಳ ಮೇಲೆಲ್ಲ ದೂಳು ಕುಳಿತಂತಿರುವುದನ್ನೂ ತರುಲತೆಗಳು ದಿಕ್ಕುಪಾಲಾಗಿ ಮಿಸೆದಾಡುತ್ತಿರುವುದನ್ನೂ ನೀವು

ಕಾಣುವಿರಿ. ಹಿಂದೆಯೇ ಬರುತ್ತದೆ ಭಾರಿಹೊಡೆತ !-ಬಂ ! ಬಂ ! ಬಂಬಲ್-ಅಂಬಲ್-ಅಮ್-ಬಂ-ಬು-ಬು-ಬಂ-ಎಂದು, ಮತ್ತು ಗುಡುಗು ಉರುಳುತ್ತಾ ಗೊಣಗುತ್ತಾ ದಾಟಿಹೋಗುತ್ತದೆ. ಆಮೇಲೆ ತಟಕ್ಕನೆ ಮಹಾವೇಗದಿಂದ ಇನ್ನೊಂದು ಹೊಳಪೂ ಇನ್ನೊಂದು ಕೊನೆಯ ಹೊಡೆತವೂ ಬರುತ್ತವೆ. ಉಕ್ಕಿದ ಅಲೆಗಳು ಕೆಲವೇಳೆ ನನ್ನನ್ನು ತೆಪ್ಪದಿಂದೆತ್ತಿ ಎಸೆಯುತ್ತಿದ್ದವು ; ನಾನು ಬತ್ತಲೆಯಿದ್ದುದರಿಂದ ಅದನ್ನು ಲಕ್ಷ್ಯಕ್ಕೆ ತಂದುಕೊಳ್ಳುತ್ತಿರಲಿಲ್ಲ. ನೀರಮೇಲೆ ಹೊರಟುಕೊಂಡಿದ್ದ ಮರದ ಮೋಟುಗಳಿಂದ ನಮಗೆ ಯಾವ ತೊಂದರೆಯೂ ಆಗಲಿಲ್ಲ ; ಮಿಂಚು ಎಡೆಬಿಡದೆ ಹೊಳೆಯುತ್ತಲೇ, ಸುತ್ತಲೂ ನರ್ತಿರುತ್ತಲೇ ಇದ್ದುದರಿಂದ ನಾವು ಅವುಗಳನ್ನು ಬಲುಬೇಗ ಕಂಡುಕೊಳ್ಳುತ್ತಿದ್ದೆವು ಆದ್ದರಿಂದ ತೆಪ್ಪದ ಮೂತಿಯನ್ನು ಈ ಕಡೆಗೋ ಆ ಕಡೆಗೋ ತಿರುಗಿಸಿ ಅಪಾಯದಿಂದ ಪಾರಾಗುತ್ತಿದ್ದೆವು.

ನೀವು ಬಲ್ಲಂತೆ, ನಡುರಾತ್ರಿಯ ಕಾವಲು ಸರದಿ ನನ್ನದು, ನನಗೆ ಅಷ್ಟು ಹೊತ್ತಿಗೆ ತುಂಬಾ ನಿದ್ದೆ ಬಂತು. ಸರದಿಯ ಪೂರ್ವಾರ್ಧದ ಅವಧಿಯಲ್ಲಿ ನನಗಾಗಿ ತಾನು ಕಾವಲಿರುವುದಾಗಿ ಜಿಮ್ ಹೇಳಿದನು. ಹಾಗೆ ನೋಡಿದರೆ ಜಿಮ್ ತುಂಬಾ ಒಳ್ಳೆಯವನು. ನಾನು ಗುಡಾರದೊಳಗೆ ಸೇರಿಕೊಂಡೆ ; ಆದರೆ ರಾಜನೂ ಡ್ಯೂಕನೂ ಕಾಲುಝಾಡಿಸಿ ಮಲಗಿಬಿಟ್ಟಿದ್ದರು, ನನಗೆ ಸ್ವಲ್ಪವೂ ಸ್ಥಳವಿರಲಿಲ್ಲ. ಆದ್ದರಿಂದ ನಾನು ಹೊರಗೆ ಮಲಗಬೇಕಾಯಿತು. ಮಳೆ ಬೀಳುತ್ತಿದ್ದರೂ ಚಿಂತೆಯಿರಲಿಲ್ಲ, ಅದು ಬೆಚ್ಚಗಿತ್ತು, ಅಲ್ಲದೆ ಅಲೆಗಳು ಅಷ್ಟು ಎತ್ತರಕ್ಕೇನೂ ಎದ್ದು ಹೊರಳುತ್ತಿರಲಿಲ್ಲ. ಎರಡುಗಂಟೆಯ ಸುಮಾರಿಗೆ ಅಲೆಗಳು ಮತ್ತೆ ಏಳುತ್ತವೆ, ನಿಜ ; ಆಗಲೇ ಜಿಮ್ ನನ್ನನ್ನು ಕರೆಯುವುದರಲ್ಲಿದ್ದ. ಆದರೆ ಅವನು ತನ್ನ ಮನಸ್ಸನ್ನು ಬದಲಾಯಿಸಿದ, ಏಕೆಂದರೆ ಅಲೆಗಳ ಏರಿಕೆ ಅಪಾಯಕರವೆನ್ನುವ ಮಟ್ಟದಲ್ಲಿರಲಿಲ್ಲವೆಂಬುದು ಅವನಿಗೆ ಹೊಳೆಯಿತು. ಆದನ ಎಣಿಕೆ ತಪ್ಪಾಯಿತು ; ಇದ್ದಕ್ಕಿದ್ದಂತೆಯೇ ಕ್ರಮವಾದ ಪ್ರಚಂಡತರಂಗವೊಂದು ಮೇಲುರುಳಿ ನನ್ನನ್ನು ನೀರಿಗೆಸೆಯಿತು. ಅದನ್ನು ಕಂಡು ಜಿಮ್ ಹೊಟ್ಟೆ ಹುಣ್ಣಾಗುವತನಕ ಬಿದ್ದುಬಿದ್ದು ನಕ್ಕನು. ಯಾವುದಕ್ಕೂ ಅವನಷ್ಟು ಸುಲಭವಾಗಿ ನಕ್ಕುಬಿಡುವ ನೀಗ್ರೋವೇ ಇರಲಿಲ್ಲ

ನಾನು ಸರದಿಯಮೇಲೆ ಕಾವಲುನಿಂತೆ. ಜಿಮ್ ಮಲಗಿ ಗೊರಕೆಹೊಡೆದ. ಕ್ರಮೇಣ ಬಿರುಗಾಳಿ ಪ್ರಶಾಂತವಾಯಿತು. ಮೊತ್ತಮೊದಲ ಕುಟೀರದೀಪ ಕಾಣಿಸಿದೊಡನೆಯೇ ನಾನು ಅವನನ್ನು ಎಬ್ಬಿಸಿದೆ. ನಾವು ತೆಪ್ಪವನ್ನು ರಹಸ್ಯಸ್ಥಳಕ್ಕೆ ಮೀಟಿಕೊಂಡು ಹೋದೆವು, ಏಕೆಂದರೆ ಹಗಲು ಹುಟ್ಟುವುದರಲ್ಲಿತ್ತು.

ಬೆಳಗಿನ ಉಪಾಹಾರವಾದ ಮೇಲೆ ರಾಜ ಹಳೆಯದೊಂದು ಇಸ್ಪೀಟ್ ಕಟ್ಟನ್ನು ಈಚೆಗೆ ತೆಗೆದನು ; ಅವನೂ ಡ್ಯೂಕನೂ ಆಟಕ್ಕೆ ಐದು ಸೆಂಟುಗಳ ಪಣವಿಟ್ಟು ಸ್ವಲ್ಪ ಕಾಲ ಆಡಿದರು. ಅವರಿಗೆ ಅದು ಬೇಸರವೆನಿಸಿತು ; ಇನ್ನು ಪ್ರಚಾರಕಾರ್ಯಕ್ಕೆ ತೊಡ

ಗೋಣ ಆಡಿಸಿದರು. ಡ್ಯೂಕ್ ಒಳಗೆ ಹೋಗಿ ತನ್ನ ಜಮಖಾನದ ಚೀಲದಿಂದ ತೆಕ್ಕೆ ತೆಕ್ಕೆ ಅಚ್ಚಾದ ಕೈಚೀಟಿಗಳನ್ನು ತಂದುಹಾಕಿ ಅವುಗಳನ್ನು ಗಟ್ಟಿಯಾಗಿ ಓದಿದನು. ಒಂದು ಕೈಚೀಟಿಯಲ್ಲಿ "ಪ್ಯಾರಿಸಿನ ಸುಪ್ರಸಿದ್ಧ ಡಾ. ಆರ್ಮಂಡ್ ಡಿ ಮಂಟಾಲ್ಬನ್ ಅವರು ಒಂದು ವಿಶೇಷ ರೀತಿಯ ಮನಶ್ಶಾಸ್ತ್ರದ ವಿಚಾರವಾಗಿ ಇಂಥಾ ಸ್ಥಳದಲ್ಲಿ ಇಂಥಾ ದಿವಸ ಭಾಷಣ ಮಾಡಲಿದ್ದಾರೆ; ಪ್ರವೇಶಧನ ಹತ್ತು ಸೆಂಟುಗಳು" ಎಂದೂ, "ಅವರು ಕೇವಲ ಇಪ್ಪತ್ತೈದು ಸೆಂಟುಗಳಿಗೆ ಒಂದರಂತೆ ಮನುಷ್ಯನ ಗುಣಾವಗುಣಗಳ ಸ್ಪಷ್ಟ ಚಿತ್ರಗಳನ್ನು" ನೀಡಲಿರುವುದಾಗಿಯೂ ಹೇಳಿತ್ತು. ಅವನು ತಾನೇ ಎಂದನು ಡ್ಯೂಕ್. ಇನ್ನೊಂದು ಕೈ-ಚೀಟಿಯಲ್ಲಿ ಅವನು "ಲಂಡನ್ನಿನ ಡ್ರೂರಿಲೇನಿನ, ಕಿರಿಯ ಗ್ಯಾರಿಕ್ ಎಂಬ ಹೆಸರಿನ, ಜಗತ್-ಪ್ರಖ್ಯಾತನಾದ, ಷೇಕ್ಸ್‌ಪಿಯರ್ ಮಹಾಕವಿಯ ರುದ್ರನಾಟಕಗಳ ನಟ"ನಾಗಿದ್ದನು. ಇತರ ಕೈ ಚೀಟಿಗಳಲ್ಲಿ ಅವನ ಇತರ ಹೆಸರುಗಳೂ, ಐಂದ್ರಜಾಲಿಕ ಮಂತ್ರಗಳನ್ನು ಪಠಿಸುತ್ತ ಮಾಯಾದಂಡದ ನೆರವಿನಿಂದ ನೀರಿನ ಸೆಲೆಗಳನ್ನೂ ಚಿನ್ನವಿರುವ ನೆಲೆಗಳನ್ನೂ ಕಂಡುಹಿಡಿಯುವುದು ಇತ್ಯಾದಿ ಅನೇಕ ಅದ್ಭುತಗಳನ್ನು ಸಾಧಿಸಿದ್ದನು. ಸ್ವಲ್ಪ ಹೊತ್ತು ಅವನು ಹೇಳಿದ :

"ಪ್ರಭೋ, ನಾಟಕಕಲಾಭಿಮಾನ ದೇವಿಯೇ ನನಗೆ ತುಂಬ ಪ್ರಿಯಳಾದವಳು. ತಾವು ಎಂದಾದರೂ ನಾಟಕರಂಗಕ್ಕೆ ಕಾಲಿಟ್ಟಿದ್ದೀರಾ ?"

"ಇಲ್ಲ" ಎಂದನು ರಾಜ.

ಅದಕ್ಕೆ ಡ್ಯೂಕ್ ಎಂದನು :

"ಗತವೈಭವನೇ, ಹಾಗಾದರೆ ಇನ್ನು ಮೂರೇ ದಿನಗಳೊಳಗಾಗಿ ನೀನು ಹಾಗೆ ಮಾಡುವೆ. ನಾವು ಹೊತ್ತ ಮೊದಲಿಗೆ ಸಿಕ್ಕುವ ಅಣಿಯಾದ ಪಟ್ಟಣವೊಂದರಲ್ಲಿ ನಾವು ನಾಟಕಶಾಲೆಯನ್ನು ಬಾಡಿಗೆಗೆ ತೆಗೆದುಕೊಳ್ಳೋಣ ; 'ಮೂರನೆಯ ರಿಚರ್ಡ್'ನಲ್ಲಿ ಬರುವ ಖಡ್ಗ-ಯುದ್ಧವನ್ನೂ, "ರೋಮಿಯೋ ಮತ್ತ ಜೂಲಿಯೆಟ್ಟ್'ನಲ್ಲಿ ಬರುವ ಉಪ್ಪರಿಗೆಯ ಮೊಗಶಾಲೆಯ ದೃಶ್ಯವನ್ನೂ ಅಭಿನಯಿಸೋಣ. ತಮಗೆ ಹೇಗನ್ನಿಸುತ್ತದೆ ?"

"ಕಾಸು ಬರುವ ಯಾವುದಕ್ಕಾದರೂ ನಾನು ಪೂರ್ತಿ ಸಿದ್ಧನಿದ್ದೇನೆ, ಬಿಲ್ಜ್ ವಾಟರ್ ; ಆದರೆ, ನೋಡು, ನನಗೆ ಅಭಿನಯದ ಗಂಧವೇ ಇಲ್ಲ. ನಾನು ಹೆಚ್ಚು ನಾಟಕಗಳನ್ನೂ ನೋಡಿದವನಲ್ಲ ಅಪ್ಪ ಅರಮನೆಯಲ್ಲಿ ನಾಟಕಗಳನ್ನು ಆಡಿಸುತ್ತಿದ್ದ ಕಾಲಕ್ಕೆ ನಾನಿನ್ನೂ ಬಲು ಸಣ್ಣವನಾಗಿದ್ದೆ. ನೀನು ಅದನ್ನು ನನಗೆ ಕಲಿಸಬಲ್ಲೆಯೆಂದು ನಿನಗೆ ತೋರುವುದೆ ?"

"ಅದು ಸುಲಭ !"

"ಸರಿ ಹಾಗಾದರೆ. ಹೊಸತು ಯಾವುದಾದರೂ ಸಿಕ್ಕೀತೆ ಎಂದು ನಾನು ಹಾತೊರೆಯುತ್ತಿದ್ದೆನೆ. ಅದನ್ನು ಈಗಲೇ ಪ್ರಾರಂಭಮಾಡೋಣ."

ಹಾಗೆಯೇ ಡ್ಯೂಕ್ ರೋಮಿಯೋ ಯಾರು ಜೂಲಿಯೆಟ್ ಯಾರು ಎಂಬುದೆಲ್ಲ ವನ್ನೂ ಅವನಿಗೆ ತಿಳಿಸಿದುದಲ್ಲದೆ ತಾನು ರೋಮಿಯೋ ಪಾತ್ರವನ್ನು ವಹಿಸುವುದು ಪದ್ಧತಿಯೆಂದೂ, ರಾಜ ಜೂಲಿಯೆಟ್ ಪಾತ್ರವನ್ನು ವಹಿಸಬಹುದೆಂದೂ ಹೇಳಿದನು.

"ಆದರೆ ಜೂಲಿಯೆಟ್ ತರುಣಿ, ಡ್ಯೂಕ್ ; ನನ್ನ ಬಕ್ಕ ತಲೆಯೂ ಬಿಳಿ ಮೀಸೆಗಳೂ ಅವಳ ಪಾತ್ರಕ್ಕೆ ಬಲು ಅಸಹಜವಾಗಿ ಕಾಣಬಹುದು."

"ನೀನು ಚಿಂತಿಸಬೇಕಾಗಿಲ್ಲ ; ಈ ಹಳ್ಳಿಯ ಗಮಾರರು ಹಾಗೆಲ್ಲ ಯೋಚಿಸು ವುದೇ ಇಲ್ಲ. ಅಲ್ಲದೆ ನೀನು ನಾಟಕದ ಪೋಷಾಕನ್ನು ಧರಿಸಿರುತ್ತೀಯೆ, ಅದು ಎಲ್ಲ ಡೊಂಕನ್ನೂ ಮುಚ್ಚಿಬಿಡುತ್ತದೆ. ಜೂಲಿಯೆಟ್ ತನ್ನ ಹಾಸುಗೆಯ ಮೇಲೆ ಪವಡಿ ಸುವ ಮುನ್ನ ಬೆಳದಿಂಗಳನ್ನು ಆಸ್ವಾದಿಸುತ್ತಾ, ಉಪ್ಪರಿಗೆಯ ಮೊಗಸಾಲೆಯಲ್ಲಿರು ತ್ತಾಳೆ ; ತನ್ನ ಇರುಳ ನಿಲುವಂಗಿಯನ್ನೂ, ಮುದುರಿದ ಇರುಳ ಕುಲಾವಿಯನ್ನೂ ಧರಿಸಿರುತ್ತಾಳೆ. ಪಾತ್ರಗಳು ಧರಿಸುವ ಪೋಷಾಕುಗಳಿಲ್ಲಿವೆ"

ಪರದೆಗೆ ಉಪಯೋಗಿಸುವ ಹತ್ತಿ ಬಟ್ಟೆಯ ಎರಡೋ ಮೂರೋ ಉಡುಪು ಗಳನ್ನು ಅವನು ಈಚೆಗೆ ತೆಗೆದನು ; ಅವು ಮೂರನೆಯ ರಿಚರ್ಡ್ ಮತ್ತು ಇನ್ನೊಬ್ಬ ಆಸಾಮಿ ಧರಿಸುತ್ತಿದ್ದ ಮಧ್ಯಯುಗದ ಪೋಷಾಕುಗಳು ಎಂದನು, ಅವುಗಳಿಗೆ ಹೊಂದಿ ಕೊಳ್ಳುವ ಬಿಳಿಯ ಹತ್ತಿಯ ಬಟ್ಟೆಯ ಉದ್ದನೆಯ ಜುಬ್ಬವನ್ನೂ, ಇರುಳ-ಕುಲಾವಿ ಯನ್ನೂ ತಂದಿಟ್ಟನು. ರಾಜನಿಗೆ ನಂಬಿಕೆ ಹುಟ್ಟಿತು. ಆಗ ಡ್ಯೂಕ್ ತನ್ನ ಪುಸ್ತಕ ವನ್ನು ಹೊರಗೆ ತೆಗೆದು ಬಲು ಸೊಗಸಾಗಿ ಕೈಕಾಲು ಬೀಸುತ್ತಾ, ಅತ್ತಿತ್ತ ನೋಡುತ್ತಾ ಹಾಗೆಯೇ ಅಭಿನಯಿಸುತ್ತಾ ಅಲ್ಲಿನ ಪಾತ್ರಗಳು ನುಡಿಯಬೇಕಾದ ಭಾಗಗಳನ್ನು, ಹೇಗೆ ಮಾಡಬೇಕೆಂಬುದನ್ನು ತೋರಿಸುವುದಕ್ಕಾಗಿ, ಓದಿ ಹೇಳಿದನು. ಬಳಿಕ ಪುಸ್ತಕವನ್ನು ರಾಜನಿಗೆ ಕೊಟ್ಟು ಅವನ ಪಾತ್ರಕ್ಕೆ ಸಂಬಂಧಿಸಿದ ಭಾಗಗಳನ್ನು ಕಂಠಪಾಠ ಮಾಡುವಂತೆ ಸೂಚಿಸಿದನು.

ನದಿಯ ತಿರುವಿಗೆ ಸುಮಾರು ಮೂರು ಮೈಲಿಗಳ ಕೆಳಗೆ ಒಂದು ಬಲು ಚಿಕ್ಕ ಊರಿತ್ತು. ಜಿಮ್ಮನಿಗೆ ಅಪಾಯತಟ್ಟದಂತೆ ಹಗಲಹೊತ್ತಿನಲ್ಲಿ ಕಾಣಿಸಿಕೊಂಡು ಓಡಾಡು ವುದು ಹೇಗೆ ಎಂಬುದರ ಬಗೆಗೆ ತಾನೊಂದು ಉಪಾಯವನ್ನು ಕಂಡುಹಿಡಿದಿರುವುದಾಗಿ ಡ್ಯೂಕ್ ಹೇಳಿದನು; ಅಷ್ಟುಹೊತ್ತಿಗೆ ನಾವು ಮಧ್ಯಾಹ್ನದೂಟವನ್ನು ಮುಗಿಸಿದ್ದೆವು; ತಾನು ಮುಂದಾಗಿ ಊರಿಗೆ ಹೋಗುವುದಾಗಿಯೂ, ಅದಕ್ಕೆ ಏರ್ಪಾಡು ಮಾಡುವು ದಾಗಿಯೂ ನಮಗೆ ಮಾತುಕೊಟ್ಟನು. ರಾಜ ತಾನೂ ಹೋಗುವುದಾಗಿಯೂ ತಾನೂ ಏನಾದರೂ ಸಂಪಾದನೆ ಮಾಡುವುದು ಸಾಧ್ಯವೇ ಎಂದು ನೋಡುವುದಾಗಿಯೂ ಹೇಳಿದನು. ನಮ್ಮ ಕಾಫಿಪುಡಿಯ ದಾಸ್ತಾನೂ ಬರಿದಾಗಿತ್ತು, ಆದ್ದರಿಂದ ನಾನೂ ಅವ ರೊಂದಿಗೆ ಕಿರುದೋಣಿಯಲ್ಲಿ ಹೋಗಿ ಅದನ್ನು ತರುವುದೊಳ್ಳೆಯದು ಎಂದನು ಜಿಮ್,

ನಾವು ಅಲ್ಲಿಗೆ ಹೋದಾಗ ಜನಸಂಚಾರವೇ ಕಂಡುಬರಲಿಲ್ಲ; ಬೀದಿಗಳು ನಿರ್ಜನವಾಗಿ, ಪೂರಾ ನಿಶ್ಶಬ್ದವಾಗಿ, ಸ್ತಬ್ದವಾಗಿ ಭಾನುವಾರದಂತೆ ಬಿಡುವಾಗಿದ್ದವು. ಹಿತ್ತಿಲೊಂದರಲ್ಲಿ ರೋಗಿಯಾದ ನೀಗ್ರೋ ಒಬ್ಬನು ಬಿಸಲು ಕಾಯಿಸುತ್ತಾ ಕುಳಿತಿದ್ದನು; ಪುಟ್ಟಮಕ್ಕಳನ್ನೂ ಹಡಿರೋಗಿಗಳನ್ನೂ ಬಲುಮುದುಕರನ್ನೂ ಇಲ್ಲೇ ಉಳಿಸಿ, ಉಳಿದವರೆಲ್ಲರೂ ಊರ ಹಿಂದಿನ ಕಾಡಿನಲ್ಲಿ ಎರಡು ಮೈಲಿಗಳಾಚೆಗಿರುವ ಶಿಬಿರ–ಕೂಟವೊಂದಕ್ಕೆ ಹೋಗಿರುವುದಾಗಿ ಅವನು ಹೇಳಿದನು. ರಾಜ ಅಲ್ಲಿಗೆ ಹೋಗುವ ದಾರಿಯನ್ನು ತಿಳಿದುಕೊಂಡನು; ತನಗೆ ಅಲ್ಲಿ ಏನು ಸಿಕ್ಕಲಿ ಸಿಕ್ಕದಿರಲಿ ತಾನು ಅಲ್ಲಿಗೆ ಹೋಗುವುದಾಗಿಯೂ ನಾನೂ ಬೇಕಾದರೆ ತನ್ನೊಡನೆ ಬರಬಹುದೆಂದೂ ಹೇಳಿದನು.

ಡ್ಯೂಕ್ ತಾನೊಂದು ಮುದ್ರಣಾಲಯವನ್ನು ಹುಡುಕಿಕೊಂಡು ಹೋಗಿದ್ದುದಾಗಿ ಹೇಳಿದನು. ಅವನು ಅದನ್ನು ಪತ್ತೆಹಚ್ಚಿದ್ದ; ಮರಗೆಲಸದ ಅಂಗಡಿಯೊಂದರ ಮಹಡಿಯಮೇಲಿದ್ದ ಒಂದು ಚಿಕ್ಕ ಅಂಗಡಿ ಅದು–ಬಡಗಿಗಳೂ ಅಚ್ಚುಕೂಟದವರೂ ಆ ಶಿಬಿರದಲ್ಲಿ ನಡೆಯುತ್ತಿದ್ದ ಸಭೆಗೆ ಹೋಗಿದ್ದರು; ಬಾಗಿಲಿಗೆ ಬೀಗ ಹಾಕಿರಲಿಲ್ಲ, ಅದೊಂದು ಹೊಲಸಾದ ಸ್ಥಳ; ಅಲ್ಲಿ ಸಾಮಾನುಗಳನ್ನು ಸಿಕ್ಕಾಬಟ್ಟೆ ಆಡಕಿದ್ದರು; ಎಲ್ಲೆಲ್ಲೂ ಮಸಿಗುರುತುಗಳು. ಎಲ್ಲಾ ಗೋಡೆಗಳಮೇಲೂ ಕುದುರೆಗಳ ಮತ್ತು ಕದ್ದೋಡಿದ ನೀಗ್ರೋಗಳ ಜಾಹಿರಾತುಗಳನ್ನು ಅಂಟಿಸಿದ್ದರು. ಡ್ಯೂಕ್ ತನ್ನ ಅಂಗಿಯನ್ನು ಬಿಚ್ಚಿದನು; ತಾನೀಗ ನೆಮ್ಮದಿಯಿಂದಿರುವುದಾಗಿ ಹೇಳಿದನು. ನಾನೂ ರಾಜನೂ ಶಿಬಿರಕೂಟದೆಡೆಗೆ ಸಾಗಿದೆವು.

ನಾವು ಅಲ್ಲಿಗೆ ಸುಮಾರು ಅರ್ಧಗಂಟೆಯೊಳಗೆ ತಲಪಿದೆವು; ತುಂಬಾ ಸೆಕೆಯ ದಿನವಾದ್ದರಿಂದ ನಮ್ಮ ಮೈ ಬೆವರಿಡುತ್ತಿತ್ತು. ಅಲ್ಲಿ ಸಾವಿರಾರು ಜನರು ನೆರೆದಿದ್ದರು; ಸುತ್ತಣ ಇಪ್ಪತ್ತು ಮೈಲಿ ಫಾಸಲೆಯಲ್ಲಿದ್ದವರೆಲ್ಲರೂ ಬಂದಿದ್ದರು. ಕುದುರೆಗಳೂ ಬಂಡಿಗಳೂ ಕಾಡೊಳಗೆಲ್ಲ ತುಂಬಿಹೋಗಿದ್ದವು. ಕುದುರೆಗಳು ಬಂಡಿಯ ತೊಟ್ಟಿಗಳಲ್ಲಿರುವ ಮೇವನ್ನು ತಿನ್ನುತ್ತಾ, ನೊಣಗಳನ್ನು ದೂರವಿಡಲು ಕಾಲುಗಳನ್ನು ನೆಲಕ್ಕೆ ಬಡಿಯುತ್ತಿದ್ದವು. ಎತ್ತರವಾದ ಸರಳುಗಳನ್ನು ನಟ್ಟು, ಮೇಲೆ ಮರದ ಟೊಂಗೆಗಳನ್ನು ಹೊದ್ದಿಸಿ ನಿರ್ಮಿಸಿದ ಜೋಪಡಿಗಳು ಅಲ್ಲಿದ್ದವು; ಅವುಗಳಲ್ಲಿ ನಿಂಬೆಹಣ್ಣಿನ ಪಾನಕವನ್ನೂ, ಶುಂಠಿ ಬೆರಸಿದ ರೊಟ್ಟಿಯನ್ನೂ, ರಾಸಿಗಟ್ಟಲೆ ಕಲ್ಲಂಗಡಿಹಣ್ಣನ್ನೂ, ಹಸಿರುಕಾಳು ಮುಂತಾದುವನ್ನೂ ಮಾರುತ್ತಿದ್ದರು.

ಅದೇ ಬಗೆಯ ಜೋಪಡಿಗಳಲ್ಲಿ ಉಪದೇಶಭಾಷಣವೂ ನಡೆಯುತ್ತಿತ್ತು; ಆದರೆ ಆ ಜೋಪಡಿಗಳು ಹೆಚ್ಚು ವಿಶಾಲವಾಗಿದ್ದು, ಅವುಗಳಲ್ಲಿ ಹೆಚ್ಚುಮಂದಿ ಕೂರಲು ಅನುಕೂಲಿಸಲಾಗಿತ್ತು. ದಿಮ್ಮಿಗಳ ಹೊರಮೈಯ ಹಲಗೆಗಳಿಗೆ ಎರಡೂ ಕಡೆಗಳಲ್ಲಿ ರಂಧ್ರವನ್ನು ಕೊರೆದು ಅದರ ಮೂಲಕ ಗೂಟವನ್ನು ನುಗ್ಗಿಸಿ ತಯಾರಿಸಿದ ಉದ್ದನೆಯ ಅಡ್ಡಣಿಗೆಗಳನ್ನು ಹಾಕಲಾಗಿತ್ತು. ಅವುಗಳಿಗೆ ಒರಗುಮಣೆಗಳಿರಲಿಲ್ಲ. ಉಪದೇಶ

ಮಾಡುತ್ತಿದ್ದವರು ನಿಂತುಕೊಳ್ಳುವುದಕ್ಕಾಗಿ ಜೋಪಡಿಗಳ ಒಂದು ಕೊನೆಯಲ್ಲಿ ಎತ್ತರ ವಾದ ವೇದಿಕೆಗಳನ್ನು ನಿರ್ಮಿಸಿದ್ದರು. ಹೆಂಗಸರು ಬಿಸಿಲ ಹೊಡೆತದಿಂದ ತಪ್ಪಿಸಿಕೊಳ್ಳಲು ಕುಲಾವಿಗಳನ್ನು ಧರಿಸಿದ್ದರು; ಗೆರೆಗಳುಳ್ಳ ವಿಧವಿಧವಾದ ಲಂಗಗಳನ್ನು ಉಟ್ಟಿದ್ದರು, ಕೆಲವು ಚೌಕಳಿಯವು; ಚಿಕ್ಕವರಲ್ಲಿ ಕೆಲವರು ನವಿರಾದ ಹತ್ತಿಬಟ್ಟೆಯನ್ನು ಹಾಕಿ ಕೊಂಡಿದ್ದರು. ಕೆಲವುಮಂದಿ ತರುಣರು ಬರಿಗಾಲಲ್ಲಿ ಬಂದಿದ್ದರು, ಕೆಲವು ಮಕ್ಕಳು ದಪ್ಪ ನಾರುಮಡಿಯ ಜುಬ್ಬವೊಂದರ ವಿನಾ ಇನ್ನೇನನ್ನೂ ಧರಿಸಿರಲಿಲ್ಲ ಕೆಲವರು ಮುಂದುಕಿಯರು ಕಸೂತಿ ಹಾಕುತ್ತಿದ್ದರು. ಕಿರಿಯರಲ್ಲಿ ಕೆಲವರು ಮರೆಯಲ್ಲಿ ಪ್ರೇಮ ಚೇಷ್ಟೆಗಳಲ್ಲಿ ನಿರತರಾಗಿದ್ದರು.

ನಾವು ಹೊಕ್ಕ ಮೊತ್ತಮೊದಲ ಜೋಪಡಿಯಲ್ಲಿ ಉಪದೇಶಕನೊಬ್ಬನು ಸ್ತೋತ್ರ ವನ್ನು ಹಾಡುತ್ತಿದ್ದನು. ಅವನು ಎರಡು ಪಂಕ್ತಿಗಳನ್ನು ಮೊದಲು ಹೇಳುತ್ತಿದ್ದನು: ಎಲ್ಲರೂ ಅದನ್ನು ಹಾಡುತ್ತಿದ್ದರು: ಅಷ್ಟೊಂದು ಜನ ಒಟ್ಟಿಗೆ ಸೇರಿದ್ದರಿಂದಲೂ, ಅವರು ಅಪ್ಪರವಟ್ಟಿಗೆ ಎದೆಕೆರಳಿಸುವಂತೆ ಹಾಡುತ್ತಿದ್ದುದರಿಂದಲೂ, ಅದು ಕಿವಿಗೆ ತುಂಬಾ ಇಂಪಾಗಿತ್ತು. ಅದಾದಮೇಲೆ ಅವನು ಇನ್ನೆರಡು ಚರಣಗಳನ್ನು ಅನ್ನು ತ್ತಿದ್ದನು. ಅವರು ಅವುಗಳನ್ನು ಅಂತೆಯೇ ಹಾಡುತ್ತಿದ್ದರು, ಇದು ಹೀಗೆಯೇ ನಡೆಯುತ್ತಿತ್ತು. ಜನರು ಹೆಚ್ಚುಹೆಚ್ಚಾಗಿ ಪ್ರಭಾವಿತರಾಗುತ್ತಿದ್ದರು; ಅದನ್ನು ಇನ್ನಷ್ಟು ಮತ್ತಷ್ಟು ಗಟ್ಟಿಯಾಗಿ ಹಾಡುತ್ತಿದ್ದರು. ಕೊನೆಕೊನೆಗೆ ಕೆಲವರು ಆರ್ತನಾದಮಾಡಲೂ ಇನ್ನು ಕೆಲವರು ಕಿರಿಚಲೂ ತೊಡಗಿದರು. ಆಗ ಉಪದೇಶಕರು ಉಪದೇಶಕ್ಕೆ ತೊಡಗಿದನು, ತುಂಬಾ ಶ್ರದ್ಧೆಯಿಂದಲೇ ಉಪದೇಶಮಾಡತೊಡಗಿದನು. ಒಂದುಸಲ ವೇದಿಕೆಯ ಒಂದು ಪಕ್ಕಕ್ಕೂ ಇನ್ನೊಂದುಸಲ ಇನ್ನೊಂದು ಪಕ್ಕಕ್ಕೂ ಓಲಾಡುತ್ತಾ, ಮುಂದಕ್ಕೆ ಬಗ್ಗುತ್ತಾ, ತನ್ನ ಕೈಗಳನ್ನೂ ಮೈಯನ್ನೂ ಬೀಸಿ ಆಡಿಸುತ್ತಾ ತನ್ನ ಎಲ್ಲ ತ್ರಾಣವನ್ನೂ ಕೂಡಿಸಿಕೊಂಡು ತನ್ನ ಮಾತುಗಳನ್ನು ಅಬ್ಬರಿಸುತ್ತಾ ಹೋದನು. ಕ್ಷಣಕ್ಕೊಂದುಸಲ ತನ್ನ ಬೈಬಲನ್ನು ಮೇಲೆತ್ತಿ ಹಿಡಿದು ಅದರ ಪುಟಗಳನ್ನು ತೆರೆದು, ಸುತ್ತಲೂ ಅದನ್ನು ಹೀಗೂ ಹಾಗೂ ಬೀಸುತ್ತಾ, "ಅರಣ್ಯದಲ್ಲಿರುವ ನಾಚಿಕೆಗೆಟ್ಟ ಸರ್ಪವದು! ಅದನ್ನು ಹಾಗೆ ಭಾವಿಸಿ, ಬದುಕಿ!" ಎಂದು ಕಿರಿಚುತ್ತಿದ್ದನು. ಎಲ್ಲರೂ ಒಡನೆಯೇ "ಭಗವತ್-ಕೃಪೆ!—ತ-ತಥಾಸ್ತು" ಎನ್ನುತ್ತಿದ್ದರು. ಜನರು ಕಿರುಚುತ್ತಿದ್ದರು, ಆರ್ತನಾದಮಾಡುತ್ತಿದ್ದರು; ಅವನು ಹೀಗೆಯೇ ಹೇಳುತ್ತಿದ್ದನು; ಅವರು ತಥಾಸ್ತು ಎನ್ನುತ್ತಿದ್ದರು.

"ಓ ಗೋಳಿಡುವವರ ಪಂಕ್ತಿಗೆ ಬನ್ನಿ! ಬನ್ನಿ, ಪಾಪದಿಂದ ಕಪ್ಪಾಗಿ! (ತಥಾಸ್ತು!) ಬನ್ನಿ, ರೋಗಿಗಳೇ, ದುಃಖಿಗಳೇ! (ತಥಾಸ್ತು!) ಬನ್ನಿ ಹೆಳವರೇ, ಕುಂಟರೇ, ಕುರುಡರೇ! (ತಥಾಸ್ತು!) ಬನ್ನಿ ಬಡವರೇ, ನಿರ್ಗತಿಕರೇ, ಅವಮಾನ ದಲ್ಲಿ ಮುಳುಗಿಹೋಗಿರುವವರೇ! (ತ-ತಥಾಸ್ತು!) ಬನ್ನಿ, ಅಶಕ್ತರೂ ಪತಿತರೂ

ಸಂಕಟಕ್ಕೆ ಸಿಕ್ಕಿಬಿದ್ದಿರುವವರೂ ಆದ ಎಲ್ಲರೂ! ಭಗ್ನಚೇತನರಾಗಿ ಬನ್ನಿ! ಪಶ್ಚಾತ್ತಾಪ ಭರಿತ ಹೃದಯದೊಂದಿಗೆ ಬನ್ನಿ! ನಿಮ್ಮ ಹರುಕುಬಟ್ಟೆಯನ್ನೂ, ಪಾಪವನ್ನೂ ಹೊತ್ತು ಬನ್ನಿ! ನಿಮ್ಮನ್ನು ಶುಚಿಗೊಳಿಸುವ ಜಲ ನಿಮಗೆ ಪುಕ್ಕಟೆ ಲಭಿಸಿದೆ, ಸ್ವರ್ಗದ ಬಾಗಿಲು ತೆರೆದು ಕಾದಿದೆ– ಓ ಬನ್ನಿ ಒಳಗೆ; ಶಾಂತಚಿತ್ತರಾಗಿ!" (ಆ-ತಥಾಸ್ತು ಭಗವತ್-ಕೃಪೆ, ಭಗವತ್-ಕೃಪೆ ನಮ್ಮನ್ನು ಕಾಪಾಡಲಿ!)"

ಇತ್ಯಾದಿ, ಇತ್ಯಾದಿ, ಆ ಕೂಗಾಟ ಕಿರಿಚಾಟಗಳಲ್ಲಿ ಉಪದೇಶಕ ಮುಂದೇನು ಹೇಳಿದನೆಂಬುದು ನಿಮಗೆ ತಿಳಿಯುತ್ತಲೆ ಇರಲಿಲ್ಲ. ಗುಂಪಿನಲ್ಲಿ ಎಲ್ಲ ಕಡೆಗಳಿಂದಲೂ ಜನರು ಎದ್ದು ನಿಂತು ತೂರಿ ದಾರಿಮಾಡಿಕೊಂಡು ಶೋಕಾರ್ತರಿಗೆ ಮೀಸಲಾಗಿದ್ದ ಅಡ್ಡಣಿಗೆಯ ಬಳಿಗೆ ಕಂಬನಿಗರೆಯುತ್ತಲೇ ಬಂದು ನಿಂತರು. ಶೋಕಾರ್ತರೆಲ್ಲರೂ ಮುಂದಿನ ಸಾಲಿನ ಅಡ್ಡಣಿಗೆಗಳ ಬಳಿಗೆ ಗುಂಪುಕಟ್ಟಿ ಬಂದು ನಿಂತಾಗ, ಎಲ್ಲರೂ ಹಾಡಿದರು, ಕಿರಿಚಿದರು, ಹುಲ್ಲುಹಾಸಿದ್ದ ನೆಲದ ಮೇಲೆ ಬುದ್ಧಿಗೆಟ್ಟು ಹುಚ್ಚರಂತೆ ಉರುಳಿಸಿದರು.

ನನಗೆ ಮೊತ್ತಮೊದಲಿಗೆ ಅರಿವಾದದ್ದೇನೆಂದರೆ ಅಲ್ಲಿಗೆ ನಮ್ಮ ರಾಜ ನುಗ್ಗಿಕೊಂಡು ಹೋದದ್ದು; ಎಲ್ಲರ ಧ್ವನಿಯನ್ನೂ ಮೀರಿಸಿ ಅವನು ಕೂಗುತ್ತಿದ್ದದನ್ನು ನೀವು ಕೇಳಬಹುದಾಗಿತ್ತು. ಆಮೇಲೆ ಅವನು ಎಲ್ಲರನ್ನೂ ತಳ್ಳಿಕೊಂಡು ವೇದಿಕೆಯನ್ನು ಹತ್ತಿ ನಿಂತನು. ಜನರನ್ನು ಉದ್ದೇಶಿಸಿ ಮಾತನಾಡುವಂತೆ ಉಪದೇಶಕ ಅವನನ್ನು ಕೇಳಿಕೊಂಡನು. ಅವನು ಹಾಗೆಯೇ ಮಾಡಿದನು; ತಾನೊಬ್ಬ ಕಡಲುಗಳ್ಳನಾಗಿದ್ದುದಾಗಿಯೂ—ಹಿಂದೂ ಸಾಗರದಲ್ಲಿ ಮೂವತ್ತು ವರುಷಗಳ ಕಾಲ ಕಡಲುಗಳ್ಳನಾಗಿದ್ದುದಾಗಿಯೂ—ಕಳೆದ ವಸಂತದಲ್ಲಿ ತನ್ನ ನೌಕೆಯಲ್ಲಿದ್ದ ಜತೆಗಾರರಲ್ಲಿ ಅನೇಕರು ಒಂದು ಹೋರಾಟದಲ್ಲಿ ನಾಶಹೊಂದಿದರೆಂದೂ, ಈಗ ತಾನು ಕೆಲವುಮಂದಿ ಹೊಸಬರನ್ನು ಕೂಡಿಸಿಕೊಳ್ಳುವುದಕ್ಕಾಗಿ ಊರಿಗೆ ಬಂದುದಾಗಿಯೂ, ಕಳೆದ ರಾತ್ರಿ ತನ್ನಲ್ಲಿದ್ದುದೆಲ್ಲವನ್ನೂ ಕದ್ದು ತನ್ನನ್ನು ನಿರ್ಗತಿಕನನ್ನಾಗಿ ಮಾಡಿ ಹಬೆದೋಣಿಯೊಂದರಿಂದ ಈ ತೀರಕ್ಕೆ ಎಸೆದುದು ತನ್ನ ಪುಣ್ಯವೇ ಎಂದೂ ತಾನು ಅದಕ್ಕೆ ಸಂತೋಷಪಡುತ್ತಿರುವುದಾಗಿಯೂ ಹೇಳಿದನು. ತಾನೀಗ ಮಾರ್ಪಟ್ಟಿರುವುದರಿಂದಲೂ, ತನ್ನ ಇಡೀ ಜೀವಮಾನದಲ್ಲೇ ತಾನಿಂದು ಮೊತ್ತಮೊದಲಿಗೆ ಸುಖಿಯಾಗಿರುವುದರಿಂದಲೂ, ತನಗೆ ಆದ ನಷ್ಟವನ್ನು ತನ್ನ ಪರಮಸೌಭಾಗ್ಯವೆಂದು ಪರಿಗಣಿಸುವುದಾಗಿಯೂ ನುಡಿದನು. ತಾನು ದರಿದ್ರನಾಗಿದ್ದರೂ, ತಾನು ಕೂಡಲೇ ಹೇಗಾದರೂಮಾಡಿ ಹಿಂದೂಸಾಗರವನ್ನು ತಲುಪಿ ಕಡಲುಗಳ್ಳರನ್ನು ಸತ್ಯಮಾರ್ಗಕ್ಕೆ ತಿರುಗಿಸುವುದಕ್ಕಾಗಿಯೇ ತನ್ನ ಇಡೀ ಜೀವಮಾನವನ್ನು ಮೀಸಲಿಡುವುದಾಗಿ ಘೋಷಿಸಿದನು. ಆ ಸಾಗರದಲ್ಲಿರುವ ಎಲ್ಲಾ ಕಡಲುಗಳ್ಳ ತಂಡಗಳ ಪರಿಚಯು ತನಗಿರುವುದರಿಂದ ತಾನು ಆ ಕೆಲಸವನ್ನು ಉಳಿದೆಲ್ಲರಿಗಿಂತ ಯಶಸ್ವಿಯಾಗಿ ಮಾಡಬಲ್ಲನೆಂದೂ, ಕೈಯಲ್ಲಿ ಹಣವಿಲ್ಲದೆ ತಾನು ಅಲ್ಲಿಗೆ ಹೋಗುವುದಕ್ಕೆ

ದೀರ್ಘಕಾಲ ಹಿಡಿಯುವುದಾದರೂ ತಾನು ಹೇಗಾದರೂ ಮಾಡಿ ಅಲ್ಲಿಗೆ ಹೋಗವುದಾಗಿಯೂ, ತಾನು ಒಬ್ಬೊಬ್ಬ ಕಡಲುಗಳ್ಳನಿಗೆ ತನ್ನ ಅನುಭವವನ್ನು ಮನದಟ್ಟು ಮಾಡಿಕೊಟ್ಟಾಗಲೂ "ನೀನು ನನಗೆ ಕೃತಜ್ಞನಾಗಿರಬೇಕಾದ್ದಿಲ್ಲ, ಆ ಪುಣ್ಯ ನನ್ನದೆನ್ನಬೇಡ, ಅದಷ್ಟೂ ನನ್ನ ಪ್ರಿಯ ಪೋಕ್‌ವಿಲ್ ಶಿಬಿರಕೂಟದ ಜನರಿಗೆ, ನನ್ನ ನೈಜ ಸೋದರರಿಗೆ, ಮಾನವಕುಲದ ಉಪಕಾರಿಗಳಿಗೆ, ಮತ್ತು ನನ್ನಂಥ ಕಡಲುಗಳ್ಳನಿಗೆ ಎಂದೂ ಅತ್ಯಂತ ಪ್ರಮಾಣಿಕ ಮಿತ್ರನಾದ ಅಲ್ಲಿರುವ ಆ ಪ್ರಿಯ ಉಪದೇಶಕನಿಗೂ ಸಲ್ಲಬೇಕು" ಎಂದು ಅವನಿಗೆ ಹೇಳುತ್ತೇನೆ" ಎಂದನು.

ಆಮೇಲೆ ಅವನು ಧಾರಾಕಾರವಾಗಿ ಕಂಬನಿ ಸುರಿಸಿದನು; ಎಲ್ಲರೂ ಹಾಗೆಯೇ ಮಾಡಿದರು. ಬಳಿಕ ಯಾರೋ ದನಿಯೆತ್ತಿದರು: "ಅವನಿಗೋಸ್ಕರ ಚಂದಾ ಎತ್ತೋಣ, ಚಂದ ಎತ್ತೋಣ" ಆ ಉದ್ದೇಶದಿಂದ ಐದಾರು ಜನ ಮುಂದೆ ಬಂದರು. ಆಗ ಯಾರೋ ಕೂಗಿದರು: "ಅವನು ಟೋಪಿಯನ್ನು ಎಲ್ಲರ ಮುಂದಕ್ಕೂ ಕಳಿಸಲಿ!" ಆಮೇಲೆ ಎಲ್ಲರೂ ಹಾಗೆಯೇ ಹೇಳಿದರು, ಆ ಉಪದೇಶಕನೂ ಕೂಡಿ.

ಆಗ ರಾಜ ಕಣ್ಣುಜ್ಜಿಕೊಳ್ಳುತ್ತಾ ತನ್ನ ಟೋಪಿಯನ್ನು ಹಿಡಿದುಕೊಂಡು ಎಲ್ಲರ ಬಳಿಗೂ ಹೋದನು; ದೂರದೇಶದಲ್ಲಿರುವ ಕಡಲುಗಳ್ಳರ ಬಗೆಗೆ ಇಷ್ಟು ಔದಾರ್ಯದಿಂದ ತಡೆದುಕೊಳ್ಳುತ್ತಿರುವುದಕ್ಕಾಗಿ ಸಭೆಯಲ್ಲಿದ್ದ ಎಲ್ಲರನ್ನೂ ಕೃತಜ್ಞತೆಯಿಂದ ಹರಸಿದನು, ಕೊಂಡಾಡಿದನು. ಕ್ಷಣಕ್ಕೊಬ್ಬಳು ಮುದ್ದಾದ ಹುಡುಗಿ ಅವನ ಬಳಿಗೆ ಬಂದು ಕಂಬನಿ ತುಂಬಿದ ತನ್ನ ಮುಖವನ್ನು ಎತ್ತಿ ಅವನನ್ನು ಜ್ಞಾಪಕದಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಚುಂಬಿಸಲು ಅಪ್ಪಣೆ ಬೇಡುತ್ತಿದ್ದರು ಅವನು ಅದಕ್ಕೆ ಸಮ್ಮತಿಸುತ್ತಿದ್ದನು. ಕೆಲವರನ್ನಂತೂ ಅವನು ಬಿಗಿದಪ್ಪಿ ಐದಾರುಬಾರಿ ಚುಂಬಿಸಿದನು. ಇನ್ನೊಂದುವಾರ ಇಲ್ಲೇ ಇರಬೇಕೆಂದು ಜನರು ಕೇಳಿಕೊಂಡರು. ಪ್ರತಿಯೊಬ್ಬನಿಗೂ ಅವನು ತನ್ನ ಮನೆಯಲ್ಲಿ ಉಳಿದುಕೊಳ್ಳಬೇಕೆಂದು ಆಸೆಯಾಯಿತು ; ಅದನ್ನು ತಾನು ಒಂದು ವಿಶೇಷ ಗೌರವವೆಂದು ಭಾವಿಸುವುದಾಗಿ ಪ್ರತಿಯೊಬ್ಬನೂ ಹೇಳಿದನು. ಆದರೆ ಅವನು ಇದೇ ಶಿಬಿರಕೂಟದ ಕಡೆಯ ದಿನವಾಗಿರುವುದರಿಂದ ಅದು ಸಾಧ್ಯವಿಲ್ಲವೆಂದೂ, ತಾನು ತತ್‌ಕ್ಷಣವೇ ಹಿಂದೂಸಾಗರಕ್ಕೆ ತೆರಳಿ ಕಡಲುಗಳ್ಳರ ಮೇಲೆ ಪ್ರಯೋಗ ನಡಸುವ ಆತುರದಲ್ಲಿರುವುದಾಗಿಯೂ ಉತ್ತರಿಸಿದನು

ಅಲ್ಲಿಂದ ನಾವು ತೆಪ್ಪಕ್ಕೆ ಹಿಂದಿರುಗಿದಾಗ ಮತ್ತು ತಾನು ಸಂಪಾದಿಸಿದ್ದ ಹಣವನ್ನು ಅವನು ಎಣಿಸಿದಾಗ, ತನ್ನ ಬಳಿ ಎಂಬತ್ತೇಳು ಡಾಲರುಗಳೂ ಎಪ್ಪತ್ತೈದು ಸೆಂಟುಗಳೂ ಇದ್ದುದು ಅವನಿಗೆ ಕಂಡುಬಂತು. ಮೂರು ಜಾಡಿಗಳ ಭರ್ತಿ ವಿಸ್ಕಿಯನ್ನೂ ಅವನು ಎಗರಿಸಿಕೊಂಡು ಬಂದಿದ್ದನು ಕಾಡನ್ನು ದಾಟಿ ಇಲ್ಲಿಗೆ ತಾನು ಬರುತ್ತಿರುವಾಗ ಇವು ಬಂಡಿಯೊಂದರ ಕೆಳಗಿದ್ದುದು ಅವನ ಕಣ್ಣಿಗೆ ಬಿದ್ದಿತ್ತು; ತಾನು ಉಪದೇಶಕ ಪ್ರಾತವಹಿಸಿದ ಕಳೆದ ಎಲ್ಲ ದಿನಗಳಿಗಿಂತಲೂ ಈ ದಿನವೇ ಅತಿಲಾಭದಾಯಕವಾಗಿತ್ತೆಂದು ನಮ್ಮ ರಾಜ

ನುಡಿದನು ಮಾತಾಡಿ ಪ್ರಯೋಜನವಿಲ್ಲವೆಂದೂ, ಇಂಥುದೊಂದು ಶಿಬಿರಕೂಟದೊಂದಿಗೆ ವ್ಯವಹರಿಸುವಲ್ಲಿ ಕಡಲುಗಳ್ಳರ ಮುಂದೆ ವಿಧರ್ಮಿಗಳು ಕೆಲಸಕ್ಕೆ ಬಾರದವರೆನಿಸುತ್ತಾರೆ ಎಂದನು.

ಡ್ಯೂಕನಾದರೋ ರಾಜನು ಕಾಣಿಸಿಕೊಳ್ಳುವವರೆಗೂ ತಾನು ಮಾಡಿದ ಕೆಲಸವೇ ಹೆಚ್ಚಿನದೆಂದು ತಿಳಿದಿದ್ದನು ; ಆ ಬಳಿಕ ಅದಕ್ಕೆ ಅಷ್ಟು ಬೆಲೆಗೊಡಬಾರದೆಂದು ಅರಿತು ಕೊಂಡನು. ಅವನು ಆ ಮುದ್ರಣಾಲಯದಲ್ಲಿ ರೈತರಿಗೆ ಸಣ್ಣಪುಟ್ಟ ಕೆಲಸಗಳನ್ನು— ಕುದುರೆಗಳಿಗೆ ಸಂಬಂಧಿಸಿದ ಜಾಹಿರಾತುಗಳನ್ನು-ಮಾಡಿಕೊಟ್ಟು ನಾಲ್ಕು ಡಾಲರುಗಳಷ್ಟು ಹಣವನ್ನು ಸಂಪಾದಿಸಿದ್ದನು; ಮತ್ತು ಪ್ರತಿಕೆಗಳಿಗಾಗಿ ಹತ್ತು ಡಾಲರುಗಳ ಬೆಲೆಯು ಪ್ರಕಟನೆಗಳನ್ನು ಸಂಪಾದಿಸಿ (ಅಚ್ಚುಮಾಡಿಕೊಟ್ಟು) ಅವರು ನಾಲ್ಕು ಡಾಲರುಗಳ ಮುಂಗಡವನ್ನು ಕೊಟ್ಟಲ್ಲಿ ತಾನು ಪತ್ರಿಕೆಯಲ್ಲಿ ಹಾಕಿಸುವುದಾಗಿ ಹೇಳಿದುದಾಗಿಯೂ ಅವರು ಹಾಗೆಯೇ ಮಾಡಿದರೆಂದೂ ತಿಳಿಸಿದನು. ಪತ್ರಿಕೆಯ ವಾರ್ಷಿಕ ಚಂದಾ ಎರಡು ಡಾಲರುಗಳು; ಆದರೆ ತನಗೆ ತಲಾ ಅರ್ಧ ಡಾಲರು ಮುಂಗಡ ಕೊಡುವುದಾದರೆ ಚಂದಾ ಹಣವನ್ನು ಅಷ್ಟಕ್ಕೇ ಇಳಿಸುವುದಾಗಿ ಹೇಳಿ ಅವರನ್ನು ಚಂದಾಪಟ್ಟಿಗೆ ಸೇರಿಸಿಕೊಂಡನು; ಅವರು ಚಂದಾಹಣವನ್ನು ಎಂದಿನಂತೆ ಹಗ್ಗ-ಮಾಡುವ ನಾರಿನ ಮತ್ತು ಈರುಳ್ಳಿಯ ರೂಪದಲ್ಲಿ ಕೊಡುವವರಿದ್ದರು ತಾನು ಈಗತಾನೇ ಮುದ್ರಣಾಲಯವನ್ನ ಕೊಂಡಿರುವು ದಾಗಿಯೂ, ತನ್ನ ಕೈಲಾದ ಮಟ್ಟಿಗೆ ಬೆಲೆಯನ್ನು ಇಳಿಸಿರುವುದಾಗಿಯೂ, ನಗದು ವ್ಯಾಪಾರವನ್ನು ಮಾತ್ರ ಮಾಡುವುದಾಗಿಯೂ ತಿಳಿಸಿದನು. ತನ್ನ ಸ್ವಬುದ್ಧಿಯಿಂದ ತಾನೇ ರಚಿಸಿದ ಕವಿತೆಯ ತುಣುಕೊಂದನ್ನು--ಅದರಲ್ಲಿ ಮಧುರವೂ ದುಃಖಕರವೂ ಆದ ಮೂರೇ ಪದ್ಯಗಳಿದ್ದವು--ಹೊಂದಿಸಿಕೊಂಡನು ; ಅದಕ್ಕೆ "ಅಹುದು ಪುಡಿಪುಡಿಮಾಡು, ಕಠಿನಲೋಕವೆ, ನನ್ನ ಒಡೆಯುತ್ತಲಿಹ ಹೃದಯವಿದನು" ಎಂದು ಹೆಸರಿಟ್ಟನು. ಅದನ್ನು ಅಚ್ಚಿಗೆ ಜೋಡಿಸಿ ಸಿದ್ಧಪಡಿಸಿದನು, ಪತ್ರಿಕೆಯಲ್ಲಿ ಪ್ರಕಟಿಸುವುದಾಗಿಯೂ ಅದಕ್ಕಾಗಿ ಒಂದು ಸೆಂಟನ್ನೂ ತೆಗೆದುಕೊಳ್ಳುವುದಿಲ್ಲವೆಂದೂ ಹೇಳಿದನು. ಒಂಬತ್ತೂವರೆ ಡಾಲರುಗಳನ್ನು ತೆಗೆದುಕೊಂಡಿದ್ದನು; ತಾನು ಒಂದು ದಿವಸಕ್ಕೆ ಸಾಕೆನ್ನುವಷ್ಟು ತುಂಬಾ ಒಳ್ಳೆಯ ಕೆಲಸವನ್ನು ಮಾಡಿರುವುದಾಗಿ ಹೇಳಿದನು,

ತಾನು ಅವರಿಗಾಗಿ ಪುಕ್ಕಟೆ ಅಚ್ಚುಮಾಡಿಕೊಟ್ಟಿದ್ದ ಇನ್ನೊಂದು ಪ್ರಕಟನೆಯನ್ನೂ ನಮಗೆ ತೋರಿಸಿದನು ; ಏಕೆಂದರೆ ಅದು ನಮಗಾಗಿ ಮಾಡಿದ್ದಾಗಿತ್ತು. ಅದರಲ್ಲಿ ತನ್ನ ಹೆಗಲ ಮೇಲಿನ ಕೋಲೊಂದಕ್ಕೆ ಮೂಟೆಯೊಂದನ್ನು ಸಿಕ್ಕಿಸಿಕೊಂಡು ಓಡಿಹೋಗುತ್ತಿರುವ ನೀಗ್ರೋವೊಬ್ಬನ ಚಿತ್ರವಿತ್ತು ಅದರ ಅಡಿಯಲ್ಲಿ "೩೦೦ಡಾಲರುಗಳ ಬಹುಮಾನ" ಎಂದು ಬರೆಯಲಾಗಿತ್ತು. ಅದರಲ್ಲಿನ ವರ್ಣನೆ ಜಿಮ್ಮನದಾಗಿತ್ತು; ಅದು ಅವನನ್ನು ಕರಾರುವಾಕ್ಕಾಗಿ ವರ್ಣಿಸಿತ್ತು. ಅವನು ಕಳೆದ ಚಳಿಗಾಲದಲ್ಲಿ ನ್ಯೂಆರ್ಲಿಯನ್ಸಿಗೆ ನಲವತ್ತು ಮೈಲಿಗಳ ಕೆಳಗಿರುವ ಸೇಂಟ್ ಜಾಕಸ್ ತೋಟದಿಂದ ಪರಾರಿಯಾಗಿರುವು

ದಾಗಿಯೂ, ಪ್ರಾಯಶಃ ಉತ್ತರಕ್ಕೆ ಹೋದುದಾಗಿಯೂ ಅವನನ್ನು ಹಿಡಿದು ತಂದು ಕೊಡುವವರಿಗೆ ಬಹುಮಾನವನ್ನೂ, ತಗಲುವ ವೆಚ್ಚವನ್ನೂ ಕೊಡಲಾಗುವುದೆಂದೂ ತಿಳಿಸಿತ್ತು.

"ಈಗ, ರಾತ್ರಿ ಕಳೆದ ಮೇಲೆ ನಾವು, ಬೇಕಾದರೆ, ಹಗಲಹೊತ್ತಿನಲ್ಲೂ ಹೊರಗೆ ಹೋಗಬಲ್ಲೆವು. ಯಾರಾದರೂ ಇತ್ತ ಬರುತ್ತಿರುವುದನ್ನು ಕಂಡರೆ ಆಗ ನಾವು ಜಿಮ್ಮನ ಕೈಕಾಲುಗಳನ್ನು ಹಗ್ಗದಿಂದ ಕಟ್ಟಿಹಾಗಿ ಡೇರೆಯೊಳಗೆ ಅವನನ್ನು ನೂಕಿ, ಅವರಿಗೆ ಈ ಕೈಚೀಟಿಯನ್ನು ತೋರಿಸಿ ನಾವು ನದಿಯ ಮೇಲೆ ಬರುತ್ತಿರುವಾಗ ಇವನನ್ನು ಹಿಡಿದೆವೆಂದೂ, ಹಬೆದೋಣಿಯಲ್ಲಿ ಪ್ರಯಾಣ ಮಾಡದಿರುವುದಕ್ಕೆ ನಮ್ಮ ಬಡತನವೇ ಕಾರಣವೆಂದೂ, ಆದ್ದರಿಂದ ನಮ್ಮ ಸ್ನೇಹಿತರಿಂದ ಎರವಲು ತಂದ ಈ ಚಿಕ್ಕ ತೆಪ್ಪದ ಮೇಲೆ ಹೊರಟಿದ್ದೇವೆ, ಬಹುಮಾನವನ್ನು ಪಡೆಯಲು ಹೊರಟಿದ್ದೇವೆ, ಬೇಡಿಗಳನ್ನೂ ಸರಪಣಿಗಳನ್ನೂ ಬಳಸಿದ್ದರೆ ಅವು ಜಿಮ್ಮನಿಗೆ ಬಲು ಚೆನ್ನಾಗಿ ಒಪ್ಪುತ್ತಿದ್ದವು; ಆದರೆ ತುಂಬ ಬಡವರು ನಾವು ಎಂದು ನಾವು ಕಟ್ಟಿದ ಕಥೆಗೆ ಅನುಗುಣವಾಗುತ್ತಿರಲಿಲ್ಲ. ಅವು ತೀರಾ ಆಭರಣಗಳಂತಾಗುತ್ತಿದ್ದವು. ಹಗ್ಗಗಳೇ ಸರಿಯಾದ ಉಪಕರಣ— ಏಕೆಂದರೆ ನಾಟಕದ ರಂಗಸ್ಥಳದಲ್ಲಿ ಹೇಳುವಂತೆ ನಾವು ಐಕ್ಯಗಳನ್ನು ಕಾಪಾಡಿಕೊಂಡು ಬರಬೇಕು.

ಡ್ಯೂಕ್ ಬಲು ಬುದ್ಧಿಶಾಲಿಯೆಂದೂ, ಇನ್ನು ಹಗಲಹೊತ್ತಿನಲ್ಲಿ ಓಡಾಡಲು ನಮಗೆ ಯಾವ ತೊಂದರೆಯೂ ಇರದೆಂದೂ ನಾವೆಲ್ಲರೂ ಹೇಳಿದೆವು. ಡ್ಯೂಕ್ ಮುದ್ರಣಾಲದಲ್ಲಿ ನಡೆಸಿದ ಕೃತ್ಯದಿಂದ ಆ ಚಿಕ್ಕ ಊರಿನಲ್ಲಿ ತಲೆದೋರರಬಹುದೆಂದು ನಾವು ನಿರೀಕ್ಷಿಸಿದ್ದ ಗದ್ದಲಕ್ಕೆ ಸಿಕ್ಕಿಬೀಳದಷ್ಟು ದೂರಕ್ಕೆ ಸರಿದು, ಆ ರಾತ್ರಿ ಅನೇಕ ಮೈಲಿಗಳ ದೂರ ಪಯಣಿಸಬಲ್ಲೆವೆಂದು ಆಲೋಚಿಸಿದ್ದೆವು. ಆಮೇಲೆ ಬೇಕಿದ್ದರೆ ರೊಯ್ಯನೆ ನೇರವಾಗಿ ಸಾಗಬಹುದಾಗಿತ್ತು.

ನಾವು ತಲೆಯೆತ್ತಲಿಲ್ಲ, ಸದ್ದು ಮಾಡಲಿಲ್ಲ; ಹತ್ತು ಗಂಟೆಯ ತನಕ ಹೊರಗೆ ಹೋಗಲಿಲ್ಲ. ಊರನ್ನು ಬಿಟ್ಟು ಬಲುದೂರ ಸಾಗುತ್ತಿದ್ದೆವು. ಅದು ಪೂರ್ತಿ ಕಣ್ಮರೆಯಾಗುವ ತನಕ ನಾವು ನಮ್ಮ ಲಾಂದ್ರವನ್ನು ಹಚ್ಚಿ ಕಂಬಕ್ಕೆ ತಗುಲಿಹಾಕಲಿಲ್ಲ.

ಜಿಮ್ ಬೆಳಗಿನ ನಾಲ್ಕು ಗಂಟೆಯ ಸುಮಾರಿಗೆ ಕಾವಲು ಕೂರಲು ನನ್ನನ್ನು ಕರೆದನು. ಅವನು ಹೇಳಿದನು :

"ಹಕ್, ನಮಗೆ ಈ ಪ್ರಯಾಣದಲ್ಲಿ ಮುಂದೆ ಇನ್ನೆಷ್ಟುಮಂದಿ ರಾಜರು ಸಿಕ್ಕುವರೆಂದು ಎಣಿಸಿದ್ದೀಯೆ ?"

"ಇಲ್ಲ; ನನಗೆ ಹಾಗೆ ತೋರುವುದಿಲ್ಲ" ಎಂದೆ ನಾನು.

"ಸರಿ, ಹಾಗಾದರೆ ಸರಿಹೋಯಿತು. ಒಬ್ಬನೋ ಇಬ್ಬರೋ ರಾಜರಿದ್ದರೆ

ನಾನು ಚಿಂತಿಸುವುದಿಲ್ಲ; ಆದರೆ ಅಷ್ಟು ಸಾಕು. ಈ ರಾಜನೋ ಶುದ್ಧ ಕುಡುಕ, ಇವನಿಗಿಂತ ಡ್ಯೂಕ್ ಉತ್ತಮನೇನಲ್ಲ" ಎಂದನವನು.

ಫ್ರೆಂಚ್‌ಭಾಷೆ ಹೇಗಿರುತ್ತದೆ ಎಂಬುದನ್ನು ಕಿವಿಯಾರ ಕೇಳಲು ಜಿಮ್ ಅವನನ್ನು ಮಾತಿಗೆಳೆಯುತ್ತಿದ್ದನೆಂದು ನನಗೆ ಹೊಳೆಯಿತು. ಆದರೆ ಅವನೋ ತಾನು ಅನೇಕ ವರ್ಷಗಳಿಂದ ಈ ದೇಶದಲ್ಲಿ ನೆಲಸಿರುವುದರಿಂದಲೂ ಅಷ್ಟು ಕಾಲದಿಂದಲೂ ಕಷ್ಟ ನಷ್ಟಗಳಿಗೆ ಗುರಿಯಾಗುವುದರಿಂದಲೂ ತನಗೆ ಅದು ಮರೆತುಹೋಗಿದೆ ಎಂದನು.

## ೨೧

ಈ ವೇಳೆಗೆ ಸೂರ್ಯೋದಯವಾಗಿತ್ತು. ನಾವು ಸಾಗುಂಬರಿಯುತ್ತಿದ್ದೆವು ತೆಪ್ಪವನ್ನು ಎಲ್ಲೂ ಕಟ್ಟಿಹಾಕಲಿಲ್ಲ. ಕ್ರಮೇಣ ರಾಜನೂ ಡ್ಯೂಕನೂ ಮಂಕುಹಿಡಿದವರಂತೆ ಕಂಡುಬಂದರು; ಒಂದುಸಲ ಅವರು ನೀರಿಗೆ ಧುಮುಕಿ ಈಜಿಬಂದ ನಂತರ ಬಲು ಗೆಲವಾದರು. ಬೆಳಗಿನ ಉಪಹಾರವಾದ ಮೇಲೆ ರಾಜ ತೆಪ್ಪದ ಒಂದಂಚಿಗೆ ಹೋಗಿ ಕುಳಿತು, ತನ್ನ ಪಾದರಕ್ಷೆಗಳನ್ನು ತೆಗೆದು, ಷರಾಯಿಯನ್ನು ಮೇಲಕ್ಕೆ ಮುದುರಿಕೊಂಡು ತನ್ನ ಕಾಲುಗಳನ್ನು ನೀರಿಗೆ ಇಳಿಯಬಿಟ್ಟನು; ಆರಾಮವಾಗಿ ತನ್ನ ಹೊಗೆಕೊಳವೆಯನ್ನು ಹಚ್ಚಿ ತನ್ನ "ರೋಮಿಯೋ ಮತ್ತು ಜೂಲಿಯೆಟ್" ನಾಟಕವನ್ನು ಕಂಠಪಾಠ ಮಾಡತೊಡಗಿದನು. ಅದು ಅವನಿಗೆ ಚೆನ್ನಾಗಿ ಬಾಯಿಗೆಬಂದಮೇಲೆ ಅವನೂ ಡ್ಯೂಕನೂ ಜತೆಗೂಡಿ ಅಭ್ಯಾಸ ಮಾಡಲಾರಂಭಿಸಿದರು. ಒಂದೊಂದು ಮಾತನ್ನೂ ಹೇಗೆ ಆಡಬೇಕೆಂಬುದನ್ನು ಅವನಿಗೆ ಡ್ಯೂಕ್ ಪದೇಪದೇ ಕಲಿಸಬೇಕಾಗಿತ್ತು; ನಿಟ್ಟುಸಿರು ಬಿಡುವುದನ್ನೂ, ಎದೆಯಮೇಲೆ ಕೈಯಿಟ್ಟುಕೊಳ್ಳುವುದನ್ನು ಡ್ಯೂಕ್ ರಾಜನಿಗೆ ಕಲಿಸಿದನು. ಸ್ವಲ್ಪಹೊತ್ತಾದಮೇಲೆ ರಾಜನ ಅಭಿನಯ ಬಲು ಚೆನ್ನಾಗಿತ್ತೆಂದೂ, ಆದರೂ ಅವನು 'ರೋಮಿಯೋ!' ಎಂದು ಹಾಗೆ ಗೂಳಿಯಂತೆ ಗುಟುರುಗುಟ್ಟಬಾರದೆಂದೂ—ಬಲು ಮೃದುವಾಗಿ ಕ್ಷೀಣಸ್ವರದಿಂದ ಬಳಲುತ್ತ "ರೊ-ಒ-ಒ-ಮಿಯೋ"ಎಂಬಂತೆ ನುಡಿಯಬೇಕೆಂದೂ, ಕವಿಯ ಉದ್ದೇಶವೇ ಹೀಗೆಂದೂ ಡ್ಯೂಕ್ ಸೂಚಿಸಿದನು; ಏಕೆಂದರೆ, ನೀವು ಬಲ್ಲಂತೆ, ಜ್ಯೂಲಿಯಟ್ ಬಲು ಮುಂದ್ದಾದ ಪುಟ್ಟಹುಡುಗಿ. ಅಷ್ಟೆ.–ಅವಳು ಕತ್ತೆಯಹಾಗೆ ಕಿರಿಚುವುದಿಲ್ಲ.

ಬಳಿಕ ಅವರು ಡ್ಯೂಕ್ ಓಕ್‌ಮರದ ಹಲಗೆಯಿಂದ ರಚಿಸಿದ್ದ ಉದ್ದನೆಯ ಎರಡು ಖಡ್ಗಗಳನ್ನು ಹಿಡಿದು ನಿಂತರು; ಕತ್ತಿಯ ಕಾಳೆಗವನ್ನು ಅಭ್ಯಾಸ ಮಾಡತೊಡಗಿದರು, ಡ್ಯೂಕ್ ತನ್ನನ್ನು ಮೂರನೆಯ ರಿಚರ್ಡ್ ಎಂದು ಕರೆದುಕೊಂಡನು, ಅವನು ತೆಪ್ಪದ

ಮೇಲೆ ರಾಜ ಕಾಲುಂಜಾರಿ ನೀರಿಗುರುಳಿದನು. ಆದಾದಮೇಲೆ ಇಬ್ಬರೂ ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳುತ್ತ ಕುಳಿತು ತಾವು ಹಿಂದೆಂದೋ ನದಿಯಮೇಲೆ ಪಯಣಿಸುತ್ತಿದ್ದಾಗ ಕೈಕೊಂಡ ಬಗೆಬಗೆಯ ಸಾಹಸಕಾರ್ಯಗಳನ್ನು ಕುರಿತು ಮಾತಾಡಿಕೊಂಡರು.

ಮಧ್ಯಾಹ್ನದೂಟವಾದಮೇಲೆ ಡ್ಯೂಕ್ ಹೇಳಿದ;

"ಸರಿ, ಕೇಪೆಟ್ (ಫ್ರೆಂಚ್‌ದೊರೆ) ನಾವಿದನ್ನು ಪ್ರಥಮದರ್ಜೆಯ ಪ್ರದರ್ಶನ ವನ್ನಾಗಿ, ಮಾಡಬೇಕೆಂಬುದು, ನಿನಗೆ ಗೊತ್ತಷ್ಟೆ; ಆದ್ದರಿಂದ ನಾವು ಅದಕ್ಕೆ ಇನ್ನಷ್ಟನ್ನು ಸೇರಿಸಿಕೊಳ್ಳಬೇಕೆಂದು ನನಗೆ ತೋರುತ್ತದೆ. ಪ್ರೇಕ್ಷಕರು 'ಇನ್ನೊಮ್ಮೆ' 'ಮತ್ತೊಮ್ಮೆ' ಎಂದು ಕೇಳಿದಾಗ ಉತ್ತರಕೊಡಲು ನಮಗೆ ಏನಾದರೂ ಸ್ವಲ್ಪ ಅಗತ್ಯವಾಗುತ್ತದೆ.

"ಹಾಗೆಂದರೇನು, ಬಿಲ್ಜವಾಟರ್?"

ಡ್ಯೂಕ್ ಅದನ್ನು ವಿವರಿಸಿದನು, ಮತ್ತು ಹೀಗೆ ಹೇಳಿದನು:

"ನಾನು ಹೈಲೆಂಡ್ (ಸ್ಕಾಟ್ಲೆಂಡಿನ) ಗೆಲುವಿನ ಕುಣಿತವನ್ನೋ, ನಾವಿಕನ (ಇಂಗ್ಲೆಂಡಿನ) ಹಳ್ಳಿಯ ಕುಣಿತವನ್ನೋ ಕುಣಿದು ಉತ್ತರಕೊಡುತ್ತೇನೆ; ಮತ್ತು ನೀನು –ಸರಿ, ನೋಡೋಣ–ಓ ನನಗೆ ಹೊಳೆಯಿತು—ನೀನು ಹ್ಯಾಮ್ಲೆಟ್ಟಿನ ಸ್ವಗತ ಭಾಷಣ ವನ್ನು ಅಭಿನಯಪೂರ್ವಕವಾಗಿ ನಿರ್ವಹಿಸಬೇಕು."

"ಹ್ಯಾಮ್ಲೆಟ್ಟಿನ ಏನನ್ನು?"

"ಹ್ಯಾಮ್ಲೆಟ್ಟಿನ ಸ್ವಗತಭಾಷಣವನ್ನು, ನಿನಗೆ ಗೊತ್ತಷ್ಟೆ; ಅದು ಷೇಕ್ಸ್‌ಪಿಯರಿನಲ್ಲಿ ಅತ್ಯಂತ ಪ್ರಖ್ಯಾತವಾದದ್ದು. ಆಹ್, ಅದು ಭವ್ಯವಾದದ್ದು, ಭವ್ಯವಾದದ್ದು. ಅದು ಬಂತು ಎಂದರೆ ಚಪ್ಪಾಳೆ ಬೀಳುತ್ತದೆ. ನನ್ನ ಪುಸ್ತಕದಲ್ಲಿ ಅದಿಲ್ಲ—ನನ್ನ ಬಳಿ ಇರುವುದೊಂದೇ ಪುಸ್ತಕ—ಆದರೆ ನಾನದನ್ನು ಜ್ಞಾಪಕಮಾಡಿಕೊಂಡು ಕೂಡಿಸಬಲ್ಲೆ. ನಿಲ್ಲು, ನಾನೊಂದುಕ್ಷಣ ಹೀಗೆ ಹೋಗಿ ಹಾಗೆ ಬರುತ್ತೇನೆ, ನನ್ನ ನೆನಪಿನ ಭಂಡಾರದಿಂದ ಅದನ್ನು ಬಾಯಿಗೆ ತಂದುಕೊಳ್ಳುವುದು ಸಾಧ್ಯವೇ ಎಂಬುದನ್ನು ನೋಡುತ್ತೇನೆ."

ಅವನು ಆಲೋಚಿಸುತ್ತಾ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಹೆಜ್ಜೆಹಾಕುತ್ತಿದ್ದನು; ಆಗೊಮ್ಮೆ ಈಗೊಮ್ಮೆ ಭಯಂಕರವಾಗಿ ಹುಬ್ಬುಗಂಟಿಕ್ಕುತ್ತಿದ್ದನು; ಮರುಗಳಿಗೆಯಲ್ಲೇ ಹುಬ್ಬೇರಿಸುತ್ತಿದನು; ಅನಂತರ ತನ್ನ ಹಣೆಯಮೇಲೆ ಕೈಯನ್ನು ಅದುಮಿಕೊಂಡು, ಹಿಂದಕ್ಕೆ ತತ್ತರಿಸಿ, ಒಂದು ವಿಧವಾಗಿ ನರಳುತ್ತಿದ್ದನು. ಆ ಮೇಲೆ ಕಂಬನಿ ಗರೆಯುತ್ತಿದ್ದನು. ಆ ದೃಶ್ಯ ಬಲು ಸುಂದರವಾಗಿತ್ತು. ಅಮೇಲಾ ಮೇಲೆ ಅದು ಅವನಿಗೆ ಸಿಕ್ಕಿತು! ಗಮನವಿಟ್ಟು ಕೇಳಿ ಎಂದನು, ಒಂದು ಕಾಲನ್ನು ಮುಂದಕ್ಕೆ ನೀಡಿ, ಕೈಗಳನ್ನು ಮೇಲೆತ್ತಿಕೊಂಡು, ತಲೆಯನ್ನು ಸ್ವಲ್ಪ ಹಿಂದಕ್ಕೆಳೆದುಕೊಂಡು, ಆಕಾಶದ ಕಡೆಗೆ ಕಣ್ಣೆತ್ತಿ, ಅತಿ ಗಂಭೀರಭಾವವನ್ನು ಪ್ರದರ್ಶಿಸಿ ದನು. ಆಮೇಲೆ ಅರಚಿ ತಬ್ಬರಿಸಿ ಹಲ್ಲುಕಡಿಯತೊಡಗಿದನು. ಎಲ್ಲಾ ಆದಮೇಲೆ ತನ್ನ ಭಾಷಣದ ಉದ್ದಕ್ಕೂ ಅವನು ಕಿರಿಚುತ್ತಲೇ ಇದ್ದನು; ಸುತ್ತಲೂ ಕೈಗಳನ್ನು

ಝಾಡಿಸುತ್ತಾ, ಎದೆಯನ್ನು ಉಬ್ಬಿಸಿಕೊಳ್ಳುತ್ತಾ ಕುಣಿದು, ನನಗೆ ತಿಳಿದಮಟ್ಟಿಗೆ, ಅಭಿನಯಕಲೆಯ ಎಲ್ಲಾ ಶಿಖರಗಳನ್ನೂ ಗೆದ್ದಿದ್ದನು. ಇದು ಆ ಭಾಷಣ—ಅದನ್ನು ಅವನು ರಾಜನಿಗೆ ಕಲಿಸುತ್ತಿದ್ದಾಗಲೇ, ನಾನೂ ಬಲು ಸುಲಭವಾಗಿ ಕಲಿತೆ:—

ಉಳಿವುದೋ ಅಳಿವುದೋ; ಮುಸುಕಿರದ ದಬ್ಬಣವಿದುವೆ
ಅನಿತು ನಿಡುಂಬಾಳನಾಪತ್ತಾಗಿಸುವುದು;
ಏಕೆನಲು ಹೊರೆಗಳನು ಹೊರುವವರು ಯಾರು, ಬರ್ನ್ಂ ಕಾಡು
ಡನ್ಸಿವೇನಿಗೆ ನಡೆದುಂಬರುವತನಕ,
ಸಾವಿನಾಚೆಯ ಭೀತಿ ಯಾವುದೋ
ಮಹಾ ಪ್ರಕೃತಿಯ ಪಥವಾದ
ನಿಷ್ಕಪಟಿ ನಿದ್ದೆಯನು ಕೊಲ್ಲುಂವುದುಂ,
ನಾನರಿಯಂದಿಹ ಇತರ ಸಾಧನಗಳಿಗೆ ಹಾರುವ ಬದಲು
ಕ್ರೂರವಿಧಿ ಬಾಣಗಳ ನಾವು ಎಸೆವಂತೆ ಮಾಡುವುದುಂ,
ಎಂಬುದೊಂದಿಲ್ಲದಿದ್ದರೆ.
ನಮ್ಮನು ತಡೆದು ನಿಲ್ಲಿಸಲೆಬೇಕಾದ ಪರಿಗಣನೆ ಇಲ್ಲಿದೆ:
ಡನ್ಕನ್ನನೆಬ್ಬಿಸು ಕದವ ತಟ್ಟಿ! ಅದು ನಿನಗೆ ಸಾಧ್ಯವಾದೀತು;
ಏಕೆನಲುಂ ಸಹಿಸುವರು ಯಾರು ಕಾಲದಾಘಾತಗಳ ನವಮಾನಗಳನು.
ಪೀಡಕನ ಅನ್ಯಾಯವನ್ನು, ಗರ್ವಿಯವ ಹೇಳನವನು,
ಶಾಸನದ ತಾಮಸವನು,
ವಿಧ್ಯುಕ್ತ ಕಪ್ಪುಬಣ್ಣದ ರೂಢಿಯುಡುಗೆಗಳಲ್ಲಿ
ಸತ್ತಪಾಳಿನಲಿ ನಡುರಾತ್ರಿಯಲಿ ಮಸಣಗಳುಂ ಆಕಳಿಸುವಾಗ
ಅವನ ವೇದನೆಗಳಿಗೆ ಒದಗುವ ವಿಮೋಚನೆಯನುಂ,
ಯಾವುದರ ಸರಹದ್ದಿನಿಂದ ಪಯಣಿಗನಾವನೂ ಮರಳಿ ಬಾರನೋ
ಅಂಥುದೊಂದು ಅಗೋಚರ ಸೀಮೆ ಅಂಟುವಿಷದುಸಿರ ಹಬ್ಬಿಸುವುದು
ಲೋಕದ ಮೇಲೆ,
ಸಂಕಲ್ಪಗಳ ಹುಟ್ಟು ಬಣ್ಣವದರಿಂದ, ಗಾದೆಯಲ್ಲಿನ ಬಡವು ಬೆಕ್ಕಿನಂತೆ.
ರೋಗಗ್ರಸ್ತವಹುದು ಕೊರಗಿನಲ್ಲಿ;
ಮನೆ-ನೆತ್ತಿಗಳ ಮೇಲೆ ಇಳಿದ ಮೋಡಗಳೆಲ್ಲ
ಇದನು ಗಮನಿಸಿ ತಮ್ಮ ಧಾರೆಗಳನೋರೆಮಾಡುವವು,

ಕ್ರಿಯೆಯ ಹೆಸರನು ನೀಗಿಕೊಳ್ಳುವವು
ಎಂಬುದೊಂದಿಲ್ಲದಿದ್ದರೆ.
ಭಕ್ತಿಯಿಂದಾಸೆಪಡಬೇಕಾದ ಮುಗಿವು ಇದು. ಆದರೆ ಮೆಲ್ಲಗೆ, ಚೆಲುವೆ
ಒಫೇಲಿಯಾ ;

ತೆರೆಯದಿರು ನೀ ನಿನ್ನ ಹಾಲುಗಲ್ಲಿನ ದೊಡ್ಡಬಾಯನು,
ತೊಲಗು ಸಂನ್ಯಾಸಿನಿಯರಾವಾಸಕೆ–ಹೊರಡು !

ಸರಿ, ಮುದುಕನಿಗೆ ಆ ಭಾಷಣ ಮೆಚ್ಚುಗೆಯಾಯಿತು; ಬಲು ಬೇಗ ಕಲಿತು ಕೊಂಡನು, ಅತ್ಯುತ್ತಮವಾಗಿ ಹೇಳಬಲ್ಲವನಾದನು. ಅವನು ಅದಕ್ಕಾಗಿಯೇ ಹುಟ್ಟಿರುವನೋ ಎಂಬಂತಿತ್ತು. ಅವನು ಅದಕ್ಕೆ ಕೈಹಾಕಿ ಉದ್ರಿಕ್ತನಾದಾಗ ಸುತ್ತಲೂ ಕೈಯಾಡಿಸುತ್ತ, ಗಾಳಿಯನ್ನು ಬಗಿದಂತೆ ಕಿತ್ತಂತೆ ಮಾಡುತ್ತ, ಹಿಮ್ಮೆಟ್ಟುತ್ತ ಪಠಿಸುತ್ತಿದ್ದ ರೀತಿ ಬಲು ಸೊಗಸಾಗಿತ್ತು.

ಡ್ಯೂಕ್ ನಮ್ಮನ್ನು ಮೊದಲ ಬಾರಿಗೆ ಕಂಡಾಗಲೇ ಕೆಲವು ಕೈಚೀಟಿಗಳನ್ನು ಅಚ್ಚು ಮಾಡಿಕೊಂಡು ತಂದಿದ್ದ; ಆಮೇಲಿನ ನಮ್ಮ ಪಯಣದ ಎರಡು ಮೂರು ದಿನಗಳವರೆಗೂ ನಮ್ಮ ತೆಪ್ಪ ಅಸಾಮಾನ್ಯ ಚಟುವಟಿಕೆಗಳಿಂದ ತುಂಬಿಹೋಗಿತ್ತು: ಏಕೆಂದರೆ ಉದ್ದಕ್ಕೂ ಕತ್ತಿಕಾಳಗವೂ, ಅದರ ಅಭ್ಯಾಸವೂ–ಡ್ಯೂಕ್ ಅದನ್ನು ಹಾಗೆ ಕರೆಯುತ್ತಿದ್ದ–ನಡೆಯುತ್ತಿದ್ದುವಲ್ಲದೆ ಇನ್ನಾವುದಕ್ಕೂ ಅವಕಾಶವಿರಲಿಲ್ಲ. ಒಂದು ದಿನ ಬೆಳಗಾಗ ನಾವು ಆರ್ಕನ್ಸಾಸ್ ಪ್ರಾಂತವನ್ನು ದಾಟಿಹೋಗುತ್ತಿರುವಾಗ ನದಿಯ ದೊಡ್ಡ ತಿರುವಿನಲ್ಲಿ ಒಂದು ಚಿಕ್ಕ ಪಟ್ಟಣವಿರುವುದನ್ನು ಕಂಡೆವು. ಅಲ್ಲಿಗೆ ಮುಕ್ಕಾಲುಮೈಲಿ ಇದ್ದಿತೆನ್ನುವಲ್ಲಿ ಸೈಪ್ರೆಸ್ ತರುಗಳಿಂದ ಮರೆಯಾಗಿದ್ದ ಕೊಲ್ಲಿಯ ಬಾಯಬಳಿ ತೆಪ್ಪವನ್ನು ಕಟ್ಟಿಹಾಕಿದೆವು, ಜಿಮ್ ವಿನಾ ನಾವೆಲ್ಲರೂ ಹಾಯಿದೋಣಿಯನ್ನೇರಿಕೊಂಡು ಆ ಊರಿನಲ್ಲಿ ನಮ್ಮ ನಾಟಕಪ್ರದರ್ಶನಕ್ಕೆ ಅವಕಾಶವಿದೆಯೇ ಎಂಬುದನ್ನು ಪರಿಶೀಲಿಸಿಕೊಳ್ಳಲು ಹೊರಟೆವು.

ನಾವು ತುಂಬಾ ಅದೃಷ್ಟಶಾಲಿಗಳು; ಆದಿನ ಅಪರಾಹ್ನದಲ್ಲಿ ಅಲ್ಲೊಂದು ಸರ್ಕಸ್ ನಡೆಯುವುದಾಗಿತ್ತು. ಅದನ್ನು ನೋಡುವುದಕ್ಕಾಗಿ ಹಳ್ಳಿಹಳ್ಳಿಗಳಿಂದ ಬಗೆಬಗೆಯಾದ ಹಳೆಯ ಬಂಡಿಗಳಲ್ಲೂ, ಕುದುರೆಗಳಮೇಲೂ ಜನರು ಬಂದು ಸೇರುವುದು ಪ್ರಾರಂಭವಾಗಿತ್ತು. ಸರ್ಕಸ್ ರಾತ್ರಿಗೆ ಮುನ್ನವೇ ಮುಗಿಯುತ್ತಿದ್ದುದರಿಂದ, ನಮ್ಮ ಪ್ರದರ್ಶನಕ್ಕೆ ಬಲು ಒಳ್ಳೆಯ ಅವಕಾಶವಿತ್ತು. ಡ್ಯೂಕ್ ಪೌರಮಂದಿರವನ್ನು ಬಾಡಿಗೆಗೆ ಪಡೆದನು; ನಾವು ಸುತ್ತಮುತ್ತಲೂ ನಮ್ಮ ಜಾಹೀರಾತು–ಪತ್ರಿಕೆಗಳನ್ನು ಅಂಟಿಸಿದೆವು. ಅವುಗಳ ಒಕ್ಕಣೆ ಹೀಗಿತ್ತು:

ಷೇಕ್ಸ್‌ಪಿಯರ್ ನಾಟಕಗಳ ಪುನರುಜ್ಜೀವನ !!!
ಚಮತ್ಕಾರವಾದ ಆಕರ್ಷಣೆ !

ಒಂದು ರಾತ್ರಿ ಮಾತ್ರ!
ಜಗತ್ಪ್ರಸಿದ್ಧ ದುರಂತ–ನಟರಾದ
ಲಂಡನ್ನಿನ ಡ್ರೂರಿಲೇನ್ ಥಿಯೇಟರಿನ ಕಿರಿಯ ಡೇವಿಡ್ ಗ್ಯಾರಿಕ್—
ಮತ್ತು
ಲಂಡನ್ನಿನ ಪಿಕ್ಕಾಡಿಲ್ಲಿಯ ಪುಡ್ಡಿಂಗ್ ಲೇನಿನ ವೈಟ್‌ಚಾಪೆಲ್ಲಿನ ದಿ ರಾಯಲ್
ಹೇಮಾರ್ಕೆಟ್ ಥಿಯೇಟರಿನ ಮತ್ತು ದಿ ರಾಯಲ್ ಕಾಂಟಿನೆಂಟಲ್
ಥಿಯೇಟರುಗಳ ಹಿರಿಯ ಎಡ್ಮಂಡ್ ಕೀನ್—
ಅವರು ಷೇಕ್ಸ್‌ಪಿಯರಿನ 'ರೋಮಿಯೋ ಮತ್ತು ಜೂಲಿಯಟ್' ನಾಟಕದಲ್ಲಿ ಬರುವ
ಉಪ್ಪರಿಗೆಯ ಮೊಗಸಾಲೆಯ ದೃಶ್ಯವನ್ನು
ಭವ್ಯವಾಗಿ ಪ್ರದರ್ಶಿಸಲಿದ್ದಾರೆ.

ರೋಮಿಯೋ...............ಮಿ. ಗ್ಯಾರಿಕ್

ಜೂಲಿಯೆಟ್...............ಮಿ. ಕೀನ್

ಸಹಕರಿಸುವರು: ಇಡೀ ಕಂಪೆನಿಯವರು.
ಹೊಸ ವೇಷಭೂಷಣಗಳು, ಹೊಸ ದೃಶ್ಯಾವಳಿ, ಹೊಸ ಉಪಕರಣಗಳು
ಇದರ ಜತೆಗೆ:

ಮೂರನೆಯ ರಿಚರ್ಡ್ ನಾಟಕದಲ್ಲಿ ಬರುವ
ರಕ್ತವನ್ನು ಹೆಪ್ಪುಗಟ್ಟಿಸುವ, ಎದೆ ಜಲ್ಲೆನಿಸುವ, ಬಲು ಚಾತುರ್ಯದಿಂದ ಕೂಡಿದ
ಖಡ್ಗಯುದ್ಧ !!!

ಮೂರನೆಯ ರಿಚರ್ಡ್...............ಮಿ. ಗ್ಯಾರಿಕ್

ರಿಚ್ಮಂಡ್...............ಮಿ. ಕೀನ್

ಇದರ ಜತೆಗೆ
(ವಿಶೇಷ ಕೋರಿಕೆಯನ್ನು ಮನ್ನಿಸಿ)
ಹ್ಯಾಮ್ಲೆಟ್ಟಿನ ಅಮರ ಸ್ವಗತ ಭಾಷಣ !!
ಖ್ಯಾತಿವೆತ್ತ ಕೀನ್ ಅವರಿಂದ!
ಅವರು ಪ್ಯಾರಿಸ್ಸಿನಲ್ಲಿ ಇದನ್ನು 300 ರಾತ್ರಿಗಳವರೆಗೆ ಎಡೆಬಿಡದೆ ಅಭಿನಯಿಸಿದ್ದಾರೆ!
ಕೇವಲ ಒಂದು ರಾತ್ರಿಯ ಮಟ್ಟಿಗೆ ಇಲ್ಲಿ.
ಕಾರಣ: ಅವರು ಯೂರೋಪಿನಲ್ಲಿ ಅನಿವಾರ್ಯ ಕಾರ್ಯಕ್ರಮಗಳನ್ನಿಟ್ಟುಕೊಂಡಿರುವುದು!
ಪ್ರವೇಶಧನ 25 ಸೆಂಟುಗಳು; ಮಕ್ಕಳಿಗೆ ಮತ್ತು ಸೇವಕರಿಗೆ 10 ಸೆಂಟುಗಳು.

ಆಮೇಲೆ ನಾವು ಊರೊಳಗೆ ಅಲೆಯಹೊರಟೆವು. ಎಲ್ಲಾ ಅಂಗಡಿ ಮುಂಗಟ್ಟುಗಳೂ ಮನೆಗಳೂ ತುಂಬಾ ಹಳೆಯದಾಗಿ ಶಿಥಿಲವಾಗಿದ್ದವು; ಅವುಗಳ ಕದ ಬಾಗಿಲುಗಳು ಒಣಗಿಹೋಗಿ ಬಣ್ಣದ ಸೋಂಕನ್ನೇ ಕಂಡಿರಲಿಲ್ಲ. ನದಿ ಉಕ್ಕೇರಿ ನೀರು ಊರೊಳಗೆ ನುಗ್ಗಿದಾಗ ಅದಕ್ಕೆ ಸಿಲುಕದಿರಲೆಂಬ ಉದ್ದೇಶದಿಂದ ಅವುಗಳನ್ನು ಊರೆ ಗಾಲುಗಳಮೇಲೆ ನೆಲದಿಂದ ಮೂರುನಾಲ್ಕು ಅಡಿಗಳೆತ್ತರದಲ್ಲಿ ಕಟ್ಟಲಾಗಿತ್ತು. ಮನೆಗಳ ಸುತ್ತಲೂ ಚಿಕ್ಕಚಿಕ್ಕ ಕೈತೋಟಗಳಿದ್ದವು; ಅಲ್ಲಿ ಅವರು ಜಿಂಪ್ಸನ್‌ದಟ್ಟುಗಳು ಸೂರ್ಯಕಾಂತಿಯ ಹೂಗಳು, ಬೂದಿರಾಶಿಗಳು, ಹರಿದ ಪಾದರಕ್ಷೆಗಳು, ಒಡೆದ ಸೀಸೆಗಳು, ಹರಕು ಬಟ್ಟೆಗಳು ಮತ್ತು ಕೆಲಸಕ್ಕೆ ಬಾರದ ತಗಡಿನಡಬ್ಬಗಳು ಇವುಗಳನ್ನು ವಿನಾ ಇನ್ನೇನನ್ನೂ ಬೆಳೆದಂತೆ ತೋರಲಿಲ್ಲ. ನಾನಾಜಾತಿಯ ಮರದ ಹಲಗೆಗಳನ್ನು ತಂದು ಬೇಲಿ ಕಟ್ಟಿಕೊಂಡಿದ್ದರು; ಅವುಗಳಿಗೆ ಹೊಡೆದಿದ್ದ ಮೊಳೆಗಳು ಒಂದು ಕಾಲದವಲ್ಲ. ಅವು ಎಲ್ಲಾ ದಿಕ್ಕುಗಳಿಗೂ ಓಲಿದ್ದವು. ಸಾಮಾನ್ಯವಾಗಿ ಅವುಗಳ ಬಾಗಿಲಿಗೆ ಒಂದೇ ತಿರುಗಣಿ ಇತ್ತು—ಅದೂ ತೊಗಲಿನದು. ಕೆಲವು ಬೇಲಿಗಳಿಗೆ ಒಂದಲ್ಲ ಒಂದು ಕಾಲದಲ್ಲಿ ಸುಣ್ಣ ತೊಡದಿದ್ದರು, ಅದು ಕೊಲಂಬಸ್ಸಿನ ಕಾಲದಲ್ಲಿ ಎಂದು ಡ್ಯೂಕ್ ನುಡಿದನು; ಸುಮಾರು ಹಾಗೆಯೇ ಇತ್ತು. ತೋಟದಲ್ಲಿ ಹಂದಿಗಳೂ, ಹಂದಿಗಳನ್ನು ಓಡಿಸುವವರೂ ಇರುವುದು ಸಾಮಾನ್ಯ ದೃಶ್ಯವಾಗಿತ್ತು.

ಅಂಗಡಿ ಮುಂಗಟ್ಟುಗಳೆಲ್ಲವೂ ಒಂದೇ ಬೀದಿಯಲ್ಲಿದ್ದವು, ಅವುಗಳ ಮುಂದೆ ವಾಸಾರ್ಹವಾದ ಬಿಳಿಯ ಗೂಡಾರಗಳಿದ್ದವು; ಹಳ್ಳಿಗಾಡಿನ ಜನರು ಆಗೂಡಾರದ ಗೂಟಗಳಿಗೆ ಬರಿದಾದ ಒಣ-ಸರಕುಗಳನ್ನು ತುಂಬುವ ಪೆಟ್ಟಿಗೆಗಳಿದ್ದವು; ಅವುಗಳ ಮೇಲೆ ಹಗಲೆಲ್ಲ ಸೋಮಾರಿಗಳು ಬಂದು ಮಲಗುತ್ತಿದ್ದರು; ಅಲ್ಲದೆ ತಮ್ಮ ಬಾರ್ಲೋ ಚಾಕುಗಳಿಂದ ಅವುಗಳನ್ನು ಹೆರೆಯುತ್ತಿದ್ದರು, ತಂಬಾಕನ್ನು ಅಗಿಯುತ್ತ ಆಕಳಿಸುತ್ತ ಕಾಲುನೀಡಿಕೊಳ್ಳುತ್ತಿದ್ದರು—ತೀರಾ ಸಾಮಾನ್ಯಮಂದಿ. ಅವರೆಲ್ಲರೂ ಸಾಮಾನ್ಯವಾಗಿ ಧರಿಸಿದ್ದುದು ಚತ್ರಿಯಗಲದ ಹಳದಿಬಣ್ಣದ ಒಣಹುಲ್ಲಿನ ಟೋಪಿಯನ್ನೇ; ಅಂಗಿಗಳನ್ನಾಗಲೀ ಒಳ-ಅಂಗಿಗಳನ್ನಾಗಲೀ ತೊಟ್ಟಿರಲಿಲ್ಲ. ಪರಸ್ಪರ ಬಿಲ್, ಬಕ್, ಹ್ಯಾಂಕ್, ಜೋ, ಆ್ಯಂಡಿ ಎಂದು ಸಂಬೋಧಿಸುತ್ತಿದ್ದರು, ಸೋಮಾರಿಗಳಾಗಿ ಎಳೆದೆಳೆದು ಮಾತಾಡಿಕೊಳ್ಳುತ್ತಿದ್ದರು. ಕೆಟ್ಟಕೆಟ್ಟ ಮಾತುಗಳನ್ನು ಬಳಸುತ್ತಿದ್ದರು. ಗೂಡಾರದ ಒಂದೊಂದು ಗೂಟಕ್ಕೆ ಒಬ್ಬನಂತೆ ಅಸಂಖ್ಯಾತ ಸೋಮಾರಿಗಳು ಒರಗಿಕೊಂಡಿದ್ದರು. ತಂಬಾಕನ್ನು ಎರವಲು ಕೊಡುವಾಗ ಇಲ್ಲವೇ ಕೆರೆಯುವಾಗ—ಇವೆರಡು ಸಂದರ್ಭಗಳಲ್ಲಿ ವಿನಾ ಉಳಿದೆಲ್ಲ ವೇಳೆಗಳಲ್ಲಿ ಅವರು ತಮ್ಮ ಕೈಗಳನ್ನು ಪರಾಯಿ ಜೇಬಿನಿಂದ ಹೊರತೆಗೆಯುತ್ತಿರಲಿಲ್ಲ. ಅವರ ಸಮೂಹದಲ್ಲಿ ಸದಾಕಾಲವೂ ಕೇಳಿಬರುತ್ತಿದ್ದ ಮಾತೆಂದರೆ:

"ನನಗೊಂದಿಷ್ಟು ತಂಬಾಕನ್ನು ಕೊಡು, ಹ್ಯಾಂಕ್."

"ಕೊಡಲಾರೆ; ನನ್ನ ಬಳಿ ಒಂದೇ ಒಂದು ಹಳಕಿನಷ್ಟಿದೆ. ಬಿಲ್ಲನ್ನು ಕೇಳು" ಬಿಲ್ ಅವನಿಗೆ ಒಂದು ಹಳಕು ತಂಬಾಕನ್ನು ಕೊಡಬಹುದು; ಇಲ್ಲವೇ, ತನ್ನ ಬಳಿ ಇಲ್ಲವೇ ಇಲ್ಲವೆಂದು ಸುಳ್ಳು ಹೇಳಬಹುದು. ಈ ಸೋಮಾರಿಗಳಲ್ಲಿ ಕೆಲವರ ಬಳಿ, ಕಡೆಗೆ, ಒಂದು ಸೆಂಟು ಹಣವಾಗಲೀ ಒಂದು ಹಳಕು ತಂಬಾಕಾಗಲೀ ಎಂದೂ ಇರುವುದಿಲ್ಲ, ಅವರಿಗೆ ಬೇಕಾದ ಅಷ್ಟಿಷ್ಟನ್ನು ಅವರು ಎರವಲು ತರುತ್ತಾರೆ. ಅವರಲ್ಲಿ ಒಬ್ಬ ಇನ್ನೊಬ್ಬನಿಗೆ ಸಿಕ್ಕಿದಾಗ "ನೀನು ನನಗೆ ಒಂದು ಹಳಕಿನಷ್ಟು ಕೊಟ್ಟಿದ್ದರಾಗಿತ್ತು, ಜಾಕ್; ನನ್ನ ಬಳಿಯಿದ್ದ ಕಡೆಯ ಹಳಕನ್ನು ನಾನು ಈಗತಾನೆ ಬೆನ್ ಥಾಮ್ಸನ್ನನಿಗೆ ಕೊಟ್ಟುಬಿಟ್ಟೆ," ಎನ್ನುತ್ತಾನೆ. ಇದು ಪ್ರತಿಸಲವೂ ಅವನು ಹೇಳುವ ಅಪ್ಪಟ ಸುಳ್ಳು; ಆ ಮಂದಿಯ ಪರಿಚಯವಿಲ್ಲದವರಿಗೆ ವಿನಾ ಇದು ಯಾರನ್ನೂ ಮರುಳುಗೊಳಿಸದು ಜಾಕ್ ಈ ತಂತ್ರಕ್ಕೆ ಹೊಸಬನಲ್ಲ ಅವನು ಹೇಳುತ್ತಾನೆ.

"ನೀನು ಅವನಿಗೆ ಒಂದು ಹಳಕನ್ನು ಕೊಟ್ಟೆಯ, ಹೌದೆ? ಹಾಗೆ ಮಾಡಿದ್ದು ನೀನಲ್ಲ, ನಿಮ್ಮ ಅಕ್ಕನ ಬೆಕ್ಕಿನ ಮುತ್ತಜ್ಜಿ. ನನ್ನಿಂದ ನೀನು ಈ ಹಿಂದೆಯೇ ಪದೇ ಪದೇ ಸಾಲ ಪಡೆದಿದ್ದ ಹಳಕುಗಳನ್ನು ನನಗೆ ಕೊಟ್ಟುಬಿಡು, ಲೇಫ್ ಬಕ್‌ನರ್, ಆಮೇಲೆ ನಾನು ನಿನಗೆ ಒಂದೆರಡು ಟನ್ ತಂಬಾಕನ್ನು ಸಾಲ ಕೊಡುತ್ತೇನೆ; ನಾನು ನಿನ್ನನ್ನು ಅದರ ಮೇಲಿನ ಹಿಂದಿನ ಬಡ್ಡಿಯನ್ನೇನೂ ಕೇಳುವುದಿಲ್ಲ."

"ನಾನೊಮ್ಮೆ ನಿನಗೆ ಅದರಲ್ಲಿ ಕೆಲವನ್ನು ಕೊಟ್ಟೇಬಿಟ್ಟಿದ್ದೇನೆ."

"ಹೌದು ನೀನು ಕೊಟ್ಟೆ—ಸುಮಾರು ಆರು ಹಳಕುಗಳನ್ನು. ನೀನು ಒಳ್ಳೆಯ ಪೇಟೆಯ ತಂಬಾಕನ್ನು ನನ್ನಿಂದ ಸಾಲಪಡೆದು, ಕಪ್ಪಗಿರುವ ಘಾಟಾದ ತಂಬಾಕನ್ನು ಹಿಂತಿರುಗಿಸಿದೆ."

ಪೇಟೆ ತಂಬಾಕು ಚಪ್ಪಟೆಯಾದ ಕಪ್ಪು ಗುಳಿಗೆಗಳ ರೂಪದಲ್ಲಿರುತ್ತದೆ; ಆದರೆ ಈ ಮಂದಿ ತಿರುಚಿದ ತಂಬಾಕಿನೆಲೆಗಳನ್ನು ಜಗಿಯುತ್ತಾರೆ. ಅದನ್ನು ಇನ್ನೊಬ್ಬನಿಂದ ಎರವಲು ತಂದು ಸೇವಿಸುವಾಗ ಅದನ್ನು ಚಾಕುವಿನಿಂದ ಕತ್ತರಿಸುವ ತಂಟೆಗೇ ಅವರು ಹೋಗುವುದಿಲ್ಲ. ಅದನ್ನು ತಮ್ಮ ಹಲ್ಲುಗಳ ಮಧ್ಯದಲ್ಲಿ ಸಿಕ್ಕಿಸಿಕೊಂಡು ತಮ್ಮ ಕೈ ಬೆರಳುಗಳಿಂದ, ಅದು ಎರಡು ತುಂಡಾಗುವ ತನಕ ಎಳೆಯುತ್ತಿರುತ್ತಾರೆ. ತಂಬಾಕನ್ನು ಎರವಲು ಕೊಡುವವನು ತನ್ನ ಕೈಯಲ್ಲಿ ಉಳಿದ ಚೂರನ್ನು ನೋಡಿ ಸಪ್ಪೆಮುಖ ಹಾಕಿ ಹೇಳುತ್ತಾನೆ:

"ನೋಡಿಲ್ಲ ನನಗೆ ಆ ಹಳಕನ್ನು ಕೊಡು, ನೀನು ಈ ಗುಳಿಗೆಯನ್ನು ತೆಗೆದುಕೋ" ಎಲ್ಲಾ ಬೀದಿಗಳೂ ಮತ್ತು ಸಂದಿಗೊಂದಿಗಳೂ ಮಣ್ಣಿನಿಂದ ತುಂಬಿಹೋಗಿದ್ದವು;— ಕೆಲವೆಡೆಗಳಲ್ಲಿ ಮಣ್ಣು ಟಾರಿನಷ್ಟು ಕಪ್ಪಾಗಿದ್ದು ಒಂದಡಿಯಷ್ಟು ಆಳವಾಗಿತ್ತು; ಉಳಿದೆಡೆಗಳಲ್ಲಿ ಅದರ ಆಳ ಎರಡು ಮೂರು ಇಂಚುಗಳಷ್ಟಿತ್ತು. ಎಲ್ಲೆಲ್ಲೂ ಹಂದಿಗಳು

ಗುಡುಗುಟ್ಟುತ್ತಾ ಅಲೆಯುತ್ತಿದ್ದವು, ಮೈಯೆಲ್ಲ ನುಣ್ಣಾದ ಹೆಣ್ಣು ಹದಿಯೊಂದು ಗಂಡು ಹಂದಿಗಳ ಹಿಂಡಿನೊಂದಿಗೆ ಅಡ್ಡಾದಿಡ್ಡಿಯಾಗಿ ಬೀದಿಯಲ್ಲಿ ಬರುತ್ತಿರುವುದನ್ನೂ, ಅವುಗಳದಾಳಿಗೆ ಎಡೆಗೊಟ್ಟು ನೀವು ಬಳಿಸಿಕೊಂಡುಹೋಗುವಂತೆ ಮಾಡುತ್ತಿರುವುದನ್ನೂ ಮರಿಗಳು ತನ್ನ ಹಾಲನ್ನು ಕುಡಿಯುತ್ತಿರುವಾಗ ತಾನು ಅಂಗಾತನಾಗಿ ಮಲಗಿ ಕಣ್ಮುಚ್ಚಿ ಕಿವಿಗಳನ್ನಲ್ಲಾಡಿಸುತ್ತ ಕೈತುಂಬ ಸಂಬಳ ಬಂದಷ್ಟು ಆನಂದದಿಂದ ನಲಿಯುವುದನ್ನೂ ನೀವು ಕಾಣಬಹುದಿತ್ತು ಸ್ವಲ್ಪ ಹೊತ್ತಿನಲ್ಲೇ ಸೋಮಾರಿಯೊಬ್ಬನು "ಹಿ! ಹಾಗೆ ಮಗು! ಅವನನ್ನು ಹಾಗೆ ಸಿಕ್ಕಿಸಿಕೊ, ಟೈಗ್" ಎಂದು ಕೂಗಿಕೊಳ್ಳುವುದು ನಿಮಗೆ ಕೇಳಿ ಬರುತ್ತಿತ್ತು; ಆಗ ಅತಿ ದಾರುಣವಾಗಿ ಕುಂಯ್‌ಗುಡುತ್ತಾ ಹೆಣ್ಣು ಹಂದಿ ದೌಡಾಯಿಸು ತ್ತಿತ್ತು. ಅದರ ಒಂದೊಂದು ಕಿವಿಗೂ ಒಂದೋ ಎರಡೋ ನಾಯಿಗಳು ತಗುಲಿಬೀಳುತ್ತಿದ್ದವು. ಹಿಂದೆಯೇ ಮೂವತ್ತು ನಲವತ್ತು ನಾಯಿಗಳು ಬೆನ್ನಟ್ಟಿ ಬರು ತ್ತಿದ್ದವು. ಆಗ ಈ ಅಯೋಗ್ಯರೆಲ್ಲರೂ ಎದ್ದುನಿಂತು ಅವು ಕಣ್ಮರೆಯಾಗುವುದನ್ನೇ ನೋಡುತ್ತಾ, ತಾವು ಮಾಡಿದ ತಮಾಷೆಗಾಗಿ ನಗುತ್ತಾ, ಆ ಗದ್ದಲದಿಂದ ತೃಪ್ತಿ ಹೊಂದಿದಂತೆ ಕಂಡುಬರುವುದನ್ನು ನೀವು ನೋಡುತ್ತಿದ್ದಿರಿ. ಇನ್ನೊಂದು ನಾಯಿ—ಜಗಳ ಹುಟ್ಟಿಕೊಳ್ಳುವವರೆಗೂ ಅವರು ಯಥಾಪ್ರಕಾರ ಮಲಗುತ್ತಿದ್ದರು. ಒಂಟಿ ನಾಯೊಂದರ ಮೇಲೆ 'ಟರ್ಪೆಂಟೀನ್' ತೈಲವನ್ನು ಸುರಿದು ಬೆಂಕಿ ಹೊತ್ತಿಸುವುದ ನ್ನಾಗಲಿ, ಅದರ ಬಾಲಕ್ಕೆ ತಗಡಿನ ತವವನ್ನು ಕಟ್ಟಿ ಅದು ಸತ್ತೆನೋ ಕೆಟ್ಟೆನೋ ಎಂದು ಓಟ ಹಿಡಿಯುವುದನ್ನು ನೋಡುವುದನ್ನಾಗಲೀ ಬಿಟ್ಟರೆ. ನಾಯಿ—ಜಗಳವಲ್ಲದೆ ಇನ್ನಾವುದರಿಂದರಿಂದಲೂ ಅವರಿಗೆ ಎಚ್ಚರವಾಗುತ್ತಿರಲಿಲ್ಲ, ಪರಮ ಸಂತೋಷವುಂಟಾಗು ತ್ತಿರಲಿಲ್ಲ.

ನದಿಗೆ ಅಭಿಮುಖವಾಗಿದ್ದ ಕೆಲವು ಮನೆಗಳು ದಡಕ್ಕೆ ತೀರಾ ಅಂಟಿಕೊಂಡು ತಗ್ಗಿ ಬಾಗಿ ಇನ್ನೇನು ಉರುಳಿಬಿಡುವಂತಿದ್ದವು. ಜನ ಅವುಗಳನ್ನು ಬಿಟ್ಟುಹೋಗಿದ್ದರು ಕೆಲವು ಮನೆಗಳ ಒಂದು ಭಾಗದ ಕೆಳಗೆ ದಡ ಕೊರೆದು ಕೊಚ್ಚಿಹೋಗಿತ್ತು; ಆ ಭಾಗ ತೂಗಾಡುತ್ತಿತ್ತು, ಇಷ್ಟಾದರೂ ಅವುಗಳಲ್ಲಿ ಜನ ವಾಸಿಸುತ್ತಿದ್ದರು. ಅದೇನೋ ಬಲು ಅಪಾಯಕರವಾಗಿತ್ತು. ಏಕೆಂದರೆ ಒಮ್ಮೊಮ್ಮೆ ಇಡೀ ಒಂದು ಮನೆಯಷ್ಟು ಅಗಲವಾದ ನೆಲ ಒಂದೇ ಸಲ ಕುಸಿದು ಬೀಳುತ್ತದೆ. ಕೆಲವು ಸಲವಂತೂ ಕಾಲುಮೈಲಿಯಾಳದ ಪ್ರದೇಶ ಹಳ್ಳಬಿದ್ದು ಉದ್ದಕ್ಕೂ ಹಾಗೆಯೇ ಬೀಳುತ್ತ ಹೋಗಿ ಬೇಸಿಗೆ ಮುಗಿಯುವುದ ರೊಳಗೆ ನದಿಯೊಡಲನ್ನು ತಲಪುತ್ತದೆ. ನದಿ ತನ್ನ ದಡವನ್ನು ಕೊರೆದು ಬೀಳಿಸುತ್ತಲೇ ಇರುವುದರಿಂದ, ಇಂಥಾ ಊರು ಯಾವಾಗಲೂ ಹಿಂದಕ್ಕೆ ಹಿಂದಕ್ಕೆ ಸರಿಯುತ್ತಲೇ ಇರಬೇಕಾಗುತ್ತದೆ.

ಆ ದಿನ ಮಧ್ಯಾಹ್ನ ಸಮಯ ಹತ್ತಿರವಾಗುತ್ತ ಬಂದಂತೆಲ್ಲ ಬೀದಿಬೀದಿಗಳಲ್ಲಿ ಬಂಡಿಗಳ ಮತ್ತು ಕುದುರೆಗಳ ಸಂಚಾರ ದಟ್ಟೈಸುತ್ತ ಬಂತು; ಉದ್ದಕ್ಕೂ ಜನ ಬರುತ್ತಲೆ

ಇದ್ದರು. ಒಳನಾಡಿನಿಂದ ಬರುತ್ತಿದ್ದ ಜನ ಬುತ್ತಿ ಕಟ್ಟಿಕೊಂಡು ಬಂದಿದ್ದರು: ಬಂಡಿಗಳಲ್ಲಿ ಕುಳಿತು ಊಟ ಮಾಡುತ್ತಿದ್ದರು ವ್ಹಿಸ್ಕಿ ಕುಡಿತ ಅಸಾಧ್ಯವಾಗಿತ್ತು ; ಮೂರು ಜನಗಳನ್ನು ನಾನು ಕಂಡೆ. ಸ್ವಲ್ಪ ಹೊತ್ತಿನಲ್ಲಿ ಯಾರೋ ಕೂಗಿದರು :

"ಹಳೆಯ ಬೋಗ್ಸ್ ಇಲ್ಲಿ ಬರುತ್ತಿದ್ದಾನೆ!—ಹಳ್ಳಿಯಿಂದ ತಿಂಗಳಿಗೊಮ್ಮೆ ಇತ್ತ ಬಂದು ಸ್ವಲ್ಪ ಕುಡಿದು ಹೋಗುವ ಪದ್ಧತಿಯಂತೆ ಇತ್ತ ಬರುತ್ತಿದ್ದಾನೆ, ಗೆಳೆಯರೆ ! "

ಆ ಅಯೋಗ್ಯರೆಲ್ಲರಿಗೂ ಇದನ್ನು ಕೇಳಿ ಸಂತೋಷವಾದಂತೆ ಕಂಡುಬಂತು; ಬೋಗ್ಸ್‌ನ್ನು ಗೇಲಿಮಾಡು ವುದು ಅವರಿಗೆ ಹಿಂದಿನಿಂದ ಬಂದದ್ದೆಂದು ನನಗೆ ತೋರಿತು. ಅವರಲ್ಲೊಬ್ಬ ಹೇಳಿದ:

" ಈ ಸಲ ಇವನು ಯಾರನ್ನು ಸುಲಿಗೆ ಮಾಡುತ್ತಾನೋ ನಾನು ಕಾಣೆ ! ಕಳೆದ ಇಪ್ಪತ್ತು ವರುಷಗಳಲ್ಲಿ ತಾನು ಸುಲಿಗೆ ಮಾಡಬೇಕೆಂದಿದ್ದವರನ್ನೆಲ್ಲ ಇವನು ಸುಲಿಗೆ ಮಾಡಿಬಿಟ್ಟಿದ್ದರೆ, ಈಗಾಗಲೇ ಇವನು ಸಾಕಷ್ಟು ಹೆಸರುವಾಸಿಯಾಗಿರಬೇಕು. "

ಇನ್ನೊಬ್ಬ ಹೇಳಿದ, "ಹಳೆಯ ಬೋಗ್ಸ್ ನನ್ನನ್ನು ಬೆದರಿಸಿದರಾಗಿತ್ತು, ಏಕೆಂದರೆ ಆಗ ಇನ್ನು ಒಂದು ಸಾವಿರ ವರುಷಕಾಲ ಸಾಯುವುದಿಲ್ಲವೆಂಬುದನ್ನು ತಿಳಿಯಲಾದೀತು, "

ಆಗ ಬೋಗ್ಸ್ ಕಿರಿಚುತ್ತಾ ರೆಡ್ ಇಂಡಿಯನ್ನಿನಂತೆ ಅರಚುತ್ತಾ ಕುದುರೆಯ ಮೇಲೆ ನುಗ್ಗಿ ಬಂದನು. ಅವನು ಅಬ್ಬರಿಸುತ್ತಿದ್ದನು:

"ದಾರಿ ಬಿಟ್ಟು ತೊಲಗಿ, ಅಲ್ಲಿಂದ. ನಾನು ಯುದ್ಧಮಾರ್ಗ ಹಿಡಿದಿದ್ದೇನೆ; ಹೆಣದ ಪೆಟ್ಟಿಗೆಗಳ ಬೆಲೆ ಏರಲಿದೆ."

ಅವನು ಕುಡಿದಿದ್ದ, ಜೀನಿನ ಮೇಲೆ ಹಾಗೆ ಹೀಗೆ ತೂಗಾಡುತ್ತಿದ್ದ. ಅವನಿಗೂ ಐವತ್ತರ ಮೇಲೆ ವಯಸ್ಸಾಗಿತ್ತು. ಅವನ ಮುಖ ಬಲು ಕೆಂಪಾಗಿತ್ತು. ಎಲ್ಲರೂ ಅವನ ಕಡೆಗೆ ತಿರುಗಿ ಕೂಗಿದರು, ಗಹಗಹಿಸಿ ನಕ್ಕರು, ತಿರಸ್ಕಾರದಿಂದ ಮಾತಾಡಿಸಿದರು. ಅವರನ್ನು ತಾನು ಕ್ರಮವಾಗಿ ಸರದಿಯ ಪ್ರಕಾರ ತರಾಟೆಗೆ ತೆಗೆದುಕೊಂಡು ಮಗ್ಗು ಮಲಗಿಸುವುದಾಗಿಯೂ, ತಾನೀಗಲೇ ಮುದಿಯ ಕರ್ನಲ್ ಷೆರ್ಬರ್ನನ್ನು ಕೊಲ್ಲುವುದಕ್ಕಾಗಿ ಇತ್ತ ಬಂದಿರುವುದರಿಂದ ಈಗ ತಡಮಾಡುವುದು ಸಾಧ್ಯವಿಲ್ಲವೆಂದೂ, ತನ್ನ ಸೂತ್ರ "ಮಾಂಸ ಮೊದಲು, ಚಮಚದಿಂದ ಚೂರುಪಾರು ಊಟವನ್ನು ಎತ್ತಿಕೊಳ್ಳುವುದು ಆಮೇಲೆ" ಎಂಬುದೆಂದೂ ಹೇಳಿದನು.

ಅವನು ನನ್ನನ್ನು ಕಂಡು, ಹತ್ತಿರಕ್ಕೇ ಬಂದು ಕೇಳಿದನು :

"ನೀನು ಎಲ್ಲಿಂದ ಬಂದೆ, ಮಗು? ಪ್ರಾಣಬಿಡಲು ಸಿದ್ಧನೋ ನೀನು?" ಅವನು ಮುಂದೆ ಹೋದ. ನನಗೆ ಹೆದರಿಕೆಯಾಯಿತು, ಆಗೊಬ್ಬ ಹೇಳಿದ:

"ಅವನ ಮಾತನ್ನು ಗಮನಿಸಬೇಕಾದ್ದಿಲ್ಲ, ಅವನು ಕುಡಿದಿರುವಾಗಲೆಲ್ಲ ಹಾಗೆಯೇ

ಮಾಡುತ್ತಾನೆ. ಇಡೀ ಆರ್ಕನ್ಸಾಸಿನಲ್ಲೇ ಅವನು ಬಲು ಒಳ್ಳೆಯ ಸ್ವಭಾವದ ದಡ್ಡಮುದುಕ–ಕುಡಿದಿರುವಾಗಲಾಗಲೀ, ನೆಟ್ಟಗಿರುವಾಗಲಾಗಲೀ ಅವನು ಯಾರಿಗೂ ಎಂದೂ ಕೆಡಕು ಮಾಡಿಲ್ಲ."

ಇಡೀ ಊರಿನಲ್ಲೇ ಬಲುದೊಡ್ಡದೆನಿಸಿದ್ದ ಅಂಗಡಿಯಮುಂದೆ ಬೋಗ್ಸ್ ಹೋಗಿ ನಿಂತು ಗೂಡಾರದ ತೆರೆಯೊಳಗೆ ಇಣಿಕಿ ನೋಡಿ ಗಿರಿಚಿದನು;

"ಈಚೆಗೆ ಬಾ ಷೆರ್‌ಬರ್ನ್! ಬಾ ಈಚೆಗೆ, ನೀನು ಮೋಸಮಾಡಿದ ಆಸಾಮಿ ಇಲ್ಲಿಗೆ ಬಂದಿದ್ದಾನೆ, ಬಂದು ಮಾತಾಡಿಸು. ನಾನು ಹುಡುಕಿಕೊಂಡು ಬಂದಿರುವುದೂ ನಿನ್ನನ್ನೇ, ಆಹುತಿ ತೆಗೆದುಕೊಳ್ಳುವುದೂ ನಿನ್ನನ್ನೇ."

ಷೆರ್‌ಬರ್ನನ್ನು ಅವನು ಬಾಯಿಗೆ ಬಂದಹಾಗೆ ಬೈಯ್ಯುತ್ತಲೇ ಇದ್ದನು. ಇದನ್ನೆಲ್ಲಾ ಕೇಳಿ ನಕ್ಕು ಮುಂದೆ ಸಾಗುವದರಿಂದ ಬೀದಿಗೆ ಬೀದಿಯೇ ತುಂಬಿಹೋಗಿತ್ತು. ಸ್ವಲ್ಪಹೊತ್ತಿನಮೇಲೆ ಸುಮಾರು ಐವತ್ತೈದು ವರುಷ ವಯಸ್ಸಿನ ಪ್ರತಿಷ್ಠಿತ ವ್ಯಕ್ತಿಯೊಬ್ಬನು—ಅವನು ಇಡೀ ಊರಿನಲ್ಲೇ ಅತಿ ಸೊಗಸಾದ ಉಡುಪನ್ನು ಧರಿಸಿದ್ದನೆನ್ನಬೇಕು – ಅಂಗಡಿಯ ಹೊರಗೆ ಬಂದು ನಿಂತನು; ಗುಂಪು ಕೂಡಿದ್ದ ಜನರು ಇಕ್ಕೆಲಗಳಲ್ಲೂ ಹಿಂದಕ್ಕೆ ಸರಿದು ಅವನಿಗೆ ದಾರಿಮಾಡಿಕೊಟ್ಟರು. ಅವನು ಬಲು ಗಂಭೀರವಾಗಿ ನಿಧಾನವಾಗಿ ಬೋಗ್ಸಿಗೆ ಹೇಳಿದನು:–

"ನನಗಿದು ಸಾಕಾಗಿಹೋಗಿದೆ; ಆದರೂ ಒಂದುಗಂಟೆಯ ತನಕ ನಾನು ಸಹಿಸಿಕೊಂಡಿರುತ್ತೇನೆ. ಒಂದು ಗಂಟೆಯ ತನಕ, ಅಷ್ಟೆ—ಜ್ಞಾಪಕದಲ್ಲಿಟ್ಟುಕೋ; ಆಮೇಲೆ ಒಂದು ನಿಮಿಷಕಾಲವೂ ನಾನು ಸುಮ್ಮನಿರುವುದಿಲ್ಲ ಒಂದು ಗಂಟೆಯಾದ ಮೇಲೆ ನೀನೇನಾದರೂ ಒಂದುಸಲ ನನ್ನ ಸುದ್ದಿಯೆತ್ತಿದರೆ, ನೀನು ಅಷ್ಟೂದೂರವೂ ಹೋಗಲಾರೆ, ನಾನು ನಿನ್ನನ್ನು ಹಿಡಿಯುತ್ತೇನೆ."

ಬಳಿಕ ಅವನು ಬೆನ್ನಿಸುಗಿಸಿ ಒಳಗೆ ಹೋದನು. ಗುಂಪಿನ ಉದ್ರೇಕ ಅಡಗಿತು; ಯಾರೂ ಅಲುಗಾಡಲಿಲ್ಲ; ನಗೆ ಅಳಿಸಿಹೋಯಿತು. ತನ್ನ ಬಲವನ್ನೆಲ್ಲಾ ಬಿಟ್ಟು ಕಿರಿಚುತ್ತಾ ಷೆರ್‌ಬರ್ನನ್ನು ಬೈಯುತ್ತಾ ಬೋಗ್ಸ್ ಕುದುರೆಯೇರಿ ಬೀದಿಯಮೇಲೆ ರೊಯ್ಯನೆ ಹೊರಟುಹೋದನು, ಹೋದವನು ಮತ್ತೆ ಹಿಂತಿರುಗಿ ಅಂಗಡಿಯ ಮುಂದೆ ನಿಂತು ಬೈಯ್ಯುತ್ತಲೇ ಇದ್ದನು, ಕೆಲವರು ಅವನನ್ನು ಮುತ್ತಿಕೊಂಡು, ಅವನ ಬಾಯನ್ನು ಮುಚ್ಚಿಸಲು ಪ್ರಯತ್ನಿಸಿದರು; ಅವನು ಸುಮ್ಮನಾಗಲಿಲ್ಲ; ಇನ್ನು ಹದಿನೈದು ನಿಮಿಷಗಳಲ್ಲಿ ಒಂದುಗಂಟೆ ಹೊಡೆಯುತ್ತದೆ, ಆದ್ದರಿಂದ ಅವನು ಮನೆಗೆ ಹೋಗಬೇಕೆಂದೂ–ತತ್‌ಕ್ಷಣವೇ ಅಲ್ಲಿಂದ ಕಾಲ್ತೆಗೆಯಬೇಕೆಂದೂ ಹೇಳಿದರು. ಅವರ ಮಾತು ಫಲಿಸಲಿಲ್ಲ. ಅವನು ಮಿತಿಮೀರಿ ಬೈದನು, ತನ್ನ ಟೋಪಿಯನ್ನು ಮಣ್ಣಿಗೆಸೆದು ಅದರಮೇಲೆ ತನ್ನ ಕುದುರೆಯನ್ನು ಹಾಗೂ ಹೀಗೂ ಎಳೆದಾಡಿಸಿ ಘೋರೆನ್ನುತ್ತ ಬೀದಿಯುದ್ದಕ್ಕೂ ತನ್ನ ಬಿಳಿಗೂದಲನ್ನು ಹಾರಿಸುತ್ತಾ ಜಡಪಡಿಸಿದನು. ಅವನ

ಹತ್ತಿರಕ್ಕೆ ಹೋಗುವುದು ಯಾರುಯಾರಿಗೆ ಸಾಧ್ಯವಾಯಿತೋ ಅವರೆಲ್ಲರೂ ಅವನನ್ನು ಕುದುರೆಯಿಂದ ಕೆಳಗಿಳಿಸಿಕೊಂಡು ಎಲ್ಲಾದರೂ ಕೂಡಿಹಾಕಿ ಶಾಂತಗೊಳಿಸಲು ಪ್ರಯತ್ನಿಸಿದರು. ಅವರ ಪ್ರಯತ್ನ ಕೈಗೂಡಲಿಲ್ಲ—ಅವನು ಮತ್ತೆ ಬೀದಿಯಲ್ಲಿ, ಹುಚ್ಚಾಗಿ ಅಲೆಯುತ್ತ ನುಗ್ಗಿ ಷೆರ್‌ಬರ್ನನನ್ನು ಮತ್ತೆ ದೂಷಿಸಲು ತೊಡಗುತ್ತಿದ್ದರು. ಆಗ ಯಾರೋ ಸಲಹೆ ಮಾಡಿದರು:

"ಹೋಗಿ ಅವನ ಮಗಳನ್ನು ಕರೆದುಕೊಂಡುಬನ್ನಿ—ಬೇಗ ಅವನ ಮಗಳನ್ನು ಕರೆದುಕೊಂಡು ಬನ್ನಿ; ಕೆಲವೊಮ್ಮೆ ಅವಳ ಮಾತನ್ನು ಕೇಳಿಯಾನು. ಅವನ ಬುದ್ಧಿಯನ್ನು ಯಾರಾದರೂ ತಿರುಗಿಸಬಲ್ಲರಾದರೆ, ಅವಳ ಕೈಯಲ್ಲಿ ಆದೀತು."

ಅದಕ್ಕಾಗಿ ಒಬ್ಬನು ಓಡಿದನು. ನಾನು ಸ್ವಲ್ಪದೂರ ಬೀದಿಯಲ್ಲಿ ನಡೆದು ನಿಂತೇ ಐದೋ ಹತ್ತೋ ನಿಮಿಷಗಳಲ್ಲಿ ಮತ್ತೆ ಬೋಗ್ಸ್ ಅಲ್ಲಿಗೆ ಬಂದ—ಈಸಲ ಅವನು ಕುದುರೆಯಮೇಲೆ ಬಂದಿರಲಿಲ್ಲ. ಅವನು ಬೀದಿಯಲ್ಲಿ ತೂರಾಡುತ್ತ ನನ್ನ ಕಡೆಗೆ. ಬರೀತಲೆಯಲ್ಲಿ ಬರುತ್ತಿದ್ದ. ಬಲಕ್ಕೊಬ್ಬ ಎಡಕ್ಕೊಬ್ಬ ಅವನ ರಟ್ಟೆಗಳನ್ನು ಬಿಗಿಹಿಡಿದು ನೂಕಿಕೊಂಡು ಬರುತ್ತಿದ್ದರು. ಶಾಂತನಾಗಿದ್ದರೂ ಅವನು ಅಸ್ವಸ್ಥನಾಗಿದ್ದಂತೆ ಕಂಡುಬಂತು. ಅವನು ಹಿಂದೆಬಿದ್ದಿರಲಿಲ್ಲ; ಅವನೇ ಮುಂದೆಮುಂದೆ ನೂಕಿಕೊಂಡು ಬರುತ್ತಿದ್ದನು. ಯಾರೋ ಕೂಗಿದರು.

"ಬೋಗ್ಸ್!"

ಯಾರು ಕರೆದರೆಂದು ನಾನು ತಿರುಗಿ ನೋಡಿದೆ; ಕರೆದವನು ಕರ್ನಲ್ ಷೆರ್‌ಬರ್ನ್. ಅವನು ಬೀದಿಯಲ್ಲಿ ಅಲುಗಾಡದೆ ನಿಂತಿದ್ದನು, ತನ್ನ ಬಲಗೈಯಲ್ಲಿ ಕೈಕೋವಿಯೊಂದನ್ನು ಎತ್ತಿ ಹಿಡಿದಿದ್ದನು—ಅವನು ಅದನ್ನೇನು ಗುರಿಯಿಟ್ಟು ಹಿಡಿದಿರಲಿಲ್ಲ, ಅದರ ನಳಿಗೆಯನ್ನು ಬಾನಕಡೆಗೆ ತಿರುಗಿಸಿದ್ದನು. ಅದೇ ಸಮಯಕ್ಕೆ ಚಿಕ್ಕಹುಡುಗಿಯೊಬ್ಬಳು ಓಡಿಬರುತ್ತಿರುವುದನ್ನು, ಅವಳೊಂದಿಗೆ ಯಾರೋ ಇಬ್ಬರು ಇರುವುದನ್ನೂ ನಾನು ಕಂಡೆನು. ಬೋಗ್ಸನೂ ಮತ್ತು ಅವನನ್ನು ಸುತ್ತುವರಿದಿದ್ದ ಜನರೂ ಯಾರು ಕರೆದರೆಂದು ಹಿಂದಿರುಗಿ ನೋಡಿದರು; ಕೈಕೋವಿಯನ್ನು ಕಂಡು ಅವರು ಒಂದು ಪಕ್ಕಕ್ಕೆ ಹಾರಿ ಸರಿದರು. ಕೈಕೋವಿಯ ಎರಡು ನಳಿಗೆಗಳೂ ಮೆಲ್ಲನೆ ಇಳಿದು ಒಂದು ಮಟ್ಟಕ್ಕೆ ಬಂದು ನೇರ ನಿಂತವು—ಎರಡು ನಳಿಗೆಗಳೂ ಸಜ್ಜಾದವು. ಬೋಗ್ಸ್ ತನ್ನ ಎರಡು ಕೈಗಳನ್ನೂ ಎತ್ತಿ, "ಓ ದೇವರೆ, ಕೊಲ್ಲದಿರು!" ಎಂದನು. ಬ್ಯಾಂಗ್! ಮೊದಲನೆಯ ಹೊಡೆತ ಬಿತ್ತು, ಅವನು ಗಾಳಿಯನ್ನು ಬಗೆದಂತೆ ಮಾಡಿ ತತ್ತರಿಸಿ ಹಿಮ್ಮೆಟ್ಟಿದ—ಬ್ಯಾಂಗ್! ಎರಡನೆಯ ಹೊಡೆತ; ಅವನು ಹಿಂದಕ್ಕೆ ಮುಗ್ಗರಿಸಿ ಧಡೀರೆಂದು ನೆಲದ ಮೇಲೆ ಬಿದ್ದು ತನ್ನ ಕೈಗಳನ್ನು ಹರಡಿದ. ಆ ಚಿಕ್ಕ ಹುಡುಗಿ ಕಿಟಾರೆಂದು ಚೀರಿ ನುಗ್ಗಿಕೊಂಡು ಬಂದಳು ತನ್ನ ತಂದೆಯಮೇಲೆ ಬಿದ್ದು ಹೊರಳಿ "ಓಹ್, ಅವನು ಇವನನ್ನು ಕೊಂದ, ಅವನು ಇವನನ್ನು ಕೊಂದ"ಎಂದು ಗೋಳಾಡಿದಳು. ಜನರು ಅವರಿಬ್ಬರನ್ನು

ಸುತ್ತುಗಟ್ಟಿದರು; ಏನಾಯಿತೆಂದು ನೋಡಲು ಕತ್ತನ್ನು ಮೇಲೆತ್ತಿ ನೋಡುತ್ತಾ ಒಬ್ಬರನ್ನೊಬ್ಬರು ತಳ್ಳುತ್ತಾ ತುಳಿಯುತ್ತಾ ಮುನ್ನುಗ್ಗಿದ್ದರು. ಒಳಗಿದ್ದವರು "ಹಿಂದೆ ಸರಿಯಿರಿ, ಹಿಂದೆ ಸರಿಯಿರಿ! ಗಾಳಿ ಬೀಸಲಿ, ಗಾಳಿ ಬೀಸಲಿ ಅವನಮೇಲೆ" ಎಂದು ಕೂಗುತ್ತಾ ಅವರನ್ನು ಹಿಂದಕ್ಕೆ ತಳ್ಳುತ್ತಿದ್ದರು.

ಕರ್ನಲ್ ಷೆರ್‌ಬರ್ನ್ ತನ್ನ ಕೈಕೋವಿಯನ್ನು ನೆಲದಮೇಲೆಸೆದು ಥಟಕ್ಕನೆ ತಿರುಗಿ ಹೊರಟುಹೋದನು.

ಬೋಗ್ಸನ್ನು ಒಂದು ಔಷಧಾಲಯಕ್ಕೆ ಕೊಂಡೊಯ್ದರು; ಜನಸಂದಣಿ ಅವರನ್ನು ಒಂದೇಸಮನೆ ಒತ್ತಿಕೊಂಡು ಬರುತ್ತಿತ್ತು, ಊರಿಗೆ ಊರೇ ಹಿಂಬಾಲಿಸಿತ್ತು. ನಾನು ಅಲ್ಲಿಗೆ ನುಗ್ಗಿ ಕಿಟಕಿಯಮುಂದೆ ನಿಂತೆ; ಅವನನ್ನು ಹತ್ತಿರದಲ್ಲೇ ಮಲಗಿಸಿದ್ದುದರಿಂದ ನಾನು ಅಲ್ಲಿಂದಲೇ ಒಳಗೆ ನಡೆಯುವುದನ್ನೆಲ್ಲ ಚೆನ್ನಾಗಿ ನೋಡಬಹುದಾಗಿತ್ತು. ಅವನನ್ನು ನೆಲದಲ್ಲಿ ಮಲಗಿಸಿದ್ದರು; ಒಂದು ಬೈಬಲ್‌ಪ್ರತಿಯನ್ನು ತಲೆಯ ಕೆಳಗಿರಿಸಿದ್ದರು; ಇನ್ನೊಂದನ್ನು ಅವನ ಎದೆಯಮೇಲೆ ತೆರೆದಿಟ್ಟಿದ್ದರು. ಅದಕ್ಕೆ ಮೊದಲೇ ಅವನ ಜುಬ್ಬವನ್ನು ಹರಿದುಹಾಕಿದ್ದರು; ಗುಂಡು ಅವನ ಮೈಯನ್ನು ಹೊಕ್ಕಸ್ಥಳವನ್ನು ನಾನು ನೋಡಿದೆ. ಅವನು ಹನ್ನೆರಡುಬಾರಿ ದೀರ್ಘವಾಗಿ ಉಸಿರೆಳೆದ, ಅವನು ಉಸಿರನ್ನು ಒಳಕ್ಕೆಳೆದುಕೊಂಡ ಪ್ರತಿಸಲವೂ ಅವನೆದೆಯಮೇಲಿನ ಬೈಬಲ್ ಸ್ವಲ್ಪ ಮೇಲೇಳುತ್ತಿತ್ತು, ಉಸಿರನ್ನು ಹೊರಕ್ಕೆಬಿಟ್ಟ ಪ್ರತಿಸಲವೂ ಅದು ಇಳಿಯುತ್ತಿತ್ತು–ಹೀಗೆಯೇ ಸ್ವಲ್ಪ ಹೊತ್ತು ನಡೆದಮೇಲೆ ಅವನು ಸ್ತಬ್ಧನಾದನು; ಪ್ರಾಣ ಹಾರಿಹೋಗಿತ್ತು. ಅಲ್ಲಿದ್ದವರು ಅಳುತ್ತ ಚೀರುತ್ತಲಿದ್ದ ಅವನ ಮಗಳನ್ನು ದೂರಕ್ಕೆ ಕರೆದುಕೊಂಡು ಹೋದರು; ಅವಳಿಗಿನ್ನೂ ಹದಿನಾರು ವರುಷ: ಬಲು ಚೆಲುವೆ, ಗಂಭೀರೆ; ಆದರೂ ತುಂಬಾ ಹೆದರಿ ಬಿಳಿಚಿಕೊಂಡಿದ್ದಳು. ಸರಿ; ಊರಿಗೆ ಊರೇ ಅಲ್ಲಿಗೆ ಕಿಟಕಿಯೊಳಗೆ ಇಣಿಕಿನೋಡಲು ಹೊರಳಿ ತಳ್ಳಿ ನೂಕಿಕೊಂಡು ಬಂದು ನೆರೆಯಿತು. ಆದರೆ ಕಿಟಕಿಯಬಳಿ ಸ್ಥಳಮಾಡಿಕೊಂಡು ಕುಳಿತಿದ್ದವರು ಅಲ್ಲಿಂದ ಕದಲಲೇ ಇಲ್ಲ ಅವರಹಿಂದೆ ನಿಂತಿದ್ದವರು "ಅಯ್ಯಾ, ನೀವು ಈಗಲೇ ಸಾಕಷ್ಟು ನೋಡಿದ್ದೀರಿ, ಇನ್ನೊಬ್ಬರಿಗೆ ಎಡೆಗೊಡದಂತೆ ನೀವು ಅಲ್ಲೇ ಇದ್ದುಬಿಡುವುದು ನಿಮಗೆ ಯೋಗ್ಯವೂ ಅಲ್ಲ, ಚೆನ್ನವೂ ಅಲ್ಲ ನಿಮ್ಮಂತೆಯೇ ಉಳಿದವರಿಗೂ ಅವರವರ ಹಕ್ಕುಗಳಿವೆ ನೋಡಿ" ಎಂದು ಉದ್ದಕ್ಕೂ ಹೇಳುತ್ತಲೇ ಇದ್ದರು.

ಒಬ್ಬರನ್ನೊಬ್ಬರು ಹಿಂದಕ್ಕೆ ದಬ್ಬುವುದು ಅತಿಯಾಯಿತು: ಇನ್ನು ಅಲ್ಲೇ ಇದ್ದರೆ ತೊಂದರೆಯಾದೀತೆಂದು ತಿಳಿದು ನಾನು ಜಾರಿಕೊಂಡೆ. ಗುಂಡು ಹಾರಿಸಿದ್ದನ್ನು ಕಂಡಿದ್ದವರೆಲ್ಲರೂ ಅದು ಹೇಗೆ ನಡೆಯಿತೆಂಬುದನ್ನು ವರ್ಣಿಸುತ್ತಿದ್ದರು; ಇಂಥ ಒಬ್ಬೊಬ್ಬನ ಸುತ್ತಲೂ ಒಂದೊಂದು ದೊಡ್ಡ ಗುಂಪು ಕತ್ತೆತ್ತಿ ಕಿವಿಯೊಡ್ಡಿ ನಿಂತಿತ್ತು. ಬೋಗ್ಸ್ ನಿಂತಿದ್ದ ಸ್ಥಳವಿದು, ಷೆರ್‌ಬರ್ನ್ ನಿಂತಿದ್ದ ಸ್ಥಳವಿದು ಎಂದೊಬ್ಬ ಮನುಷ್ಯ ಡೊಂಕು ಹಿಡಿಯ ಬೆತ್ತವೊಂದರಿಂದ ಗುರುತುಮಾಡುತ್ತಿದ್ದನು; ಅವನು ತೆಳ್ಳಗೆ ಎತ್ತರ

ವಾಗಿದ್ದನು; ಅವನ ಕೂದಲು ಬಲು ಉದ್ದವಾಗಿತ್ತು; ತನ್ನ ಹಿಂದಲೆಗೆ ಅಗ್ಗಿಷ್ಟಿಕೆಯ ಕೊಳವೆಯಾಕಾರದ, ಬಿಳಿಯ ತುಪ್ಪಟದ ದೊಡ್ಡ ಟೋಪಿಯನ್ನು ಧರಿಸಿದ್ದನು. ಅವನನ್ನು ಹಿಂಬಾಲಿಸುತ್ತಿದ್ದ ಮಂದಿ ಒಂದುಕಡೆಯಿಂದ ಇನ್ನೊಂದು ಕಡೆಗೆ ಅಲೆಯುತ್ತಿದ್ದರು ಅವನು ಮಾಡುವುದೆಲ್ಲವನ್ನೂ ನೋಡುತ್ತಿದ್ದರು, ತಮಗೆ ಅರ್ಥವಾಯಿತೆಂದು ಸೂಚಿಸಲು ತಲೆಯಲ್ಲಾಡಿಸುತ್ತಿದ್ದರು. ಸ್ವಲ್ಪ ಮುಂದಕ್ಕೆ ಬಾಗಿ ತಮ್ಮ ಮಂಡಿಗಳಮೇಲೆ ಕೈಯಿಟ್ಟುಕೊಂಡು, ಬೆತ್ತದ ತುದಿಯಿಂದ ಅವನು ಮಾಡುತ್ತಿದ್ದ ಗುರುತುಗಳನ್ನು ಗಮನವಿಟ್ಟು ನೋಡುತ್ತಿದ್ದರು. ಆಮೇಲೆ ಅವನು ಷೆರ್‌ಬರ್ನ್ ನಿಂತಿದ್ದ ಸ್ಥಳಕ್ಕೆ ಬಂದು ನೆಟ್ಟಗೆ ಗೂಟಹೊಡೆದಂತೆ ನಿಂತು ಹುಬ್ಬುಗಂಟಿಕ್ಕಿ ತನ್ನ ಟೋಪಿಯ ಮುಂಭಾಗವನ್ನು ಕಣ್ಣಮೇಲೆಳೆದುಕೊಂಡು "ಬೋಗ್ಸ್"ಎಂದು ಕಿರಿಚಿದನು; ತನ್ನ ಎತ್ತಿದ ಬೆತ್ತವನ್ನು ನಿಧಾನವಾಗಿ ಇಳಿಸಿ ಮಟ್ಟವಾಗಿ ಹಿಡಿದುಕೊಂಡು "ಬ್ಯಾಂಗ್!"ಎಂದನು, ಹಿಂದಕ್ಕೆ ಸರಿದು ಮತ್ತೆ "ಬ್ಯಾಂಗ್!" ಎಂದನು, ತಟ್ಟನೆ ನೆಲಕ್ಕೆ ಬೆನ್ನುಕೊಟ್ಟು ಉರುಳಿದನು, ಅದು ಹಿಂದೆ ನಡೆದದ್ದನ್ನು ನೋಡಿದ್ದವರು, ಅವನು ಈಗ ಮಾಡಿದಂತೆಯೇ ಅದು ನಡೆಯಿತು ಎಂದರು; ಹೌದು ಅದು ಹೀಗೆಯೇ ನಡೆಯಿತು ಎಂದರು. ಆಮೇಲೆ ಸುಮಾರು ಹತ್ತು ಹನ್ನೆರಡುಮಂದಿ ತಮ್ಮ ವ್ಹಿಸ್ಕಿಯ ಸೀಸೆಗಳನ್ನು ತೆಗೆದುಕೊಂಡು ಬಂದು ಅವನನ್ನು ಸತ್ಕರಿಸಿದರು.

ಸರಿ, ಆಮೇಲಾಮೇಲೆ ಯಾವನೋ ಒಬ್ಬ ಷೆರ್‌ಬರ್ನನ್ನು ಶಿಕ್ಷಿಸಬೇಕು ಎಂದನು. ಒಂದು ನಿಮಿಷದೊಳಗಾಗಿ ಎಲ್ಲರ ಬಾಯಲ್ಲೂ ಆ ಮಾತೇ; ನೇಣುಹಾಕಲು ಬೇಕಾಗುವ ಹತ್ತಿಯ ಹಗ್ಗಗಳನ್ನು ಸಿಕ್ಕಿಸಿಕ್ಕಿದ ಕಡೆಗಳಿಂದ ಶೇಖರಿಸುತ್ತಾ ಹುಚ್ಚೆದ್ದು ಕಿರಿಚುತ್ತಾ ಎಲ್ಲರೂ ಹೊರಟುಹೋದರು.

## ೨೨

ಅವರು ಬೊಬ್ಬೆಹಾಕುತ್ತಾ ರೆಡ್ ಇಂಡಿಯನ್ನರಂತೆ ರೊಚ್ಚಿಗೇಳುತ್ತಾ ಷೆರ್‌ಬರ್ನನ ಮನೆಯ ಕಡೆಗೆ ಗುಂಪುಕಟ್ಟಿ ನಡೆದರು; ಎದುರಿಗೆ ಬಂದದ್ದೆಲ್ಲವೂ ಅವರಿಗೆ ದಾರಿ ಬಿಡಬೇಕು, ಇಲ್ಲವೆ, ಅವರ ಕಾಲಿಗೆ ಸಿಕ್ಕಿ ಪುಡಿಪುಡಿಯಾಗಬೇಕು ಎನ್ನುವಂತಿತ್ತು, ನೋಡಲು ಭಯಂಕರವಾಗಿತ್ತು. ಆ ದೊಂಬಿಯ ಮುಂದೆ ಮಕ್ಕಳು ಚೀರುತ್ತಾ ದಾರಿ ಬಿಟ್ಟು ಸರಿಯಲು ಹೆಣಗುತ್ತಾ ಅತ್ತಿತ್ತ ಓಡಾಡುತ್ತಿದ್ದವು; ದಾರಿಯುದ್ದಕ್ಕೂ ಇಕ್ಕೆಲಗಳ ಕಿಟಕಿಗಳ ತುಂಬ ಹೆಂಗಸರ ತಲೆಗಳೇ ಕಿಕ್ಕಿರಿದಿದ್ದವು; ಸೊಗಸುಗಾರರೂ ಸೂಳೆಯರೂ ಬೇಲಿಯ ಮೇಲೆ ಕತ್ತೆತ್ತಿ ನೋಡುತ್ತಿದ್ದರು; ಮರಮರದ ಮೇಲೆಯೂ ನೀಗ್ರೋ

ಹುಡುಗರೂ ಏರಿ ಕುಳಿತಿದ್ದರು; ಆ ದೊಂಬಿ ತಮ್ಮ ಬಳಿಗೆ ಬಂದೊಡನೆಯೇ ಅವರೆಲ್ಲರೂ ಚೆದರಿ, ಅದಕ್ಕೆ ಸಿಕ್ಕಿಬೀಳದಷ್ಟು ದೂರಕ್ಕೆ ಹಿಮ್ಮೆಟ್ಟುತ್ತಿದ್ದರು. ಬಲುಮಂದಿ ಹೆಂಗಸರೂ ಹುಡುಗಿಯರೂ ಅಳುತ್ತಾ, ಸತ್ತೆವೋ ಕೆಟ್ಟೆವೋ ಎಂದು ಭಯಪಡುತ್ತಾ ದುಃಖಿಸುತ್ತಿದ್ದರು.

ಷೆರ್‌ಬರ್ನ್ನನ ಮನೆಯ ಬೇಲಿಯೆದುರಿಗೆ ಒಬ್ಬರಮೇಲೊಬ್ಬರು ಬಿದ್ದು ಒತ್ತಾಗಿ ಗುಂಪುಕಟ್ಟಿದ್ದರು. ಆ ಗದ್ದಲದಲ್ಲಿ ನಿಮ್ಮ ಮಾತೇ ನಿಮ್ಮ ಕಿವಿಗೆ ಬೀಳುವುದು ಸಾಧ್ಯವಿರಲಿಲ್ಲ. ಅದೊಂದು ಚಿಕ್ಕ ಇಪ್ಪತ್ತು ಅಡಿಯುದ್ದದ ಅಂಗಳ, ಕೆಲವರು "ಬೇಲಿಯನ್ನು ಕಿತ್ತೊಗೆಯಿರಿ! ಬೇಲಿಯನ್ನು ಕಿತ್ತೊಗೆಯಿರಿ!" ಎಂದು ಕಿರಿಚಿದರು. ಆಮೇಲೆ ಕಡಿಯುವುದು, ಮುರಿಯುವುದು, ಉರುಳಿಸುವುದು ಹೆಚ್ಚಿದ್ದು ಸಾಗಿತು; ಬೇಲಿ ಕೆಳಕ್ಕೆ ಬಿತ್ತು. ಜನಸಂದಣಿಯ ಮುಂದಿನ ಸಾಲು ಅಲೆಯಂತೆ ಒಳಕ್ಕೆ ಉರುಳಿತು.

ಆ ಸಮಯಕ್ಕೆ ಷೆರ್‌ಬರ್ನ್ ಜೋಡಿ-ನಳಿಗೆಯ ಬಂದೂಕವೊಂದನ್ನು ಕೈಯಲ್ಲಿ ಹಿಡಿದು ತನ್ನ ಮನೆಯ ಮುಂಭಾಗದ ಪವಳಿಯ ಛಾವಣಿಯ ಮೇಲೆ ಬಂದು ಒಂದು ಮಾತನ್ನೂ ಆಡದೆ ಪರಮಗಂಭೀರವಾಗಿ, ಉದ್ದೇಶಪೂರ್ವಕವಾಗಿ, ನೆಟ್ಟಗೆ ನಿಂತನು. ಜನರ ಕೋಲಾಹಲವಡಗಿತು, ಅಲೆ ಹಿಂದೆ ಸರಿಯಿತು.

ಷೆರ್‌ಬರ್ನ್ ಒಂದು ಮಾತನ್ನೂ ಆಡಲಿಲ್ಲ—ಕೆಳಗೆ ನೋಡುತ್ತಾ ಸುಮ್ಮನೆ ನಿಂತನು, ಆ ನಿರವತೆಯೇ ಮೈನಡುಕವನ್ನೂ ಅಸ್ವಸ್ಥತೆಯನ್ನೂ ತರುತ್ತಿತ್ತು. ಷೆರ್‌ಬರ್ನ್ ಆ ಮಂದಿಯ ಮೇಲೆ ಮೆಲ್ಲಗೆ ಕಣ್ಣುಹಾಯಿಸಿದನು. ಅವನ ದೃಷ್ಟಿ ಯಾರ ಯಾರ ಮೇಲೆ ಬಿತ್ತೋ ಅವರೆಲ್ಲರೂ ಅವನನ್ನು ದುರುಗುಟ್ಟಿ ನೋಡಲು ಕೊಂಚ ಪ್ರಯತ್ನ ಮಾಡಿದರು, ಆದರೆ ಸಾಧ್ಯವಾಗಲಿಲ್ಲ. ಅವರು ಕಣ್ಣನ್ನು ನೆಲಕ್ಕೆ ಇಳಿಸಿದರು, ತಪ್ಪಿಸಿಕೊಂಡು ಹೋಗಲು ಹವಣಿಸುವಂತೆ ಕಂಡುಬರುತ್ತಿದ್ದರು. ಕೂಡಲೇ ಷೆರ್‌ಬರ್ನ್ ಒಂದು ಬಗೆಯಾಗಿ ನಕ್ಕನು; ಆ ನಗೆ ಸಂತಸದ ಕೂಟಕ್ಕೆ ಸೇರಿದ್ದಲ್ಲ; ನೀವು ತಿನ್ನುತ್ತಿರುವ ರೊಟ್ಟಿಯಲ್ಲಿ ಮರಳು ಸಿಕ್ಕಿದಲ್ಲಿ ನಿಮಗೆ ಹೇಗಾಗುವುದೋ ಅಂಥಾ ಅನುಭವವನ್ನು ನಿಮಗೆ ತರುವಂಥಾದ್ದು.

ಆ ಬಳಿಕ ಅವನು ತಿರಸ್ಕಾರಭಾವದಿಂದ ಮೆಲ್ಲನೆ ನುಡಿದ;

"ಯಾರನ್ನಾದರೂ ನೀವು ದಂಡಿಸುವಿರೆನ್ನುವ ಭಾವನೆಯೇ ವಿಚಿತ್ರ! ಅದು ಹಾಸ್ಯಾಸ್ಪದವಾಗಿದೆ. ಒಬ್ಬ ಗಂಡಸನ್ನು ದಂಡಿಸಲು ಸಾಕಷ್ಟು ಎದೆಗಾರಿಕೆ ನಿಮಗಿದೆಯೆಂದು ನೀವು ತಿಳಿದಿರುವುದೀಗ ಸೋಜಿಗ! ಸಮಾಜದಿಂದ ಬಹಿಷ್ಕೃತಗಳೂ, ನಿರ್ಗತಿಕಳೂ, ಕೇಳುವವರಿಲ್ಲದವಳೂ ಆಗಿ ಇತ್ತ ಬರುವ ಹೆಂಗಸಿಗೆ ಮಸಿ ಬಳಿದು ಪುಟ್ಟಿ ಕಟ್ಟುವಷ್ಟು ಧೈರ್ಯ ನಿಮಗಿರುವುದೇ ಒಬ್ಬ ಗಂಡಸಿನ ಮೇಲೆ ಕೈ ಮಾಡುವಷ್ಟು ತ್ರಾಣ ನಿಮಗುಂಟೆಂದು ತಿಳಿಯಲು ಕಾರಣವಾಯಿತೆ? ನಿಮ್ಮಂಥ ಹತ್ತು ಸಾವಿರ ಮಂದಿ

ಮೇಲೆರಗಿ ಬಂದರೂ ಗಂಡಸಾಗಿರುವವನು ಸುರಕ್ಷಿತನಾಗಿರುತ್ತಾನೆ—ಹಗಲ ಹೊತ್ತಿನಲ್ಲಿ ನೀವು ಅವನ ಬೆನ್ನ ಹಿಂದಿಲ್ಲದಾಗ.

"ನಾನು ನಿಮ್ಮನ್ನು ಒಲ್ಲೆನೆ? ಬಲು ಸ್ಪಷ್ಟವಾಗಿ ಬಲ್ಲೆ. ನಾನು ದಕ್ಷಿಣ ಸೀಮೆಯಲ್ಲಿ ಹುಟ್ಟಿ ಬೆಳೆದವನು, ಉತ್ತರ ಸೀಮೆಯಲ್ಲಿ ಇದ್ದು ಬಂದವನು ; ಇಲ್ಲೂ ಅಲ್ಲೂ ಸಾಧಾರಣವಾಗಿ ಪರಿಸ್ಥಿತಿ ಏನೆಂಬುದನ್ನು ನಾನು ಬಲ್ಲೆ. ಉತ್ತರದಲ್ಲಾದರೋ ಗಂಡಸು ತನ್ನನ್ನು ತುಳಿದುಕೊಂಡು ಹೋಗುವ ಇಷ್ಟವಿದ್ದವರು ಹಾಗೆ ಮಾಡಿಕೊಳ್ಳಲಿ ಎಂದು ಎದೆಗೊಟ್ಟು ತೆಪ್ಪನಿರುತ್ತಾನೆ, ಮನೆಗೆ ಬಂದು ಅದನ್ನು ತಾಳಿಕೊಳ್ಳುವ ನಮ್ರತೆ ತನಗೊದಗಲಿ ಎಂದು ಪ್ರಾರ್ಥನೆ ಸಲ್ಲಿಸುತ್ತಾನೆ. ದಕ್ಷಿಣದಲ್ಲಿ ಹಾಗಲ್ಲ ; ಒಬ್ಬ ಗಂಡಸು ಏಕಾಕಿಯಾಗಿ ಹಗಲಹೊತ್ತಿನಲ್ಲಿ ಬಂಡಿಗಟ್ಟಳೆ ಜನರನ್ನು ತಡೆದು ನಿಲ್ಲಿಸಿ ಎಲ್ಲವನ್ನೂ ದೋಚಿ ಕೊಂಡು ಹೋಗುತ್ತಾನೆ, ನಿಮ್ಮ ಪತ್ರಿಕೆಗಳು ನಿಮ್ಮನ್ನು ಬಲು ಧೈರ್ಯಶಾಲಿಗಳೆಂದು ಕರೆಯುತ್ತವೆ, ಆದ್ದರಿಂದ ನೀವು ಇತರರೆಲ್ಲರಿಗಿಂತಲೂ ಹೆಚ್ಚು ಧೈರ್ಯಶಾಲಿಗಳೆಂದು ತಿಳಿದುಕೊಂಡಿದ್ದೀರಿ—ಆದರೆ ವಾಸ್ತವವಾಗಿ ನೀವು ಅವರಷ್ಟೇ ಧೈರ್ಯಶಾಲಿಗಳು, ಅವರಿಗಿಂತಲೂ ಹೆಚ್ಚು ಧೈರ್ಯಶಾಲಿಗಳೇನಲ್ಲ. ನಿಮ್ಮ ಪಂಚಾಯಿತರು ಕೊಲೆ ಪಾತಕಿಗಳನ್ನು ನೇಣು ಹಾಕುವುದಿಲ್ಲವೇಕೆ? ಕಾರಣ: ಅವನ ಸಂಗಡಿಗರು ಕತ್ತಲೆಯಲ್ಲಿ ನುಸಳಿಬಂದು ತಮ್ಮ ಬೆನ್ನಿಗೆ ಗುಂಡಿಟ್ಟು ಕೊಲ್ಲುವರೆಂದು ಅವರಿಗೆ ಭಯ—ಅವರು ಮಾಡುವುದೇ ಹಾಗೆ,

"ಆದ್ದರಿಂದಲೇ ಅವರು ಕೊಲೆಪಾತಕಿಯನ್ನು ಯಾವಾಗಲೂ ಬಿಡುಗಡೆಮಾಡುವುದು. ಆಮೇಲೊಬ್ಬ ನಿಜವಾದ ಗಂಡಸು ರಾತ್ರಿಯಹೊತ್ತಿನಲ್ಲಿ ನೂರುಮಂದಿ ಮೊಗವಾಡ ಧರಿಸಿದ ಹೇಡಿಗಳನ್ನು ಕಟ್ಟಿಕೊಂಡುಬಂದು ಆ ದುರುಳನನ್ನು ಶಿಕ್ಷಿಸುತ್ತಾನೆ. ನಿಮ್ಮೊಂದಿಗೆ ಅಂಥಾ ಗಂಡಸೊಬ್ಬನನ್ನು ತರದೇ ಹೋದದ್ದು ನಿಮ್ಮ ತಪ್ಪು; ಇನ್ನೊಂದು ತಪ್ಪು ಮೊಗವಾಡಗಳನ್ನು ಧರಿಸಿ, ಕತ್ತಲೆಯಾದಮೇಲೆ ಬಾರದೆಹೋದದ್ದು. ನೀವು 'ಭಾಗಶಃ ಗಂಡಸು' ಎನ್ನಬಹುದಾದೊಬ್ಬನನ್ನು—ಅಲ್ಲಿದ್ದಾನಲ್ಲ ಬಕ್‌ಹಾರ್ಕನೆಸ್ ಅವನನ್ನು-ಕಟ್ಟಿಕೊಂಡುಬಂದಿದ್ದೀರಿ. ಅವನು ನಿಮ್ಮನ್ನು ಹೊರಡಿಸಿಕೊಂಡು ಬಾರದಿದ್ದರೆ ನೀವಿದನ್ನು ಗಮನಕ್ಕೆ ತಂದುಕೊಳ್ಳುತ್ತಿರಲಿಲ್ಲ.

"ಬರುವ ಇಷ್ಟವೇ ನಿಮಗಿರಲಿಲ್ಲ. ಸಾಮಾನ್ಯ ಮನುಷ್ಯನಾದವನು ತೊಂದರೆಯನ್ನೂ ಅಪಾಯವನ್ನೂ ಬಯಸುವುದಿಲ್ಲ. ನಿಮಗೂ ತೊಂದರೆಯೂ ಅಪಾಯವೂ ಬೇಕಿಲ್ಲ. ಆದರೆ ಅರ್ಧ-ಗಂಡಸಾದವನೊಬ್ಬ—ಅಲ್ಲಿದ್ದಾನಲ್ಲ ಬಕ್‌ಹಾರ್ಕನೆಸ್‌ಅಂಥವನು—"ಅವನನ್ನು ದಂಡಿಸಿ! ಅವನನ್ನು ದಂಡಿಸಿ!"ಎಂದರೆ ಹಿಂದೇಟುಹಾಕಲು ನೀವು ಅಂಜುವಿರಿ ನಿಮ್ಮ ನಿಜರೂಪ ಬಯಲಾಗುವುದೆಂದು ನೀವು ಅಂಜುವಿರಿ ಆದ್ದರಿಂದ ನೀ ಕಿರಿಚುತ್ತೀರಿ ಆ ಅರ್ಧ-ಗಂಡಸಿನ ಬಾಲವನ್ನು ಭದ್ರವಾಗಿ ಹಿಡಿಯುತ್ತೀರಿ, ನೀವು ಮಾಡಲಿರುವ ಮಹಾ ಕಾರ್ಯಗಳಬಗೆಗೆ ಪ್ರತಿಜ್ಞೆ ತೊಡುತ್ತೀರಿ. ದೊಂಬಿ ಅತಿ ಹೇಯವಾದದ್ದು ; ಸೈನ್ಯದ ಹಣೆಯ

ಬರಹವೂ ಅದೇ—ಅದೂ ದೊಂಬಿಯೇ. ಅವರು ಹೋರಾಡುವುದು ತಮ್ಮ ಸ್ವಂತ ಧೈರ್ಯದಿಂದಲ್ಲ, ತಮ್ಮ ಮಂದಿಯಿಂದಲೂ, ತಮ್ಮ ಮೇಲಧಿಕಾರಿಗಳಿಂದಲೂ ಎರವಲು ತಂದ ಧೈರ್ಯದಿಂದ, ಗಂಡಸೊಬ್ಬನ ಮುಂದಾಳ್ತನವಿಲ್ಲದ ದೊಂಬಿಯಾದರೋ ತಿರಸ್ಕಾರಕ್ಕೂ ಅಯೋಗ್ಯವಾದದ್ದು. ಈಗ ನೀವು ಮಾಡಬೇಕಾಗಿರುವ ಕೆಲಸವಿಷ್ಟೇ : ಬಾಲ ಮುದುರಿಕೊಂಡು, ಮನೆಗೆ ಹೋಗಿ ಯಾವುದಾದರೊಂದು ಮೂಲೆಗೆ ತೆವಳಿಕೊಳ್ಳುವುದು. ನಿಜವಾದ ದಂಡನೆ ಯಾವುದಾದರೂ ನಡೆಯುವುದಾದಲ್ಲಿ ಅದು ದಕ್ಷಿಣದ ಪದ್ಧತಿಯಂತೆ ಕತ್ತಲೆಯಲ್ಲಿ ನಡೆಯುತ್ತದೆ; ಬರುವಾಗ ಅವರು ಮೊಗವಾಡ ಧರಿಸಿ ಬರುತ್ತಾರೆ, ಜತೆಗೊಬ್ಬ ಗಂಡಸನ್ನು ಕರೆದುಕೊಂಡು ಬರುತ್ತಾರೆ, ಈಗ ಹೊರಡಿ–ನಿಮ್ಮ ಅರ್ಧ ಗಂಡಸನ್ನು ನಿಮ್ಮೊಂದಿಗೆ ಒಯ್ದು ಹೊರಡಿ"–ಈ ಮಾತುಗಳನ್ನಾಡುವಾಗ ಅವನು ತನ್ನ ಬಂದೂಕವನ್ನು ತನ್ನ ಎಡಭುಜದಮೇಲೆ ತೂಗುತ್ತಾ ಅದರ ಕುದುರೆಯನ್ನು ಸಜ್ಜುಪಡಿಸಿಕೊಳ್ಳುತ್ತಿದನು.

ಇದ್ದಕ್ಕಿದ್ದಂತೆಯೇ ಜನಜಂಗುಳಿ ಹಿಂದಕ್ಕೆ ಕೊಚ್ಚಿಹೋಯಿತು, ಆಮೇಲೆ ಜನರೆಲ್ಲರೂ ಹಂಚಿಹೋದರು, ಎಲ್ಲ ದಿಕ್ಕುಗಳಿಗೂ ಧಾವಿಸಿದರು. ಸಾಕಷ್ಟು ಮುಖಭಂಗ ಹೊಂದಿದ ಬಕ್ ಹಾರ್ಕ್‌ನೆಸ್ ಅವರ ಹಿಂದೆಯೇ ಹೊರಟುಹೋದನು. ನಾನು ಇಷ್ಟಪಟ್ಟಿದ್ದರೆ ಅಲ್ಲೇ ನಿಲ್ಲಬಹುದಾಗಿತ್ತು! ಆದರೆ ನಾನು ಇಷ್ಟಪಡಲಿಲ್ಲ.

ನಾನು ಸರ್ಕಸ್ಸಿನ ಬಳಿಗೆ ಹೋದೆ, ಕಾವಲುಗಾರ ಮರೆಯಾಗುವ ತನಕ ಅದರ ಹಿಂಭಾಗದಲ್ಲಿ ಅಡ್ಡಾಡುತ್ತಿದ್ದೆ; ಆಮೇಲೆ ಡೇರೆಯ ಕೆಳಗೆ ತೂರಿ ನುಗ್ಗಿದೆ. ನನ್ನ ಬಳಿ ಇಪ್ಪತ್ತು ಡಾಲರಿನ ಚಿನ್ನದ ನಾಣ್ಯವೂ ಸ್ವಲ್ಪ ಚಿಲ್ಲರೆ ಹಣವೂ ಇದ್ದವಾದರೂ, ಅವನ್ನು ವೆಚ್ಚಮಾಡದೆ ಜೋಪಾನಮಾಡಿಕೊಳ್ಳುವುದೇ ಬಲು ಒಳ್ಳೆಯದೆನಿಸಿತು ನನಗೆ; ಏಕೆಂದರೆ, ಮನೆ ಬಿಟ್ಟು ಪರಸ್ಥಳಕ್ಕೆ ಬಂದು ಇಂಥಾ ಅಪರಿಚಿತರ ನಡುವೆ ಇರುವಾಗ ಕೈಯಲ್ಲಿರುವ ಹಣ ಯಾವ ಸಮಯಕ್ಕೆ ಬೇಕಾದೀತೋ ಹೇಳುವಂತಿಲ್ಲ ನೀವು ಎಷ್ಟು ಎಚ್ಚರದಿಂದ ಇದ್ದರೂ ಸಾಲದು; ಬೇರೆ ಮಾರ್ಗವೇ ಇಲ್ಲದಿರುವಾಗ ಸರ್ಕಸ್ ನೋಡುವುದಕ್ಕಾಗಿ ಒಂದಿಷ್ಟು ಹಣವನ್ನು ತೆರುವುದಕ್ಕೆ ನನ್ನ ವಿರೋಧವಿಲ್ಲ; ಆದರೆ ಅದಕ್ಕಾಗಿ ಹಣವನ್ನು ಪೋಲುಮಾಡುವುದು ನಿಷ್ಫಲ.

ನಿಜವಾಗಿಯೂ ಅದೊಂದು ಅದ್ಭುತವಾದ ಸರ್ಕಸ್. ಅಶ್ವಾರೋಹಿಗಳಾದ—ಒಬ್ಬ ಗಂಡಸು, ಅವನ ಪಕ್ಕದಲ್ಲಿ ಒಬ್ಬಳು ಹೆಂಗಸು ಹೀಗೆ-ಸುಮಾರು ಇಪ್ಪತ್ತು ಜತೆಗಳು ಒಂದರಹಿಂದೆ ಇನ್ನೊಂದು ಮೆರವಣಿಗೆ ಬಂದಾಗಲಂತೂ ಅದೊಂದು ಹಿಂದೆಂದೂ ಕಂಡಿರದಂಥ ಅತಿಸೊಗಸಾದ ದೃಶ್ಯವಾಗಿತ್ತು;-ಗಂಡಸರು ಪರಾಯಿಯನ್ನೂ ತೆಳು ಬನೀನನ್ನೂ ಧರಿಸಿದ್ದರು; ಪಾದರಕ್ಷೆಗಳನ್ನಾಗಲೀ ರಿಕಾಬುಗಳನ್ನಾಗಲೀ ಹಾಕಿಕೊಂಡಿರಲಿಲ್ಲ; ತಮ್ಮ ಕೈಗಳನ್ನು ಮಂಡಿಗಳಮೇಲೆ ಆರಾಮಾಗಿ ಊರಿಕೊಂಡಿದ್ದರು; ಜತೆಯ ಹೆಣ್ಣಿನ ಮೈಬಣ್ಣ ಚಿತ್ತಾಕರ್ಷಕವಾಗಿದ್ದು, ಅವು ಬಲು ಚಲುವೆಯಾಗಿದ್ದಳು; ಇವ

ರೆಲ್ಲರೂ ನಿಜವಾಗಿಯೂ ರಾಣಿಯರೇ ಎಂಬಂತೆ ಕಂಗೊಳಿಸುತ್ತಿದ್ದರು; ಕೋಟ್ಯಂತರ ಡಾಲರ್ ಬೆಲೆಬಾಳುವ, ರತ್ನಖಚಿತವಾದ ಉಡುಗೆಗಳನ್ನು ಉಟ್ಟು ಬರುತ್ತಿದ್ದರು. ಅದೊಂದು ಅತಿ ಸೊಗಸಾದ ದೃಶ್ಯವಾಗಿತ್ತು; ನಾನು ಅಂಥುದನ್ನು ಹಿಂದೆಂದೂ ನೋಡಿಯೇ ಇಲ್ಲ. ಆಮೇಲೆ ಒಬ್ಬೊಬ್ಬರಾಗಿ ಎದ್ದು ನಿಂತರು, ವೃತ್ತದ ಸುತ್ತಲೂ ನಯವಾಗಿ ರಮ್ಯವಾಗಿ ಅಲೆಅಲೆಯಾಗಿ ತಿರುಗುತ್ತ ಬರುತ್ತಿದ್ದರು. ಗಂಡಸರು ಎಂದಿಗಿಂತಲೂ ಎತ್ತರವಾಗಿ, ನೇರವಾಗಿ ಉಲ್ಲಾಸದಿಂದ ಕಂಗೊಳಿಸುತ್ತಿದ್ದರು, ಅಲ್ಲಿ ಮೇಲೆ ಡೇರೆಯ ಛಾವಣಿಯ ಕೆಳಗೆ ತಲೆಯನ್ನು ತೂಗುತ್ತಾ ಚಿಮ್ಮಿಬರುತ್ತಿದ್ದರು. ಹೆಂಗಸರಲ್ಲಿ ಪ್ರತಿಯೊಬ್ಬಳೂ ಧರಿಸಿದ್ದ ಗುಲಾಬಿಯೆಲೆಗಳನ್ನು ಚಿತ್ರಿಸಿದುಡುಗೆ ಅವಳ ನಡುವಿನ ಸುತ್ತಲೂ ನವಿರಾಗಿ ನುಣುಪಾಗಿ ಬಳುಕುತ್ತಿತ್ತು, ಅತಿ ಮನೋಹರವಾದ ಬಿಸಿಲ ಚತ್ರಿಯಂತೆ ಕಂಗೊಳಿಸುತ್ತಿದ್ದಳು.

ಅವರೆಲ್ಲರೂ ಮೊದಲು ಒಂದು ಹೆಜ್ಜೆಯನ್ನು ಗಾಳಿಗೆ ನೀಡುತ್ತಲೂ, ಆಮೇಲೆ ಇನ್ನೊಂದು ಹೆಜ್ಜೆಯನ್ನು ನೀಡುತ್ತಲೂ ನರ್ತಿಸುತ್ತ ಬೇಗಬೇಗ ಚಲಿಸತೊಡಗಿದರು; ಅದನ್ನನುಸರಿಸಿ ಕುದುರೆಗಳು ಇನ್ನಷ್ಟು ಮತ್ತಷ್ಟು ತಲೆ ತಗ್ಗಿಸುತ್ತಿದ್ದವು; ತಂಡದ ನಾಯಕ ತನ್ನ ಚಾಟಿಯನ್ನು ಛಟೀರೆನ್ನಿಸುತ್ತಾ "ಹೈ ಹೈ" ಎಂದು ಅಬ್ಬರಿಸುತ್ತಾ ಕೇಂದ್ರ ಸ್ತಂಭದ ಸುತ್ತಲೂ ಗಿರಗಿರ ತಿರುಗುತ್ತಿದ್ದನು, ಅವನ ಹಿಂದೆಯೇ ಗೇಲಿಮಾಡುತ್ತ ವಿದೂಷಕ ಬರುತ್ತಿದ್ದನು. ಹಾಗೆಯೇ ಸ್ವಲ್ಪಹೊತ್ತಾದ ಬಳಿಕ ಎಲ್ಲರೂ ಲಗಾಮುಗಳನ್ನು ಕೆಳಗೆ ಹಾಕಿದರು; ಹೆಂಗಸರೆಲ್ಲರೂ ತಮ್ಮ ಕೈಬೆರಳುಗಳನ್ನು ಸೊಂಟದ ಮೇಲಿಟ್ಟುಕೊಂಡರು, ಗಂಡಸರೆಲ್ಲರೂ ತಮ್ಮ ಕೈಗಳನ್ನು ಮಡಿಸಿಕೊಂಡರು, ಆಗ ಕುದುರೆಗಳು ಮುಂಗಾಲುಗಳನ್ನು ನೀಡಿ ಬಾಗಿದುದನ್ನು ನೋಡಬೇಕಾಗಿತ್ತು! ಬಳಿಕ ಎಲ್ಲರೂ ವರ್ತುಲದೊಳಕ್ಕೆ ಒಬ್ಬೊಬ್ಬರಾಗಿ ಹಾರಿ, ಬಲು ಅಂದವಾಗಿ ತಲೆಬಾಗಿದರು, ಚೆದರಿಹೋದರು. ಪ್ರೇಕ್ಷಕರೆಲ್ಲರೂ ದಿಗ್ಭ್ರಾಂತರಾಗಿ ಚಪ್ಪಾಳೆ ತಟ್ಟಿದರು.

ಸರಿ, ಆ ಸರ್ಕಸ್ಸಿನ ಉದ್ದಕ್ಕೂ ಅತ್ಯಾಶ್ಚರ್ಯಕರವಾದ ಘಟನೆಗಳು ನಡೆದವು, ಅದರುದ್ದಕ್ಕೂ ವಿದೂಷಕ ಎಲ್ಲರೂ ಹೊಟ್ಟೆಹುಣ್ಣಾಗುವಂತೆ ನಗಿಸಿದನು, ತಂಡದ ನಾಯಕ ಅವನಿಗೆ ಒಂದು ಮಾತನ್ನೂ ಹೇಳಲು ಸಾಧ್ಯವಾಗಲಿಲ್ಲ, ಆದರೆ ಕಣ್ಣು ಮಿಟುಕಿಸುವುದರೊಳಗೆ ಅವನು ವಿದೂಷಕನ ಬಳಿಗೆ ಬಂದು ಬಲು ತಮಾಷೆಯಿಂದ ಮಾತುಗಳನ್ನಾಡುತ್ತಿದ್ದನು. ಅವನಿಗೆ ಅಷ್ಟೊಂದು ಕಲ್ಪನೆಗಳು ಅಷ್ಟು ಅಕಸ್ಮಾತ್ತಾಗಿ ಅಷ್ಟು ಸಂದರ್ಭೋಚಿತವಾಗಿ ಹೇಗೆ ಹೊಳೆದವೆಂಬುದೇ ನನಗೆ ಸ್ವಲ್ಪವೂ ಅರ್ಥವಾಗಲಿಲ್ಲ. ನನಗೆ ಒಂದು ವರುಷದ ಅವಧಿಯನ್ನು ಕೊಟ್ಟಿದ್ದರೂ ನಾನು ಅವುಗಳನ್ನು ಕಲ್ಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಸ್ವಲ್ಪಹೊತ್ತಿನಲ್ಲೇ ಒಬ್ಬ ಕುಡುಕ ವರ್ತುಳದೊಳಕ್ಕೆ ನುಗ್ಗಲು ಪ್ರಯತ್ನಿಸಿದನು,–ತನಗೂ ಕುದುರೆಸವಾರಿಯ ಆಸೆ ಎಂದನು,

ಕುದುರೆ ಸವಾರಿಯಲ್ಲಿ ತಾನು ಯಾರಿಗೂ ಕಡಮೆಯಿಲ್ಲವೆಂದನು. ಅವನೊಂದಿಗೆ ವಾದ ಮಾಡಿ ಅವನನ್ನು ಹೊರಗೆ ಹಾಕಲು ಪ್ರಯತ್ನಿಸಿದರು, ಅವನು ಕೇಳಬೇಕಲ್ಲ! ಇಡೀ ಪ್ರದರ್ಶನವೇ ನಿಂತುಹೋಯಿತು. ಜನರು ಗದ್ದಲಮಾಡಿ ಕೇಲಿಮಾಡಿ ಅವನಿಗೆ ಹುಚ್ಚು ಹಿಡಿಸಿದರು, ಅವನು ಯದ್ವಾತದ್ವಾ ಎಗರಾಡಲು ಪ್ರಾರಂಭಿಸಿದ, ಇದು ಪ್ರೇಕ್ಷಕರನ್ನು ಕೆರಳಿಸಿತು, ಜನರು ಹಿಂಡುಹಿಂಡಾಗಿ ತಮ್ಮ ಕುರುಮಣೆಗಳಿಂದ ಧುಮುಕಿ ಅವನನ್ನು ಬೆರಳೆತ್ತಿ ತೋರಿಸುತ್ತಾ "ಹೊಡೆಯು ಹಾಕಿ ಅವನನ್ನು ! ಆಚೆಗೆಸೆ ಯಿರಿ ಅವನನ್ನು !" ಎನ್ನುತ್ತಾ ವರ್ತುಲದೆಡೆಗೆ ನುಗ್ಗಿ ಬಂದು ಮುತ್ತಿಗೆ ಹಾಕಿದರು ಒಬ್ಬಿಬ್ಬರು ಹೆಂಗಸರಂತೂ ಕಿರಿಚತೊಡಗಿದರು. ಆಗ ತಂಡದ ನಾಯಕ ಪುಟ್ಟ ಭಾಷಣವೊಂದನ್ನು ಮಾಡಿ ಗದ್ದಲ ಮುಂಬರಿಯಂದೇಬ ಭರವಸೆ ತನಗುಂಟೆಂದೂ, ಆ ಮನುಷ್ಯ ಹೆಚ್ಚು ತೊಂದರೆ ಕೊಡುವುದಿಲ್ಲವೆಂದು ಮಾತು ಕೊಡುವುದಾದರೆ ಮತ್ತು ತನಗೆ ಕುದುರೆಯ ಸವಾರಿ ಸಾಧ್ಯವೆಂದು ಅವನು ತಿಳಿದಿದ್ದರೆ ಸವಾರಿ ಮಾಡಲು ಅವನಿಗೆ ಅವಕಾಶ ಕೊಡುವುದಾಗಿಯೂ ಹೇಳಿದನು. ಎಲ್ಲರೂ ಘೊಳ್ಳೆಂದು ನಕ್ಕು, ಆಗಲಿ ಎಂದರು, ಅವನು ಕುದುರೆಯೇರಿದನು. ಅವನು ತನ್ನನ್ನೇರಿದ ತತ್‌ಕ್ಷಣವೇ ಆ ಕುದುರೆ ಕುಣಿದು ಕುಪ್ಪಳಿಸಿ ಹರಿದು ಕಿತ್ತು ಸುತ್ತಲೂ ತಿರುಗಲಾರಂಭಿಸಿತು ; ಸರ್ಕಸ್ಸಿನ ಆಳಿಬ್ಬರು ಅದನ್ನು ಹಿಡಿದು ನಿಲ್ಲಿಸಲು—ಜೀನಿನ ಈ ಕಡೆಗೊಬ್ಬ, ಆ ಕಡೆಗೊಬ್ಬ— ಹೋರಾಡುತ್ತಿದ್ದರು ; ಅದು ಒಂದೊಂದು ಬಾರಿ ನೆಗೆದಾಗಲಾ ಕುದುರೆಯ ಮೇಲಿ ದ್ದವನು ಅದರ ಕೊರಳಿಗೆ ಜೋತು ಬಿದ್ದು ತನ್ನ ಹಿಮ್ಮಡಿಗಳಿಂದ ಗಾಳಿಯನ್ನು ಒಡೆ ಯುತ್ತಿದ್ದನು. ಜನರು ಎದ್ದೆದ್ದು ಜೋರಾಗಿ ನಗುತ್ತಾ ಸಂತಸದ ಕಂಬನಿಗಳನ್ನು ಸುರಿಸುತ್ತಾ ಹೋಯೆಂದು ಕೂಗುತ್ತಿದ್ದರು, ಕಡೆಗೆ, ಸರ್ಕಸ್ಸಿನ ಆಳುಗಳು ಏನು ಮಾಡಿ ದರೂ, ಆ ಕುದುರೆ ಬಿಡಿಸಿಕೊಂಡು ಬಲು ರಭಸದಿಂದ ವರ್ತುಲದ ಸುತ್ತಲೂ ತಿರುಗಲು ಪ್ರಾರಂಭಿಸಿತ್ತು ; ಅದರ ಮೇಲಿದ್ದ ಕುಡುಕ ಅದರ ಕೊರಳಿಗೆ ಜೋತು ಹಾಕಿಕೊಂಡು ಅದರ ಒಂದು ಪಕ್ಕಕ್ಕೆ ನೆಲಸೋಕುವ ತನಕ ಒಂದು ಕಾಲನ್ನಿಳಿಸಿ ಇನ್ನೊಂದು ಕಾಲನ್ನು ಇನ್ನೊಂದು ಪಕ್ಷಕ್ಕೆ ಎಸೆದು ಪೂರಾ ದಣಿದು ಹೋಗಿದ್ದನು. ಪ್ರೇಕ್ಷಕರಿಗೆ ಗರಬಡಿ ದಂತಿತ್ತು. ನನಗೇನೋ ಅದು ತಮಾಷೆಯೆಂದು ತೋರಲಿಲ್ಲ ; ಅವನಿಗೊದಗಿದ ಅಪಾಯವನ್ನು ಕಂಡು ನನಗೆ ಮೈಯೆಲ್ಲಾ ನಡುಗುತ್ತಿತ್ತು. ಬಲು ಬೇಗ ಅವನು ಚೇತರಿಸಿಕೊಂಡು ಹೆಣಗಾಡಿ ನೆಟ್ಟಗೆ ಕುಳಿತು. ಹೀಗೆ ಹಾಗೆ ತೂರಾಡಿ, ಲಗಾಮನ್ನು ಕೈಗೆತ್ತಿಕೊಂಡನು, ಮರುಕ್ಷಣದಲ್ಲೇ ಅವನು ಕುದುರೆಯ ಮೇಲೆ ಎದ್ದು ಲಗಾಮನ್ನು ಎಸೆದು ನಿಂತನು ! ಕುದುರೆಯೂ ಬೆಂಕಿ ಬಿದ್ದ ಮನೆಯಂತೆ ಧಾವಿಸುತ್ತಿತ್ತು. ತನ್ನ ಜೀವನದಲ್ಲೇ ಒಂದು ಸಲವೂ ಕುಡಿಯದಿದ್ದ ಮನುಷ್ಯನ ಹಾಗೆ ಅವನು ಸ್ವಸ್ಥಚಿತ್ತನಾಗಿ ಆರಾಮವಾಗಿ ಸುತ್ತಲೂ ಕುದುರೆಯನ್ನು ತಿರುಗಿಸುತ್ತಿದ್ದನು ;—ಆ ಮೇಲೆ ತನ್ನ ಬಟ್ಟೆ

ಬರೆಯುನ್ನು ಬಿಚ್ಚಿ ಎಸೆದನು. ಅವನ್ನು ಅವನು ಎಷ್ಟು ಜೋರಾಗಿ ಬೀಸಿದನೆಂದರೆ, ಆ ಹೊಡೆತಕ್ಕೆ ಗಾಳಿ ಮೇಲೆದ್ದಿತು. ಅವನು ಹದಿನೇಳು ಉಡುಪುಗಳನ್ನು ಕಳಚಿದನು. ಅವನು ನಸುತೆಳುವಾದ ಸುಂದರವಾದ ಆಳು; ಬಲು ಭರ್ಜರಿಯಾದ ರಮ್ಯವಾದ ನೀವೆಂದೂ ನೋಡಿರದಂಥ ಉಡುಪನ್ನು ಧರಿಸಿದ್ದನು. ತನ್ನ ಚಾಟಿಯೇಟಿನಿಂದ ಆ ಕುದುರೆ ಚುರುಕಾಗಿ ಗುಯ್ಯ್‌ಗುಡುತ್ತಾ ಓಡುವಂತೆ ಮಾಡಿದನು,—ಕೊನೆಯಲ್ಲಿ ಕೆಳಗೆ ಧುಮುಕಿ ಪ್ರೇಕ್ಷಕರ ಮುಂದೆ ತಲೆಬಾಗಿ ತಟ್ಟಕ್ಕನೆ ಸಜ್ಜು-ಕೋಣೆಗೆ ಚಿಮ್ಮಿದನು. ಎಲ್ಲರೂ ಸಂತೋಷದಿಂದಲೂ ಆಶ್ಚರ್ಯದಿಂದಲೂ ಹೋ ಹೋ ಎನ್ನುತ್ತಿದ್ದರು.

ತಂಡದ ನಾಯಕನಿಗೆ ತಾನು ಮೋಸ ಹೋದದ್ದು ತಿಳಿಯಿತು. ಅವನ ಮುಖವನ್ನು ಆಗ ನೀವು ನೋಡುವುದಕ್ಕೇ ಆಗುತ್ತಿರಲಿಲ್ಲವೆಂದು ನನಗೆ ತೋರುತ್ತದೆ. ಏಕೆಂದರೆ ಹೀಗೆ ಮಾಡಿದವನು ತನ್ನ ತಂಡಕೆ ಸೇರಿದವನೇ! ಈ ತಮಾಷೆಯ ತಂತ್ರವನ್ನು ಅವನು, ಯಾರಿಗೂ ಬಾಯಿ ಬಿಡದೆ, ತನ್ನ ತಲೆಯೊಳಗೇ ಇಟ್ಟುಕೊಂಡಿದ್ದ. ಹಾಗೆ ಟೋಪಿ ಬೀಳುವುದು ದಡ್ಡತನವೆಂದೇ ನನಗೆ ತೋರಿತು; ಒಂದು ಸಾವಿರ ಡಾಲರುಗಳನ್ನು ಕೊಟ್ಟಿದ್ದರೂ ನಾನು ಆ ತಂಡದ ನಾಯಕನ ಸ್ಥಳಕ್ಕೆ ಹೋಗಿ ನಿಲ್ಲಲು ಒಪ್ಪುತ್ತಿರಲಿಲ್ಲ. ನನಗೆ ತಿಳಿಯದು; ಅದಕ್ಕಿಂತ ಅದ್ಭುತವಾದ ಸರ್ಕಸ್ಸುಗಳಿರಬಹುದು; ಆದರೆ ನಾನು ಅಂಥವನ್ನು ಈ ವರೆಗೆ ನೋಡಿಲ್ಲ; ಏನಾಗಲಿ, ನನಗೆ ಅದೇ ಬಲು ಚೆನ್ನಾಗಿಯೇ ಇತ್ತು; ಅದು ನನಗೆ ಸಿಕ್ಕದಾಗಲೆಲ್ಲ, ನನ್ನಿಂದ ಪ್ರತಿ ಸಲವೂ ಸಲ್ಲಬೇಕಾದ ಸುಂಕವನ್ನನ್ನೂ ಪಡೆಯಬಲ್ಲದು.

ಸರಿ. ಆ ರಾತ್ರಿ ನಮ್ಮ ಪ್ರದರ್ಶನವೂ ನಡೆಯಲಿತ್ತು; ಆದರೆ ಅಲ್ಲಿ ಕೇವಲ ಹನ್ನೆರಡು ಮಂದಿ ಪ್ರೇಕ್ಷಕರಿದ್ದರು—ಬರುವ ಹುಟ್ಟುವಳಿಯಿಂದ ತಗಲುವ ವೆಚ್ಚವನ್ನು ಮಾತ್ರ ಸರಿತೂಗಿಸಬಹುದಿತ್ತು. ಅವರು ಉದ್ದಕ್ಕೂ ನಗುತ್ತಲೇ ಇದ್ದರು, ಅದರಿಂದ ಡ್ಯೂಕನಿಗೆ ರೇಗಿಹೋಯಿತು. ಪ್ರದರ್ಶನ ಮುಗಿದ ಮುನ್ನವೇ ಎಲ್ಲರೂ ಹೊರಟು ಹೋಗಿದ್ದರು; ಒಬ್ಬ ಹುಡುಗ ಮಾತ್ರ ನಿದ್ದೆ ಮಾಡುತ್ತಿದ್ದುದರಿಂದ, ಹೋಗಿರಲಿಲ್ಲ. ಆರ್ಕನ್ಸಾವಿನ ಮಂಕು ತಲೆಗಳು ಷೇಕ್ಸ್‌ಪಿಯರನ ಮಟ್ಟಕ್ಕೆ ಏರಲಾರವು ಎಂದ ಡ್ಯೂಕ್. ಅವರಿಗೆ ಬೇಕಾಗಿದ್ದುದ್ದು ಕೆಳಮಟ್ಟದ ಪ್ರಹಸನ—ಕೆಳಮಟ್ಟದ ಪ್ರಹಸನಕ್ಕಿಂತ ಕೀಳಾದುದಾದರೂ ಸರಿಯೆ—ಎಂದು ಅವನೆಣಿಕೆ, ಅವರ ರೀತಿಯನ್ನು ತನಗೆ ಅರ್ಥವಾಗಬಲ್ಲದೆಂದನವನು, ಮರುದಿನ ಬೆಳಗಾಗ ಅವನು ಸುತ್ತುವ ಕಾಗದದ ಕೆಲವು ದೊಡ್ಡ ಹಾಳೆಗಳನ್ನೂ, ಸ್ವಲ್ಪ ಕಪ್ಪು ಬಣ್ಣವನ್ನೂ ತಂದು ಕೆಲವು ಜಾಹೀರಾತುಗಳನ್ನು ಸಿದ್ಧಪಡಿಸಿಕೊಂಡು ಆ ಹಳ್ಳಿಯ ಎಲ್ಲೆಡೆಗಳಲ್ಲೂ ಅಂಟಿಸಿದನು. ಅವುಗಳಲ್ಲಿ ಹೀಗೆ ಬರೆದಿತ್ತು:—

ಪೌರ ಮಂದಿರದಲ್ಲಿ !
ಮೂರು ರಾತ್ರಿಗಳು ಮಾತ್ರ !
ಲಂಡನ್ ಮತ್ತು ಯೂರೋಪ್ ಖಂಡದ ನಾಟಕ ಮಂಡಳಿಗಳ
ಜಗತ್ಪ್ರಸಿದ್ಧ ದುರಂತ ನಟರಾದ
ಕಿರಿಯ ಡೇವಿಡ್ ಗ್ಯಾರಿಕ್
ಮತ್ತು
ಹಿರಿಯ ಎಡ್ಮಂಡ್ ಕೀನ್
ಅವರು
ಮೈನವಿರೇಳಿಸುವ ತಮ್ಮ ದುರಂತ ನಾಟಕವಾದ
ರಾಜನ ಜಿರಾಫೆ,
ಅಥವಾ
ರಾಜಯೋಗ್ಯ ಅಪ್ರತಿಮ ದೃಶ್ಯ !!!
ಎಂಬುದರಲ್ಲಿ
ಪ್ರವೇಶ ಧನ : 50 ಸೆಂಟುಗಳು

ಅದರ ಕೆಳಗೆ ಬಲುದಪ್ಪ ಪಂಕ್ತಿಯೊಂದಿತ್ತು : ಅದರಲ್ಲಿ ಏನು ಬರೆದಿತ್ತೆಂದರೆ :

**ಮಹಿಳೆಯರಿಗೂ ಮಕ್ಕಳಿಗೂ ಪ್ರವೇಶವಿಲ್ಲ**

"ಇಲ್ಲಿ ನೋಡು, ಆ ಪಂಕ್ತಿ ಅವರನ್ನು ಪ್ರದರ್ಶನಕ್ಕೆ ಎಳೆದುಕೊಂಡು ಬಾರದಿದ್ದರೆ, ನನಗೆ ಆರ್ಕೆನ್ಸಾವೇ ತಿಳಿಯದು !" ಎಂದನವನು.

## ೨೩

ಸರಿ, ಹಗಲೆಲ್ಲ ಅವನೂ ರಾಜನೂ ರಂಗಸ್ಥಳವನ್ನೂ ಪರದೆಯನ್ನೂ ಕೆಳದೀಪಗಳಿಗಾಗಿ ಮೋಂಬತ್ತಿಗಳನ್ನೂ ಸಿದ್ಧಪಡಿಸಿಕೊಳ್ಳಲು ಹೆಣಗಾಡಿದರು ರಾತ್ರಿಯಾದದ್ದೇ ತಡ, ಪೌರಮಂದಿರ ಗಂಡಸರಿಂದ ತುಂಬಿ ಕಿಕ್ಕಿರಿಯಿತು, ಒಳಗೆ ಕಾಲಿಡಲು ಇನ್ನೊಬ್ಬನಿಗೆ ಕೂಡ ಎಡೆಯಿಲ್ಲದಂತಾದಾಗ, ಡ್ಯೂಕ್ ಬಾಗಿಲು ಕಾಯುವುದನ್ನು ಬಿಟ್ಟು, ಹಿಂಬದಿಗಿದ್ದ ದಾರಿಯ ಮೂಲಕ ವೇದಿಕೆಗೆ ಹತ್ತಿಹೋಗಿ ಪರದೆಯ ಮುಂದೆ ನಿಂತು ಪುಟ್ಟ ಭಾಷಣವೊಂದನ್ನು ಮಾಡಿ, ತನ್ನ ದುರಂತ ನಾಟಕವನ್ನೆತ್ತಿ ಕೊಂಡಾಡಿ

ಅದೊಂದು ಅಭೂತಪೂರ್ವವಾದ ಮೈನವಿರೇಳಿಸುವ ನಾಟಕವೆಂದನು; ತನ್ನ ನಾಟಕದ ವಿಚಾರವಾಗಿಯೂ ಅದರಲ್ಲಿನ ಪ್ರಧಾನ ಪಾತ್ರವನ್ನು ವಹಿಸಲಿರುವ ಹಿರಿಯ ಎಡ್ಮಂಡ್ ಕೀನನ ವಿಚಾರವಾಗಿಯೂ ಬಲು ಬಡಾಯಿ ಕೊಚ್ಚಿದನು. ಹೀಗೆ ಎಲ್ಲರ ನಿರೀಕ್ಷೆಯನ್ನು ಉಲ್ಬಣಗೊಳಿಸಿದ ತರುವಾಯ ಅವನು ಪರದೆಯನ್ನು ಮೇಲಕ್ಕೆ ಸುತ್ತಿದನು; ಆ ಕೂಡಲೇ ರಾಜ ಬತ್ತಲೆಯಾಗಿ ಅಂಬೆಗಾಲಿಡುತ್ತಾ ಮುಂದೆ ಮುಂದೆ ತೆವಳಿದನು. ಅವನ ಮೈಗೆಲ್ಲಾ ಎಲ್ಲಾ ಬಗ್ಗೆಯ ಬಣ್ಣಗಳಿಂದಲೂ ಉಂಗುರಗಳನ್ನೂ ಪಟ್ಟೆಗಳನ್ನೂ ಚಿತ್ರಿಸಲಾಗಿತ್ತು. ಆ ಬಣ್ಣಗಳು ಕಾಮನ ಬಿಲ್ಲಿನಷ್ಟು ಸೊಗಸಾಗಿದ್ದವು; ಮತ್ತು—ಅವನ ಉಳಿದ ಸಿದ್ಧತೆಗಳ ಬಗೆಗೆ ಯೋಚಿಸುವುದು ಬೇಡ; ಅದು ಹುಚ್ಚು ಹುಚ್ಚಾಗಿಯೇ ಇತ್ತು, ಆದರೂ ಭಾರೀ ತಮಾಷೆಯಾಗಿತ್ತು. ಜನ ನಕ್ಕು ನಕ್ಕು ಸತ್ತರು. ರಾಜ ತನ್ನ ಕುಣಿತವನ್ನು ಮುಗಿಸಿ, ತೆರೆಗಳ ಹಿಂದೆ ಹಾರಿ ಮರೆಯಾದ ಮೇಲೆ, ಜನರು ಕೂಗಿದರು ಮೊರೆದರು, ಅವನು ಹಿಂತಿರುಗುವ ತನಕ ಚಪ್ಪಾಳೆ ತಟ್ಟುತ್ತಾ ಹಾಹಾಕಾರ ಮಾಡುತ್ತಲೇ ಇದ್ದರು. ಅವನು ಮತ್ತೆ ಹಾಗೆಯೇ ಅಭಿನಯಿಸಿದನು; ಅವನು ಮತ್ತೆ ಹಾಗೆಯೇ ಮಾಡುವಂತೆ ಅವರು ಬಲಾತ್ಕಾರ ಮಾಡಿದರು. ಆ ಮುದಿ ಮೂರ್ಖ ಗಳಿಸಿದ ಪ್ರಶಂಸೆಯನ್ನು ಕಂಡು ಒಂದು ಹಸುವಿಗೂ ನಗೆ ಬರು ನಗೆ ಬರತ್ತಿತ್ತು. ಬಳಿಕ ಡ್ಯೂಕ್ ಪರದೆಯನ್ನು ಕೆಳಗೆ ಇಳಿಸಿದ; ಪ್ರೇಕ್ಷಕರಿಗೆ ತಲೆ ಬಾಗಿದ, ಈ ಪರಮ ದುರಂತ ನಾಟಕವನ್ನು ಇನ್ನೆರಡು ರಾತ್ರಿಗಳು ಮಾತ್ರ ಪ್ರದರ್ಶಿಸುವುದಾಗಿಯೂ. ಇದಕ್ಕೆ ಕಾರಣವೇನೆಂದರೆ ಲಂಡನ್ನಿನಲ್ಲಿ ತುರುತಾಗಿ ಕಾರ್ಯಕ್ರಮವಿಟ್ಟುಕೊಂಡಿರುವುದು ಮತ್ತು ಅಲ್ಲಿನ ಡ್ರೂರಿಲೇನಿನಲ್ಲಿ ಅದಕ್ಕಾಗಿಯೇ ಈಗಾಗಲೇ ಎಲ್ಲ ಸ್ಥಳಗಳಿಗೂ ಪ್ರವೇಶದ ಚೀಟಿಗಳು ಮಾರಾಟವಾಗಿ ಹೋಗಿರುವುದು, ಎಂದೂ ಹೇಳಿದ ಅವರನ್ನು ಮತ್ತೊಮ್ಮೆ ವಂದಿಸಿ, ಅವರನ್ನು ಸಂತಸಪಡಿಸುವುದರಲ್ಲೂ ಅವರಿಗೆ ತಕ್ಕ ತಿಳಿವಳಿಕೆ ಕೊಡುವುದರಲ್ಲೂ ತಾನು ಕೃತಾರ್ಥನಾಗಿದ್ದಲ್ಲಿ, ಅವರು ಅದನ್ನು ತಮ್ಮ ಸ್ನೇಹಿತರಿಗೆ ತಿಳಿಸಿ ಅವರೂ ಬಂದು ನೋಡುವಂತೆ ಮಾಡಿದರೆ ತಾನು ತುಂಬಾ ಉಪಕೃತನೆಂದೂ ನುಡಿದನು,

ಇಪ್ಪತ್ತು ಮಂದಿ ಒಟ್ಟಿಗೆ ಕೂಗಿದರು :

"ಏನೇನು, ಇದು ಮುಗಿದು ಹೋಯಿತೆ ? ಇದಿಷ್ಟೇ ಏನು "?

ಡ್ಯೂಕ್ ಹೌದೆಂದನು. ಬಳಿಕ ಬಹು ಕುತೂಹಲಕರವಾದ ಸನ್ನಿವೇಶ ಒದಗಿತು. ಎಲ್ಲರೂ ಎದ್ದು ಕೂಗಿದರು, "ಮೋಸವಾಯಿತು !" ಎಂದರು, ಹುಚ್ಚರಂತೆ ಎಗರಿದರು, ಆ ರಂಗಸ್ಥಳದ ಮತ್ತು ಆ ದುರಂತ ನಟರ ಹತ್ತಿರಕ್ಕೇ ನುಗ್ಗಿ ಅವರನ್ನು ಹಿಡಿಯಹೊರಟರು. ಆದರೆ ಆಗೊಬ್ಬ ಚೆಲುವನಂತೆ ಕಾಣುತ್ತಿದ್ದ ಭಾರಿ ಮನುಷ್ಯ ಅಡ್ಡ ಹಲಗೆಯ ಮೇಲೆ ಎದ್ದು ನಿಂತು ಗದರಿಸಿದನು ;

"ನಿಲ್ಲಿ ! ಒಂದು ಮಾತು, ಮಹಿನೀಯರೆ." ಅವನ ಮಾತನ್ನು ಕೇಳುವುದಕ್ಕಾಗಿ ಎಲ್ಲರೂ ಅಲ್ಲಲ್ಲೆ ನಿಂತರು. "ನಮಗೆ ಮೋಸವಾಯಿತು—ನಾವು ತುಂಬಾ ಟೋಪಿ ಬಿದ್ದಿದ್ದೇವೆ, ನಿಜ ಆದರೆ ನಾವು ಇಡೀ ಊರಿನಲ್ಲಿ ನಗೆಗೀಡಾಗಲು ಇಷ್ಟಪಡುವುದಿಲ್ಲವೆಂದು ನನಗೆ ತೋರುತ್ತದೆ ; ನಾವು ಬದುಕಿರುವ ತನಕ ಇದರ ಬಗೆಗೆ ಕೊನೆ ಮಾತನ್ನು ಎಂದೂ ಕೇಳುವುದು ಇಷ್ಟವಿಲ್ಲ ನಮಗೆಂದೂ ನನ್ನೆಣಿಕೆ. ಇಲ್ಲ. ನಮಗೆ ಈಗ ಬೇಕಾಗಿರುವುದು, ಇಲ್ಲಿಂದ ಸುಮ್ಮನೆ ಹೊರಟುಹೋಗುವುದು, ಈ ಪ್ರದರ್ಶನವನ್ನು ಎತ್ತಿ ಹೊಗಳುವುದು, ಮತ್ತು ಉಳಿದ ಊರ ಜನರೆಲ್ಲರೂ ಮೋಸ ಹೋಗುವಂತೆ ಮಾಡುವುದು ! ಆಗ ನಾವೆಲ್ಲರೂ ಒಂದೇ ವಿಚಿತ್ರ ಪರಿಸ್ಥಿತಿಯಲ್ಲಿರುತ್ತೇವೆ. ಹಾಗೆ ಮಾಡುವುದು ಬುದ್ಧಿವಂತಿಕೆಯಲ್ಲವೆ ?" ("ಹೌದು, ಹೌದು. ಅಲ್ಲವೆ ಮತ್ತೆ ! ನ್ಯಾಯಾಧೀಶನ ಮಾತು ಸರಿಯಾಗಿದೆ !" ಎಂದೆಲ್ಲರೂ ಕೂಗಿದರು.) "ಸರಿ ಹಾಗಾದರೆ—ಇನ್ನು ಮೋಸದ ಮಾತೇ ಕೂಡದು, ಹೋಗಿ ಮನೆಗೆ ; ಎಲ್ಲರೂ ಬಂದು ಈ ದುರಂತ ನಾಟಕವನ್ನು ನೋಡುವಂತೆ ಪ್ರೋತ್ಸಾಹಿಸಿ."

ಮರುದಿನ ನೋಡಬೇಕಿತ್ತು, ಊರೊಳಗೆಲ್ಲಿ ಹೋದರೂ ಆ ಪ್ರದರ್ಶನ ಎಷ್ಟು ಸೊಗಸಾಗಿತ್ತು ಎನ್ನುವುದಲ್ಲದೆ ಬೇರೆ ಮಾತೇ ನಿಮ್ಮ ಕಿವಿಗೆ ಬೀಳುತ್ತಿರಲಿಲ್ಲ. ಆ ರಾತ್ರಿಯೂ ಮತ್ತೆ ನಾಟಕಮಂದಿರ ಕಿಕ್ಕಿರಿದು ತುಂಬಿತ್ತು, ಅದೇ ರೀತಿಯಲ್ಲೇ ನಾವು ಅವರನ್ನೂ ಮೋಸಗೊಳಿಸಿದೆವು. ಪ್ರದರ್ಶನವನ್ನು ಮುಗಿಸಿಕೊಂಡು ನಾನೂ, ರಾಜನೂ, ಡ್ಯೂಕನೂ ನಮ್ಮ ತೆಪ್ಪಕ್ಕೆ ಹಿಂದಿರುಗಿದೆವು ; ಎಲ್ಲರೂ ಊಟ ಮಾಡಿದೆವು. ಆ ಮೇಲಾಮೇಲೆ ನಡುರಾತ್ರಿಯ ಹೊತ್ತಿಗೆ ನಾನೂ ಜಿಮ್ಮನೂ ತೆಪ್ಪವನ್ನು ನೀರಿಗೆ ನೂಕಿ ನಡು-ನದಿಯ ತನಕ ಅದನ್ನು ತೇಲಿಸಿಕೊಂಡು ಹೋಗಿ ಮತ್ತೆ ಒಳಕ್ಕೆ ತಂದು ಊರಿಗೆ ಸುಮಾರು ಎರಡು ಮೈಲಿಗಳ ಕೆಳಗೆ ಬಚ್ಚಿಡಬೇಕೆಂದು ಅವರು ಹೇಳಿದರು.

ಮೂರನೆಯರಾತ್ರಿ ಮತ್ತೆ ನಾಟಕಮಂದಿರ ಕಿಕ್ಕಿರಿದು ತುಂಬಿತ್ತು-ಆದರೆ ಈ ಬಾರಿ ಹೊಸಬರು ಯಾರೂ ಬ ದಿರಲಿಲ್ಲ ಹಿಂದಿನ ಎರಡು ರಾತ್ರಿಗಳಲ್ಲಿ ಬಂದಿದ್ದವರೇ ಇಂದೂ ಬಂದಿದ್ದರು. ನಾನು ಡ್ಯೂಕನ ಜತೆ ಬಾಗಿಲಲ್ಲಿ ನಿಂತಿದ್ದೆ ; ಒಳಗೆ ಬಂದ ಪ್ರತಿಯೊಬ್ಬನ ಜೇಬೂ ಊದಿಕೊಂಡಿದ್ದಂತೆ ಅಥವಾ ತನ್ನ ಅಂಗಿಯೊಳಗೇನನ್ನೋ ಅವನು ಮುಚ್ಚಿಕೊಂಡಿದ್ದಂತೆ ನನಗೆ ಕಂಡುಬಂತು; ಪರಿಮಳದ್ರವ್ಯಗಳನ್ನೇನೂ ಅವರು ತಂದಿರಲಿಲ್ಲವೆಂದು ಎಷ್ಟು ದೂರದಿಂದಲಾದರೂ ಹೇಳಬಹುದಿತ್ತು. ಉಬ್ಬಿಕೊಂಡಿದ್ದುದರಿಂದ ಅವು ರೋಗತಗುಲಿದ ಮೊಟ್ಟೆಗಳು, ಕೊಳೆತ ಕೋಸುಗಳು ಮುಂತಾದವೆಂದು ನಾನು ವಾಸನೆ ಹಿಡಿದೆ. ಆಸುಪಾಸಿನಲ್ಲೆಲ್ಲಾದರೂ ಸತ್ತ ಬೆಕ್ಕೊಂದು ಬಿದ್ದಿದ್ದರೆ ನಾನದನ್ನು ಗುರುತಿಸಬಲ್ಲೆನಾಗಿದ್ದರೆ, ಬಲ್ಲೆನೆಂದೇ ನನಗೆ ತೋರುತ್ತದೆ, ಅಂಥಾ ಅರವತ್ತುನಾಲ್ಕು ಜನ ಒಳಗೆ ಬಂದಿದ್ದರು. ನಾನು ಒಂದುಕ್ಷಣ ಒಳಗೆ ಹೋದೆ; ಅದು ನನಗೆ ಅತಿಯಾಯಿತು;

ಅದನ್ನು ಸಹಿಸುವುದು ನನ್ನಿಂದ ಸಾಧ್ಯವಾಗಲಿಲ್ಲ. ಇನ್ನು ನಾಟಕಮಂದಿರದಲ್ಲಿ ಎಳ್ಳು ಸಿಡಿಯುವಷ್ಟೂ ಸ್ಥಳವಿಲ್ಲವೆಂದು ಕಂಡುಬಂದಾಗ, ಡ್ಯೂಕ್ ಯಾರಕ್ಕೆಗೋ ಒಂದು ಪಾವಲಿಯನ್ನು ಹಾಕಿ ಒಂದು ಕ್ಷಣ ಬಾಗಿಲು ಕಾಯುತ್ತಿರು ಎಂದು ಹೇಳಿ ವೇದಿಕೆಯ ಬಾಗಿಲ ಕಡೆಗೆ ಬಳಸಿಕೊಂಡು ಹೋದ, ನಾನು ಅವನನ್ನು ಹಿಂಬಾಲಿಸಿದೆ. ನಾವು ಮೂಲೆಯನ್ನು ಬಳಸಿ ಕತ್ತಲೆಯಲ್ಲಿ ಚಲಿಸುತ್ತಿದ್ದಾಗ, ಅವನು ಹೇಳಿದ:

"ಈಗ ಬೇಗ ಬೇಗ ಹೆಜ್ಜೆ ಹಾಕು, ಮನೆಗಳಾಚೆಗೆ, ಊರಾಚೆಗೆ; ಆಮೇಲೆ ತೆಪ್ಪಕ್ಕೆ ಧುಮುಕು. ಶವ ನಮ್ಮನ್ನು ಬೆನ್ನಟ್ಟಿಬಂದಂತಿದೆ!" ನಾನು ಹಾಗೆ ಮಾಡಿದೆ, ಅವನೂ ಹಾಗೆಯೇ ಮಾಡಿದ. ಏಕಕಾಲದಲ್ಲಿ ನಾವು ತೆಪ್ಪವನ್ನು ಮುಟ್ಟಿದೆವು. ಎರಡು ಸೆಕೆಂಡುಗಳೊಳಗಾಗಿ ನಾವು ಅಂಧಕಾರಮಯವಾದ, ನೀರವವಾದ ಕೆಳನದಿಯಲ್ಲಿ ಜಾರುತ್ತಿದ್ದೆವು; ನದಿಯ ಮಧ್ಯಕ್ಕೆ ಸರಿಯುತ್ತಿದ್ದೆವು, ಒಬ್ಬರೂ ಒಂದು ಮಾತಾಡದೆ, ನಾಟಕಮಂದಿರದಲ್ಲಿ ನಾವು ಮರೆತು ಬಂದಿದ್ದ ಬಡರಾಜನಿಗೆ ಪ್ರೇಕ್ಷಕರೆಲ್ಲರೂ ತಗುಲಿಕೊಂಡಿರುತ್ತಾರೆ ಎಂದು ನಾನು ಭಾವಿಸಿದ್ದೆ. ಹಾಗೆ ಆಗಿರಲೇ ಇಲ್ಲ. ಕೂಡಲೇ ಅವನು ಡೇರೆಯೊಳಗಿನಿಂದ ಈಚೆಗೆ ತೆವಳಿಬಂದು ಹೇಳಿದ:

"ನಿನ್ನ ಹಳೆಯ ತಂತ್ರ ಈಸಲ ಗಳಿಸಿದ್ದೇನು, ಡ್ಯೂಕ್ ?" ಹಾಗಾದರೆ ಇವನು ಊರಿಗೆ ಬಾದೇ ಇರಲಿಲ್ಲ.

ಹಳ್ಳಿಯಿಂದ ಹತ್ತುಮೈಲಿಯಾಚೆಗೆ ನಾವು ಹೋಗುವ ತನಕ, ಒಂದು ದೀಪವನ್ನು ನಾವು ಹಚ್ಚಲಿಲ್ಲ. ಆಮೇಲೆ ಹಚ್ಚಿದೆವು; ಊಟಮಾಡಿದೆವು; ರಾಜನೂ ಡ್ಯೂಕನೂ ಆ ಜನರಿಗೆ ತಾವು ಕೈಕೊಟ್ಟಿದನ್ನು ನೆನೆದು ನಕ್ಕು ನಕ್ಕು ಸುಸ್ತಾದರು, ಡ್ಯೂಕ್ ಹೇಳಿದ :

"ಅನನುಭವಿಗಳು, ದಡ್ಡರು ! ಮೊದಲನೆಯ ಪ್ರದರ್ಶನದಲ್ಲಿ ಅವರು ಸುಮ್ಮನಿದ್ದುಬಿಡುವರೆಂದೂ ಆಮೇಲೆ ಊರಿಗೆ ಊರನ್ನೇ ಎಳೆತರುವರೆಂದೂ ನನಗೆ ಗೊತ್ತಿತ್ತು ಮೂರನೆಯ ರಾತ್ರಿ. ಅದು ತಮ್ಮ ಸರದಿಯೆಂದು ಭಾವಿಸಿ, ನಮ್ಮನ್ನು ಹಿಡಿದೇಹಾಕುವರೆಂಬುದೂ ನನಗೆ ಗೊತ್ತಿತ್ತು. ಸರಿ, ಈಗ ಅವರ ಸರದಿ; ಅವರು ಅದಕ್ಕಾಗಿ ಏನೇನು ಮಾಡಿಯಾರೆಂಬುದನ್ನರಿಯಲು ನಾನು ಏನನ್ನಾದರೂ ಕೊಟ್ಟೇನು. ತಮಗೆ ಸಿಕ್ಕಿದ ಅವಕಾಶವನ್ನು ಅವರು ಹೇಗೆ ಬಳಸಿಕೊಳ್ಳುತ್ತಾರೆಂಬುದನ್ನರಿಯಲು ನಾನು ಇಷ್ಟಪಡುವೆನು. ಅವರು ಅದನ್ನು, ಬೇಕಾದರೆ, ಒಂದು ವನಭೋಜನಕೂಟವನ್ನಾಗಿ ಮಾಡಿಕೊಳ್ಳಬಲ್ಲರು–ಅವರು ಬೇಕಾದಷ್ಟು ಆಹಾರಸಾಮಗ್ರಿಗಳನ್ನು ತಂದಿದ್ದರು."

ಈ ಕೇಡಿಗರು ಆ ಮೂರು ರಾತ್ರಿಗಳಲ್ಲಿ ನಾಲ್ಕುನೂರ ಅರವತ್ತೈದು ಡಾಲರುಗಳನ್ನು ಸಂಪಾದಿಸಿದ್ದರು. ಬಂಡಿಗಟ್ಟಲೆ ಹಣವನ್ನು ಆ ರೀತಿಯಲ್ಲಿ ಸುಲಿಗೆ ಮಾಡಿದ್ದನ್ನು ನಾನು ಎಂದೂ ಕಂಡಿಲ್ಲ.

ಆಮೇಲೆ ಅವರಿಗೆ ನಿದ್ದೆಬಂತು, ಗೊರಕೆ ಹೊಡೆಯುತ್ತಿದ್ದರು. ಆಗ ಜಿಮ್ ಹೇಳಿದ :

"ಈ ರಾಜರು ನಡೆದುಕೊಳ್ಳುವ ರೀತಿಯನ್ನು ಕಂಡು ನಿನಗೆ ಆಶ್ಚರ್ಯವಾಗಲಿಲ್ಲವೆ, ಹಕ್?"

"ಇಲ್ಲ, ಆಗಲಿಲ್ಲ" ಎಂದೆ ನಾನು.

"ಏಕೆ ಆಗಲಿಲ್ಲ, ಹಕ್ ?"

"ಏಕೆ ಎಂದರೆ, ಅದು ಅವರ ರಕ್ತದಲ್ಲಿ ಬಂದುಹೋಗಿದೆ. ಅವರೆಲ್ಲರೂ ಒಂದೇ ಬಗೆಯಾಗಿರುತ್ತಾರೆ."

"ಹಕ್, ಆದರೂ ಈ ನಮ್ಮ ರಾಜರು ಪಕ್ಕಾ ಕೇಡಿಗರು; ಅವರು ಹಾಗೆಯೇ ಸರಿ; ಪಕ್ಕಾ ಕೇಡಿಗರು."

"ನಾನು ಹೇಳುತ್ತಿದ್ದುದೂ ಅದನ್ನೇ ; ಎಲ್ಲ ರಾಜರೂ ನನಗೆ ತಿಳಿದಂತೆ, ಬಹು ಮಟ್ಟಿಗೆ ಕೇಡಿಗರು."

"ಹಾಗೋ ?"

"ಅವರ ಚರಿತ್ರೆಯನ್ನು ನೀನು ಹಿಂದೊಮ್ಮೆ ಓದಿದ್ದೀಯಲ್ಲವೆ? ಎಂಟನೆಯ ಹೆನ್ರಿಯನ್ನು ನೋಡು; ಅವನ ಮುಂದೆ ಇವನು ಭಾನುವಾರ ಶಾಲೆಯ ಮೇಲ್ವಿಚಾರಕ ನೆನ್ನಬೇಕು. ಇನ್ನೂ ನೋಡು ಎರನೆಯ ಚಾರಲ್ಸನ್ನು, ಹದಿನಾಲ್ಕನೆಯ ಲೂಯಿಯನ್ನು ಹದಿನೈದನೆಯ ಲೂಯಿಯನ್ನು, ಎರನೆಯ ಜೇಮ್ಸ್ ಎರಡನೆಯ ಎಡ್ವರ್ಡ್ ಮೂರನೆಯ ರಿಚರ್ಡ್ ಮುಂತಾಗಿ ನಲವತ್ತು ಮಂದಿ ರಾಜರನ್ನು; ಜತೆಗೆ ಸ್ಯಾಕ್ಸನ್‌ವಂಶದ ಸಪ್ತ ರಾಜ್ಯಾಧಿಪತಿಗಳೆಲ್ಲರೂ ಒಂದಾನೊಂದು ಕಾಲದಲ್ಲಿ ಜನರಿಗೆ ಉಪದ್ರವಕೊಟ್ಟು ದಾಂಧಲೆ ಮಾಡುತ್ತಿದ್ದರು. ನೀನು ಎಂಟನೆಯ ಹೆನ್ರಿಯನ್ನು ಅವನ ತುಂಬು ಯೌವನದಲ್ಲಿ ನೋಡ ಬೇಕಾಗಿತ್ತು ! ಅವನು ನಿಜವಾಗಿಯೂ ತುಂಬು ಹೂವೇ ಆಗಿದ್ದನು. ದಿನಕ್ಕೊಬ್ಬಳು ಹೊಸ ಮಡದಿಯನ್ನು ಮದುವೆಯಾಗುತ್ತಿದ್ದನು ; ಮರುಬೆಳಗಿನಲ್ಲಿ ಅವಳ ತಲೆಯನ್ನು ಕಡಿಸಿಹಾಕುತ್ತಿದ್ದನು. ಅವನು ಈ ಕೆಲಸವನ್ನು 'ನೀರು ಕುಡಿದಷ್ಟು ಸರಾಗವಾಗಿ ಮಾಡಿಬಿಡುತ್ತಿದ್ದನು. "ನೆಲ್ ಗ್ವಿನ್ನಳನ್ನು ಕರೆದುಕೊಂಡು ಬಾ ಎನ್ನುತ್ತಿದ್ದನು. ಅವನ ಕಡೆಯವರು ಅವಳನ್ನು ಇವನ ಬಳಿಗೆ ತಂದುಬಿಡುತ್ತಿದ್ದರು. ಮರು ಬೆಳಗಿನಲ್ಲಿ "ಅವಳ ತಲೆಯನ್ನು ಕಡಿದುಹಾಕಿ" ಎನ್ನುತ್ತಿದ್ದನು. ಅವರು ಕಡಿದುಹಾಕುತ್ತಿದ್ದರು. "ಜೇನ್ ಷೋರಳನ್ನು ಕರೆದುಕೊಂಡುಬನ್ನಿ" ಎನ್ನುತ್ತಿದ್ದನು; ಅವಳು ಅವನ ಬಳಿಗೆ ಹೋಗುತ್ತಿದ್ದಳು. ಬೆಳಗಾಗುತ್ತಲೆ ಅವಳ ಶಿರಚ್ಛೇದನಕ್ಕೆ ಅವನಿಂದ ಆಜ್ಞೆ; ಅವರು ಶಿರಚ್ಛೇದನ ಮಾಡುತ್ತಿದ್ದರು. "ಫೇರ್ ರೋಸಮನ್ನಳನ್ನು ಕರೆಸಿ." ಫೇರ್ ರೋಸಮನ್ ಓಗೊಟ್ಟಳು. ಬೆಳಗಾಗುತ್ತಲೆ ಅವಳ ಶಿರಚ್ಛೇದನಕ್ಕೆ ಅವನಿಂದ ಆಜ್ಞೆ; ಅವರು ಅದನ್ನು ಕಡಿದುಹಾಕುತ್ತಿದ್ದರು. ಪ್ರತಿರಾತ್ರಿಯೂ ತನಗೆ ಒಂದು ಕಥೆ ಹೇಳುವಂತೆ ಅವನು ಪ್ರತಿಯೊಬ್ಬಳನ್ನೂ ಒತ್ತಾಯಪಡಿಸುತ್ತಿದ್ದನು; ಸಾವಿರದೊಂದು ಕಥೆಗಳನ್ನು ಶೇಖರಿಸುವತನಕ ಹಾಗೆಯೇ ಮಾಡಿದನು; ಆಮೇಲೆ ಅದಕ್ಕೆ ಡೋಮ್ಸ್‌ಡೇ ಬುಕ್ (ಅಂತಿಮ ತೀರ್ಪಿನ ದಿನದ ಪುಸ್ತಕ) ಎಂದು ಹೆಸರಿಟ್ಟನು; ಅದು ಸಾರ್ಥಕವಾದ ಹೆಸರಾಗಿ

ತನ್ನ ತಿರುಳನ್ನು ತಾನೇ ಹೇಳಿಕೊಳ್ಳುತ್ತಿತ್ತು. ರಾಜರ ವಿಷಯ ನಿನಗೆ ತಿಳಿಯದು ಜಿಮ್; ನಾನು ಬಲ್ಲೆ. ಇಲ್ಲಿ ಹೇಳುತ್ತೇನೆ; ಇತಿಹಾಸದಲ್ಲಿ ನಾನು ಕಂಡಿರುವ ಕೆಲವೇ ಒಂದಿ ಅತ್ಯಂತ ದೋಷರಹಿತ ರಾಜರಲ್ಲಿ ಈ ನಮ್ಮ ಮುದಿಯ ಪಾಳ್‌ದೊರೆಯೂ ಒಬ್ಬ ನಾಗಿದ್ದಾನೆ. ಈ ದೇಶಕ್ಕೆ ಯಾವುದಾದರೂ ತೊಂದರೆಯನ್ನುಂಟುಮಾಡುವ ಮನಸ್ಸು ಆ ಹೆನ್ರಿಗೆ ಬಂದಿದ್ದರೆ ಅವನು ಅದಕ್ಕಾಗಿ ಮಾಡುತ್ತಿದ್ದುದೇನು? ಸುಳುವುಕೊಡುತ್ತಿದ್ದನೆ? ಮುನ್ನೆಚ್ಚರಿಕೆ ಕೊಡುತ್ತಿದ್ದನೆ? ಇದ್ದಕ್ಕಿದ್ದಂತೆಯೇ ಬಾಸ್ಟನ್‌ಬಂದರಿನಲ್ಲಿ ಇದ್ದ ಟೀ ಎಲ್ಲ ವನ್ನೂ ಸಮುದ್ರಕ್ಕೆ ಸುರಿಯುತ್ತಿದ್ದನು, ಸ್ವಾತಂತ್ರ್ಯಘೋಷಣೆಯೊಂದನ್ನು ಸಾರು ತ್ತಿದ್ದನು; ಧೈರ್ಯವಿದ್ದರೆ ಮುಂದೆ ಬನ್ನಿ ಎನ್ನುತ್ತಿದ್ದನು ಇದು ಅವನ ಕಾರ್ಯವಿಧಾನ– ಅವನು ಯಾರಿಗೂ ಒಂದಿಷ್ಟು ಅವಕಾಶಕೊಡುತ್ತಿರಲಿಲ್ಲ, ತನ್ನ ತಂದೆ ಡ್ಯೂಕ್ ಆಫ್ ವೆಲ್ಲಿಂಗ್‌ಟನ್ನನ ವಿಷಯದಲ್ಲಿ ಅವನಿಗೆ ಅನುಮಾನ ಬಂತು. ಆಗ ಅವನು ಮಾಡಿದ್ದೇನು? ತಲೆಯೆತ್ತಲು ಎಡೆಗೊಟ್ಟನೆ? ಇಲ್ಲ–ಬೆಕ್ಕಿಗೆ ಮಾಡುವಹಾಗೆ ಅವನನ್ನು ಮದಿರೆಯ ತೊಟ್ಟಿಯಲ್ಲಿ ಮುಳುಗಿಸಿ ಸಾಯಿಸಿದನು, ಜನರ ಹಣ ತನ್ನ ಕೈಗೆ ಸಿಕ್ಕು ವಷ್ಟು ಹತ್ತಿರದಲ್ಲಿದ್ದರೆ ಅವನು ಮಾಡುತ್ತಿದ್ದುದೇನು? ಕಸಿಯುತ್ತಿದ್ದನು. ನೀವು ಅವನಿಗೆ ಯಾವ ಕೆಲಸವನ್ನಾದರೂ ಮಾಡಹೇಳಿದಿರಿ, ಮುಂಗಡವಾಗಿ ಹಣ ಕೊಟ್ಟಿರಿ ಎನ್ನಿ, ಆಗ ನೀವು ಅವನ ತಲೆಯ ಮೇಲೆಯೇ ಕುಳಿತು ಕೆಲಸ ಮಾಡಿಸಿ ಕೊಳ್ಳದೆ ಹೋದಿರಿ, ಎನ್ನಿ, ಅವನು ಮಾಡುತ್ತಿದ್ದುದೇನು? ಅವನು ಆ ಇನ್ನೊಂದನ್ನೇ ಮಾಡುತ್ತಿದ್ದ. ಒಂದು ವೇಳೆ ಅವನು ಬಾಯಿ ತೆಗೆದ, ಎನ್ನಿ – ಆಗಲೋ ? ಅವನು ಬೇಗ ಬಾಯಿ ಮುಚ್ಚಲಿಲ್ಲ ಎಂದರೆ, ಅಂಥಾ ಸಂದರ್ಭಗಳಲ್ಲಿ ಅವನಾಡುತ್ತಿದ್ದುದೆಲ್ಲ ಬರಿ ಸುಳ್ಳೇ. ಹೆನ್ರಿ ಅಂಥಾ ಪರೋಪ ಜೀವಿ ಅವನೇನಾದರೂ ಉದ್ದಕ್ಕೂ ನಮ್ಮ ಜತೆಯಲ್ಲೇ ಬಂದಿದ್ದ ಎನ್ನಿ, ಆಗ ಆ ಊರಿಗೆ ಈ ನಮ್ಮ ರಾಜರು ಮಾಡಿದ್ದಕ್ಕಿಂತಲೂ ಹೆಚ್ಚು ಅನರ್ಥಕಾರಿಯಾದ ಮೋಸವನ್ನು ಮಾಡುತ್ತಿದ್ದನು. ನಮ್ಮವರು ಕುರಿಮರಿ ಗಳೆಂದಲ್ಲ ; ವಾಸ್ತವ ವಿದ್ಯಮಾನಗಳನ್ನು ಗಮನಿಸಿದರೆ ಇವರು ಖಂಡಿತವಾಗಿ ಹಾಗಿಲ್ಲ ; ಆದರೂ ಆ ಹಳೆಯ ಟಗರಿನ ಮುಂದೆ ಇವರು ನಿಲ್ಲಲಾರರು. ನಾನಂತೂ ಇಷ್ಟು ಹೇಳುತ್ತೇನೆ : ರಾಜರೆಂದರೆ ರಾಜರೇ ; ನೀನು ಅದನ್ನೂ ಒಂದಿಷ್ಟು ಲೆಕ್ಕಕ್ಕೆ ತೆಗೆದುಕೊಳ್ಳಬೇಕು ಒಟ್ಟಾರೆ ತೆಗೆದುಕೊಂಡಲ್ಲಿ ಅವರು ನೀಚರೇ ಸರಿ. ಅವರ ಬೆಳವಣಿಗೆಯೇ ಹಾಗೆ."

"ಆದರೆ ಹಕ್, ಇವನದಂತೂ ಬಲು ನೀಚತನವೆಂದು ವಾಸನೆಯೇ ಸಾರುತ್ತಿದೆ."

"ಹೌದು, ಅವರೆಲ್ಲರೂ ಹಾಗೆಯೇ, ಜಿಮ್. ರಾಜರ ವಾಸನೆ ಹಾಗಿರುವುದಕ್ಕೆ ನಾವೇನೂ ಮಾಡಲಾರೆವು. ಚರಿತ್ರೆಯೂ ಅದನ್ನು ಎಂದೂ ತಿಳಿಸಿಲ್ಲ."

"ಈ ಡ್ಯೂಕನೇನೋ ಕೆಲವು ವಿಷಯಗಳಲ್ಲಿ ಎಷ್ಟೋ ವಾಸಿ."

“ಹೌದು, ಡೂಕ್ ಪದವಿಯವನು ಬೇರೆ ರೀತಿಯಲ್ಲಿರುವನು. ಆದರೆ ವ್ಯತ್ಯಾಸ ಹೆಚ್ಚೇನಿಲ್ಲ. ಇವನೀಗ ನಿರ್ಭಾಗ್ಯನಾದ ಬಲು ಸಾಧಾರಣ ತರದ ಡ್ಯೂಕ್. ಅವನು ಕುಡಿತದ ಅಮಲಿನಲ್ಲಿರುವಾಗ ಕಣ್ಣು ಚೆನ್ನಾಗಿರುವ ಯಾರೂ ಇವನನ್ನು ರಾಜನಲ್ಲ ಎಂದು ಸಾಧಿಸುವುದು ಕಷ್ಟವಾಗುತ್ತದೆ.”

“ಅದುಹೇಗೇ ಇರಲಿ, ಇನ್ನಷ್ಟು ಮಂದಿ ರಾಜರು ನನಗೆ ಬೇಕೇ ಇಲ್ಲ. ನಾನು ಇವರನ್ನು ತಾಳಿಕೊಳ್ಳುವುದೇ ಕಷ್ಟವಾಗಿದೆ.”

“ನನಗೂ ಹಾಗೆಯೇ ತೋರುತ್ತದೆ, ಜಿಮ್, ಅವರು ನಮ್ಮೊಂದಿಗೇ ಇದ್ದಾರೆ; ಅವರು ಯಾರೆಂಬುವನ್ನು ನಾವು ಗಮನಿಸಬೇಕು ಮತ್ತು ಉಚಿತ ಗೌರವವನ್ನು ಸಲ್ಲಿಸ ಬೇಕು. ಕೆಲವು ಸಮಯವಂತೂ ರಾಜನ ಸಂಪರ್ಕವೇ ಇಲ್ಲದ ಯಾವುದಾದರೂ ದೇಶದ ಸುದ್ದಿಗೆ ಕಿವಿಗೊಡಬೇಕು ಎನ್ನಿಸುತ್ತದೆ,” .

ಇವರು ನಿಜವಾದ ರಾಜನಾಗಲಿ ಡ್ಯೂಕನಾಗಲೀ ಅಲ್ಲವೆಂದು ಜಿಮ್ಮನಿಗೆ ಹೇಳಿ ಪ್ರಯೋಜನವಿರಲಿಲ್ಲ. ಅದರಿಂದ ಒಳ್ಳೆಯದೇನೂ ಆಗುತ್ತಿರಲಿಲ್ಲ. ಅಲ್ಲದೆ, ಪರಿಸ್ಥಿತಿ ನಾನು ಹೇಳಿದಂತೆಯೇ ಇತ್ತು. ಅವರನ್ನು ನಿಜವಾದ ರಾಜನೆಂದಾಗಲೀ ನಿಜವಾದ ಡ್ಯೂಕನೆಂದಾಗಲೀ ಹೇಳದಿರುವುದಕ್ಕೆ ಆಗುತ್ತಿರಲಿಲ್ಲ.

ನನಗೆ ನಿದ್ದೆ ಬಂತು; ನನ್ನ ಸರದಿ ಬಂದರೂ ಜಿಮ್ ನನ್ನನ್ನು ಕರೆಯಲಿಲ್ಲ. ಅವನು ಅನೇಕ ವೇಳೆ ಹಾಗೆ ಮಾಡಿದ್ದಾನೆ. ಮುಂಬೆಳಗಿನ ಹೊತ್ತಿಗೆ ನನಗೆ ಎಚ್ಚರವಾಯಿತು. ಎದ್ದು ನೋಡಿದೆ; ಜಿಮ್ ತನ್ನ ಮಂಡಿಗಳ ನಡುವೆ ತಲೆಹಾಕಿಕೊಂಡು ತನ್ನಷ್ಟಕ್ಕೆ ತಾನೆ ಅಳುತ್ತಾ, ನರಳುತ್ತಾ ಇದ್ದನು; ನಾನು ಅದನ್ನು ನೋಡಿಯೂ ನೋಡದವ ನಂತಿದ್ದೆ. ಅದೆಲ್ಲಾ ಏಕೆ ಎನ್ನುವುದು ನನಗೆ ತಿಳಿದಿತ್ತು. ಅವನಿಗೆ ತನ್ನ ಮಡದಿ ಮಕ್ಕಳನ್ನು ಅಗಲಿಬಂದ ಚಿಂತೆ ಹಿಡಿದಿತ್ತು, ಅವನ ಮನಸ್ಸು ಮನೆಯಕಡೆಗೆ ತುಯ್ಯು ತ್ತಿತ್ತು. ಏಕೆಂದರೆ ಅವನು ತನ್ನ ಬದುಕಿನಲ್ಲೇ ಎಂದೂ ತನ್ನ ಮಡದಿ ಮಕ್ಕಳಿಂದ ಅಗಲಿದ್ದವನಲ್ಲ. ತಮ್ಮತಮ್ಮ ಮನೆಯವರೆಂದರೆ ಆತಂಕಪಡುವ ಶ್ವೇತವರ್ಣೀಯ ರಂತೆಯೇ, ಅವನಿಗೂ ತನ್ನ ಸಂಸಾರದ ಬಗೆಗೆ ಆತಂಕವಿತ್ತು. ಇದು ಸ್ವಾಭಾವಿಕ ವೆಂದು ತೋರದಿರಬಹುದು: ಆದರೆ ನಾನಂತೂ ಹಾಗೆಂದೇ ಪರಿಗಣಿಸುತ್ತೇನೆ. ಎಷ್ಟೋ ರಾತ್ರಿಗಳಲ್ಲಿ ಅವನು ನನಗೆ ನಿದ್ದೆ ಬಂದಿರಬಹುದೆಂದು ತಿಳಿದುಕೊಂಡು, ಹೀಗೆಯೇ ನರಳಿ ದ್ದಾನೆ, ಅತ್ತಿದ್ದಾನೆ; “ಹಾ! ಪುಟ್ಟ ಲಿಲಿಸಬೆತ್! ಹಾ! ಪುಟ್ಟಜಾನಿ! ಬಲು ಸಂಕಟ ವಾಗುತ್ತಿದೆ ನಾನು ಇನ್ನುಮುಂದೆ ನಿಮ್ಮನ್ನೆಂದೂ ಕಾಣದೆ ಹೋದೆನು!” ಎಂದಿದ್ದಾನೆ. ತುಂಬಾ ಒಳ್ಳೆಯ ನಿಗ್ರೋ ಜಿಮ್.

ಈ ಸಲ ಹೇಗೋ ಮಾಡಿ ನಾನು ಅವನ ಮಡದಿ ಮಕ್ಕಳ ಪ್ರಸ್ತಾಪವೆತ್ತಿ ಮಾತಾ ಡಿಸತೊಡಗಿದೆ. ಆಮೇಲಾಮೇಲೆ ಅವನು ಹೇಳಿದನು:

"ಈ ಸಲ ನಾನು ಕುಗ್ಗಿ ಹೋಗಿರುವುದಕ್ಕೆ ಕಾರಣವಿದು: ಕ್ಷಣಕಾಲ ಹಿಂದೆ ಆ ದೂರತೀರದಲ್ಲಿ ಯಾವುದೋ ಒಂದು ಸಿಡಿತವೋ ಹೊಡೆತವೋ ನನ್ನ ಕಿವಿಗೆ ಬಿದ್ದಂತಾಯಿತು; ಹಿಂದೆ ನಾನು ನನ್ನ ಬಡಪಾಯಿ ಪುಟ್ಟ ಲಿಸಬೆತಳಿಗೆ ಎಸಗಿದ ಘೋರ ಅಪಚಾರವನ್ನು ನೆನಪಿಗೆ ತಂದಿತು. ಇನ್ನೂ ಅವಳು ನಾಲ್ಕು ವರುಷದ ಹಸುಳೆಯಾಗಿದ್ದಾಗ ಅವಳಿಗೆ ಒಮ್ಮೆ ಗೊಬ್ಬರದ ಜ್ವರ ಬಂತು, ಅವಳನ್ನು ತುಂಬಾ ನರಳಿಸಿತು. ಜ್ವರ ಬಿಟ್ಟಮೇಲೆ ಒಂದು ದಿನ ಅವಳು ತನ್ನ ಹತ್ತಿರದಲ್ಲೇ ನಿಂತಿದ್ದಾಗ ನಾನು ಅವಳಿಗೆ ಹೇಳಿದೆ :

"ಆ ಬಾಗಿಲನ್ನು ಹಾಕು."

"ಅವಳು ಹಾಗೆ ಮಾಡಲಿಲ್ಲ: ನನ್ನ ಕಡೆಗೆ ಕಿರುನಗೆ ಬೀರುತ್ತಾ ಸುಮ್ಮನೆ ನಿಂತುಬಿಟ್ಟಳು. ನನಗೆ ಸಿಟ್ಟು ಬಂತು, ಗಟ್ಟಿಯಾಗಿ ಕಿರುಚಿದೆ:

"ನನ್ನ ಮಾತು ನಿನಗೆ ಕೇಳಿಸಲಿಲ್ಲವೆ ? ಬಾಗಿಲನ್ನು ಹಾಕು!"

"ಆದರೂ ಅವಳು ಹಾಗೆಯೇ ನಿಂತಿದ್ದಳು, ಒಂದು ರೀತಿಯ ಕಿರುನಗೆಯನ್ನು ಸೂಸುತ್ತಿದ್ದಳು. ನನ್ನ ಸಿಟ್ಟು ನೆತ್ತಿಗೇರಿತು! ನಾನು ಹೇಳಿದೆ :

"ನಾನು ಹೇಳಿದಂತೆ ನೀನು ನಡೆಯುವ ಹಾಗೆ ಮಾಡುತ್ತೇನೆ!"

"ಹಾಗೆ ಹೇಳಿ ನಾನು ಅವಳ ತಲೆಯ ಒಂದು ಪಕ್ಕಕ್ಕೆ ಒಂದೇಟನ್ನು ಬಿಗಿದೆ, ಅವಳು ಬಿದ್ದು ಉರುಳಿಕೊಂಡಳು ಒಳಿಕ ನಾನು ಇನ್ನೊಂದು ಕೊಠಡಿಗೆ ಹೋದೆ, ಹತ್ತು ನಿಮಿಷ ಆಚೆಗೆಲ್ಲಿಯೋ ಹೋಗಿಬಂದೆ. ನಾನು ಹಿಂದಿರುಗಿದಾಗ ಆ ಬಾಗಿಲು ಇನ್ನೂ ತೆರೆದೇ ಇತ್ತು. ಅವಳು ಸರಿಯಾಗಿ ಬಾಗಿಲ ಕೆಳಗೆ ನಿಂತು ಕೆಳಮುಖಹಾಕಿ ಕಂಬನಿ ಸುರಿಸಿ ಅಳುತ್ತಿದ್ದಳು. ನನಗೆ ತುಂಬಾ ಕೋಪ ಬಂತು. ನಾನು ಅವಳನ್ನು ಹಿಡಿಯಹೋದೆ. ಆದರೆ ಅದೇ ಸಮಯಕ್ಕೆ–ಅದು ಕೊಠಡಿಯ ಒಳಕ್ಕೆ ತೆರೆದುಕೊಳ್ಳುವ ಬಾಗಿಲು–,ತಟಕ್ಕನೆ ಗಾಳಿ ಜೋರಾಗಿ ಬೀಸಿತು. ಮಗುವಿನ ಹಿಂದೆ ಬಾಗಿಲು ಧಿಡೀರೆಂದು ಮುಚ್ಚಿಕೊಂಡಿತು. ನನ್ನ ದುರ್ವಿಧಿ, ಮಗು ತಾನಿದ್ದ ಸ್ಥಳದಿಂದ ಕದಲಲಿಲ್ಲ. ನನ್ನ ಜೀವದುಸಿರೇ ಹಾರಿಹೋಯಿತು. ಆಗ ನನಗೆ ಹೇಗಾಯಿತೆಂದು ಈಗ ಹೇಳಲಾರೆ, ಗಡಗಡ ನಡುಗುತ್ತ ಹೆಜ್ಜೆ ಹಾಕಿದೆ, ಮೆಲ್ಲಗೆ ನಿಧಾನವಾಗಿ ಬಾಗಿಲನ್ನು ತೆರೆದೆ. ಮಗುವಿನ ಬೆನ್ನಹಿಂದೆ ಸದ್ದುಮಾಡದೆ ತಲೆಹಾಕಿ ನೋಡಿದೆ. ತತ್-ಕ್ಷಣವೇ ನನ್ನ ಬಲವನ್ನೆಲ್ಲಾ ಬಿಟ್ಟು 'ಪೌ' ಎಂದೆ. ಅವಳು ಕದಲಲೇ ಇಲ್ಲ ಓ ಹಕ್, ನಾನು ಕೈಗೆತ್ತಿ ಎದೆಗಿಟ್ಟುಕೊಂಡೆ, 'ಓ ನನ್ನ ಬಡಪಾಯಿ ಪುಟ್ಟಮಗುವೆ! ಸರ್ವಶಕ್ತನಾದ ಭಗವಂತನೇ ನಿರ್ಭಾಗ್ಯನಾದ ಜಿಮ್ಮನನ್ನು ಕ್ಷಮಿಸು–ಏಕೆಂದರೆ, ಅವನು ಈ ತಪ್ಪಿಗಾಗಿ ತನ್ನನ್ನು ತಾನೇ ಜೀವಮಾನ ಪರ್ಯಂತ ಕ್ಷಮಿಸಲಾರ!' ಎಂದು ಅತ್ತು ಗೋಳಾಡಿದೆ. ಅವಳು ಕಿವುಡಿಯಾದಳು, ಮೂಕಿಯಾದಳು, ಹಕ್-ಕಿವುಡಿಯಾದಳು, ಮೂಕಿಯಾದಳು. ಪಾಪಿನಾನು!"

## ೨೪

ಮಂರುದಿವಸ ರಾತ್ರಿಯಾ ಹೊತ್ತಿಗೆ ನಾವು ನದೀಮಧ್ಯದಲ್ಲಿದ್ದು ನೀರ್‌ಬಳ್ಳಿಗಳಿಂದ ಮರೆಯಾದ ಕಿರುನಿಲ್ದಾಣದ ಚಾಚಿನ ಕೆಳಗೆ ತೆಪ್ಪವನ್ನು ನಿಲ್ಲಿಸಿಕೊಂಡೆವು. ನದಿಯು ಈ ದಡದ ಮೇಲೊಂದು ಆ ದಡದಮೇಲೊಂದು ಹೀಗೆ ಎರಡು ಹಳ್ಳಿಗಳಿದ್ದವು; ಡ್ಯೂಕನೂ ರಾಜನೂ ಆ ಊರುಗಳಲ್ಲಿ ತಾವು ನಡೆಸಬೇಕಾಗಿರುವ ಯೋಜನೆಯೊಂದನ್ನು ಸಿದ್ಧಗೊಳಿಸತೊಡಗಿದರು. ಜಿಮ್ ಡ್ಯೂಕನೊಂದಿಗೆ ಮಾತಾಡುತ್ತಿದ್ದನು; ಹಗಲೆಲ್ಲ ಹಗ್ಗಗಳಿಂದ ಬಿಗಿಸಿಕೊಂಡು ಡೇರೆಯಲ್ಲಿಬಿದ್ದುಕೊಂಡಿರುವುದು ತನಗೆ ಅತಿಪ್ರಯಾಸಕರವೂ ಬೇಸರತರುವಂಥದೂ ಆಗಿರುವುದರಿಂದ, ಅವರ ಕಾರ್ಯಕ್ರಮ ಕೆಲವೇ ಗಂಟೆಗಳಲ್ಲಿ ಮುಗಿದೀತೆಂದು ತಾನು ನಿರೀಕ್ಷಿಸುವುದಾಗಿ ಹೇಳಿದನು. ನಾವು ಅವನೊಬ್ಬನನ್ನೇ ಬಿಟ್ಟು ಹೋಗುವಾಗ ಹಗ್ಗದಿಂದ ಕಟ್ಟಿಹಾಕಲೇಬೇಕಾಗಿತ್ತು ನೋಡಿ. ಏಕೆಂದರೆ ಹಾಗೆ ಕಟ್ಟಿ ಹಾಕದೆ ಅವನನ್ನು ಅವನಪಾಡಿಗೆ ಒಂಟಿಯಾಗಿ ಬಿಟ್ಟುಹೋಗಿದ್ದರೆ, ಅವನನ್ನು ಕಂಡವರು ಯಾರೂ ಅವನೊಬ್ಬ ಪರಾರಿಯಾದ ನೀಗ್ರೋ ಎಂದು ಗ್ರಹಿಸಲಾಗುತ್ತಿರಲಿಲ್ಲ ನೋಡಿ. ಆದ್ದರಿಂದ, ಹಗ್ಗದಿಂದ ಕಟ್ಟಿಸಿಕೊಂಡು ಹಗಲೆಲ್ಲ ಬಿದ್ದುಕೊಂಡಿರುವುದು ಸ್ವಲ್ಪ ಕಷ್ಟವೆಂದೂ, ಅದನ್ನು ನಿವಾರಿಸುವುದಕ್ಕಾಗಿ ತಾನೊಂದು ಉಪಾಯವನ್ನು ಕಂಡುಹಿಡಿಯುವುದಾಗಿಯೂ ಡ್ಯೂಕ್ ಹೇಳಿದನು.

ಡ್ಯೂಕ್ ಇದ್ದಾನಲ್ಲ, ಅವನು ಅಸಾಧಾರಣ ಬುದ್ಧಿಶಾಲಿ; ಅವನು ಅಂಥುದೊಂದನ್ನು ಬೇಗ ಕಂಡುಹಿಡಿದನು; ಜಿಮ್ಮನಿಗೆ ಅವನು ಲಿಯರ್‌ರಾಜನ ವೇಷವನ್ನು ಹಾಕಿದನು—ಉದ್ದನೆಯ ಪರದೆ-ಬಟ್ಟೆಯ ಮೇಲಂಗಿ ಮತ್ತು ಕುದುರೆ-ಕೂದಲಿಂದ ತಯಾರಿಸಿದ ಮುಸುಕು, ಮೀಸೆಗಳು. ಮತ್ತು ತನ್ನ ನಾಟಕದ ಬಣ್ಣವನ್ನು ತೆಗೆದುಕೊಂಡು ಜಿಮ್ಮನ ಮುಖ, ಕೈಗಳು, ಕಿವಿಗಳು ಮತ್ತು ಕತ್ತು ಇವುಗಳ ಮೇಲೆಲ್ಲಾ ಮಾಸಲು ನೀಲಿ ಬಣ್ಣವನ್ನು ದಪ್ಪವಾಗಿ ಬಳಿದನು; ಅವನನ್ನು ನೋಡಿದವರೆ, ಒಂಭತ್ತು ದಿನಗಳ ಕಾಲ ನೀರಿನಲ್ಲಿ ಮುಳುಗಿದ್ದವನಂತೆ ಕಂಡುಬರುತ್ತಿತ್ತು. ನನ್ನ ಜೀವಮಾನದಲ್ಲಿ ನಾನು ಕಂಡ ಅತ್ಯಂತ ಭಯಂಕರ ದೃಶ್ಯದಂತೆ ಅವನು ಕಾಣಿಸಲಿಲ್ಲವೆಂದರೆ ನಾನು ಸುಳ್ಳನಾದೇನು! ಬಳಿಕ ಡ್ಯೂಕ್ ತೆಳುಹಲಗೆಯೊಂದನ್ನು ಎತ್ತಿಕೊಂಡು ಅದರಮೇಲೆ ಹೀಗೆ ಗುರುತು ಹಾಕಿದನು:

"ರೋಗಗ್ರಸ್ತನಾದ ಅರಬ—ತನ್ನ ಬುದ್ಧಿ ನೆಟ್ಟಗಿದ್ದಾಗ ಇವನು ಅಪಾಯಕಾರಿಯಲ್ಲ."

ಆ ಹಲಗೆಯನ್ನು ಒಂದು ಕೋಲಿಗೆ ಮೊಳೆ ಹೊಡೆದು, ಆ ಕೋಲನ್ನು ಡೇರೆಯ ಮುಂದೆ ಐದಾರು ಅಡಿಗಳ ಎತ್ತರಕ್ಕೆ ನಿಲ್ಲಿಸಿದನು. ಜಿಮ್ಮನಿಗೆ ತೃಪ್ತಿಯಾಯಿತು; ಪ್ರತಿದಿನವೂ – ವರುಷಗಳೆಂಬಂತೆ ಕಾಣುವಷ್ಟು-ದೀರ್ಘಕಾಲದ ತನಕ ಕಟ್ಟಿಸಿಕೊಂಡು

ಬಿದ್ದಿರುವುದಕ್ಕಿಂತಲೂ, ಎಲ್ಲೊಂದು ಸದ್ದಾದರೂ ಗಡಗಡ ನಡುಗುತ್ತಿರುವುದಕ್ಕಿಂತಲೂ ಇದು ಎಷ್ಟೋ ಮೇಲು ಎಂದುಕೊಂಡನು. ಅವನು ಧಾರಾಳವಾಗಿ ಆರಾಮವಾಗಿ ಇರಬಹುದೆಂದೂ; ಯಾರಾದರೂ ಅಲ್ಲಿಗೆ ಬಂದು ಚೇಷ್ಟೆ ಮಾಡಿದರೆ, ಅವನು ಡೇರೆಯಿಂದ ಹೊರಗೆ ಹಾರಿಬಂದು ಅವರನ್ನು ತಡೆದು ಕಾಡುಮೃಗದಂತೆ ಒಂದೆರಡುಸಲ ಅಬ್ಬರಿಸಬೇಕೆಂದೂ, ಹಾಗೆ ಮಾಡಿದರೆ ಅವರು ಅವನನ್ನು ಬಿಟ್ಟು ಓಡಿಹೋಗುವರೆಂದೂ, ಡ್ಯೂಕ್ ಜಿಮ್ಮನಿಗೆ ಸಲಹೆ ಮಾಡಿದನು. ಅದು ಸಾಕಷ್ಟು ಬುದ್ಧಿವಂತಿಗೆಯಿಂದ ಕೂಡಿದ ಸಲಹೆಯಾಗಿತ್ತು; ಆದರೆ ನೀವು ಸಾಮಾನ್ಯಮನುಷ್ಯನೊಬ್ಬನನ್ನು ತೆಗೆದುಕೊಂಡರೆ, ಅವನು, ಇವನು ಅಬ್ಬರಿಸುವತನಕ, ಕಾದಿರುವುದಿಲ್ಲ. ಅಷ್ಟೇ ಏಕೆ, ಅವನು ಸತ್ತಂತೆ ಕಂಡುಬರುತ್ತಿರಲಿಲ್ಲ, ಮಾತ್ರ ಅದಕ್ಕಿಂತ ಅತಿಶಯವಾಗಿ ಕಂಡುಬರುತ್ತಿದ್ದನು.

ಈ ಕೇಡಿಗರು ಅದೇ ಅಪ್ರತಿಮ ದೃಶ್ಯವನ್ನು ಮತ್ತೆ ಪ್ರದರ್ಶಿಸುವ ಪ್ರಯತ್ನವನ್ನು ಮಾಡಲೂ, ಅದರಿಂದ ತುಂಬಾ ಹಣವನ್ನು ಗಳಿಸಲೂ ಬೇಕೆಂದಿದ್ದರು. ಆದರೆ ಅದು ನಿರಪಾಯಕರವೆಂದೇನೂ ಅವರು ತಿಳಿದಿರಲಿಲ್ಲ; ಏಕೆಂದರೆ ಇಷ್ಟರೊಳಗಾಗಿ ಅವರು ಹಿಂದಿನೂರಿನಲ್ಲಿ ಏರ್ಪಡಿಸಿದ್ದ ಪ್ರದರ್ಶನದ ಸುದ್ದಿ ಸುತ್ತಣ ಊರಿಗಳಿಗೆಲ್ಲಾ ಹಬ್ಬಿರುವುದು ಸಂಭವವಿತ್ತು. ಅವರಿಗೆ ಸಂದರ್ಭೋಚಿತವಾದ ಯಾವ ಸಲಹೆಯೂ ಹೊಳೆಯಲಿಲ್ಲ. ಕಡೆಗೆ ಡ್ಯೂಕ್ ತಾನು ಅಲ್ಲಿಗೆ ಹೋಗಿ ಒಂದೆರಡು ಗಂಟೆಗಳ ಕಾಲ ತನ್ನ ಬುದ್ಧಿಯಷ್ಟನ್ನೂ ಪ್ರಯೋಗಿಸಿ ಆರ್ಕನ್ಸಾ ಹಳ್ಳಿಯನ್ನು ಒಲಿಸಿಕೊಳ್ಳುವ ಸಾಧ್ಯತೆಯನ್ನು ಪರಿಶೀಲಿಸುವುದಾಗಿ ನುಡಿದನು. ರಾಜ ತಾನು ಇನ್ನೊಂದು ಹಳ್ಳಿಗೆ, ಯಾವೊಂದು ಯೋಜನೆಯನ್ನೂ ಇಟ್ಟುಕೊಳ್ಳದೆ ಹೋಗುವುದಾಗಿಯೂ, ಆದರೆ ತನ್ನನ್ನು ಲಾಭದ ಹಾದಿಯಲ್ಲಿ—ಅಂದರೆ ದುರ್ಮಾರ್ಗದಲ್ಲಿ—ಒಯ್ಯಲು ಭಗವಂತನಲ್ಲಿ ಮಾತ್ರ ನಂಬಿಕೆಯಿಡುವುದಾಗಿಯೂ ಹೇಳಿದನು. ನಾವೆಲ್ಲರೂ ನಮ್ಮ ಹಿಂದಿನ ಮೊಕ್ಕಾಮಿನಲ್ಲಿಯೇ ಸಿದ್ಧಪಡಿಸಿದ ಬಟ್ಟೆಬರೆಗಳನ್ನು ಕೊಂಡಿದ್ದೆವು. ರಾಜ ತನ್ನವನ್ನು ಹಾಕಿಕೊಂಡನು, ನಾನೂ ನನ್ನ ಸ್ವಂತ ಉಡುಪನ್ನು ಹಾಕಿಕೊಳ್ಳುವಂತೆ ಸೂಚಿಸಿದನು. ನಾನು ಹಾಗೆಯೇ ಮಾಡಿದೆ. ರಾಜನ ಉಡುಪು ಬಲು ಕಪ್ಪಗಿತ್ತು, ಅವನು ತುಂಬಾ ದಪ್ಪವಾದಂತೆಯೂ ಬಲು ಚೆನ್ನಾಗಿಯೂ ಕಾಣಿಸುತ್ತಿದ್ದನು. ಉಡುಪು ವ್ಯಕ್ತಿಯ ಸ್ವರೂಪವನ್ನೇ ಬದಲಾಯಿಸಬಲ್ಲದೆಂದು ನನಗೆ ಹಿಂದೆಂದೂ ತಿಳಿದಿರಲಿಲ್ಲ. ಅಷ್ಟೇಕೆ, ಇದಕ್ಕೆ ಮುಂಚೆ, ಅವನು ಬಲು ಪಳಗಿದ ಕೇಡಿಗನಂತೆ ಕಾಣಿಸುತ್ತಿದ್ದನು; ಆದರೀಗ, ತನ್ನ ಎತ್ತರವಾದ ರೇಸಿಮೆ ಟೊಪ್ಪಿಗೆಯನ್ನು ತಲೆಯಿಂದ ತೆಗೆಯುತ್ತಾ ತಲೆಬಾಗಿ ಕಿರುನಗೆ ಸೂಸುವಾಗ ಅವನು (ನೋವಾನ) ಹಡಗಿನಿಂದ ಈಗತಾನೆ ಇಳಿದು ಬಂದವನಿರಬಹುದೆಂದೂ, ಸಾಕ್ಷಾತ್ ಲಿವಿಟಿಕಸ್ಸೇ ಆಗಿರಬಹುದೆಂದೂ ನೀವು ಹೇಳುವಷ್ಟರಮಟ್ಟಿಗೆ ಭವ್ಯವಾಗಿ ಸದ್ಗುಣಿಯಾಗಿ ಧರ್ಮಪ್ರವರ್ತಕನಾಗಿ ಕಂಗೊಳಿಸುತ್ತಿದ್ದನು. ಜಿಮ್ ಕಿರುದೋಣಿಯನ್ನು ಚೊಕ್ಕಟಗೊಳಿಸಿದನು, ನಾನು ಹುಟ್ಟುಗಳನ್ನು ಸಿದ್ಧವಾಗಿಟ್ಟುಕೊಂಡೆ, ನಾವಿದ್ದ ಬಳಿಗೆ

ಬಲುದೂರದಲ್ಲಿ ಊರಿಗೆ ಮೂರು ಮೈಲಿ ಉತ್ತರಕ್ಕೆ ದಡದ ಹತ್ತಿರದಲ್ಲೇ ದೊಡ್ಡ ಹಬೆ ದೋಣಿಯೊಂದು ತಂಗಿತ್ತು; ಅದು ಕೆಲವು ಗಂಟೆಗಳಕಾಲದಿಂದ ಅಲ್ಲೆ ಇತ್ತು, ಅದರ ಮೇಲೆ ಸಾಮಾನುಗಳನ್ನು ತಂದು ಅಡಕುತ್ತಿದ್ದರು. ರಾಜ ಹೇಳಿದ:

"ನನ್ನ ವಸ್ತ್ರಭೂಷಣಗಳನ್ನು ನೋಡುವಲ್ಲಿ, ನಾನು ಸೇಂಟ್ ಲೂಯಿಯಲ್ಲೋ, ಸಿನ್ಸಿನ್ನಾಟಿಯಲ್ಲೋ, ಅಥವಾ ಇನ್ನಾವುದಾದರೊಂದು ದೊಡ್ಡ ನಗರಕ್ಕೆ ಹೋಗುವುದೇ ಮೇಲೆಂದು ನನ್ನೆಣಿಕೆ. ಆ ಹಬೆದೋಣಿಯ ಹತ್ತಿರಕ್ಕೆ ಹೋಗು, ಹಕಲ್‌ಬೆರಿ; ನಾವು ಅದನ್ನು ಹತ್ತಿಕೊಂಡು ಹಳ್ಳಿಗೆ ಪಯಣಿಸೋಣ."

ಹಬೆದೋಣಿಯಮೇಲೆ ಹತ್ತಿ ನದೀಪ್ರಯಾಣ ಮಾಡುವ ವಿಷಯದಲ್ಲಿ ಯಾರೂ ನನಗೆ ಎರಡುಸಲ ಅಪ್ಪಣೆ ನೀಡಬೇಕಾಗಿರಲಿಲ್ಲ ನಾನು, ಆ ಹಳ್ಳಿಗೆ ಇನ್ನೂ ಅರ್ಧಮೈಲಿ ಇದೆ ಎನ್ನುವ ನೇರಕ್ಕೆ ಬಂದು, ದಡವನ್ನು ಸಮೀಪಿಸಿದೆ, ಬಳಿಕ ಕಡಿದಾದ ದಡದ ಉದ್ದಕ್ಕೂ ಸುಲಭಜಲದಲ್ಲಿ ಚಿಮ್ಮುತ್ತ ಹೋದೆ. ಅಲ್ಲಿ ನಮಗೊಬ್ಬ ಸ್ವರದ್ರೂಪಿಯೂ ನಿಷ್ಕಪಟಿಯೂ ಆದ ತರುಣ ರೈತನೊಬ್ಬನು ಸಿಕ್ಕಿದನು; ಬಲು ಸೆಕೆಯಾಗಿದ್ದುದರಿಂದ ಅವನು ತನ್ನ ಮುಖದ ಬೆವರನ್ನು ಒರಸಿಕೊಳ್ಳುತ್ತಾ ದಿಮ್ಮಿಯೊಂದರಮೇಲೆ ಕುಳಿತಿದ್ದನು; ಪಕ್ಕದಲ್ಲಿ ಎರಡು ದೊಡ್ಡ ಜಮಖಾನದ ಚೀಲಗಳನ್ನು ಇಟ್ಟುಕೊಂಡಿದ್ದನು.

"ಕಿರುದೋಣಿಯ ಮೂತಿಯನ್ನು ದಡದಕಡೆಗೆ ತಿರುಗಿಸು"ಎಂದನು ರಾಜ. ನಾನು ಹಾಗೆ ಮಾಡಿದೆ. "ತರುಣನೇ ನೀನೆಲ್ಲಿಗೆ ಹೊರಟಿರುವೆ?"

"ಆರ್ಲಿಯನ್ಸಿಗೆ ಹೋಗುತ್ತಿರುವ ಕಿರುದೋಣಿಯ ಬಳಿಗೆ."

"ಹತ್ತಿಕೊಳ್ಳಿ" ಎಂದನು ರಾಜ. "ಸ್ವಲ್ಪ ನಿಲ್ಲು, ನಿನ್ನ ಹೊರೆಗಳನ್ನು ಎತ್ತುವುದರಲ್ಲಿ ನಮ್ಮ ಸೇವಕನೂ ನಿನಗೆ ನೆರವಾಗುತ್ತಾನೆ.–ಬೇಗ ಬಂದು ಈ ದೊಡ್ಡಮನುಷ್ಯನಿಗೆ ನೆರವಾಗು, ಅಡಾಲ್ಫಸ್"–ಇದು ನನ್ನನ್ನುದ್ದೇಶಿಸಿ ನುಡಿದ ಮಾತು.

ನಾನು ಹಾಗೆ ಮಾಡಿದೆ; ಮತ್ತೆ ಮೂವರೂ ಮುಂದೆ ಸಾಗಿದೆವು. ಆ ಹುಡುಗ ತುಂಬಾ ಉಪಕಾರವಾಯಿತು ಎಂದ. ಅಂಥಾ ಹವೆಯಲ್ಲಿ ಚೀಲಗಳನ್ನು ಸಾಗಿಸುವುದು ತುಂಬಾ ಪ್ರಯಾಸಕರವಾಗಿತ್ತು. ಎಲ್ಲಿಗೆ ಹೋಗುತ್ತಿದ್ದೀರಿ ಎಂದು ಅವನು ರಾಜನನ್ನು ಕೇಳಿದ; ತಾನು ನದೀಪ್ರಯಾಣಮಾಡುತ್ತಿದ್ದು ಈದಿನ ಬೆಳಗಾಗ ಆ ಇನ್ನೊಂದು ಹಳ್ಳಿಯಲ್ಲಿ ತಂಗಿದ್ದುದಾಗಿಯೂ ಈಗ ಇಲ್ಲೇ ಹತ್ತಿರದಲ್ಲಿರುವ ವ್ಯವಸಾಯಕ್ಷೇತ್ರವೊಂದರಲ್ಲಿರುವ ತನ್ನ ಹಳೆಯ ಗೆಳೆಯನೊಬ್ಬನನ್ನು ಭೇಟಿ ಮಾಡಲು ಸ್ವಲ್ಪ ದೂರ ಹೋಗುತ್ತಿರುವುದಾಗಿಯೂ ರಾಜ ಹೇಳಿದನು, ಬಳಿಕ ಆ ಹುಡುಗ ಹೇಳಿದ :

"ನಾನು ನಿನ್ನನ್ನು ಮೊದಲುಸಲ ಕಂಡಾಗ 'ಇವನೇ ಇರಬಹುದು ಮಿ. ವಿಲ್ಕ್ಸ ಇದರಲ್ಲಿ ಸಂಶಯವಿಲ್ಲ, ಇವನು ಎಷ್ಟುಬೇಗ ಇಲ್ಲಿಗೆ ಸಕಾಲಕ್ಕೆ ಬಂದುಬಿಟ್ಟಿದ್ದಾನೆ' ಎಂದುಕೊಂಡೆ, ಆಮೇಲೆ 'ಇಲ್ಲ, ಇವನು ಅವನಲ್ಲ, ಆಗಿದ್ದರೆ ಅವನು ಮೇಲು ನದಿ

ಯಲ್ಲಿ ಹುಟ್ಟುಹಾಕಿಕೊಂಡು ಬರುತ್ತಿರಲಿಲ್ಲ,' ಎಂದುಕೊಂಡೆ. ನೀನು ಅವನಲ್ಲ, ಅಲ್ಲ ತಾನೆ?"

"ಇಲ್ಲ, ನನ್ನ ಹೆಸರು ಬ್ಲಾಡ್ಜೆಟ್- ಎಲೆಕ್ಸಾಂಡರ್ ಬ್ಲಾಡ್ಜೆಟ್-ಪೂಜ್ಯ ಎಲೆಕ್ಸಾಂಡರ್ ಬ್ಲಾಡ್ಜೆಟ್. ದೇವರ ದೀನ ಸೇವಕರಲ್ಲಿ ನಾನೊಬ್ಬ. ಆದರೆ ಎಲ್ಲರಂತೆಯೆ ನನಗೂ ಮಿ. ವಿಲ್ಕ್ಸ್ ಇಲ್ಲಿಗೆ ಬಾರದಿದ್ದಕ್ಕಾಗಿ ವ್ಯಥೆಯಾದೆ. ಹೀಗಾದ್ದರಿಂದ ಒಂದು ವೇಳೆ ಅವನಿಗೇನಾದರೂ ನಷ್ಟವಾಗಿದ್ದರೆ ಆಗಿಲ್ಲವೆಂಬ ಭರವಸೆಯೇನೋ ನನಗಿದೆ."

"ಹಾಗೇನಿಲ್ಲ. ಹೀಗಾದ್ದರಿಂದ ಅವನಿಗೆ ಯಾವ ಸ್ವತ್ತೂ ಕೈಬಿಟ್ಟುಹೋಗಿಲ್ಲ. ಅದು ಅವನಿಗೆ ತಲಪಿಯೇ ತೀರುತ್ತದೆ. ಆದರೆ ಮರಣಾವಸ್ಥೆಯಲ್ಲಿರುವ ತನ್ನ ಸೋದರನ ಮುಖವನ್ನು ಕಾಣುವುದು ಮಾತ್ರ ತಪ್ಪಿಹೋಯಿತು-ಇದನ್ನು ಅವನು ಮನಸ್ಸಿಗೆ ಹಚ್ಚುಕೊಳ್ಳುವುದಿಲ್ಲವೇನೋ ಯಾರು ಹೇಳಿಯಾರು—; ಆದರೆ ಅವನ ಸೋದರನಂತೂ ತಾನು ಸಾಯುವುದರೊಳಗಾಗಿ ಒಂದುಸಲ ಅವನನ್ನು ಕಾಣುವುದು ಸಾಧ್ಯವಿದ್ದಿದ್ದರೆ ಅದಕ್ಕಾಗಿ ತನ್ನ ಸರ್ವಸ್ವವನ್ನೂ ಧಾರೆಯೆರೆಯಲು ಹಿಂದೆಗೆಯುತ್ತಿರಲಿಲ್ಲ. ಮೂರು ವಾರಗಳಿಂದಲೂ ಅವನು ಆಡುತ್ತಿದ್ದುದೆಂದರೆ ಈ ಮಾತನ್ನೇ. ಬಾಲ್ಯದಲ್ಲಿ ತಾವಿಬ್ಬರೂ ಒಂದಿಗಿದ್ದ ಕಾಲದೀಚೆಗೆ ಅವನು ತನ್ನ ಸೋದರನನ್ನು ನೋಡಿಯೇ ಇರಲಿಲ್ಲ.—ತನ್ನ ಸೋದರ ವಿಲಿಯಮ್ಮನ್ನು ನೋಡಿಯೇ ಇರಲಿಲ್ಲ, ಅವನು ಕಿವುಡನಾಗಿದ್ದಾನೆ, ಮೂಕನಾಗಿದ್ದಾನೆ. ವಿಲಿಯಮ್ಮಿನ ವಯಸ್ಸು ಈಗ ಮೂವತ್ತೋ ಮೂವತ್ತೈದೋ , ಅಷ್ಟೇ. ಸೋದರರಾದ ಪೀಟರ್ ಮತ್ತು ಜಾರ್ಜ್ ಇಬ್ಬರೇ ಇಲ್ಲಿಗೆ ಬಂದು ನೆಲಸಿದವರು; ಜಾರ್ಜಿಗೆ ಮದುವೆಯಾಗಿತ್ತು; ಅವನೂ ಅವನ ಹೆಂಡತಿಯೂ ಹೋದವರುಷ ತೀರಿಕೊಂಡರು, ಈಗ ಉಳಿದಿರುವರೆಂದರೆ- ಹಾರ್ವೆ ಮತ್ತು ವಿಲ್ಲಿಯಂ ಇಬ್ಬರೇ ನಾನು ಹೇಳುತ್ತಿದ್ದಂತೆ ಇಬ್ಬರೂ ಇಲ್ಲಿಗೆ ಸಕಾಲದಲ್ಲಿ ಬರಲಿಲ್ಲ."

"ಯಾರಾದರೂ ಅವರಿಗೆ ಸುದ್ದಿ ಕೊಟ್ಟರೆ?"

"ಓ, ಹೌದು; ಒಂದೆರಡುತಿಂಗಳ ಹಿಂದೆ ಪೀಟರ್ ಕಾಯಿಲೆಬಿದ್ದ; ಈ ಸಲ ವಾಸಿಯಾಗುವುದೇ ಇಲ್ಲ ಎಂದು ತನಗೆ ತೋರುವುದೆಂದು ಹೇಳಿದ, ನೋಡಿ, ಅವನು ಬಲು ಮುದುಕನಾಗಿದ್ದ. ಜಾರ್ಜಿನ ಹೆಣ್ಣುಮಕ್ಕಳಲ್ಲಿ—ಕೆಂದಲೆಯ ಮೇರಿ ಜೇನಳೊಬ್ಬಳು ವಿನಾ-ಉಳಿದವರು ತುಂಬಾ ಚಿಕ್ಕವರಾಗಿದ್ದುದರಿಂದ, ಅವರು ಅವನ ಜೊತೆಯಲ್ಲಿ ಇದ್ದರೂ ಒಂದೇ ಬಿಟ್ಟರೂ ಒಂದೇ ಎನಿಸಿತ್ತು. ಆದ್ದರಿಂದ ಜಾರ್ಜನೂ ಅವನ ಮಡದಿಯೂ ಅಳಿದಮೇಲೆ ಅವನಿಗೆ ತನ್ನ ಒಂಟಿತನ ಬೇಸರವಾಯಿತು. ಬದುಕಿನಲ್ಲಿ ಆಸಕ್ತಿಯೇ ಹೋಯಿತು. ಏನಾದರೂ ಮಾಡಿ ಹಾರ್ವೆಯನ್ನು ನೋಡಿಯೇ ತೀರಬೇಕೆಂದು ಅವನು ಆಸೆಪಟ್ಟ:-ವಿಲ್ಲಿಯಮ್ಮಿಗೂ ಹಾಗೆಯೇ ಅನ್ನಿಸಿತು, ಏಕೆಂದರೆ ವಿಲ್ಲಿಯಮ್ ಮರಣಶಾಸನವೊಂದನ್ನು ಬರೆಯುವಷ್ಟು ಸ್ಥೈರಣೆಯಿರುವವರ ಜಾತಿಗೆ ಸೇರಿದವನಲ್ಲ. ಅವನು ಹಾರ್ವೆಗಾಗಿ ಒಂದು ಪತ್ರವನ್ನು ಬಿಟ್ಟುಹೋದನು. ಅದರಲ್ಲಿ ಹಣವನ್ನು ಎಲ್ಲಿ ಬಚ್ಚಿಡಲಾಗಿದೆ, ಮತ್ತು ಜಾರ್ಜಿನ ಹೆಣ್ಣುಮಕ್ಕಳ ನೆಮ್ಮದಿಗೆ ಚ್ಯುತಿ

ಬಾರದಂತೆ ಆಸ್ತಿಪಾಸ್ತಿಯನ್ನು ಹೇಗೆ ವಿಭಾಗವಾಡಿಕೊಳ್ಳಬೇಕು-ಇವನ್ನೆಲ್ಲ ವಿವರಿಸಿರು ವುದಾಗಿ ತಿಳಿಸಿದನು, ಅವನಿಂದ ಆ ಪತ್ರವೊಂದನ್ನು ಬರೆಸಿಕೊಳ್ಳುವುದು ಮಾತ್ರ ಇವರಿಗೆ ಸಾಧ್ಯವಾಯಿತು.

"ಹಾರ್ವೆ ಬಾರನೆಂದು ನೀನೇಕೆ ಎಣಿಸುವೆ? ಅವನಿರುವುದೆಲ್ಲಿ?"

"ಓ ಅವನು ಇಂಗ್ಲೆಂಡಿನಲ್ಲಿದ್ದಾನೆ-ಷೆಫೀಲ್ಡಿನಲ್ಲಿ ಉಪದೇಶಕನಾಗಿದ್ದಾನೆ. ಅವನು ಈ ದೇಶದಲ್ಲಿ ಇದ್ದುದೇ ಇಲ್ಲ. ಅವನಿಗೆ ಅದಕ್ಕೆ ಪುರಸತ್ತೇ ಇಲ್ಲ–ಮತ್ತು ಅವನಿಗೆ ಕಾಗದ ತಲಪದೆಯೂ ಇರಬಹುದು, ನೋಡಿ"

"ತನ್ನ ಸೋದರರ ಮುಖವನ್ನು ನೋಡುವವರೆಗಾದರೂ ಆ ಬಡಪಾಯಿ ಬದುಕಿ ರದೆ ಹೋದದ್ದು ತುಂಬಾ ದುರದೃಷ್ಟಕರ, ತುಂಬಾ ದುರದೃಷ್ಟಕರ–ಅರ್ಲಿಯನ್ಸಿಗೆ ಹೋಗುವುದಾಗಿ ನೀನು ಹೇಳುತ್ತಾ ಇದ್ದೆ, ಅಲ್ಲದೆ?

"ಹೌದು, ಅದು ಭಾಗಶಃ ಸರಿ. ಮುಂದಿನ ಬುಧವಾರ ನಾನು ಹಡಗು ಹತ್ತಿ ರಯೋ ಜನಿರೋವಿಗೆ ಹೋಗಲಿದ್ದೇನೆ, ಅಲ್ಲಿ ನಮ್ಮ ಸೋದರಮಾವ ಇದ್ದಾನೆ,"

"ಅದು ಅತಿದೂರದ ಪ್ರಯಾಣವಾದರೂ ಬಲು ಸೊಗಸಿನದು. ನನಗೂ ಅಲ್ಲಿಗೆ ಹೋಗುವಾಸೆ. ಮೇರಿಯೇ ಅವರಲ್ಲೆಲ್ಲ ದೊಡ್ಡವಳೇನು? ಉಳಿದವರ ವಯಸ್ಸೆಷ್ಟು?

"ಮೇರಿ ಜೇನಳಿಗೆ ಹತ್ತೊಂಬತ್ತು, ಸೂಸಾನಳಿಗೆ ಹದಿನೈದು, ಜೋಆನ್ನಳಿಗೆ ಸುಮಾರು ಹದಿನಾಲ್ಕು—ಈ ಕಡೆಯವಳು ಪುಣ್ಯದ ಕೆಲಸಗಳಿಗಾಗಿ ಎಂದರೆ ತನ್ನನ್ನು ತೆತ್ತುಕೊಳ್ಳುತ್ತಾಳೆ; ಅವಳಿಗೆ ಸೀಳು–ತುಟಿ, ಹುಟ್ಟಿದಂದಿನಿಂದಲೂ ಹಾಗೆಯೇ."

"ಈ ನಿರ್ದಯ ಪ್ರಪಂಚದಲ್ಲಿ ಈ ಬಡಪಾಯಿಗಳು ಹೀಗೆ ದಿಕ್ಕಿಲ್ಲದವಾಗಿವೆ."

"ಅವರ ಸ್ಥಿತಿ ಇನ್ನೂ ಶೋಚನೀಯವಾಗಬೇಕಾಗಿತ್ತು. ಆದರೆ ಮುದುಕ ಪೀಟರಿನ ಗೆಳೆಯರು ಅವರಿಗೆ ಯಾವ ಅಪಾಯವೂ ತಟ್ಟದಂತೆ ನೋಡಿಕೊಂಡರು; ಉಪದೇಶಕ ಹಾಬ್ಸನ್, ಡೀಕನ್ ಲಾಟ್‌ಹೋವೆ, ಬೆನ್‌ರೂಕರ್, ಆ್ಯಬ್ನರ್ ಷಾಕಲ್ ಫರ್ಡ್, ಮತ್ತು ವಕಿಲ ಲೆವಿಬೆಲ್-ಎಲ್ಲರೂ ಇದ್ದಾರೆ; ಅಂತೆಯೇ ಡಾ. ರಾಬಿನ್‌ಸನ್ ಮತ್ತು ಅವನ ಹೆಂಡಿರು ಮತ್ತು ವಿಧವೆ ಬಾರ್ಟ್ಲೆ ಕೂಡ, ಇನ್ನೂ ಹೀಗೆಯೇ ಅನೇಕ ರಿದ್ದರೂ ಇವರು ಮಾತ್ರ ಪೀಟರಿಗೆ ಬಲು ಆಪ್ತರು, ಅವನು ಊರಿಗೆ ಕಾಗದ ಬರೆ ದಾಗಲೆಲ್ಲ ಇವರಿಗೆ ತಪ್ಪದೆ ಬರೆಯುತ್ತಿದ್ದನು; ಆದ್ದರಿಂದ ಇಲ್ಲಿಗೆ ತಾನು ಹಿಂದಿರುಗಿ ದಾಗ ಅವನು ತನ್ನ ಗೆಳೆಯರು ಎಲ್ಲಿರುವರೆಂಬುದನ್ನು ಅರಿತುಕೊಳ್ಳುತ್ತಾನೆ."

ಆ ಹುಡುಗ ಸುಸ್ತಾಗಿ ಬೀಳುವತನಕ ಈ ಮುದುಕ ಪ್ರಶ್ನೆ ಕೇಳುತ್ತಲೇ ಇದ್ದನು. ಅವನು ಆ ದರಿದ್ರ ಊರಿನಲ್ಲಿರುವ ಎಲ್ಲರ ಮತ್ತು ಎಲ್ಲದರ ವಿಷಯ ಗಳನ್ನು ಮತ್ತು ವಿಲ್ಕ್ಸ್ ಅವರ ಮನೆಯ ಯೋಗಕ್ಷೇಮವೆಲ್ಲವನ್ನೂ ಕೇಳದೆಬಿಟ್ಟಿದ್ದರೆ, ಕೇಳಿ! ಚಮ್ಮಾರನಾಗಿದ್ದ ಪೀಟರಿನ ವ್ಯವಹಾರವನ್ನೂ ಬಡಗಿಯಾಗಿದ್ದ ಜಾರ್ಜಿನ ವ್ಯವಹಾರವನ್ನೂ ಅನ್ಯಶಾಖಿ ಪುರೋಹಿತನಾಗಿದ್ದ ಹಾರ್ವೆಯ ವ್ಯವಹಾರವನ್ನೂ ಇನ್ನೂ ಇಂಥವನ್ನು ಎತ್ತಿಕೊಂಡು ಪ್ರಶ್ನೆ ಕೇಳುತ್ತಲೇ ಇದ್ದ. ಬಳಿಕ ಅವನು ಕೇಳಿದ;

"ಹಬೆದೋಣಿಯವರೆಗೂ ನೀನು ನೀರಿನಲ್ಲಿ ನಡೆದುಕೊಂಡು ಹೋಗ ಬಯಸಿದ್ದೇಕೆ ?"

"ಏಕೆಂದರೆ ಅದೊಂದು ದೊಡ್ಡ ಅರ್ಲಿಯನ್ಸ್‌ದೋಣಿ. ಅದು ಅಲ್ಲಿ ನಿಲ್ಲದೆಂದು ನಾನು ಅಂಜಿದೆ. ಅವು ನಿಲ್ಲುವುದಿಲ್ಲ; ಸಿನ್ಸಿನ್ನಾಟಿ ದೋಣಿ ಹಾಗಲ್ಲ. ಆದರೆ ಇದು ಸೇಂಟ್ ಲೂಯಿಯದು."

"ಪೀಟರ್‌ವಿಲ್ಕ್ಸ್ ಶ್ರೀಮಂತನಾಗಿದ್ದನೆ?"

"ಓ ಹೌದು, ಶ್ರೀಮಂತ, ತುಂಬಾ ಶ್ರೀಮಂತ. ಅವನಿಗೆ ಮನೆಗಳೂ ಭೂಮಿ ಕಾಣೆಗಳೂ ಇದ್ದವು; ಅವನು ಮೂರು–ನಾಲ್ಕು ಸಾವಿರದಷ್ಟು ನಗದು ಹಣವನ್ನು ಎಲ್ಲೋ ಬಚ್ಚಿಟ್ಟಿದ್ದನೆಂದು ನಂಬಲಾಗಿದೆ."

"ಅವನು ಸತ್ತದ್ದು ಎಂದೆಂದು ನೀನು ಹೇಳಿದೆ?"

"ನಾನು ಹಾಗೇನೂ ಹೇಳಲಿಲ್ಲ, ಆದರೆ ಅದು ಆದದ್ದು ಕಳೆದ ರಾತ್ರಿಯಲ್ಲಿ."

"ಶವ ಸಂಸ್ಕಾರ ನಾಳೆ, ಇರಬಹುದು ?"

"ಹೌದು, ಮಧ್ಯಾಹ್ನದ ಸುಮಾರಿಗೆ."

"ಸರಿ. ಅದು ಬಲು ದುಃಖದ ವಿಷಯ. ಅವರೂ ನಾವೆಲ್ಲರೂ ಒಂದಲ್ಲ ಒಂದು ದಿನ ಸಾಯಲೇಬೇಕಾಗಿದೆ. ಆದ್ದರಿಂದ ಅದಕ್ಕೆ ಸಿದ್ಧವಾಗಿರುವುದೊಂದೇ ನಮ್ಮ ಕರ್ತವ್ಯ. ಆಗ ನಮಗೆ ಸರ್ವಕ್ಷೇಮ."

"ಹೌದು, ಸ್ವಾಮಿ. ಅದೇ ಉತ್ತಮಮಾರ್ಗ, ಅಮ್ಮ ಯಾವಾಗಲೂ ಹಾಗೆಯೇ ಹೇಳುತ್ತಿದ್ದಳು."

ನಾವು ದೋಣಿಯನ್ನು ತಲಪುವ ಹೊತ್ತಿಗೆ, ಅದು ಸಾಮಾನು ಸರಂಜಾಮನ್ನು ತುಂಬಿಕೊಂಡು ಹೊರಡಲು ಸಿದ್ಧವಾಗಿತ್ತು; ಕೂಡಲೇ ಹೊರಟುಹೋಯಿತು. ಅದನ್ನು ಹತ್ತಿಕೊಳ್ಳುವ ವಿಷಯದಲ್ಲಿ ರಾಜ ಏನನ್ನೂ ಹೇಳಿಲಿಲ್ಲ: ಆದ್ದರಿಂದ ನನಗೆ ಸುಖಪ್ರಯಾಣ ತಪ್ಪಿಹೋಯಿತು, ಕಡೆಗೂ, ದೋಣಿ ಹೋದಮೇಲೆ ರಾಜ ಕಿರು ದೋಣಿಯನ್ನು ನಾನು ಮತ್ತೆ ಇನ್ನೊಂದು ಮೈಲಿತನಕ ಮೀಟಿಕೊಂಡು ಹೋಗಿ ಏಕಾಂತಸ್ಥಳವೊಂದನ್ನು ತಲಪುವಂತೆ ಮಾಡಿದ. ಆಮೇಲೆ ದಡಕ್ಕೆ ಹತ್ತಿಹೋಗಿ ಹೇಳಿದ:

"ಎಲ್ಲಿ ಸ್ವಲ್ಪ ಹಿಂದಕ್ಕೆ ನೂಕು. ಡ್ಯೂಕನನ್ನು ಬರಹೇಳು, ಹೊಸ ಜಮಖಾನದ ಚೀಲಗಳನ್ನು ಇಲ್ಲಿಗೆ ತಂದುಹಾಕು. ಅವನೇನಾದರೂ ನದಿಯ ಆ ಪಕ್ಕಕ್ಕೆ ಹೋಗಿದ್ದರೆ ಅಲ್ಲಿಗೇ ಹೋಗಿ ಅವನನ್ನು ಕರೆದುಕೊಂಡು ಬಾ, ಹೇಗಿದ್ದರೆ ಹಾಗೆಯೇ ಬರುವಂತೆ ಅವನಿಗೆ ಹೇಳು. ಅವನನ್ನು ಇಲ್ಲಿಗೆ ದಬ್ಬಿಕೊಂಡು ಬಾ."

ಅವನ ಸಂಚು ನನಗೆ ಅರ್ಥವಾಯಿತು; ಆದರೆ ನಾನು ಬಾಯಿ ಬಿಡಲಿಲ್ಲ, ಅದು ಸಹಜವೇ. ನಾನು ಡ್ಯೂಕನೊಂದಿಗೆ ಹಿಂದಿರುಗಿದ ತರುವಾಯ ನಮ್ಮ ಕಿರುದೋಣಿ.

ಯನ್ನು ಬಚ್ಚಿಟ್ಟೆವು. ಬಳಿಕ ಅವರು ದಿಮ್ಮಿಯೊಂದರಮೇಲೆ ಹೋಗಿ ಕುಳಿತರು, ರಾಜ ಅವನಿಗೆ, ಎಲ್ಲವನ್ನೂ ಆ ಹುಡುಗ ಹೇಗೆ ಹೇಳಿದ್ದನೋ ಹಾಗೆಯೇ, ಒಂದು ಚೂರು ಬಿಡದೆ, ಹೇಳಿದನು. ತನ್ನ ಸಂಭಾಷಣೆಯ ಉದ್ದಕ್ಕೂ ಅವನು ಇಂಗ್ಲಿಷ್‌ಜನರ ಉಚ್ಚಾರಣೆಯ ಶೈಲಿಯನ್ನೇ ಅನುಸರಿಸತೊಡಗಿದನು; ಅಂಥಾ ವಿಲಕ್ಷಣ ಮನುಷ್ಯ ಅದನ್ನು ಅಷ್ಟು ಚೆನ್ನಾಗಿ ನಿರ್ವಹಿಸಿದ್ದು ಹೆಚ್ಚು. ನಾನು ಅವನನ್ನು ಅನುಕರಿಸಲಾರೆ; ಆದ್ದರಿಂದ ಹಾಗೆ ಮಾಡಲು ಪ್ರಯತ್ನಿಸುವುದೇ ಇಲ್ಲ; ಆದರೆ ಅವನಂತೂ ಬಲು ಚೆನ್ನಾಗಿಯೇ ಅನುಕರಿಸಿದ; ಬಳಿಕ ಹೇಳಿದ:

"ಕಿವುಡ ಮೂಕರ ಪಾತ್ರಧರಿಸುವುದರ ಅನುಭವ ನಿನಗಿದೆಯೆ, ಬಿಲ್ಜ್‌ವಾಟರ್?"

ಡ್ಯೂಕ್ ಅದನ್ನು ತನಗೆ ಬಿಟ್ಟುಕೊಡಬೇಕೆಂದನು; ಹಿಂದೆ ತಾನು ರಂಗಸ್ಥಳದಲ್ಲಿ ಕಿವುಡ ಮೂಕರ ಪಾತ್ರವನ್ನು ಅಭಿನಯಿಸಿರುವುದಾಗಿ ಹೇಳಿದನು. ಬಳಿಕ ಅವರು ಹಬೆ ದೋಣಿ ಯಾವುದಾದರೂ ಅತ್ತ ಬಂದೀತೆ ಎಂದು ಕಾಯುತ್ತಿದ್ದರು.

ಅಪರಾಹ್ನದಲ್ಲಿ ಒಂದೆರಡು ಪುಟ್ಟದೋಣಿಗಳೇನೋ ಅತ್ತ ಬಂದವು. ಆದರೆ ಅವು ದೂರ ಮೇಲುನದಿಯಿಂದ ಬಂದವಾಗಿರಲಿಲ್ಲ. ಕಡೆಗೊಂದು ದೊಡ್ಡದೋಣಿ ಬಂತು. ಅವರು ಅದರೆಡೆಗೆ ಕೈಬೀಸಿ ಕರೆದರು, ಉತ್ತರವಾಗಿ ಅದು ಉದ್ದನೆಯ ಪಟಸ್ತಂಭವುಳ್ಳ ಪುಟ್ಟದೋಣಿಯೊಂದನ್ನು ಕಳಿಸಿತು. ನಾವು ಅಲ್ಲಿಗೆ ಸುಸೂತ್ರವಾಗಿ ತಲಪಿದೆವು, ಅದು ಸಿನ್ಸಿನ್ನಾಟಿಯಿಂದ ಬಂದ ದೋಣಿ. ನಾವು ಕೇವಲ ನಾಲ್ಕೈದು ಮೈಲಿಗಳವರೆಗೆ ಮಾತ್ರ ಹೋಗಬಯಸುವೆವೆಂಬುದು ಆ ದೋಣಿಯವರಿಗೆ ತಿಳಿದಾಗ ಹುಚ್ಚರಂತೆ ಕೂಗಾಡಿದರು, ನಮ್ಮನ್ನು ಬೈದರು, ನಮ್ಮನ್ನು ದಡ ಮುಟ್ಟಿಸುವುದಿಲ್ಲ ವೆಂದರು. ಆದರೆ ರಾಜ ಗಂಭೀರವಾಗಿಯೇ ಇದ್ದನು. ಅವನು ಹೇಳಿದನು:

"ಚಿಕ್ಕದೋಣಿಯೊಂದು ತಮ್ಮನ್ನು ಹತ್ತಿಸಿಕೊಂಡು ಒಯ್ದು ಬರಲು ಈ ಸಂಭಾವಿತರು ಮೈಲಿಗೊಂದು ಡಾಲರಿನಂತೆ ಕೊಡಬಲ್ಲವರಾದಮೇಲೆ, ಹಬೆದೋಣಿಯೂ ಅವರನ್ನು ಒಯ್ಯಬಹುದಲ್ಲವೆ?"

ಅವರು ತಣ್ಣಗಾದರು; ಸರಿ ಎಂದೊಪ್ಪಿಕೊಂಡರು. ನಾವು ಹಳ್ಳಿಯ ಸಮೀಪಕ್ಕೆ ಬಂದಾಗ ಅವರು ಪುಟ್ಟದೋಣಿಯೊಂದಕ್ಕೆ ನಮ್ಮನ್ನು ಇಳಿಸಿ ದಡಕ್ಕೆ ತಲುಪಿಸಿದರು. ಪುಟ್ಟದೋಣಿಯೊಂದು ಬರುತ್ತಿರುವುದನ್ನು ಕಂಡು ಹತ್ತು ಹನ್ನೆರಡು ಮಂದಿ ಗುಂಪಾಗಿ ನಮ್ಮ ಕಡೆಗೆ ಬಂದರು, ರಾಜ ಅವರನ್ನು ಕೇಳಿದ:

"ಸಂಭಾವಿತರೆ, ನಿಮ್ಮಲ್ಲಿ ಯಾರಾದರೊಬ್ಬ ಇಲ್ಲಿ ಮಿ. ಪೀಟರ್‌ವಿಲ್ಕ್ಸ್ ಇರುವುದೆಲ್ಲಿ ಎಂಬುದನ್ನು ತಿಳಿಸಬಲ್ಲಿರಾ?" ಅವರು ಮುಖಮುಖ ನೋಡಿಕೊಂಡರು, ಪರಸ್ಪರ "ನಾನು ನಿನಗೆ ಏನು ಹೇಳಿದ್ದೆ?" ಎಂಬರ್ಥಬರುವಂತೆ ತಲೆಯಾಡಿಸಿದರು. ಅವರಲ್ಲೊಬ್ಬ ಮೃದುವಾಗಿ ನಯವಾಗಿ ನುಡಿದ :

"ನಾನು ವಿಷಾದಿಸುತ್ತೇನೆ, ಸ್ವಾಮಿ, ಆದರೆ ಅವನು ನಿನ್ನೆ ಸಂಜೆ ಎಲ್ಲಿ ವಾಸ ಮಾಡುತ್ತಿದ್ದ ಎಂಬುದನ್ನು ಮಾತ್ರ ನಾವು ಹೇಳಬಲ್ಲೆವು."

ಇದನ್ನು ಕೇಳಿದ ಕೂಡಲೆ ಈ ಕೇಡಿಗ ಮುಂದುಕ ಭಾರೀಹೊಡೆತ ಬಿದ್ದಂತೆ ನಟಿಸಿ, ಆ ಮನುಷ್ಯನ ಮೇಲೆ ಒರಗಿಕೊಂಡು, ಅವನ ಭುಜಕ್ಕೆ ತನ್ನ ಕೆನ್ನೆಯಿಟ್ಟು, ಅವನ ಬೆನ್ನ ಮೇಲೆ ಕಂಬನಿಗರೆದು ಅತ್ತುಬಿಟ್ಟನು. ಮತ್ತೆ ಹೇಳಿದನು ;

"ಹಾ, ಹಾ, ನನ್ನ ದುರ್ದೈವಿ ಸೋದರ–ಹೋಗಿಬಿಟ್ಟನು, ನಮಗೆ ಅವನ ಮುಖವೇ ಸಿಕ್ಕಿದಂತಾಯಿತು. ಓ ಇದು ತುಂಬಾ, ತುಂಬಾ ದುಃಖಕರ!"

ಬಳಿಕ ಅವನು ಗದ್ಗದಿಸುತ್ತಾ, ಡ್ಯೂಕನ ಕಡೆಗೆ ನೋಡಿ ತನ್ನ ಕೈಗಳಿಂದ ಅನೇಕಾನೇಕ ಕಂಟಿಲ ಸಂಜ್ಞೆಗಳನ್ನು ಮಾಡುತ್ತಾ, ಸುತ್ತಲೂ ತಿರುಗಿ ನೋಡಿದನು. ಕೈಲ್ಲಿದ್ದ ಜಮಖಾನದ ಚೀಲವೊಂದನ್ನು ಬೀಳಿಸಿಕೊಂಡು ಅವನು ಗಳಗಳ ಅಳದೆ ಹೋಗಿದರೆ, ಕೇಳಿ. ನನಗೆ ತಿಳಿದಂತೆ ಅವರು ಮೋಸಗಾರರಲ್ಲೂ ಬಲು ಪಳಗಿದ ಕೈಗಳಲ್ಲದಿದ್ದರೆ, ಕೇಳಿ.

ಆಮೇಲೆ ಜನರೆಲ್ಲರೂ ಅವರನ್ನು ಸುತ್ತುಗಟ್ಟಿದರು, ಅನುತಾಪವನ್ನು ವ್ಯಕ್ತಪಡಿಸಿದರು, ಅವರಿಗೆ ವಿಧವಿಧವಾದ ಮೃದುವಚನಗಳನ್ನು ಹೇಳಿದರು ಬೆಟ್ಟದ ಮೇಲಕ್ಕೆ ಈ ಜಮಖಾನದ ಚೀಲ ನೀವು ಹೊರುವುದು ಬೇಡ ಎಂದು ಮನಕರಗಿ ತಾವೇ ಹೊತ್ತರು, ಅವರ ತಮ್ಮನ್ನು ಒರಗಿಕೋಡು ಅಳಲು ಅವಕಾಶಕೊಟ್ಟರು ಅಲ್ಲದೆ ಅವನ ಸೋದರನ ಸಾವಿನ ಸಮಯದ ಸಮಸ್ತ ವಿವರಗಳನ್ನೂ ನೀಡಿದರು ; ರಾಜ ಅವೆಲ್ಲವನ್ನು ಮತ್ತೆ ಡ್ಯೂಕನಿಗೆ ಮತ್ತೆ ಮತ್ತೆ ಹೇಳಿದನು ಇಬ್ಬರೂ ತಮ್ಮ ಹನ್ನೆರಡು ಮಂದಿ ಶಿಷ್ಯರನ್ನು ಕಳೆದುಕೊಂಡಷ್ಟು ದುಃಖದಿಂದ ಆ ಚಮ್ಮಾರನ ಸಾವಿಗಾಗಿ ಗೋಳಾಡಿದರು. ನಾನು ಅದರಂಥಾದ್ದನ್ನು ಎಂದಾದರೂ ಕಂಡಿದ್ದರೆ, ನನ್ನನ್ನು ನೀಗ್ರೋ ಎಂದು ಕರೆಯಿರಿ ಅದು ಎಂಥವರೂ ಇಡೀ ಮಾನವ ಕುಲದ ಬಗೆಗೆ ತಲೆ ತಗ್ಗಿಸುವಂತೆ ಮಾಡಿತ್ತು.

## ೨೫

ಈ ಸುದ್ದಿ ಎರಡೇ ನಿಮಿಷಗಳಲ್ಲಿ ಊರೊಳಗೆಲ್ಲ ಹಬ್ಬಿಹೋಯಿತು; ಎಲ್ಲೆಲ್ಲಿಂದಲೂ ಜನರು ಧಾವಿಸಿ ಬರುತ್ತಿರುವುದನ್ನೂ, ಅವರಲ್ಲಿ ಕೆಲವರು ಬರುತ್ತಿರುವಾಗಲೇ ಅಂಗಿಯನ್ನು ತೊಟ್ಟುಕೊಳ್ಳುತ್ತಿರುವುದನ್ನೂ ನೀವು ನೋಡಬಹುದಿತ್ತು. ಬಲು ಬೇಗ

ನಮ್ಮ ಸುತ್ತಲೂ ಗುಂಪುಕಟ್ಟಿತು. ಅವರ ಹೆಜ್ಜೆ ಸಪ್ಪಳ ಸೈನಿಕರ ಚಲನವನ್ನು ನೆನಪಿಗೆ ತರುತ್ತಿತ್ತು. ಕಿಟಕಿಗಳೂ ಬಾಗಿಲುಗಳೂ ತುಂಬಿಹೋಗಿದ್ದವು ; ಪ್ರತಿ ಕ್ಷಣದಲ್ಲೂ ಯಾರು ಯಾರೋ ಬೇಲಿಯ ಮೇಲೆ ಕಣ್ಣುಹಾಯಿಸಿ ಹೇಳುತ್ತಿದ್ದರು:

"ಅವರೇನಿವರು?"

ಗುಂಪಿನೊಂದಿಗೆ ಹೆಜ್ಜೆಯೆಳೆಯುತ್ತಿದ್ದ ಇನ್ನು ಯಾರೋ ಅದಕ್ಕೆ ಉತ್ತರವಾಗಿ ಹೇಳುತ್ತಿದ್ದರು :

"ಖಂಡಿತವಾಗಿಯೂ ಹೌದು"

ನಾನು ಮನೆಯ ಒಳಗೆ ಹೋದಾಗ ಅದರ ಮುಂದಿನ ಬೀದಿ ಜನಸಂದಣಿಯಿಂದ ಕಿಕ್ಕಿರಿದಿತ್ತು ಮತ್ತು ಮೂವರು ಹುಡುಗಿಯರು ಬಾಗಿಲಲ್ಲಿ ನಿಂತಿದ್ದರು, ಮೇರಿ ಜೇನಳು ಕೆಂದಲೆಯವಳೇ ಸರಿ; ಆದರೂ ಪರವಾಯಿಲ್ಲ, ಅವಳು ಮಹಾ ಸುಂದರಿಯಂತೆ ತೋರು ತ್ತಿದ್ದಳು; ಅವಳ ಮುಖವೂ ಕಣ್ಣುಗಳೂ ದಿವ್ಯಪ್ರಭೆಯಂತೆ ಪ್ರಜ್ವಲಿಸುತ್ತಿದ್ದವು; ತಮ್ಮ ಚಿಕ್ಕಪ್ಪಂದಿರು ಬಂದರಲ್ಲ ಎಂದು ಅವಳಿಗೆ ಪರಮಸಂತೋಷವಾಗಿತ್ತು. ರಾಜ ತನ್ನ ಕೈಗಳನ್ನು ಚಾಚಿದನು; ಮೇರಿ ಜೇನ್ ಅವುಗಳೆಡೆಗೆ ಹಾರಿ ಬಂದಳು; ಸೀಳು ದುಟಿಯ ಹೆಣ್ಣು ಡ್ಯೂಕಿನೆಡೆಗೆ ಹಾರಿ ಬಂದಳು; ರಾಜನೂ ಡ್ಯೂಕನೂ ನಿರೀಕ್ಷಿಸಿದ್ದುದು ಫಲಿಸಿತು ಕಟ್ಟಕಡೆಗೆ ಒದಗಿದ ಈ ಬಂಧು ಸಮಾಗಮವನ್ನೂ, ಇವರಿಗೆ ಒದಗಿದ ಸುಯೋಗವನ್ನೂ ಕಂಡು ಎಲ್ಲರೂ ಅತಿಶಯವಾಗಿ, ಹೆಂಗಸರು ಸ್ವಲ್ಪಮಟ್ಟಿಗೆ, ಆನಂದ ಬಾಷ್ಪಗಳನ್ನು ಸುರಿಸಿದರು.

ಆಮೇಲೆ ರಾಜ ಡ್ಯೂಕನಿಗೆ ರಹಸ್ಯವಾಗಿ ಸನ್ನೆಮಾಡಿದನು–ಅವನು ಹಾಗೆ ಮಾಡು ವುದನ್ನು ನಾನು ಕಂಡೆ–ಮತ್ತು ಸುತ್ತಲೂ ನೋಡಿ, ಮೂಲೆಯಲ್ಲಿ ಎರಕು ಪೀಠಗಳ ಮೇಲೆ ಉದ್ದಕ್ಕೆ ಇರಿಸಿದ್ದ ಶವದ ಪೆಟ್ಟಿಗೆಯನ್ನು ಕಂಡನು, ಬಳಿಕ ಅವನೂ ಡ್ಯೂಕನೂ ಒಬ್ಬನ ಹೆಗಲಮೇಲೆ ಇನ್ನೊಬ್ಬ ಕೈ ಯಿಟ್ಟು ಇನ್ನೊಂದು ಕೈಯಿಂದ ಕಣ್ಣನ್ನು ಮುಚ್ಚಿ ಕೊಂಡು ನಿಧಾನವಾಗಿಯೂ ನೇಮದಿಂದಲೂ ಅತ್ತ ನಡೆದರು. ಎಲ್ಲರೂ ಹಿಂದಕ್ಕೆ ಸರಿದು ಅವರಿಗೆ ದಾರಿ ಬಿಟ್ಟರು; ಎಲ್ಲ ಸದ್ದೂ ಗದ್ದಲವೂ ನಿಂತುಹೋದವು. ಎಲ್ಲರೂ "ಶ್" ಎನ್ನುತ್ತಿದ್ದರು. ಗಂಡಸರೆಲ್ಲರೂ ಟೋಪಿಗಳನ್ನು ತೆಗೆದು ಕೈಯಲ್ಲಿ ಹಿಡಿದು ಕೊಂಡು ತಲೆತಗ್ಗಿಸಿದರು. ಒಂದು ಸೂಜಿ ಬಿದ್ದ ಧ್ವನಿಯೂ ಕಿವಿಗೆ ಬೀಳುವಂತಿತ್ತು. ಅವರು ಮುಂದೆ ಹೋಗಿ ಶವದ ಪೆಟ್ಟಿಗೆಯ ಮುಂದೆ ತಲೆಬಾಗಿ ನಿಂತು ಅದನ್ನು ಒಂದು ಸಲ ನೋಡಿ ಗೋಳೋ ಎಂದು ಅಳತೊಡಗಿದರು. ಅವರ ರೋದನವನ್ನು ನೀವು ಆರ್ಲಿಯನ್ಸಿನವರೆಗೂ ಅತಿಸ್ಪಷ್ಟವಾಗಿ ಕೇಳಬಹುದಿತ್ತು. ಬಳಿಕ ಅವರ ಪರಸ್ಪರ ಒಬ್ಬನ ಕೈಗಳನ್ನು ಇನ್ನೊಬ್ಬನ ಕೊರಳ ಸುತ್ತ ಮಾಲೆ ಹಾಕಿ ಒಬ್ಬನ ಗಲ್ಲವನ್ನು ಇನ್ನೊಬ್ಬನ ಹೆಗಲಮೇಲೆ ಇಟ್ಟುಕೊಂಡರು. ಮೂರು ನಿಮಿಷಗಳ ಕಾಲ–ನಾಲ್ಕು ನಿಮಿಷಗಳಾಗಿ ದ್ದರೂ ಆಗಿರಬಹುದು–ಹಾಗೆಯೇ ಇದ್ದರು, ಗಂಡಸರಿಬ್ಬರು ಹಾಗೆ ಕಣ್ಣೀರು ಸುರಿಸು

ವುದನ್ನು ನಾನು ಎಂದೂ ಎಲ್ಲೂ ನೋಡಿರಲಿಲ್ಲ; ಅಲ್ಲಿದ್ದವರೆಲ್ಲರೂ ಹಾಗೆಮಾಡಿದರೆಂಬು ದನ್ನು ನೀವು ನೆನಪಿನಲ್ಲಿಡಬೇಕೆಂದು ಇದರ ಫಲವಾಗಿ ನೆಲ ತುಂಬಾ ಒದ್ದೆಯಾಗಿತ್ತು. ಇಂಥಾದ್ದನ್ನು ನಾನು ಹಿಂದೆಂದೂ ನೋಡಿರಲಿಲ್ಲ. ಆಮೇಲೆ ಶವದ ಪೆಟ್ಟಿಗೆಯ ಈ ಕಡೆ ಗೊಬ್ಬ ಆ ಕಡೆಗೊಬ್ಬ ಇಬ್ಬರೂ ಸರಿದು ನಿಂತು ಅದರ ಮೇಲೆ ಹಣೆಯಿಟ್ಟುಕೊಂಡು ತಮ್ಮೊಳಗೆ ತಾವು ಪ್ರಾರ್ಥನೆಮಾಡತೊಡಗಿದರು. ಪರಿಸ್ಥಿತಿ ಆ ಮಿತಿಗೆ ಏರಿದಾಗ ಅದು ಜನಜಂಗುಳಿಯ ಮನಸ್ಸಿನ ಮೇಲೆ ಬೀರಿದ ಪ್ರಭಾವಕ್ಕೆ ಎಣೆಯಾದುದನ್ನು ನೀವೆಲ್ಲಿಯೂ ಕಂಡಿರಲಿಕ್ಕಿಲ್ಲ, ಆ ಅದೃಷ್ಟಹೀನ ಬಾಲಕಿಯರೂ ಸೇರಿ ಎಲ್ಲರ ಹೃದ ಯವೂ ಕಲಕಿಹೋಗಿ ಎಲ್ಲರೂ ಜೋರಾಗಿ ಅಳತೊಡಗಿದರು. ಅಲ್ಲಿದ್ದ ಪ್ರತಿಯೊಬ್ಬ ಹೆಂಗಸೂ ಆ ಹುಡುಗಿಯರ ಹತ್ತಿರಕ್ಕೆ ಹೋಗಿ, ಒಂದು ಮಾತನ್ನೂ ಆಡದೆ, ವಿಧಿವ ತ್ತಾಗಿ ಅವರ ಹಣೆಗೆ ಮುತ್ತಿಟ್ಟು, ಅವರ ನೆತ್ತಿಯ ಮೇಲೆ ಕೈಯಿಟ್ಟು, ಹನಿಗಣ್ಣಿ ನಿಂದ ಮುಖವೆತ್ತಿ ದುಃಖವುಕ್ಕಿ ಅಳುತ್ತಾ, ತಾನಿದ್ದ ಬಳಿಗೆ ಹಿಂದಿರುಗಿ, ತನ್ನ ಪಕ್ಕದ ಲ್ಲಿದ್ದವಳಿಗೆ 'ಇನ್ನು ನಿನ್ನ ಸರದಿ, ಅಲ್ಲಿಗೆ ಹೋಗು, ಎನ್ನುವ ಅರ್ಥದಲ್ಲಿ ಕೈ ಸನ್ನೆ ಮಾಡುತ್ತಿದ್ದಳು. ಅದರಷ್ಟು ಜಿಗುಪ್ಸೆಯ ದೃಶ್ಯವನ್ನು ನಾನು ಕಂಡೇ ಇರಲಿಲ್ಲ.

ಸ್ವಲ್ಪ ಹೊತ್ತಾದ ಮೇಲೆ ರಾಜ ತಲೆಯೆತ್ತಿದ, ಕೊಂಚ ಮುಂದೆ ಬಂದು; ಮತ್ತು ಅಶ್ರುಧಾರೆಯಿಂದಲೂ ಅಬದ್ಧಪ್ರಲಾಪದಿಂದಲೂ ತುಂಬಿದ ಭಾಷಣವೊಂದನ್ನು ಬಿಗಿದು, ಮೃತನ ಅಗಲಿಕೆಯೂ, ನಾಲ್ಕು ಸಾವಿರ ಮೈಲಿಗಳ ದೀರ್ಘಪ್ರಯಾಣವನ್ನು ಕೈಕೊಂಡು ಬಂದಿದ್ದರೂ ತನ್ನ ಸೋದರರನ್ನು ಅವನು ಪ್ರಾಣಬಿಡುವ ಮುನ್ನ ಒಮ್ಮೆ ನೋಡುವ ಅವಕಾಶ ತಪ್ಪಿಹೋದುದೂ, ತನ್ನನ್ನೂ ತನ್ನ ಅದೃಷ್ಟ ಹೀನ ಸೋದರ ನನ್ನು ತೀವ್ರ ಸಂಕಟಕ್ಕೊಡ್ಡಿದೆ ಎಂದೂ, ಆದರೆ ಈ ಯಾತನೆ ಈ ಪವಿತ್ರಾಶ್ರುಗಳಿಂದಲೂ ಆಪ್ತಬಾಂಧವರ ಅನುತಾಪದಿಂದಲೂ ಮಧುರವೂ ಪರಿಶುದ್ಧವೂ ಆಗಿರುವುದೆಂದೂ, ಆ ಕಾರಣಕ್ಕಾಗಿ ತಾನು ತನ್ನ ಮತ್ತು ತನ್ನ ಸೊದರನ ಪರವಾಗಿ ಹೃತ್ಪೂರ್ವಕ ಮೌನದಿಂದ ಎಲ್ಲರಿಗೂ ಕೃತಜ್ಞತೆಯನ್ನರ್ಪಿಸುವುದಾಗಿಯೂ, ಮಾತುಗಳು ತುಂಬಾ ದುರ್ಬಲವೂ ಅಭಿಮಾನರಹಿತವೂ ಆಗಿರವುವರಿಂದ ಈ ಕೆಲಸವನ್ನು ಬಾಯಿಮಾತಿನಿಂದ ಮಾಡಲಾ ಗದೆಂದೂ ಇತ್ಯಾದಿ ಇತ್ಯಾದಿ ಕೆಲಸಕ್ಕೆ ಬಾರದ ಹೊಲಸು ಸರಕನ್ನು ಎಲ್ಲರಿಗೂ ತಲೆ-ಬೇಸರ ಹಿಡಿಯುವ ಮಟ್ಟಿಗೆ ಸೇರಿಸುತ್ತಾ ಹೋದನು. ಬಳಿಕ ಅವನು ಬಹು ಪವಿತ್ರ ಭಾವನೆಯಿಂದಲೋ ಎಂಬಂತೆ 'ತಥಾಸ್ತು' ಎಂದು ಬಿಕ್ಕಿ ಬಿಕ್ಕಿ ಅತ್ತನು.

ಈ ನುಡಿ ಅವನಿಂದ ತುಳುಕಿದುದೇ ತಡ, ಗುಂಪಿನಲ್ಲಿದ್ದ ಒಬ್ಬನಾವನೋ ದಿವ್ಯಾ ನಂದರ ಸ್ತೋತ್ರವೊಂದನ್ನು ಹಾಡಿದನು. ಎಲ್ಲರೂ ತಮ್ಮ ಶಕ್ತಿಮೀರಿ ಅದಕ್ಕೆ ದನಿ ಗೂಡಿಸಿದರು ಅದು ನಿಮ್ಮ ಮನಸಿಗೆ ಹರುಷವನ್ನು ತಂದು, ದೇವಾಲಯದಿಂದ ಕೇಳಿಬರುವ ಪ್ರಾರ್ಥನೆಯನ್ನು ನೆನಪಿಗೆ ತರುತ್ತಿತ್ತು. ಸಂಗೀತವೇನೋ ಬಲು ಒಳ್ಳೆ ಯದೆ; ಆದರೆ ಅಷ್ಟೆಲ್ಲ ಭಾವೋದ್ರೇಕದ ನಿರರ್ಥಕ ದೀರ್ಘಭಾಷಣವಾದ ಮೇಲೆ

ಕೂಡ, ಅದು ಇಷ್ಟರ ಮಟ್ಟಿಗೆ ಹಿತಕರವೂ ಪ್ರಾಮಾಣಿಕವೂ ಪ್ರಭಾವಶಾಲಿಯೂ ಆಗಬಲ್ಲದೆಂದು ನಾನು ಅರಿತಿರಲಿಲ್ಲ.

ರಾಜ ಆಮೇಲೆ ಮತ್ತೆ ತನ್ನ ಬಾಯಿಗೆ ಅವಕಾಶ ಕೊಟ್ಟು, ತಮ್ಮ ಮನೆತನದ ಆಪ್ತ ಸ್ನೇಹಿತರಲ್ಲಿ ಮುಖ್ಯರಾದ ಕೆಲವರಾದರೂ ಆ ಸಂಜೆ ತಮ್ಮೊಂದಿಗೆ ಭೋಜನವನ್ನು ಸ್ವೀಕರಿಸುವುದಾದರೆ ತನಗೂ ತನ್ನ ಸೋದರಕುಮಾರಿಯರಿಗೂ ಸಂತೋಷವಾಗುವುದೆಂದೂ ಮೃತನ ಪಾರ್ಥಿವ ಶರೀರದ ಬಳಿ ಸ್ವಲ್ಪ ಹೊತ್ತು ಇರಲನುಕೂಲವಾಗುವುದೆಂದೂ ನುಡಿದನು : ಗತಪ್ರಾಣನಾಗಿ ಅಲ್ಲಿ ಹಾಯಾಗಿ ಮಲಗಿರುವವನು ಮಾತಾಡುವಂತಿದ್ದರೆ, ಅವನು ತನಗೆ ಪರಮಪ್ರಿಯರಾದವರ ಹೆಸರುಗಳನ್ನು, ತನ್ನ ಪತ್ರಗಳಲ್ಲಿ ಮೇಲಿಂದ ಮೇಲೆ ಉಲ್ಲೇಖಿಸುತ್ತಿದ್ದ ಆ ಹೆಸರುಗಳನ್ನು, ಹೇಳುತಿದ್ದನೆಂದನು. ಅವು ಪೂಜ್ಯ ಮಿ. ಹಾಬ್ಸನ್, ಡೀಕನ್ ಲಾಟ್ ಹಾರ್ವೆ, ಮಿ.ಲೆನ್ ರೂಕರ್, ಆ್ಯಬ್ನರ್ ಷ್ಯಾಕಲ್ ಫರ್ಡ್, ಲೆವಿಬೆಲ್, ಡಾ. ರಾಬಿನ್‌ಸನ್ ಮತ್ತು ಅವರ ಪತ್ನಿಯರು. ಮತ್ತು ವಿಧವೆ ಬಾರ್ಟ್ಲೆ- ಅವರ ಹೆಸರುಗಳೇ ಎಂದು ತನಗೆ ತಿಳಿದಿದೆ ಎಂದನು. ಪೂಜ್ಯ ಹಾಬ್ಸನ್ನನೂ ಡಾ. ರಾಬಿನ್ಸನ್ನನೂ ಜತೆಗೂಡಿ ಊರೊಳಗೆಲ್ಲೋ ಹೊರಟುಹೋಗಿದ್ದರು-ಅಂದರೆ, ವೈದ್ಯನು ರೋಗಿಯೊಬ್ಬನನ್ನು ಪರಲೋಕಕ್ಕೆ ಸಾಗಿಹಾಕಲೂ, ಪಾದ್ರಿಯು ಅವನಿಗೆ ಸರಿಯಾಗಿ ಮಾರ್ಗದರ್ಶನಮಾಡಲೂ ಹೋಗಿದ್ದರೆಂದು ನನ್ನೆಣಿಕೆ. ವಕೀಲ್ ಬೆಲ್ ತನ್ನ ವ್ಯವಹಾರಕ್ಕಾಗಿ ದೂರ ಲೂಯಿಸ್‌ವಿಲ್ಲೆಗೆ ಹೋಗಿದ್ದನು. ಉಳಿದವರು ಅಲ್ಲಿದ್ದರು : ಅವರು ಮುಂದೆ ಬಂದು ರಾಜನಿಗೆ ಹಸ್ತಲಾಘವವನ್ನಿತ್ತು, ಕೃತಜ್ಞತೆಯನ್ನರ್ಪಿಸಿ, ಮಾತಾಡಿಸಿದರು. ಆಮೇಲೆ ಅವರು ಡ್ಯೂಕನಿಗೆ ಹಸ್ತಲಾಘವವನ್ನಿತ್ತರು ; ಅವ ನೊಂದಿಗೆ ಒಂದು ಮಾತನ್ನೂ ಆಡಲಿಲ್ಲ ; ಅವನು ಮಾತುಬಾರದ ಮಗುವಿನಂತೆ ಅಷ್ಟು ಹೊತ್ತೂ "ಗೂ-ಗೂ—ಗೂ-ಗೂ-ಗೂ" ಎನ್ನುತ್ತ ವಿಧವಿಧವಾಗಿ ಕೈ ಸನ್ನೆ ಮಾಡುತ್ತಲೇ ಇದ್ದನು ; ಅವರು ಗಾಂಪರ ಗುಂಪಿನಂತೆ ಅವನ ಕಡೆಗೆ ನಸುನಕ್ಕು ತಲೆಯಾಡಿಸುತ್ತಿದ್ದರು

ರಾಜನಂತೂ ಮುಂಬರಿದು ಆ ಪೂರಿನಲ್ಲಿರುವ ಒಂದು ನಾಯನ್ನೂ ಬಿಡದೆ ಎಲ್ಲರ ಕ್ಷೇಮ ಸಮಾಚಾರವನ್ನೂ ವಿಚಾರಿಸಿಕೊಳ್ಳುವ ಮತ್ತು ಆ ಪೂರಿನಲ್ಲಿ ಹಿಂದೆಂದೋ ಜಾರ್ಜನ ಸಂಸಾರಕ್ಕೋ ಪೀಟರಿನಿಗೋ ಒದಗಿದ್ದ ಬಗೆ ಬಗೆಯ ಸಣ್ಣ ಪುಟ್ಟ ಸಂದರ್ಭ ಗಳನ್ನು ವಿವರಿಸುವ ಸಾಹಸಕ್ಕೆ ತೊಡಗಿದನು, ಆ ವಿಷಯಗಳನ್ನು ಪೀಟರ್ ತನಗೆ ಪತ್ರ ಗಳಲ್ಲಿ ತಿಳಿಸಿದ್ದನೆಂದನು ; ಅದು ಪೂರಾ ಸುಳ್ಳು : ಅವನು ಆ ವಿವರಗಳನ್ನು ಪಡೆದುಕೊಂಡದ್ದು, ನಾವು ಹಬೆದೋಣಿಯ ತನಕ ಕಿರುದೋಣಿಯಲ್ಲಿ ಒಯ್ದ ಆ ದಡ್ಡ ಹುಡುಗನಿಂದ.

ತನ್ನ ತಂದೆ ಬಿಟ್ಟು ಹೋಗಿದ್ದ ಪತ್ರವನ್ನು ಮೇರಿ ಜೇನಳು ತಂದು ಕೊಟ್ಟಳು ; ರಾಜ ಅದನ್ನು ಗಟ್ಟಿಯಾಗಿ ಓದಿದ, ಅತ್ತುಬಿಟ್ಟ. ಹುಡುಗಿಯರಿಗೆ ವಾಸದ ಮನೆ,

ಮೂರು ಸಾವಿರ ಡಾಲರುಗಳು ಮತ್ತು ಚಿನ್ನ: ತುಂಬಾ ಅಭಿವೃದ್ಧಿಯಾಗಿದ್ದ ಚರ್ಮಶಾಲೆ, ಇನ್ನು ಕೆಲವು ಮನೆಗಳು, ಮತ್ತು ಜಮೀನು (ಸುಮಾರು ಏಳು ಸಾವಿರ ಬೆಲೆ ಬಾಳುವ ಆಸ್ತಿ) ಮತ್ತು ನಗದು ಮೂರು ಸಾವಿರ ಡಾಲರುಗಳು ಹಾರ್ವೆ ಮತ್ತು ವಿಲ್ಲಿಯಮ್ ಇಬ್ಬರಿಗೆ: ಎಂದು ಆ ಪತ್ರದಲ್ಲಿ ಕೊಡಲಾಗಿತ್ತಲ್ಲದೆ, ನಗದು ಆರು ಸಾವಿರ ಡಾಲರುಗಳನ್ನು ಹಗೇವಿನಲ್ಲಿ ಬಚ್ಚಿಟ್ಟಿರುವುದೆಲ್ಲಿ ಎಂಬುದನ್ನೂ ಅದರಲ್ಲಿ ತಿಳಿಸಲಾಗಿತ್ತು. ತಾವು ಹೋಗಿ ಅದನ್ನು ತರುವುದಾಗಿಯೂ ಆಮೇಲೆ ಎಲ್ಲವನ್ನೂ ನ್ಯಾಯವಾಗಿ ಯೋಗ್ಯರೀತಿಯಲ್ಲಿ ವ್ಯವಸ್ಥೆ ಮಾಡುವುದಾಗಿಯೂ ಈ ಮೋಸಗಾರರಿಬ್ಬರೂ ಸೂಚಿಸಿದರು, ಮೋಂಬತ್ತಿಯೊಂದನ್ನು ಹಿಡಿದು ತಮ್ಮೊಂದಿಗೆ ಬರಬೇಕೆಂದು ನನಗೆ ಹೇಳಿದರು. ನಾವು ಹಗೇವಿನೊಳಕ್ಕೆ ಹೋಗಿ ಬಾಗಿಲು ಹಾಕಿಕೊಂಡೆವು; ಅವರು ಚೀಲದ ಬಾಯನ್ನು ಬಿಚ್ಚಿ ನೆಲದ ಮೇಲೆ ಕೊಡವಿದರು, ಹೊಂಬಣ್ಣದ ಆ ನಾಣ್ಯದ ದೃಶ್ಯ ಬಲು ಚಿತ್ತಾಕರ್ಷಕವಾಗಿತ್ತು. ಆಗ ರಾಜನ ಕಣ್ಣು ಮಿಂಚಿದ್ದನ್ನು ನೀವು ನೋಡಬೇಕಾಗಿತ್ತು! ಅವನು ಡ್ಯೂಕನ ಬೆನ್ನಟ್ಟಿ ಹೇಳಿದನು:

"ಓ ಇದರಲ್ಲಿ ಬಾಯಿ ಬಡಿಕತನವಾಗಲೀ ಮತ್ತೊಂದಾಗಲೀ ಏನೂ ಇಲ್ಲ! ಓ ಅಂಥದೇನೂ ಇಲ್ಲವೆಂದು ನನ್ನೆಣಿಕೆ! ನೋಡು ಬಿಲ್ಜ್, ಇದು ಅಪ್ರತಿಮ ದೃಶ್ಯವನ್ನೂ ಮೀರಿಸಿದೆ, ಅಲ್ಲವೆ?"

ಡ್ಯೂಕ್ ಹೌದೆಂದು ಒಪ್ಪಿಕೊಂಡನು, ಅವರು ಆ ಹಳದಿಯ ನಾಣ್ಯಗಳನ್ನು ಬಾಚಿ ಬೊಗಸೆಯಲ್ಲಿ ತುಂಬಿಕೊಂಡು ಬೆರಳುಗಳ ನಡುವಣ ಸಂದಿಗಳಿಂದ ಅವುಗಳನ್ನು ಕೆಳಗೆ ಚೆಲ್ಲಿ ಅವು ನೆಲದ ಮೇಲೆ ಝಣತ್ಕಾರ ಮಾಡುತ್ತ ಉರುಳುವುದನ್ನು ಕಂಡರು. ರಾಜ ನುಡಿದ:

"ಗತಿಸಿದ ಶ್ರೀಮಂತನ ಸೋದರರಾಗಿಯೂ, ಪರರಾಷ್ಟ್ರದ ರಾಜ ವಂಶದ ಪ್ರತಿನಿಧಿಗಳಾಗಿಯೂ ಇರುವ ನಮಗೆ ಇದು ಪ್ರಾಪ್ತವಾಯಿತೆನ್ನುವುದೇ ಇಲ್ಲಿ ನಾನೂ ನೀನೂ ತಿಳಿಯಬೇಕಾದದ್ದು, ಬಿಲ್ಜ್; ಮಾತು ನಿಷ್ಫಲ. ನಾವು ದೇವರನ್ನು ನಂಬಿದ್ದಕ್ಕೆ ಇದು ಆದ ಲಾಭ. ನೋಡುತ್ತ ಹೋದರೆ ಅದೇ ಉತ್ತಮ ಮಾರ್ಗವೆನ್ನಬೇಕು. ನಾನು ಹಲವು ಮಾರ್ಗಗಳನ್ನು ಅನುಸರಿಸಿದ್ದೇನೆ ನಿಜ, ಆದರೆ ಅದಕ್ಕಿಂತ ಉತ್ತಮವಾದುದಿಲ್ಲ,"

ಎಂಥವರೂ ಸಾಮಾನ್ಯವಾಗಿ ಆ ನಿಧಿಯಿಂದ ತೃಪ್ತಿಗೊಂಡು, ನಂಬಿಕೆಯ ಮೇಲೆ ತೆಗೆದುಕೊಂಡು ಹೋಗುತ್ತಿದ್ದರು; ಆದರೆ ಇವರೋ ಅದನ್ನು ಎಣಿಸಲೇಬೇಕು. ಇವರು ಎಣಿಸಿದರು; ಪತ್ರದಲ್ಲಿ ಉಕ್ತವಾಗಿದ್ದುದಕ್ಕಿಂತ ನಾಲ್ಕು ನೂರ ಹದಿನೈದು ಡಾಲರುಗಳು ಕಡಿಮೆಯಾಗಿದ್ದುದು ಕಂಡುಬಂತು. ರಾಜ ಹೇಳಿದ:

"ಎಲಾ ಇವನ! ಆ ನಾಲ್ಕು ನೂರ ಹದಿನೈದು ಡಾಲರುಗಳನ್ನು ಏನು ಮಾಡಿದನೆಂಬುದೇ ಆಶ್ಚರ್ಯ!"

ಇದು ಅವರಿಗೆ ತುಂಬಾ ಯೋಚನೆಗಿಟ್ಟುಕೊಂಡಿತು ; ಸುತ್ತಲೂ ಹುಡುಕಾಡಿದರು. ಬಳಿಕ ಡ್ಯೂಕ್ ಹೇಳಿದ :

"ಸರಿ, ಬಿಡು, ಅವನಿಗೆ ತುಂಬಾ ಕಾಯಿಲೆಯಾಗಿತ್ತು — ಆದ್ದರಿಂದ ಅವನ ಲೆಕ್ಕಾಚಾರದಲ್ಲಿ ತಪ್ಪಾಗಿರಬೇಕು. ಹಾಗೆಯೇ ಆಗಿರಬೇಕೆಂದು ನನಗೆ ತೋರುತ್ತದೆ. ಅದು ಹೋಗಲಿ ಎಂದು ಸುಮ್ಮನಿರುವುದೇ ಬಲು ಒಳ್ಳೆಯದು, ಆ ವಿಚಾರವನ್ನು ಗಮನಕ್ಕೆ ತಂದುಕೊಳ್ಳಬಾರದು ನಾವು ಅಷ್ಟು ಹಣವನ್ನು ಬಿಟ್ಟುಕೊಡಬಲ್ಲೆವು."

"ಓ ಅದು ಅಲ್ಪವಿಷಯ, ಹೌದು, ನಾವದನ್ನು ಬಿಟ್ಟುಕೊಡಬಲ್ಲೆವು. ಅದರ ಬಗೆಗೆ ನನಗೆ ಎಳ್ಳಷ್ಟೂ ಚಿಂತೆಯಿಲ್ಲ—ಆದರೆ ನಾನು ಯೋಚಿಸುತ್ತಿರುವುದು ಈ ಎಣಿಕೆಯ ವಿಷಯವನ್ನು ಮಾತ್ರ ಏಕೆಂದರೆ ನಾವು ಈ ವಿಷಯದಲ್ಲಿ ಮುಚ್ಚುಮರೆಯಿಲ್ಲದ, ಸಂಶಯಾಸ್ಪದವಲ್ಲದ, ಬಲು ಯೋಗ್ಯರೀತಿಯಲ್ಲಿ ನಡೆದುಕೊಳ್ಳಬೇಕು, ನೋಡು, ನಾವು ಈ ಹಣವಷ್ಟನ್ನೂ ಮಹಡಿಯ ಮೇಲಕ್ಕೆ ಒಯ್ದು ಎಲ್ಲರೆದುರಿಗೂ ಎಣಿಸಬೇಕು—ಹಾಗೆ ಮಾಡಿದರೆ ಸಂಶಯಕ್ಕೆ ಎಡೆಯೇ ಇರುವುದಿಲ್ಲ. ಗತಿಸಿದವನು ಆರು ಸಾವಿರ ಡಾಲರುಗಳು ಅಲ್ಲಿವೆ ಎಂದಿರುವಾಗ, ನಿನಗೆ ಗೊತ್ತು, ನಾವು – ಅನ್ನಿಸಿಕೊಳ್ಳಲು ಇಷ್ಟಪಡುವುದಿಲ್ಲ,"

"ಸ್ವಲ್ಪ ನಿಲ್ಲು" ಎಂದನು ಡ್ಯೂಕ್. "ಕಡಿಮೆ ಬಿದ್ದಿರುವುದನ್ನು ಭರ್ತಿ ಹಾಕೋಣ." ಹೀಗೆನ್ನುತ್ತಲೇ ಅವನು ತನ್ನ ಜೇಬಿನಿಂದ ಹಳದಿಯ ನಾಣ್ಯಗಳನ್ನು ಈಚೆಗೆ ಸುರಿಯತೊಡಗಿದನು.

"ಇದು ಬಲು ಭೇಷಾದ ಅಚ್ಚರಿಯ ಹಂಚಿಕೆ ಎನ್ನಬೇಕು, ಡ್ಯೂಕ್—ನಿನ್ನ ತಲೆಯೊಳಗೆ ಅಸಾಧ್ಯ ಬುದ್ಧಿ ತುಂಬಿದೆ ಎಂದನು ರಾಜ. ಮತ್ತೆ ಆ ಹಳೆಯ ಅಪ್ರತಿಮ ಪ್ರದರ್ಶನ ನಮ್ಮ ನೆರವಿಗೆ ಬಂದಿರದಿದ್ದರೆ ಕೇಳು!" ಆವನು ಹಳದಿಯ ನಾಣ್ಯಗಳನ್ನು ಸುರಿದು ಪೇರಿಸತೊಡಗಿದನು.

ಅವರು ಪೂರಾ ಬರಿದಾದರು. ಆದರೂ ಒಟ್ಟಿನಲ್ಲಿ ಕರಾರುವಾಕ್ಕಾಗಿ ಆರು ಸಾವಿರ ಡಾಲರುಗಳನ್ನು ಭರ್ತಿಮಾಡಿಕೊಂಡರು,

"ಅಯ್ಯಾ, ನನಗೊಂದು ಯೋಚನೆ ಹೊಳೆದಿದೆ" ಎಂದನು ಡ್ಯೂಕ್. "ನಾವು ಮಹಡಿಯ ಮೇಲಕೆ ಹೋಗಿ ಈ ಹಣವನ್ನು ಎಣಿಸೋಣ : ಆ ಮೇಲೆ ಅಷ್ಟನ್ನೂ ಆ ಹುಡುಗಿಯರಿಗೆ ಕೊಡೋಣ,"

"ಭಲೆ ಭಲೆ ! ಡ್ಯೂಕ್, ಎಲ್ಲಿ ಬಾ, ನಿನ್ನನ್ನು ಅಪ್ಪಿಕೊಳ್ಳುತ್ತೇನೆ ! ಇಂಥಾ ಅತಿ ಪ್ರಚಂಡ ಯೋಚನೆ ಹಿಂದೆ ಯಾರಿಗೂ ಹೊಳೆದಿರಲಿಲ್ಲ. ನಿನ್ನದು ಪರಮಾಶ್ಚರ್ಯಕರವಾದ ಬುದ್ಧಿಶಕ್ತಿಯೆಂಬುದನ್ನು ನಾನೀಗ ಕಂಡೆ. ಇದೀಗ ಎಲ್ಲಾ ಮೋಸವನ್ನೂ ಮೆಟ್ಟಿದ ಮೋಸ – ಅದರಲ್ಲಿ ಅನುಮಾನವೇ ಇಲ್ಲ. ಇನ್ನು ಅವರು ತಮ್ಮ ಸಂಶಯ

ಗಳೆಲ್ಲವನ್ನೂ ಇಲ್ಲಿಗೆ ಹೊತ್ತು ತರಲಿ—ಇದೊಂದೇ ಅವುಗಳೆಲ್ಲವನ್ನೂ ತೊಡೆದು ಹಾಕುತ್ತದೆ."

ಅವರು ಮಹಡಿಯ ಮೇಲಕ್ಕೆ ಹತ್ತಿ ಹೋದ ಕ್ಷಣವೇ ಅಲ್ಲಿದ್ದವರೆಲ್ಲರೂ ಮೇಜಿನ ಸುತ್ತಲೂ ಬಂದು ನಿಂತರು, ರಾಜ ನಾಣ್ಯಗಳನ್ನು ಎಣಿಸಿದನು; ಅವುಗಳನ್ನು ಒಂದು ಗುಪ್ಪೆಗೆ ಮುನ್ನೂರು ಡಾಲರುಗಳಂತೆ, ಆಕರ್ಷಕವಾದ ಇಪ್ಪತ್ತು ಚಿಕ್ಕ ಗುಪ್ಪೆಗಳಾಗಿ ವಿಂಗಡಿಸಿದನು. ಅಲ್ಲಿದ್ದವರೆಲ್ಲರೂ ಆ ಕಡೆಗೆ ತಮ್ಮ ಹಂಬಲದ ಕಣ್ಣುಗಳನ್ನು ಹಾಯಿಸುತ್ತಾ ತಮ್ಮ ಉಣಿಸಿನ ತುಣುಕುಗಳನ್ನು ನೆಕ್ಕುತ್ತಿದ್ದರು. ಆ ಮೇಲೆ ಅವರು ಅದನ್ನು ಚೀಲಕ್ಕೆ ತುಂಬಿದರು; ಬಳಿಕ ರಾಜ ಮತ್ತೊಂದು ಭಾಷಣವನ್ನು ಬಿಗಿಯತೊಡಗುವುದನ್ನು ನಾನು ಕಂಡೆ. ಅವನು ಹೇಳಿದ:

"ಗೆಳೆಯರೆಲ್ಲರಲ್ಲಿ ವಿನಂತಿ. ಅಲ್ಲಿ ಮಲಗಿರುವ ಸೋದರನಿದ್ದಾನಲ್ಲ, ಅವನು ತನ್ನವರನ್ನು ದುಃಖದ ಕಣಿವೆಯಲ್ಲಿ ತೊರೆದು ಹೋದರೂ, ಅವರ ಬಗೆಗೆ ಔದಾರ್ಯದಿಂದ ನಡೆದುಕೊಂಡಿದ್ದಾನೆ. ತಾನು ಪ್ರೀತಿಸಿದ ಮತ್ತು ಪೋಷಿಸಿದ, ಈ ನಿಮ್ಮ ಬಡ ಕುರಿಮರಿಗಳಂಥ ತಬ್ಬಲಿಗಳ ಬಗೆಗಂತೂ ಅವನು ಬಲು ಉದಾರವಾಗಿ ನಡೆದುಕೊಂಡಿದ್ದಾನೆ. ಹೌದು; ತನ್ನ ಪ್ರೀತಿಯ ವಿಲಿಯಮ್ಮನ್ನೂ ನನ್ನನ್ನೂ ನೋಯಿಸಿದಂತಾಗುವುದೆಂಬ ಅಂಜಿಕೆ ಅವನಿಗಿರದೆ ಹೋಗಿದ್ದರೆ, ಅವನು ಅವರ ಬಗೆಗೆ ಇನ್ನೂ ಹೆಚ್ಚಿನ ಔದಾರ್ಯದಿಂದ ನಡೆದುಕೊಳ್ಳುತ್ತಿದ್ದನೆಂಬುದು ಅವನನ್ನು ಚೆನ್ನಾಗಿ ಬಲ್ಲ ನಮಗೆ ಗೊತ್ತಿದೆ. ಅವನು ಹಾಗೆ ಮಾಡುತ್ತಿರಲಿಲ್ಲವೆ, ನೀವೇ ಹೇಳಿ? ಆ ವಿಷಯದಲ್ಲಂತೂ ನನಗೆ ಸಂದೇಹವೇ ಇಲ್ಲ. ಹಾಗಿರುವಲ್ಲಿ, ಈ ಹೊತ್ತಿನಲ್ಲಿ ಅವನ ದಾರಿಗೆ ಅಡ್ಡ ಬರುವವರು ಎಂಥಾ ಸೋದರರಾದಾರು? ಈ ಹೊತ್ತಿನಲ್ಲಿ ಇಂಥಾ ಅನಾಥರಾದ ಮುದ್ದು ಕುರಿಮರಿಗಳಿಗೆ ಮೋಸಮಾಡಿ ಅವರಿಗೆ ಸಲ್ಲಬೇಕಾದದ್ದನ್ನು ಅಪಹರಿಸುವವರು — ಹೌದು, ಅಪಹರಿಸುವವರು — ಎಂಥಾ ಚಿಕ್ಕಪ್ಪಂದಿರಾದಾರು? ವಿಲ್ಲಿಯಮ್ಮನ್ನು ನಾನು ಬಲ್ಲೆನಾದರೆ—ನಾನು ಹಾಗೆಯೇ ತಿಳಿದಿದ್ದೇನೆ—ಸರಿ, ನಾನು ಈಗ ಅವನನ್ನು ಕೇಳುತ್ತೇನೆ." ಅವನು ಸುತ್ತಲೂ ತಿರುಗಿ ನೋಡಿ ಡ್ಯೂಕನ ಮುಂದೆ ಕೈ ಸನ್ನೆ ಮಾಡತೊಡಗಿದನು; ಡ್ಯೂಕ್ ಕ್ಷಣಕಾಲ ಮೂರ್ಖನಂತೆ, ಮಂದ ಮತಿಯಂತೆ ಅವನ ಕಡೆಗೆ ನೋಡಿದನು, ಆಮೇಲೆ ಇದ್ದಕಿದ್ದಂತೆಯೇ ಅವನ ಮಾತಿನ ಅರ್ಥ ತನಗೆ ಹೊಳೆಯಿತೆಂದು ನಟಿಸಿ, ಸಂತೋಷದಿಂದ ತನ್ನ ಶಕ್ತಿ ಮೀರಿ ಗೂ-ಗಂಟ್ಟುತ್ತಾ, ರಾಜನ ಬಳಿಗೆ ಹಾರಿ ಅವನನ್ನು ಹದಿನೈದು ಸಲ ಅಪ್ಪಿಕೊಂಡನು. ಆಗ ರಾಜ ಹೇಳಿದ, "ನನಗದು ಗೊತ್ತು; ಅವನ ಅಭಿಪ್ರಾಯವೇನೆಂಬುದು ಇದರಿಂದ ಎಲ್ಲರಿಗೂ ಖಚಿತವಾಗುತ್ತದೆ. ಬನ್ನಿ ಇಲ್ಲಿಗೆ ಮೇರಿ ಜೇನ್, ಸೂಸಾನ್ ಮತ್ತು ಜೋ ಆನ್ನರ್ ಈ ಹಣವನ್ನು ತೆಗೆದುಕೊಳ್ಳಿ,—ಅಷ್ಟನ್ನೂ ತೆಗೆದುಕೊಳ್ಳಿ. ಮೃತ್ಯು ಸ್ಪರ್ಶದಿಂದ

ಮೃ ತಣ್ಣಗಾಗಿದ್ದರೂ ಸಂತೋಷಭರಿತನಾಗಿ ಅಲ್ಲಿ ಮಲಗಿರುವ ಅವನ ಕೊಡಗೆ ಇದು."

ಮೇರಿ ಜೇನ್ ಅವನ ಬಳಿಗೂ, ಸೂಸಾನಳೂ ಸೀಳುತುಟಿಯುವಳೂ ಡ್ಯೂಕನ ಬಳಿಗೂ ಹೋದರು; ಇನ್ನಂಥಾ ಆಲಿಂಗವನ್ನಾಗಲೀ ಚುಂಬನವನ್ನಾಗಲೀ ನೋಡಿಯೇ ಇಲ್ಲ. ಎಲ್ಲರೂ ಕಂಬನಿದುಂಬುತ್ತಾ ಅವರನ್ನು ಮುತ್ತಿಕೊಂಡರು, ಆ ಮೋಸಗಾರರ ಕೈಗಳನ್ನು ಕುಲುಕಿದರು, "ಎಂಥಾ ಪುಣ್ಯಾತ್ಮರಯ್ಯ ನೀವು!—ಭೇಷಾದ ಕೆಲಸ! ಅಲ್ಲ, ನಿಮಗೆ ಈ ಔದಾರ್ಯ ಹೊಳೆದುದು ಹೇಗೆ!" ಎಂದು ಉದ್ದಕ್ಕೂ ಹೇಳುತ್ತಲೇ ಇದ್ದರು.

ಸರಿ, ಆಮೇಲೆ ಅಲ್ಲಿದ್ದವರೆಲ್ಲರೂ ಮೃತನ ಸುದ್ದಿಯೆತ್ತಿ, ಅವನೆಷ್ಟು ಒಳ್ಳೆಯವನು, ಅವನು ಸತ್ತದ್ದರಿಂದ ಎಂಥಾ ನಷ್ಟವಾಯಿತು. ಇತ್ಯಾದಿ ಮಾತಾಡಿದರು. ಸ್ವಲ್ಪಹೊತ್ತಿನೊಳಗಾಗಿ ಅಲ್ಲಿಗೊಬ್ಬ ಮನುಷ್ಯ ಆ ಮಂದಿಯ ನಡುವೆದಾರಿ ಬಿಡಿಸಿಕೊಂಡು ಒಳಗೆ ಬಂದ; ಭದ್ರವಾಗಿ ಹಲ್ಲು ಕೂಡಿಸಿಕೊಂಡು ! ಆ ಕಡೆಗೇ ನೋಡುತ್ತ ಅವರಾಡುತ್ತಿದ್ದ ಮಾತನ್ನೇ ಕೇಳುತ್ತ, ಒಂದು ಮಾತನ್ನೂ ಆಡದೆ ಹಾಗೆಯೇ ನಿಂತಿದ್ದ, ಅವನೊಂದಿಗೆ ಯಾರೂ ಯಾವ ಮಾತನ್ನೂ ಆಡಲಿಲ್ಲ ಏಕೆಂದರೆ ರಾಜನ ಭಾಷಣ ಸಾಗುತ್ತಿತ್ತು; ಎಲ್ಲರೂ ಅದರಲ್ಲಿ ಮುಳುಗಿಹೋಗಿದ್ದರು. ತಾನು ಮೊದಲುಮಾಡಿದ ವಾಕ್ಪ್ರವಾಹದ ನಡುವೆ ರಾಜ ಹೇಳುತ್ತಿದ್ದುದೇನೆಂದರೆ—

"—ಅವರು ಮೃತನ ಆಪ್ತಮಿತ್ರರಾಗಿರುವುದರಿಂದ, ಆದ್ದರಿಂದಲೇ ಈ ಸಂಜೆಗೆ ಇಲ್ಲಿಗೆ ಬರಬೇಕೆಂದು ಅವರನ್ನು ಆಹ್ವಾನಿಸಿರುವುದು. ನಾಳೆಯಾದರೋ ಎಲ್ಲರೂ—ಸರ್ವರೂ—ಬರಬೇಕೆಂದು ನಾವು ಬಯಸುತ್ತೇವೆ. ಏಕೆಂದರೆ ಅವನು ಸರ್ವರನ್ನೂ ಗೌರವಿಸುತ್ತಿದ್ದನು; ಎಲ್ಲರನ್ನೂ ಪ್ರೀತಿಸುತ್ತಿದ್ದನು. ಆದ್ದರಿಂದ ಮೃತನ ಸಮಾಧಿ ಸರ್ವರ ಸಮಕ್ಷ ನಡೆಯುವುದೇ ಉಚಿತವಾದದ್ದು."

ಅವನು ಭ್ರಮೆ ಹಿಡಿದವನಂತೆ ಹೀಗೆಯೇ ಮಾತಾಡುತ್ತಿದ್ದನು; ಮತ್ತು ನಡುನಡುವೆ ತನ್ನ ಮಾತನ್ನು ತಾನೇ ಕೇಳಲಿಷ್ಟಪಡುವಂತೆ ನಟಿಸಿದನು. ಕ್ಷಣಕ್ಕೊಮ್ಮೆ ಬಹಿರಂಗ ಸಮಾಧಿಯನ್ನು ಮತ್ತೆಮತ್ತೆ ಆಡುತ್ತಿದ್ದನು. ಇವನ್ನು ತಡೆಯುವುದು ತನಗೆ ಸಾಧ್ಯವಿಲ್ಲವೆಂದು ತೋರಿದ್ದದರಿಂದ ಡ್ಯೂಕ್ ಒಂದು ಕಾಗದ ಚೂರನ್ನು ತೆಗೆದುಕೊಂಡು ಅದರಮೇಲೆ "ಏ ಮುದಿ ಮುಕೆ. ಶವಸಂಸ್ಕಾರವನ್ನು" ಎಂದು ಬರೆದು ಅದನ್ನು ಸುತ್ತಣ ಮಂದಿಗೆ ನಿಲುಕದೆತ್ತರದಲ್ಲಿ ಹಿಡಿದುಕೊಂಡು ಗೂಗುಟ್ಟುತ್ತಾ ರಾಜನಬಳಿಗೆ ಹೋದನು, ರಾಜ ಅದನ್ನು ಓದಿ ತನ್ನ ಜೇಬಿನಲ್ಲಿಟ್ಟುಕೊಂಡು ಹೇಳಿದ:

"ನಿರ್ಭಾಗ್ಯ ವಿಲಿಯಮ್ಮಿಗೆ ದುಃಖಸಮಯದಲ್ಲಿ ಕೂಡ ಬುದ್ಧಿ ಎಂದೂ ಸರಿಯಾಗಿಯೇ ಇರುತ್ತದೆ. ಉತ್ತರಕ್ರಿಯೆಗೆ ಬರುವಂತೆ ಎಲ್ಲರನ್ನೂ ಆಮಂತ್ರಿಸಬೇಕೆಂದೂ ಸರ್ವರಿಗೂ ನಾನು ಸ್ವಾಗತ ನೀಡಬೇಕೆಂದೂ ಅವನು ನನಗೆ ಹೇಳುತ್ತಾನೆ. ಈ ವಿಷಯದಲ್ಲಿ ಅವನು ಚಿಂತಿಸಬೇಕಾದಿಲ್ಲ.—ನಾನೀಗ ಮಾಡುತ್ತಿರುವುದು ಆ ಕೆಲಸವನ್ನೇ."

ಮತ್ತೆ ಅವನ ಮಾತಿನ ಮುಗ್ಗ ನೆಮ್ಮದಿಯಿಂದ ಮುಂಬರಿಯಿತು. ಹಿಂದಿನಂತೆಯೇ ಅವನು ಈಗೊಮ್ಮೆ ಆಗೊಮ್ಮೆ ಅದೇ ಬಹಿರಂಗ ಸಮಾಧಿಯ ಮಾತಿಗೆ ಹಿಂದಿರುತ್ತಿದ್ದನು. ಮೂರು ಬಾರಿ ಹಾಗೆ ಮಾಡಿದ ಮೇಲೆ ಅವನು ಹೇಳಿದ:-

"ನಾನು ಬಹಿರಂಗ ಸಮಾಧಿ ಎನ್ನುತ್ತೇನೆ.-ಅದಕ್ಕೆ ಕಾರಣ ಅದು ಬಳಕೆಯಮಾತು ಎನ್ನುವುದಲ್ಲ, ಏಕೆಂದರೆ ಬಳಕೆಯಮಾತೇ ಅಲ್ಲ—ಶವಸಂಸ್ಕಾರವೆಂಬುದೇ ಬಳಕೆಯ ಮಾತು. ಆದರೆ ಬಹಿರಂಗ ಸಮಾಧಿ ಎಂಬುದೇ ಸರಿಯಾದ ಮಾತು. ಇಂಗ್ಲೆಂಡಿನಲ್ಲಿ ಶವಸಂಸ್ಕಾರವೆಂಬ ಪದವನ್ನು ಬಳಸುವುದು ಎಂದೋ ತಪ್ಪಿಹೋಯಿತು; ಅದು ಈಗ ಅಲ್ಲಿ ಬಳಕೆಯಲ್ಲಿಲ್ಲ. ಈಗ ಅದನ್ನು ಇಂಗ್ಲೆಂಡಿನಲ್ಲಿ ಬಹಿರಂಗ ಸಮಾಧಿ ಎನ್ನುತ್ತೇವೆ. ಅದೇ ಸರಿಯಾದ ಮಾತು; ನಿಮ್ಮ ಮನಸ್ಸಿನಲ್ಲಿರುವ ಅರ್ಥವನ್ನು ಅದು ಸರಿಯಾಗಿ ಪ್ರತಿನಿಧಿಸುತ್ತದೆ, ಬಹಿರಂಗ ಸಮಾಧಿ ಎಂದರೆ ಬಹಿರಂಗವಾಗಿ ಅಥವಾ ಸಾರ್ವಜನಿಕವಾಗಿ ನಡಸುವ ಶವಸಂಸ್ಕಾರ."

ಇಂಥಾ ಪರಮ ನೀಚನನ್ನು ನಾನು ನೋಡಿಯೇ ಇಲ್ಲ. ಆದರೆ ಅಲ್ಲಿಗೆ ತೂರಿ ಬಂದು ಹಲ್ಲುಕಚ್ಚಿ ಬಿಗಿಯಾಗಿ ನಿಂತಿದ್ದ ಆ ಮನುಷ್ಯನಾದರೋ ಅವನ ಮುಖದತ್ತ ಕಣ್ಣೆಸೆದು ತಿರಸ್ಕಾರದಿಂದ ನಕ್ಕನು. ಎಲ್ಲರಿಗೂ ದಿಗ್-ಭ್ರಮೆಯಾಯಿತು. ಎಲ್ಲರೂ ವೈದ್ಯನನ್ನು ಏಕೆ ಹೀಗೆ ಮಾಡುತ್ತಿಯೇ ಎಂದು ಕೇಳಿದರು, ಮತ್ತು ಆ್ಯಬ್ನರ್ ಷ್ಯಾಕಲ್‌ಫರ್ಡ್ ನುಡಿದ:

"ಏಕೆ ರಾಬಿನ್‌ಸನ್, ನಿನಗೆ ವರ್ತಮಾನ ತಲಪಲಿಲ್ಲವೆ? ಇವನು ಹಾರ್ವೆವಿಲ್ಕ್ಸ್."

ರಾಜ ತುಂಬಾ ಆಸಕ್ತಿಯಿಂದ ನಸುನಕ್ಕು ವೈದ್ಯನ ಬೆನ್ನಮೇಲೆ ಕೈಯಿಡಲು ಹೋಗಿ, ಹೇಳಿದ :

"ಓ ಯಾರು,—ನನ್ನ ಅದೃಷ್ಟಹೀನ ಸೋದರನ ಆಪ್ತಸ್ನೇಹಿತ ವೈದ್ಯ ಅಲ್ಲವೆ ನೀನು?—ನಾನು,"

"ಆಗೆ ಆಚೆಗೆ ನಿನ್ನ ಕೈಗಳನ್ನು" ಎಂದನು ವೈದ್ಯ ; "ನೀನು ಇಂಗ್ಲೀಷಿನವನಂತೆ ಮಾತಾಡುತ್ತಿದ್ದೀಯಲ್ಲವೆ? ಇಂಥಾ ಹೀನ ಅನುಕರಣವನ್ನು ನಾನು ಎಲ್ಲಿಯೂ ಕೇಳಿಲ್ಲ ಪೀಟರ್‌ವಿಲ್ಕ್ಸನ ಸೋದರ ನೀನು! ನೀನೊಬ್ಬ ಮೋಸಗಾರ, ಅಷ್ಟೇ ನೀನು!"

ಅಲ್ಲಿದ್ದವರಿಗೆಲ್ಲ ಏನಾಗಿರಬೇಡ! ಅವರು ವೈದ್ಯನನ್ನು ಸುತ್ತುಗಟ್ಟಿ ಸಮಾಧಾನಪಡಿಸಲೂ ನಡೆದುದನ್ನು ವಿವರಿಸಲೂ ತೊಡಗಿದರು; ತಾನೇ ಹಾರ್ವೆ ಎಂಬುದನ್ನು ಅವನು ಹೇಗೆ ನಲವತ್ತು ರೀತಿಗಳಲ್ಲಿ ವ್ಯಕ್ತಪಡಿಸಿರುವನೆಂದೂ, ಅವನಿಗೆ ಎಲ್ಲರ ಮತ್ತು ಎಲ್ಲ ನಾಯಿ ಹೆಸರುಗಳ ಕೂಡ ಗೊತ್ತೆಂದೂ, ಹಾರ್ವೆಯ ಮನಸ್ಸನ್ನಾಗಲೀ, ಬಡ ಹುಡುಗಿಯರ ಮನಸ್ಸನ್ನಾಗಲೀ ನೋಯಿಸಬಾರದು ಮುಂತಾಗಿ ಕೇಳಿಕೊಂಡರು, ಬೇಡಿಕೊಂಡರು. ಆದರಿಂದ ಪ್ರಯೋಜನವಾಗಲಿಲ್ಲ. ವೈದ್ಯನ ಎಣಿಕೆಯಲ್ಲಿ, ತಾನು ಇಂಗ್ಲಿಷಿನವನೆಂದು ನಟಿಸುವ ಯಾವನಾಗಲೀ ಇವನು ಮಾಡಿದ್ದಕ್ಕಿಂತ ಹೆಚ್ಚು ಮೇಲಾಗಿ

ಆ ಭಾಷಾ ಸಂಪ್ರದಾಯವನ್ನು ಅನುಕರಿಸದಿದ್ದಲ್ಲಿ ಅಂಥವನನ್ನು ಮೋಸಗಾರ, ಸುಳ್ಳು ಹೇಳುವವ ಎನ್ನಬೇಕು. ಈ ಮಾತನ್ನು ಅವನು ಗುಡುಗಿದನು. ಆ ಬಡ ಹುಡುಗಿಯರು ರಾಜನನ್ನು ಅಪ್ಪಿಕೊಂಡು ಅಳುತ್ತಿದ್ದರು; ಇದ್ದಕ್ಕಿದ್ದಂತೆಯೇ ವೈದ್ಯ ತಟ್ಟನೆ ಅವರ ಕಡೆಗೆ ತಿರುಗಿ ಹೇಳಿದ:

"ನಾನು ನಿಮ್ಮ ತಂದೆಯ ಸ್ನೇಹಿತನಾಗಿದ್ದೆ; ಈಗ ನಾನು ನಿಮ್ಮ ಸ್ನೇಹಿತನಂತೆ, ನಿಮ್ಮನ್ನು ರಕ್ಷಿಸಲೂ ಕಷ್ಟಗಳಿಂದ ಮತ್ತು ಅಪಾಯದಿಂದ ನಿಮ್ಮನ್ನು ದೂರವಿಡಲೂ ಬಯಸುವ ಪ್ರಾಮಾಣಿಕ ಸ್ನೇಹಿತನಂತೆ, ಕೇಳಿಕೊಳ್ಳುತ್ತೇನೆ; ಆ ದ್ರೋಹಿಯನ್ನು ಕಣ್ಣೆತ್ತಿ ನೋಡಬೇಡಿ; ಬಹು ಭಾಷಾವಿದನಂತೆ ನಟಿಸುವ ಆ ತಿಳಿಗೇಡಿ ಅಲೆಮಾರಿಯನ್ನು ಆಚೆಗೆ ತೊಲಗಿಸಿ, ಇವನು ವಂಚಕರಲ್ಲೂ ಬಲು ನಾಜೂಕಾದವನು—ತಾನು ಎಲ್ಲೆಲ್ಲೋ ಸಂಗ್ರಹಿಸಿದ ಬರಿ ಹೆಸರುಗಳನ್ನೂ ಘಟನೆಗಳ ವಿವರಗಳನ್ನೂ ಪೋಣಿಸಿಕೊಂಡು ಇಲ್ಲಿಗೆ ಬಂದಿದ್ದಾನಿವನು. ನೀವು ಇದನ್ನೆಲ್ಲಾ ನಿಜವೆಂದು ನಂಬಿದ್ದೀರಿ. ಸ್ವಲ್ಪಮಟ್ಟಿಗೆ ತಿಳಿವಳಿಕೆಯುಳ್ಳವರು ಎಂದು ನಾನು ತಿಳಿದಿದ್ದ ಈ ದಡ್ಡ ಸ್ನೇಹಿತರು ನೀವು ಈ ನಡವಳಿಕೆಗಳನ್ನು ನಂಬುವಂತೆ ಮಾಡಿದ್ದಾರೆ. ಮೇರಿ ಜೇನ್ ವಿಲ್ಕ್ಸ್, ನನ್ನನ್ನು ಸ್ನೇಹಿತನೆಂದು, ಸ್ವಾರ್ಥವಿಲ್ಲದ ಸ್ನೇಹಿತನೆಂದು ನೀನು ತಿಳಿಯಬೇಕು. ಈ ತುಚ್ಛ ಕೇಡಿಗನನ್ನು ಆಚೆಗೆ ಅಟ್ಟು ಮೊದಲು. ನೀನು ಹಾಗೆ ಮಾಡೆಂದು ನಾನು ಬೇಡಿಕೊಳ್ಳುತ್ತೇನೆ, ಹಾಗೆ ಮಾಡುವೆಯ ನೀನು?" ಮೇರಿ ಜೇನ್ ನಿಮಿರಿ ನಿಂತಳು; ಭಲೆ, ಭಲೆ! ಅವಳೆಷ್ಟು ಚೆಲುವೆ! ಅವಳು ಹೇಳಿದಳು.

"ಇಲ್ಲಿದೆ ನನ್ನ ಉತ್ತರ." ಆ ನಾಣ್ಯದ ಥೈಲಿಯನ್ನು ಅವಳು ರಾಜನ ಕೈಗೆ ಹಾಕಿ ನುಡಿದಳು." ತೆಗೆದುಕೋ ನೀನು ಈ ಆರು ಸಾವಿರ ಡಾಲರುಗಳನ್ನು; ನಿನಗೆ ಇಷ್ಟಬಂದ ರೀತಿಯಲ್ಲಿ ಇದನ್ನು ನನ್ನ ಮತ್ತು ನನ್ನ ತಂಗಿಯರ ಸಲುವಾಗಿ, ಹೂಡು. ನೀನು ಇದಕ್ಕಾಗಿ ನಮಗೆ ರಸೀತಿ ಕೊಡಬೇಕಾಗಿಲ್ಲ."

ಆಮೇಲೆ ಅವಳು ರಾಜನ ಒಂದು ಪಕ್ಕಕ್ಕೆ ಬಂದು ನಿಂತು ಅವನ ಹೆಗಲಮೇಲೆ ಕೈ ಹಾಕಿದಳು; ಸೂಸಾನಳೂ, ಆ ಸೀಳುತುಟಿಯವಳೂ ಅವನ ಇನ್ನೊಂದು ಪಕ್ಕಕ್ಕೆ ಬಂದು ನಿಂತು ಹಾಗೆಯೇ ಮಾಡಿದರು. ಎಲ್ಲರೂ ಕರತಾಡನ ಮಾಡಿದರು; ಬಿರುಗಾಳಿಯಂತೆ ನೆಲವನ್ನು ಹೆಜ್ಜೆಗಳಿಂದ ಕುಟ್ಟಿದರು. ರಾಜ ತಲೆಯೆತ್ತಿ ಹೆಮ್ಮೆಯಿಂದ ನಸುನಕ್ಕು ಮೌನವಾಗಿದ್ದನು. ಆಗ ವೈದ್ಯ ಹೇಳಿದ :

"ಸರಿ, ಹಾಗಾದರೆ; ನಾನಂತೂ ನಾನು ಮಾಡಬೇಕಾದ್ದನ್ನು ಮಾಡಿ ಆಯಿತು. ಆದರೆ ಈ ದಿನವನ್ನು ನೆನಸಿಕೊಂಡಾಗಲೆಲ್ಲ ನೀವು ಪರಿತಪಿಸಬೇಕಾಗುವ ಕಾಲ ಬರುವುದರಲ್ಲಿದೆ". ಅವನು ಹೊರಟುಹೋದನು.

ರಾಜ ಅವನನ್ನು ಅಣಕಿಸುವ ರೀತಿಯಲ್ಲಿ, "ಆಗಬಹುದು ವೈದ್ಯರೆ, ಆ ದಿನವನ್ನು ನಾವು ಪ್ರಯತ್ನಪೂರ್ವಕವಾಗಿಯೇ ಬರಮಾಡಿಕೊಳ್ಳುತ್ತೇವೆ; ಆಗ ನಿಮಗೆ ಹೇಳಿಕಳಿಸು

ತ್ತೇವೆ"ಎಂದನು; ಇದು ಎಲ್ಲರೂ ನಗುವಂತೆ ಮಾಡಿತು. ಎಲ್ಲರೂ ಇದೀಗ ಭಲಾರೆ ಹೊಡೆತವೆಂದರು.

## ೨೬

ಅವರೆಲ್ಲರೂ ಹೊರಟುಹೋದ ಮೇಲೆ ರಾಜ ಇಳಿದುಕೊಳ್ಳಲು ಬಿಡುವಾಗಿರುವ ಕೊಟಡಿಗಳ ಬಗೆಗೆ ಮೇರಿ ಜೇನಳನ್ನು ವಿಚಾರಿಸಿದನು. ಒಂದು ತೆರವಾದ ಕೊಠಡಿ ಇರುವುದೆಂದೂ, ಅದು ಚಿಕ್ಕಪ್ಪ ವಿಲಿಯಮ್ಮಿಗೆ ಸಾಕಾಗುವುದೆಂದೂ ; ಅದಕ್ಕಿಂತ ಸ್ವಲ್ಪ ವಿಶಾಲವಾದ ತನ್ನ ಸ್ವಂತ ಕೋಣೆಯನ್ನು ತಾನು ಚಿಕ್ಕಪ್ಪ ಹಾರ್ವೆಗೆ ಬಿಟ್ಟುಕೊಡುವುದಾಗಿಯೂ ; ತಾನು ಇನ್ನೊಂದು ಕೊಠಡಿಯಲ್ಲಿ ತನ್ನ ತಂಗಿಯರೊಂದಿಗೆ ಮಂಚದ ಮೇಲೆ ಮಲಗುವುದಾಗಿಯೂ ಉತ್ತರ ಕೊಟ್ಟಳು. ಅಲ್ಲದೆ ಉಪ್ಪರಿಗೆಯ ಮೇಲೊಂದು ಇಕ್ಕಟ್ಟಾದ ಕೋಣೆಯಿದೆ ಎಂದೂ, ಅದರಲ್ಲೊಂದು ಹುಲ್ಲಿನ ಹಾಸುಗೆ ಇದೆ ಎಂದೂ ಹೇಳಿದಳು ; ಅದು ತನ್ನ ಪರಿಚಾರಕನಿಗೆ–ಎಂದರೆ ನನಗೆ–ಸಾಕೆಂದನು ರಾಜ.

ಮೇರಿ ಜೇನ್ ನನ್ನನ್ನು ಮೇಲಕ್ಕೆ ಕರೆದುಕೊಂಡು ಹೋದಳು. ಅವರವರನ್ನು ಅವರವರ ಕೊಠಡಿಗಳಿಗೆ ತಂದು ಬಿಟ್ಟಳು. ಎಲ್ಲ ಕೊಠಡಿಗಳೂ ಆಡಂಬರರಹಿತವಾಗಿದ್ದರೂ ಸೌಕರ್ಯವಾಗಿದ್ದವು. ಚಿಕ್ಕಪ್ಪ ಹಾರ್ವೆಗೆ ತೊಂದರೆಯಾಗುವ ಪಕ್ಷದಲ್ಲಿ, ತಾನು ಆ ಕೊಠಡಿಯಿಂದ ತನ್ನ ಲಂಗಗಳನ್ನೂ ಇತರ ಬಟ್ಟೆ ಬರೆಗಳನ್ನೂ ಹೊರಗೆ ತೆಗೆಸಿಕೊಂಡು ಹೋಗುವುದಾಗಿ ಅವಳು ಹೇಳಿದಳು ; ಅವನು ಅವುಗಳಿಂದ ತೊಂದರೆಯಾಗುವುದಿಲ್ಲವೆಂದನು. ಲಂಗಗಳನ್ನು ಗೋಡೆಯುದ್ದಕ್ಕೂ ತಗುಲಿ ಹಾಕಲಾಗಿತ್ತು; ಅವುಗಳ ಮುಂದೆ ಬಿಳಿ ಬಟ್ಟೆಯ ಪರದೆಯೊಂದನ್ನು ನೆಲದ ತನಕ ಇಳಿಯಬಿಡಲಾಗಿತ್ತು. ಒಂದು ಮೂಲೆಯಲ್ಲಿ ಹಳೆಯದಾದ, ಕೂದಲಿನಿಂದ ಹೆಣೆದಿದ್ದ ಒಂದು ಪೆಟ್ಟಿಗೆಯಿತ್ತು; ಇನ್ನೊಂದು ಮೂಲೆಯಲ್ಲಿ ಒಂದು ಗಿಟಾರಿನ ಪೆಟ್ಟಿಗೆಯಿತ್ತು ; ಕೊಠಡಿಯೊಳಗೆಲ್ಲಾ, ಸಾಮಾನ್ಯವಾಗಿ ಹುಡುಗಿಯರು ತಂದು ಅಡುಕುವ, ಸಣ್ಣ ಪುಟ್ಟ ಬೆಲೆಬಾಳದ ನಾನಾ ಬಗೆಯ ಪದಾರ್ಥಗಳು ಅಸ್ತವ್ಯಸ್ತವಾಗಿ ಬಿದ್ದಿದ್ದವು. ಈ ಪರಿಸ್ಥಿತಿಯಲ್ಲಿ ಎಲ್ಲೆಲ್ಲಿರುವ, ಪದಾರ್ಥಗಳು ಅಲ್ಲಲ್ಲೇ ಇರುವುದೇ ಹೆಚ್ಚು ಹಿತಕರವೂ, ಉಚಿತವೂ ಆಗಿರುವುದರಿಂದ,

ಅವುಗಳನ್ನು ಕದಲಿಸಬೇಕಾದ್ದಿಲ್ಲ ಎಂದನು. ಡ್ಯೂಕನ ಕೊಠಡಿ ಸುಮಾರು ಚಿಕ್ಕದಾಗಿದ್ದರೂ, ಬಲು ಸೌಕರ್ಯವಾಗಿತ್ತು ; ನನ್ನ ಗೂಡು ಹಾಗೆಯೇ ಇತ್ತು.

ಈ ರಾತ್ರಿ ಅವರಿಗೆ ಪುಷ್ಕಳವಾದ ಭೋಜನವಿತ್ತು. ಎಲ್ಲಾ ಗಂಡಸರೂ ಹೆಂಗಸರೂ ಬಂದು ಸೇರಿದ್ದರು. ನಾನು ರಾಜನ ಮತ್ತು ಡ್ಯೂಕನ ಕುರ್ಚಿಗಳ ಹಿಂದೆ ಅವರ ಪರಿಚಾರಿಕೆಗಾಗಿ ಸಿದ್ಧವಾಗಿ ನಿಂತನು. ನೀಗ್ರೋ ಭೃತ್ಯರು ಉಳಿದವರ ಸೇವೆಗೆ ಸಜ್ಜಾದರು: ಮೇಜಿನ ಮುಂದೆ ಪ್ರಧಾನ ಸ್ಥಾನದಲ್ಲಿ ಮೇರಿ ಜೇನ್ ಕುಳಿತಿರೆದ್ದಳು; ತನ್ನ ಪಕ್ಕದಲ್ಲಿ ಸೂಸಾನಳನ್ನು ಕೂರಿಸಿಕೊಂಡಿದ್ದಳು ; ಬಿಸ್ಕತ್ತುಗಳು ಎಷ್ಟು ಕೆಟ್ಟಿವೆ, ಡಬ್ಬಿಗಳಿಂದ ತೆಗೆದ ರಸಾಯನಗಳು ಎಷ್ಟು ಕೆಳಮಟ್ಟದವು ; ಕರಿದ ಕೋಳಿಮರಿಗಳು ಎಷ್ಟು ಗಟ್ಟಿಯಾಗಿ ಸೆಡೆತುಕೊಂಡಿವೆ– ಇತ್ಯಾದಿ ಬಗೆ ಬಗೆಯಾಗಿ ಟೀಕಿಸುತ್ತಿದ್ದಳು : ಪ್ರಶಂಸೆಯನ್ನು ಬಲಾತ್ಕಾರದಿಂದ ಗಳಿಸಲು ಹೆಂಗಸರು ಎಂದೂ ಅನುಸರಿಸುವ ಮಾರ್ಗವೇ ಇದು. ಬಡಿಸಿದ ಖಾದ್ಯಗಳೆಲ್ಲವೂ ಬಲು ಸೊಗಸಾಗಿದ್ದವೆಂದು ಎಲ್ಲರಿಗೂ ಗೊತ್ತಿತ್ತು, ಮತ್ತು ಎಲ್ಲರೂ ಹಾಗೆಯೇ ಹೇಳಿದರು. "ಬಿಸ್ಕತ್ತುಗಳನ್ನು ಇಷ್ಟು ಹದವಾದ ಕಂದುಬಣ್ಣಕ್ಕೆ ತಿರುಗಿಸಲು ನೀವು ಏನು ಮಾಡುತ್ತೀರಿ?" "ಈ ಅದ್ಭುತವಾದ ಉಪ್ಪಿನಕಾಯಿಗಳು ನಿಮಗೆ ಸಿಕ್ಕಿದ್ದೆಲ್ಲಿ ?" ಎಂದು ಮುಂತಾಗಿ ಈ ಬಗೆಯ ಕೆಲಸಕ್ಕೆ ಬಾರದ ಮಾತುಗಳನ್ನು ಆಡುತ್ತಿದ್ದರು. ರಾತ್ರಿಯೂಟದ ಸಮಯದಲ್ಲಿ ಜನ ವರ್ತಿಸುವುದೇ ಹೀಗೆ ಎಂಬುದನ್ನು ನೀವು ಬಲ್ಲಿರಷ್ಟೆ:

ಅದೆಲ್ಲಾ ಮುಗಿಯಿತು ; ನೀಗ್ರೋಗಳು ಊಟದ ಸ್ಥಳವನ್ನೂ ತಟ್ಟೆ ಬಟ್ಟಲುಗಳನ್ನೂ ತೊಳೆಯತೊಡಗಿದರು, ಉಳಿದವರು ಅವರಿಗೆ ನೆರವಾದರು. ಆಗ ನಾನೂ, ಸೀಳುತುಟಿಯವಳೂ ಅಡುಗೆಯಮನೆಯಲ್ಲಿ ಕುಳಿತು ಮಿಕ್ಕಿದ್ದ ಅಡುಗೆಯನ್ನು ಬಡಿಸಿಕೊಂಡು ಊಟಮಾಡಿದೆವು. ಅವಳು ನನಗೆ ಇಂಗ್ಲೆಂಡಿನ ಬಗೆಗೆ ಪ್ರಶ್ನೆಹಾಕಲು ಪ್ರಾರಂಭಿಸಿದಳು ; ಆಗ ಕೆಲವು ಸಲವಾದರು ನಾನು ಬಲು ಅಪಾಯಕರವಾದ ಇಕ್ಕಟ್ಟಿಗೆ ಸಿಕ್ಕಿಹೋದೆ ಎಂದುಕೊಳ್ಳದಿದ್ದರೆ, ಕೇಳಿ. ಅವಳು ಕೇಳಿದಳು ;

"ನೀನು ಎಂದಾವರೂ (ಇಂಗ್ಲೆಂಡಿನ) ರಾಜನನ್ನು ಕಂಡಿದ್ದೀಯಾ? "

"ಯಾರನ್ನು? ನಾಲ್ಕನೆಯ ವಿಲಿಯಮ್ಮನೆ? ಓ ಖಂಡಿತವಾಗಿ ನೋಡಿದ್ದೇನೆ– ಅವನು ಹೋಗುವುದು ನಮ್ಮ ಚರ್ಚಿಗೇ " ಅವನು ಸತ್ತು ಎಷ್ಟೋ ವರುಷಗಳಾಯಿತೆಂಬುದು ನನಗೆ ತಿಳಿದಿತ್ತು ; ಆದರೆ ನಾನು ಅದನ್ನು ಬಿಟ್ಟುಕೊಡಲಿಲ್ಲ. ಅವನು ಬರುವುದು ನಮ್ಮ ಚರ್ಚಿಗೇ ಎಂದರೆ ನಾನು, ಅವಳು ಕೇಳಿದಳು ;

"ಏನು—ಕ್ರಮ ತಪ್ಪದೆ?"

"ಹೌದು–ಕ್ರಮತಪ್ಪದೆ. ಅವನ ಪೀಠ ನಾನು ಕೂರುವೆಡೆಗೆ ನೇರ ಇದಿರಾಗಿದೆ- ಪ್ರಸಂಗಪೀಠದ ಅತ್ತ ಕಡೆಗಿದೆ. "

"ಅವನು ವಾಸಿಸುವುದು ಲಂಡನಿನಲ್ಲಿ ಎಂದಿದ್ದೆ ?"

"ಅದು ಸರಿಯೇ. ಅವನು ಇನ್ನೆಲ್ಲಿ ಇದ್ದಾನು ?"

ಆದರೆ ನೀನು ಷೆಫೀಲ್ಡಿನಲ್ಲಿ ವಾಸಿಸುತ್ತಿದ್ದೆ ಎಂದು ನಾನು ತಿಳಿದಿದ್ದೆ ?" ನಾನು ತೊಡಕಿಗೆ ಸಿಕ್ಕಿಬಿದ್ದದ್ದು ನನಗೆ ಅರಿವಾಯಿತು. ಇದನ್ನು ದಾಟಿಕೊಳ್ಳುವುದು ಹೇಗೆ ಎಂಬುದನ್ನು ಯೋಚಿಸಲು ಕಾಲವಾಧಿಯನ್ನು ಪಡೆಯುವುದಕ್ಕಾಗಿ ನಾನು ಕೋಳಿಮರಿಯ ಮೂಳೆಯ ಚೂರೊಂದು ಗಂಟಲಲ್ಲಿ ಸಿಕ್ಕಿಕೊಂಡಿತೆಂದು ನಟಿಸ ಬೇಕಾಯಿತು. ಬಳಿಕ ನಾನು ಹೇಳಿದೆ:

"ಅವನು ಷೆಫೀಲ್ಡಿಗೆ ಬಂದಾಗೆಲ್ಲ ಕ್ರಮತಪ್ಪದೆ ನಮ್ಮ ಚರ್ಚಿಗೇ ಬರುತ್ತಾನೆಂಬುದು ನನ್ನ ಮಾತಿನ ಅರ್ಥ. ಅವನು ಹಾಗೆ ಬರುವುದು ಬೇಸಗೆ ಬೀದಿಗಳಲ್ಲಿ ಮಾತ್ರ; ಆಗ ಅವನು ಸಮುದ್ರ ಸ್ನಾನಕ್ಕಾಗಿ ಅಲ್ಲಿಗೆ ಬರುತ್ತಾನೆ.'

"ಏನು ಮಾತಯ್ಯಾ ನಿನ್ನದು !- ಷೆಫೀಲ್ಡ್ ಸಮುದ್ರ ತೀರದಲ್ಲಿಲ್ಲ."

"ಇದೆ ಎಂದವನು ತಾನೆ ಯಾರು? "

"ಏಕೆ. ನೀನೇ ಹೇಳಿದೆ."

"ನಾನು ಹಾಗೆ ಹೇಳಲೇ ಇಲ್ಲ. "

"ನೀನು ಹೇಳಿದೆ! "

"ನಾನು ಹೇಳಲಿಲ್ಲ. "

"ನೀನು ಹೇಳಿದೆ."

"ನಾನು ಅಂಥುದೇನನ್ನೂ ಹೇಳಲೇ ಇಲ್ಲ"

"ಸರಿ ನೀನು ಹೇಳಿದ್ದೇನು, ಹಾಗಾದರೆ? "

"ಸಮುದ್ರ ಸ್ನಾನಕ್ಕಾಗಿ ಅವನು ಬರುತ್ತಾನೆ ಎಂದೆ–ನಾನು ಹೇಳಿದ್ದು ಅಷ್ಟನೇ. "

"ಸರಿ, ಅದು ಸಮುದ್ರತೀರದಲ್ಲೇ ಇಲ್ಲದಿರುವಾಗ ಅವನು ಸಮುದ್ರಸ್ನಾನ ಮಾಡುವುದು ಅಲ್ಲಿ ಹೇಗೆ ಸಾಧ್ಯ? "

"ಇಲ್ಲಿ ನೋಡು" ಎಂದೆ ನಾನು ; "ನೀನು ಕಾಂಗ್ರೆಸ್–ಜಲವೆಂಬುದನ್ನು ಕಂಡಿದ್ದೀಯಾ? "

"ಹೌದು"

"ಸರಿ, ಅದನ್ನು ತರುವುದಕ್ಕೆ ನೀನು ಕಾಂಗ್ರೆಸ್ಸಿಗೆ ಹೋಗಬೇಕಾಗಿತ್ತೆ? "

"ಏಕೆ, ಇಲ್ಲ."

"ಹಾಗೆಯೇ ನಾಲ್ಕನೆಯ ವಿಲಿಯಮ್ಸ್ ಕೂಡ ಸಮುದ್ರಸ್ನಾನಕ್ಕಾಗಿ ಸಮುದ್ರಕ್ಕೆ ಹೋಗಬೇಕಾದ್ದಿಲ್ಲ. "

"ಹಾಗಾದರೆ ಅದು ಅವನಿಗೆ ಸಿಕ್ಕುವುದು ಹೇಗೆ? "

"ಇಲ್ಲಿನವರು ಕಾಂಗ್ರೆಸ್–ಜಲವನ್ನು ತರಿಸಿಕೊಳ್ಳುವಂತೆಯೇ ಅವನು ಅದನ್ನು ತರಿಸಿಕೊಳ್ಳುತ್ತಾನೆ–ಪೀಪಾಯಿಗಳಲ್ಲಿ. ಷೇಫಿಲ್ಡಿನಲ್ಲಿರುವ ಅರಮನೆಯಲ್ಲಿ ಒಲೆಗಳಿವೆ ;

ಅವನಿಗೆ ಬಿಸಿನೀರೇ ಬೇಕು. ಅವನಿಗೆ ಬೇಕಾದಷ್ಟು ನೀರನ್ನು ದೂರದ ಸಮುದ್ರದ ಬಳಿ ಕುದಿಸುವುದು ಸಾಧ್ಯವಿಲ್ಲ ; ಅದಕ್ಕೆ ಅಗತ್ಯವಾದ ಯಾವ ಸೌಕರ್ಯವೂ ಅಲ್ಲಿಲ್ಲ. ”

“ಓ, ಈಗ, ನನಗೆ ಅರ್ಥವಾಯಿತು. ನೀನು ಅದನ್ನು ಮೊದಲಲ್ಲೇ ಹೇಳಿ ಬಿಟ್ಟಿದ್ದರೆ, ಎಷ್ಟೋ ವೇಳೆಯನ್ನು ಉಳಿಸಿಕೊಳ್ಳಬಹುದಿತ್ತು ”

ಅವಳು ಅದನ್ನು ಹೇಳಿದ ಕೂಡಲೆ, ಗಂಡಾಂತರದಿಂದ ಪಾರಾದೆನೆಂದುಕೊಂಡೆ, ನನಗೆ ಬಲು ನೆಮ್ಮದಿಯಾಯಿತು, ಸಂತೋಷವಾಯಿತು. ಮತ್ತೆ ಅವಳು ಕೇಳಿದಳು :

“ನೀನು ಚರ್ಚಿಗೆ ಹೋಗುತ್ತೀಯಾ? ”

“ಹೌದು-ಕ್ರಮತಪ್ಪದೆ. ”

ಅಲ್ಲಿ ನೀನು ಕೂರುವುದೆಲ್ಲಿ? “

ಏಕೆ, ನಮ್ಮ ಪೀಠದಲ್ಲಿ. ”

“ಯಾರ ಪೀಠ? ”

“ಏಕೆ, ನಮ್ಮದು-ನಿಮ್ಮ ಪಕ್ಕದಲ್ಲಿ ಹಾರ್ವೆಯದು”

“ಅವನ ಪೀಠ ? ಪೀಠವನ್ನು ಕಟ್ಟಿಕೊಂಡು ಅವನಿಗೆ ಆಗಬೇಕಾದ್ದೇನು? ”

“ಕುಳಿತುಕೊಳ್ಳಲು ಅವನಿಗೆ ಬೇಕು ಅದು. ಅವನಿಗೆ ಅದು ಇನ್ನು ಏತಕ್ಕೆ ಬೇಕೆಂದು ನಿನ್ನೆಣಿಕೆ? ”

“ಏಕೆ, ಅವನು ಪ್ರಸಂಗ ಪೀಠದಲ್ಲಿರುವನೆಂದು ನಾನು ಯೋಚಿಸಿದೆ. ” ಅವನು ಹಾಳಾಗ, ಅವನು ಉಪದೇಶಕನೆಂಬುದು ನನಗೆ ಮರೆತುಹೋಯಿತು. ಮತ್ತೆ ನನಗೆ ಗಂಡಾಂತರವೊದಗಿತು. ಅದಕ್ಕಾಗಿ ನಾನು ಮತ್ತೆ ಕೋಳಿಮರಿಯ ಮೂಳೆಯೊಂದನ್ನು ಗಂಟಲಲ್ಲಿ ಸಿಕ್ಕಿಸಿಕೊಂಡಂತೆ ನಟಿಸಿದೆ, ಇನ್ನಷ್ಟು ಆಲೋಚನೆ ಮಾಡದೆ. ಬಳಿಕ ನಾನು ಹೇಳಿದೆ ;

“ಏನಂದೆ ನೀನು ! ಒಂದು ಚರ್ಚಿಗೆ ಒಬ್ಬನೇ ಉಪದೇಶಕನಿರುತ್ತಾನೆಂದು ನೀನು ತಿಳಿದಿರುವೆಯೋ? ”

“ನಾನು ಹೇಳಿದ್ದು ತಪ್ಪೆ ? ಇನ್ನಷ್ಟು ಜನ ಉಪದೇಶಕರಿಂದ ಅವರಿಗೆ ಆಗ ಬೇಕಾದ್ದೇನು? ”

“ಏನಂದೆ !-ರಾಜನ ಸಮ್ಮುಖದಲ್ಲಿ ಉಪದೇಶಮಾಡುವುದಕ್ಕೆ ? ನಿನ್ನಂಥಾ ಹುಡುಗಿಯನ್ನು ನಾನು ನೋಡಿಯೇ ಇಲ್ಲ. ಹದಿನೇಳು ಮಂದಿ ಉಪದೇಶಕರಾದರೂ ಅವರಿಗೆ ಇದ್ದೇ ಇರಬೇಕು. ”

“ಹದಿನೇಳು ! ನನ್ನ ಪುಣ್ಯ ! ಒಂದು ವೇಳೆ ನನಗೆ ಭಗವತ್ಕೃಪೆ ಸಿಕ್ಕುವುದಿಲ್ಲ ವೆಂದರೂ ಸರಿಯೇ, ನಾನು ಅಂಥದೊಂದು ಉಪದೇಶಕ-ಮಾಲೆಯನ್ನು ತಾಳಿಕೊಳ್ಳಲಾರೆ. ಅವರಿಗೆ ಒಂದು ವಾರದಷ್ಟು ಕಾಲವಾದರೂ ಬೇಕೇ ಬೇಕು.”

"ಮಣ್ಣು ! ಅವರೆಲ್ಲರೂ ಒಂದೇ ದಿನ ಉಪದೇಶಮಾಡುವುದಿಲ್ಲ-ಅವರಲ್ಲಿ ಒಬ್ಬ ಮಾತ್ರ."

"ಸರಿ, ಹಾಗಾದರೆ ಉಳಿದರೇನು ಮಾಡುತ್ತಾರೆ?"

"ಓ ಹೇಳಿಕೊಳ್ಳಬಹುದಾದದ್ದೇನನ್ನೂ ಅವರು ಮಾಡುವುದಿಲ್ಲ. ಸುಮ್ಮನೆ ಸುತ್ತಲೂ ಬಿದ್ದುಕೊಂಡಿರುತ್ತಾರೆ, ತಟ್ಟೆಯನ್ನು ಕೈಯಿಂದ ಕೈಯಿಗೆ ದಾಟಿಸುತ್ತಾರೆ-ಒಂದಲ್ಲ ಒಂದು ಕೆಲಸ. ಆದರೆ ಮುಖ್ಯವಾಗಿ ಅವರು ಏನನ್ನೂ ಮಾಡುವುದಿಲ್ಲ."

"ಹಾಗಾದರೆ ಅವರು ಇರುವುದಾದರೂ ಏಕೆ?"

ಅವರು ಅಲಂಕಾರಕ್ಕಾಗಿ ಇರುತ್ತಾರೆ. ನಿನಗೆ ಈ ವಿಷಯ ಎಷ್ಟೂ ತಿಳಿಯದೆ?"

"ಅಂಥಾ ತಿಳಿಗೇಡಿತನದ ಪರಿಚಯ ನನಗೆ ಬೇಕಾಗಿಯೇ ಇಲ್ಲ. ಇಂಗ್ಲೇಂಡಿನಲ್ಲಿ ಸೇವಕರನ್ನು ಹೇಗೆ ಕಾಣುತ್ತಾರೆ? ನಾವು ನಮ್ಮ ನೀಗ್ರೋಗಳನ್ನು ಕಾಣುವುದಕ್ಕಿಂತ ಮೇಲಾದ ರೀತಿಯಲ್ಲಿ ಆ ಜನರು ಅವರನ್ನು ಕಾಣುತ್ತಾರೆಯೇ?"

"ಇಲ್ಲ! ಅಲ್ಲಿ ಸೇವಕನಿಗೆ ಯಾವ ಸ್ಥಾನಮಾನವೂ ಇಲ್ಲ. ಅಲ್ಲಿನ ಜನರು ಅವರನ್ನು ನಾಯಿಗಿಂತ ಕೀಳಾಗಿ ಕಾಣುತ್ತಾರೆ."

"ಇಲ್ಲಿ ನಾವು ಮಾಡುವಂತೆ, ಅಲ್ಲಿನವರು ಅವರಿಗೆ ಕ್ರಿಸ್ತ್‌ಮಸ್ಸಿಗೆ, ವರ್ಷಾರಂಭದ ವಾರದಲ್ಲಿ, ಮತ್ತು ಜುಲೈ ನಾಲ್ಕರಂದು ರಜ ಕೊಡುವುದಿಲ್ಲವೆ?"

"ಓ, ಸ್ವಲ್ಪ ಕೇಳು ! ಇದನ್ನು ಕೇಳಿದ ಮೇಲೆ, ನೀವು ಇಂಗ್ಲೆಂಡಿಗೆ ಎಂದೂ ಹೋದವಳಲ್ಲವೆಂಬುದನ್ನು ಯಾರೂ ಹೇಳಿಯಾರು. ಏಕೆ, ಸೀಳು–, ಅಲ್ಲ, ಏಕೆ ಜೋಅನ್ನಾ ಹೀಗೆ ಕೇಳುವೆ? ವರುಷದ ಮೊದಲಿಂದ ಕೊನೆಯ ತನಕ ಅವರ ಪಾಲಿಗೆ ಒಂದಾದರು ರಜಾದಿನವಿಲ್ಲ.ಅವರು ಸರ್ಕಸ್ಸಿಗಾಗಲೀ,ನಾಟಕಕ್ಕಾಗಲೀ,ನೀಗ್ರೋಪ್ರದರ್ಶನಗಳಿಗಾಗಲೀ, ಮತ್ತು ಇನ್ನೆಲ್ಲಿಗಾಗಲೀ ಹೋಗುವುದೇ ಇಲ್ಲ."

"ಚರ್ಚಿಗೂ ಹೋಗುವುದಿಲ್ಲ?"

"ಚರ್ಚಿಗೂ."

"ಆದರೆ ನೀನು ತಪ್ಪದೆ ಚರ್ಚಿಗೆ ಹೋಗುತ್ತೀಯೆ."

ಮತ್ತೆ ನನಗೆ ಪೇಚಾಟವೊದಾಗಿತ್ತು. ನಾನು ಆ ಮುದುಕನ ಸೇವಕನೆಂಬುದನ್ನೇ ಮರೆತಿದ್ದೆ. ಆದರೆ ಮರುಕ್ಷಣವೇ ಯಾವುದೋ ಒಂದು ಉತ್ತರವನ್ನು ಹುಡುಕಿ, ಪರಿಚಾರಕನ ಸ್ಥಾನ ಹೇಗೆ ಸಾಮಾನ್ಯ ಸೇವಕನ ಸ್ಥಾನಕ್ಕಿಂತ ಬೇರೆಯಾದುದು ಎಂಬುದನ್ನು ವಿವರಿಸಿ, ಪರಿಚಾರಕ ತನಗೆ ಇಷ್ಟವಿರಲಿ ಇಲ್ಲದಿರಲಿ ಚರ್ಚಿಗೆ ಹೋಗಲೇಬೇಕು, ಮನೆಯವರೊಂದಿಗೆ ಕೂರಲೇಬೇಕು. ಅಲ್ಲಿನ ಕಾನೂನು ಹಾಗಿದೆ, ಎಂದು ಅವಳಿಗೆ ತಿಳಿಸಿದೆನು. ನಾನು ಉತ್ತರ ಕೊಟ್ಟ ರೀತಿ ಸಾಕಷ್ಟು ನಂಬಿಕೆ ತರುವಂತಿರಲಿಲ್ಲ. ಆದ್ದರಿಂದ ನನ್ನ ಮಾತು ಮುಗಿದಮೇಲೆ ಅವಳಿಗೆ ತೃಪ್ತಿಯಾದಂತೆ ನನಗೆ ತೋರಲಿಲ್ಲ; ಅವಳು ಹೇಳಿದಳು :

"ಆತ್ಮಸಾಕ್ಷಿಯಾಗಿ, ಈಗ, ನೀನು ನನಗೆ ಪೂರಾ ಸುಳ್ಳನ್ನೇ ಹೇಳಿಲ್ಲವೆ ?"

"ಆತ್ಮಸಾಕ್ಷಿಯಾಗಿ ನಾನು ನಿಜವನ್ನೇ ಹೇಳಿದೆ." ಎಂದೆ ನಾನು

"ಅದರಲ್ಲಿ ಸ್ವಲ್ಪವಾದರೂ ಸುಳ್ಳಿಲ್ಲವೆ ?"

"ಅದರಲ್ಲಿ ಸ್ವಲ್ಪವಾದರೂ ಸುಳ್ಳಿಲ್ಲ. ಒಂದೂ ಸುಳ್ಳಿಲ್ಲ" ಎಂದೆ ನಾನು.

"ಹಾಗಾದರೆ, ಈ ಪುಸ್ತಕವನ್ನು ಮುಟ್ಟಿ ಪ್ರಮಾಣಮಾಡು, ಮತ್ತೆ ಹೇಳು."

ಅದೊಂದು ನಿಘಂಟು ಎಂಬುದು ನನಗೆ ಕಂಡಿತಾದ್ದರಿಂದ, ನಾನು ಅದರ ಮೇಲೆ ಧಾರಾಳವಾಗಿ ಕೈಯಿಟ್ಟು ಹೇಳಿದೆ. ಅವಳಿಗೆ ಸ್ವಲ್ಪ ಸಮಾಧಾನವಾದಂತೆ ತೋರಿತು. ಅವಳು ಹೇಳಿದಳು :

"ಸರಿ ಹಾಗಾದಲ್ಲಿ, ನಾನು ಅದರಲ್ಲಿ ಕೆಲವನ್ನು ನಂಬುತ್ತೇನೆ; ನಾನು ಉಳಿದುದನ್ನೂ ನಂಬಲಾದೀತೋ ಇಲ್ಲವೋ ನನಗೇ ತಿಳಿಯದು."

"ನೀನು ಇವುಗಳಲ್ಲಿ ನಂಬದಿರುವುದಾದರೂ ಏನನ್ನು, ಜೋ" ಎಂದಳು, ಮೇರಿ ಜೇನ್; ಅವಳ ಹಿಂದೆಯೇ ಸೂಸಾನಳೂ ಒಳಗೆ ಬಂದಿದ್ದಳು, "ಅಪರಿಚಿತನೂ, ತನ್ನ ಮನೆಯುವರನ್ನು ಅಗಲಿ ಬಲುದೂರ ಬಾದಿರುವವನೂ ಅದ ಆತನೊಂದಿಗೆ ನೀನು ಹೀಗೆಲ್ಲಾ ಮಾತಾಡುವುದು ನ್ಯಾಯವೂ ಅಲ್ಲ, ಕರುಣೆಯಿಂದ ಕೂಡಿದ್ದೂ ಅಲ್ಲ, ನಿನ್ನ ಬಗೆಗೂ ಹಾಗೆ ನಡೆದುಕೊಂಡರೆ ನಿನಗೆ ಹೇಗೆನ್ನಿಸಬಹುದು?"

"ಎಂದೂ ನೀನು ಈ ಮಾರ್ಗವನ್ನೇ ಹಿಡಿಯುವೆ ಮೇಮ್ (ಒಡತಿ),—ಯಾರಿಗಾಗಲೀ,ಅವರಿಗೆ ಅಪಾಯವೊದಗುವ ಮುನ್ನವೇ, ಮೆಲ್ಲನೆ ಬಾದು ರಕ್ಷಣೆ ನೀಡುವುದು. ನಾನು ಅವನಿಗೆ ಏನೂ ಮಾಡಿಲ್ಲ. ಅವನು ಹಲವು ಕಟ್ಟುಕಥೆಗಳನ್ನು ಹೇಳಿದ—ನಾನು ಹಾಗೆ ಭಾವಿಸುತ್ತೇನೆ. ನಾನು ಅವನ್ನೆಲ್ಲ ನಂಬುವುದಿಲ್ಲವೆಂದೆ; ಅಷ್ಟೇ ನಾನು ಅವನಿಗೆ ಹೇಳಿದ್ದು. ಅವನು ಅಂಥಾ ಅಲ್ಪವಿಷಯಗಳನ್ನು ಸಹಿಸಬಲ್ಲನೆಂದು ನನಗನ್ನಿಸುತ್ತದೆ; ಸಹಿಸಲಾರನೇನು""

"ಆ ವಿಷಯ ಅಲ್ಪವಾದದ್ದೋ ಆಗಾಧವಾದದ್ದೋ ಎಂತಾದರಿರಲಿ, ನನಗದು ಅಮುಖ್ಯ. ಆವನೀಗ ನಮ್ಮ ಮನೆಯಲ್ಲಿದ್ದಾನೆ, ಅಪರಿಚಿತ; ಹಾಗೆಲ್ಲ ಮಾತಾಡಿದ್ದು ನಿನಗೆ ಚೆನ್ನವಲ್ಲ. ನೀನೇ ಅವನ ಸ್ಥಾನದಲ್ಲಿದ್ದರೆ ನಿನಗೆ ಅಪಮಾನವಾಗುತ್ತಿತ್ತು. ನೀನು ಇನ್ನೊಬ್ಬನಿಗೆ ಅವಮಾನಕರವೆನಿಸುವಂಥ ಮಾತನ್ನು ಯಾರೊಂದಿಗೂ ಆಡಬಾರದು."

"ಏಕೆ, ಒಡತಿ, ಅವನು ಹೇಳಿದ—"

"ಅವನು ಏನಾದರೂ ಹೇಳಿರಲಿ—ಅದಲ್ಲ ವಿಷಯ. ನೀನು ಅವನ ಬಗೆಗೆ ಕರುಣೆಯಿಂದ ವರ್ತಿಸುವುದೂ, ತಾನು ತನ್ನ ದೇಶದಲ್ಲಿ, ತನ್ನವರೊಂದಿಗೆ ಇಲ್ಲದಿರುವುದನ್ನು ಅವನು ನೆನೆಯುವಂತೆ ಮಾಡದಿರುವುದೂ ನಿನ್ನ ಕರ್ತವ್ಯ."

ನಾನು ನನ್ನ ಮನಸ್ಸಿನಲ್ಲಿ ಅಂದುಕೊಂಡೆ: ಈ ಹುಡುಗಿಯು ಹಣವನ್ನು ಎಗರಿಸಿ ಕೊಂಡು ಹೋಗಲಿರುವ ಆ ಮುದಿಧಾವಿಗೆ ನಾನು ನೆರವಾಗುತ್ತಿದ್ದೇನೆ!

ಬಳಿಕ ಸೂಸಾನ್ ಅಲ್ಲಿಗೆ ಧುಮುಕಿದಳು, ನೀವು ನನ್ನನ್ನು ನಂಬುವಿರಾದರೆ, ಅವಳನ್ನು ಕಂಡಕೂಡಲೆ ಸೀಳುತುಟಿಯುವಳಿಗೆ ಚೈತನ್ಯವೇ ಉಡುಗಿಹೋಯಿತು, ಅವಳ ಕೂಗಾಟ ಅಷ್ಟರಮಟ್ಟಿಗಿತ್ತು.

ನಾನು ನನ್ನ ಮನಸ್ಸಿನಲ್ಲಿ ಅಂದುಕೊಂಡೆ. ಈ ಇನ್ನೊಬ್ಬಳ ಹಣವನ್ನು ಎಗರಿಸ ಲಿರುವ ಅವನಿಗೆ ನಾನು ನೆರವಾಗುತ್ತಿದ್ದೇನೆ!

ಮೇರಿ ಜೇನ್ ಇನ್ನೊಂದು ಬಾರಿ ದಾಳಿಮಾಡಿದಳು; ಮತ್ತೆ ಸೌಮ್ಯವಾಗಿ ಮುದ್ದಾಗಿ ಒಳಗೆ ಹೋದಳು—ಇದು ಅವಳ ಶೈಲಿ. ಅವಳು ತನ್ನ ಕೈಲಾದುದನ್ನು ಮಾಡಿಯಾದಮೇಲೆ. ಬಡಪಾಯಿ ಸೀಳುತುಟಿಯುವಳು ಪೂರಾ ಸುಸ್ತಾಗಿ ಹೋದಳು. ಅವಳು ಬಳಿಕ ಆರ್ಭಟಿಸಿದಳು.

"ಹಾಗಾದರೆ ನೀನು ಅವನ ಕ್ಷಮಾಪಣೆಯನ್ನು ಕೇಳಿಕೊಳ್ಳಬೇಕು," ಎಂದು ಆ ಹುಡುಗಿಯರು ಹೇಳಿದರು.

ಅವಳು ಹಾಗೆಯೇ ಮಾಡಿದಳು, ಬಲು ಮುದ್ದಾಗಿ ಮಾಡಿದಳು. ಅವಳು ಎಷ್ಟು ಮುದ್ದಾಗಿ ಮಾತಾಡಿದಳೆಂದರೆ, ನನ್ನ ಕಿವಿಗೆ ಅದು ಬಲು ಹಿತಕರವಾಗಿತ್ತು. ಅವಳು ಇನ್ನೊಮ್ಮೆ ಹಾಗೆ ಮಾಡುವುದಾದರೆ, ನಾನು ಒಂದುಸಾವಿರ ಸುಳ್ಳುಗಳನ್ನು ಅವಳಿಗೆ ಹೇಳಿಯೇನು!

ನಾನು ನನ್ನ ಮನಸ್ಸಿನಲ್ಲಿ ಅಂದುಕೊಂಡೆ: ಈ ಮತ್ತೊಬ್ಬಳ ಹಣವನ್ನು ಎಗರಿಸ ಲಿರುವ ಅವನಿಗೆ ನಾನು ನೆರವಾಗುತ್ತಿದ್ದೇನೆ. ಅವಳು ಪಾರಾದಮೇಲೆ, ನಾನು ನೆಮ್ಮದಿ ಯಾಗಿ ನನ್ನ ಸ್ನೇಹಿತರ ನಡುವೆಯೇ ಇದ್ದೇನೆಂಬುದನ್ನು ಖಚಿತಪಡಿಸಲೆಂದು ಅವರೆಲ್ಲರೂ ಹೊರಗೆ ಹೊರಟುಹೋದರು ನನಗೆ ಅದರಿಂದ ನಾನು ಎಂಥಾ ಕೇಡಿಗ, ಪತಿತ ಮತ್ತು ನೀಚನೆಂದು ತೋರಿತೆಂದರೆ, ಆ ಹಣವನ್ನು ಅವರಿಗಾಗಿ ನಾನು ಭದ್ರಪಡಿಸಬೇಕು, ಇಲ್ಲವೆ ನಾಶವಾಗಬೇಕು, ಎಂದು ಪ್ರತಿಜ್ಞೆ ಮಾಡಿದೆ.

ಆಮೇಲೆ ನಾನು ಮಲಗಲು ಎದ್ದುಹೊರಟೆ, ಅದು ಆಗಲೋ ಈಗಲೋ ಆದೀತು ಎಂದುಕೊಂಡೆ. ಎಲ್ಲರೂ ಹೊರಟುಹೋಗಿ, ನಾನು ಒಬ್ಬನೇ ಇರುವಾಗ ಈ ವಿಷಯವನ್ನು ಪರ್ಯಾಲೋಚಿಸತೊಡಗಿದೆ. ನಾನೀಗಲೇ ಆ ವೈದ್ಯನ ಬಳಿಗೆ ಗುಟ್ಟಾಗಿ ಹೋಗಿ ಇವರ ಮೋಸವನ್ನು ಬಯಲಿಗೆಳೆಯಲೆ, ಎಂದುಕೊಂಡೆ. ಇಲ್ಲ–ಅದು ಸರಿಯಲ್ಲ. ಇದನ್ನು ಇಂಥವನು ತಿಳಿಸಿದನೆಂದು ಅವನು ಹೇಳಬಹುದು ; ಆಗ ರಾಜನೂ ಡ್ಯೂಕನೂ ನನಗೆ ತೊಂದರೆ ಮಾಡಿಯಾರು. ಗುಟ್ಟಾಗಿ ಹೋಗಿ ಇದನ್ನು ಮೇರಿಜೇನಳಿಗೆ ತಿಳಿಸಲೆ? ಇಲ್ಲ-; ನಾನ ಅದನ್ನು ಮಾಡಲಾರೆ. ತನಗೆ ಈ ವಿಷಯ ಯಾರಿಂದ ತಿಳಿಯಿತೆಂಬು ದನ್ನು ಅವಳ ಮುಖವೇ ಅವರಿಗೆ ತಿಳಿಸಿಬಿಡುತ್ತದೆ; ಅವರು ಹಣವನ್ನು ತಮ್ಮ ಬಳಿ ಇಟ್ಟುಕೊಂಡಿದ್ದಾರೆ, ಅದನ್ನು ಎಗರಿಸಿಕೊಂಡು ಓಡಿಬಿಡುತ್ತಾರೆ. ಅವಳು ಹೊರಗಿ ನಿಂದ ತನ್ನ ನೆರವಿಗೆ ಯಾರನ್ನಾದರೂ ಕರೆಸಿಕೊಳ್ಳುವುದಾದರೆ, ಇದು ಮುಗಿಯುವುದ

ರೊಳಗಾಗಿ ನಾನೂ ಈ ವ್ಯವಹಾರದಲ್ಲಿ ಸಿಕ್ಕಿಕೊಳ್ಳುತ್ತೇನೆ, ಎಂದು ಭಾವಿಸಿದೆ. ಇಲ್ಲ; ಇನ್ನು ಉಳಿದಿರುವುದು ಒಂದೇ ದಾರಿ. ನಾನು ಹೇಗಾದರೂ ಸರಿಯೆ, ಆ ಹಣವನ್ನು ಅಪಹರಿಸಬೇಕು; ಹಾಗೆ ಮಾಡಿದವನು ನಾನೆಂಬ ಸಂಶಯವೇ ಅವರಿಗೆ ಬಾರದ ಯಾವ ರೀತಿಯಲ್ಲಾದರೂ ನಾನು ಅದನ್ನು ಕದಿಯಬೇಕು, ಅವರಿಗೆ ಇಲ್ಲೊಂದು ಸದವಕಾಶ ಸಿಕ್ಕಿದೆ; ಈ ಸಂಸಾರವನ್ನೂ ಈ ಊರನ್ನೂ ನುಣ್ಣಗೆ ಮಾಡುವತನಕ ಅವರು ಇಲ್ಲಿಂದ ಕದಲುವುದಿಲ್ಲ; ಆದ್ದರಿಂದ ನಾನು ಈ ಕೆಲಸಕ್ಕೆ ಅನುಕೂಲವಾದ ಸಮಯವನ್ನು ಆರಿಸಿಕೊಳ್ಳುತ್ತೇನೆ. ನಾನು ಅದನ್ನು ಕದ್ದು ಬಚ್ಚಿಡುತ್ತೇನೆ; ಕ್ರಮೇಣ ನಾನು ನದಿಯಲ್ಲಿ ಬಲು ದೂರ ಸಾಗಿದಮೇಲೆ ಒಂದು ಪತ್ರವನ್ನು ಬರೆದು, ಅದನ್ನು ಎಲ್ಲಿ ಬಚ್ಚಿಡಲಾಗಿದೆ ಎಂಬುದನ್ನು ಮೇರಿ ಜೇನಳಿಗೆ ತಿಳಿಸುತ್ತೇನೆ. ಆದರೆ ನಾನದನ್ನು ಸಾಧ್ಯವಾದರೆ ಈ ರಾತ್ರಿಯೇ ಕದಿಯಬೇಕು. ಏಕೆಂದರೆ ಆ ವೈದ್ಯ ಈ ವ್ಯವಹಾರದಲ್ಲಿ ತಲೆಹಾಕುವುದನ್ನು ತಾನು ನಿಲ್ಲಿಸಿರುವುದಾಗಿ ತೋರ್ಪಡಿಸಿಕೊಂಡಿದ್ದರೂ ತನ್ನ ಮನಸ್ಸಿನಲ್ಲಿರುವುದೆಲ್ಲವನ್ನೂ ಬಿಟ್ಟುಕೊಡದೆ ಹೋಗಿರಬಹುದು, ಅವನು ಇವರನ್ನು ಹೆದರಿಸಿ ಇಲ್ಲಿಂದ ಓಡಿಸಬಹುದು.

ಹಾಗೆಯೇ ಹೋಗಿ ಅವರ ಕೊಠಡಿಗಳನ್ನು ಶೋಧಿಸುತ್ತೇನೆ. ಮಹಡಿಗೆ ಹತ್ತಿ ಹೋದೆ; ಪಡಸಾಲೆಯಲ್ಲಿ ಕಗ್ಗತ್ತಲು ಕವಿದಿತ್ತು. ಆದರೂ ಡ್ಯೂಕನ ಕೊಠಡಿಯನ್ನು ನಾನು ಪತ್ತೆಹಚ್ಚಿದೆ; ಒಳಗೆ ಹೋಗಿ ತಡಕಾಡತೊಡಗಿದೆ. ಆದರೆ ಆ ಹಣವನ್ನು ತನ್ನಹೊರತು ಉಳಿದ ಯಾರ ವಶಕ್ಕೂ ವಹಿಸುವುದು ರಾಜನ ಸ್ವಭಾವಕ್ಕೆ ಅನುಗುಣವಾದುದಲ್ಲ ಎಂಬುದು ನನ್ನ ನೆನಪಿಗೆ ಬಂತು. ಆದ್ದರಿಂದ ನಾನು ಅವನ ಕೊಠಡಿಗೆ ಹೋಗಿ ಒಳಗೆಲ್ಲ ತಡಕಾಡಿದೆ. ಮೊಂಬತ್ತಿಯ ಬೆಳಕಿಲ್ಲದೆ ಒಳಗಿರುವ ಯಾವುದನ್ನೂ ಕಂಡುಕೊಳ್ಳುವುದು ಸಾಧ್ಯವಿರಲಿಲ್ಲ. ನನಗೆ ಮೊಂಬತ್ತಿಯನ್ನು ಹಚ್ಚುವ ಧೈರ್ಯವೂ ಇರಲಿಲ್ಲವೆನ್ನಿ. ಅದಕ್ಕೆ ನಾನು ಅವರಿಗಾಗಿ ಕಾಯಬೇಕು, ಅವರು ಆಡಿಕೊಳ್ಳುವ ಮಾತನ್ನು ಕದ್ದು ಕೇಳಬೇಕು ಎಂದುಕೊಂಡೆ. ಅಷ್ಟುಹೊತ್ತಿಗೆ ಅತ್ತಕಡೆಗೇ ಬರುತ್ತಿರುವ ಅವರ ಹೆಜ್ಜೆಸಪ್ಪುಳ ಕೇಳಿಸಿತು. ಅವರ ಮಂಚದ ಕೆಳಗೆ ಅವಿತುಕೊಳ್ಳುವುದರಲ್ಲಿದ್ದೆ. ಅದರ ಬಳಿಗೆ ಸರಿದೆ; ಆದರೆ ಅದು ಎಲ್ಲಿದ್ದಿತೆಂದು ನಾನು ನಿರೀಕ್ಷಿಸಿದ್ದೆನೋ ಅಲ್ಲಿರಲಿಲ್ಲ. ಈ ಸಡಗರದಲ್ಲಿ ನಾನು ಮೇರಿ ಜೇನಳ ಲಂಗಗಳನ್ನು ಮರೆಮಾಡಿದ್ದ ಪರಿದೆಯನ್ನು ಮುಟ್ಟಿದೆ. ತತ್‌ಕ್ಷಣ ಅದರ ಮರೆಗೆ ಎಗರಿ, ಮೇಲಂಗಿಗಳ ನಡುವೆ ಹುದುಗಿಕೊಂಡು, ಸದ್ದು ಮಾಡದೆ ನಿಂತೆ.

ಅವರ ಒಳಗೆ ಬಂದು ಬಾಗಿಲನ್ನು ಹಾಕಿಕೊಂಡರು. ಡ್ಯೂಕ್ ಒಳಗೆ ಬಂದವನೇ ಮಂಚದ ಕೆಳಗೆ ಬಗ್ಗಿ ನೋಡಿದ. ಅದರಿಂದ ನಾನು ಮೊದಲು ಯೋಚಿಸಿದ್ದ ಹಾಗೆ, ಮಂಚದ ಕೆಳಗೆ ಅವಿತುಕೊಳ್ಳದಿದ್ದುದೇ ಕ್ಷೇಮವಾಯಿತೆಂದು ಹರ್ಷಗೊಂಡೆ. ಆದರೆ, ನೋಡಿ, ನೀವು ಯಾವುದಾದರೂ ಗುಪ್ತಕಾರ್ಯವನ್ನು ಮಾಡಬಯಸಿದಾಗ ಹಾಸುಗೆ ಕೆಳಗೆ ಅವಿತುಕೊಳ್ಳುವುದೇ ಸಹಜ ರೀತಿ. ಆಮೇಲೆ ಅವರು ಕುಳಿತುಕೊಂಡರು; ರಾಜ ಹೇಳಿದ;

"ಸರಿ, ಏನದು? ಶಕ್ಯವಿದ್ದಷ್ಟು ಸಂಗ್ರಹವಾಗಿ ಹೇಳು ; ಏಕೆಂದರೆ, ನಾವು ಇಲ್ಲಿಯೇ ಕುಳಿತಿದ್ದು ಅವರು ನಮ್ಮ ವಿಷಯದಲ್ಲಿ ಮನಬಂದಂತೆ ಮಾತನಾಡಲೆಡೆಗೊಳ್ಳುವುದಕ್ಕಿಂತ ನಾವು ಆ ಸಂತಾಪ ಸಭೆಗೆ ಹೋಗಿ ಕೆಮ್ಮುತ ನಿಲ್ಲುವುದೇ ಮೇಲೆಂದು ತೋರುತ್ತದೆ. "

"ಅದಿಷ್ಟೇ, ರಾಜಕುಮಾರನೆ. ನನಗೆ ಗಾಬರಿಯಾಗಿದೆ; ನನಗೆ ತುಂಬಾ ಮುಜಗರವಾಗಿದೆ. ಆ ವೈದ್ಯನ ಬೆದರಿಕೆ ನನ್ನ ಮನಸ್ಸಿನಿಂದ ತೊಲಗಿಯೇ ಇಲ್ಲ; ನೀನು ಏನು ಮಾಡಬೇಕೆಂದಿರುವೆ ಎಂಬುದನ್ನು ನಾನು ತಿಳಿಯಬಯಸಿದೆ. ನನಗೊಂದು ಯೋಚನೆ ಹೊಳೆದಿದೆ, ಅದು ಸೂಕ್ತವೆಂದೇ ನನಗೆ ತೋರುತ್ತದೆ. "

"ಏನದು, ಡ್ಯೂಕ್? "

"ನಾವು ಇಲ್ಲಿಂದ ಈ ರಾತ್ರಿ ಮೂರುಗಂಟೆಯೊಳಗಾಗಿ ಜಾರಿಕೊಳ್ಳಬೇಕು, ಮತ್ತು ನಾವೀಗ ಗಳಿಸಿರುವುದನ್ನು ಗಂಟುಕಟ್ಟಿಕೊಂಡು ನದೀ-ಮಾರ್ಗವಾಗಿ ತೊಲಗಿ ಹೋಗಬೇಕು. ಇದರಲ್ಲಿ ಅತಿಮುಖ್ಯವಾಗಿ ನಾವು ಗಮನಿಸಬೇಕಾದ್ದೇನೆಂದರೆ-ಇದು ನಮಗೆ ಸುಲಲಿತವಾಗಿ ಲಭಿಸಿದೆ; ಇದನ್ನು ಯಾರೋ ತಮ್ಮ ತಲೆಗೆ ಗಂಟುಹಾಕಿದ್ದಾರೆ ಎನ್ನಲೂ ಬಹುದು ನೀನು. ಇನ್ನು ವಿಳಂಬ ಮಾಡಿದರೆ ಇರುವುದೂ ಕೈತಪ್ಪಿ ಹೋದೀತು. ಇದನ್ನು ಹಾರಿಸಿಕೊಂಡು, ನಾವು ಕೂಡಲೇ ಓಡಿಹೋಗಬೇಕು. "

ಅದನ್ನು ಕೇಳಿ ನನಗೆ ತುಂಬಾ ಆತಂಕವಾಯಿತು. ಒಂದೆರಡು ಗಂಟೆಗಳ ಹಿಂದೆ ಆ ಮಾತನ್ನು ನಾನು ಕೇಳಿದ್ದರೆ ಪರಿಸ್ಥಿತಿ ಬೇರೆಯಾಗಿತ್ತು; ಆದರೆ ಈಗ ನನಗೆ ಆಂತಕವಾಯಿತು, ಆಶಾಭಂಗವಾಯಿತು. ರಾಜ ತಟ್ಟನೆ ಬಾಯಿ ಹಾಕಿದನು.

"ಏನೆಂದೆ? ಇನ್ನುಳಿದ ಆಸ್ತಿಪಾಸ್ತಿಯನ್ನು ಮಾರಬಾರದೆನ್ನುವೆಯಾ? ತನ್ನನ್ನು ಮಾರಿಕೊಳ್ಳಲು ಎಂದು ಕಾದಿರುವ ಈ ಎಂಟೊಂಬತ್ತು ಸಾವಿರ ಡಾಲರುಗಳ ಬೆಲೆ ಬಾಳುವ ಸ್ಥಿರಾಸ್ತಿಯನ್ನು ಕೈ ಬಿಟ್ಟು ಮುಕರ ಪಡೆಯುಂತೆ ಹೊರಟು ಬಿಡುವುದೆ? ಎಷ್ಟು ಒಳ್ಳೆಯ, ಮತ್ತು ಮಾರಾಟಕ್ಕೆ ಅಣಿಯಾಗಿರುವ ಸ್ವತ್ತು ಇವು! " ಡ್ಯೂಕ್ ಒಪ್ಪುವುದಿಲ್ಲವೆಂಬಂತೆ ಗೊಣಗಿದನು. ಚಿನ್ನದ ಥೈಲಿಯೊಂದೇ ಸಾಕೆಂದೂ, ತಾನು ಇನ್ನು ಹೆಚ್ಚಿಗೆ ಮುಂದವರಿಯಲೂ ಆ ತಬ್ಬಲಿಗಳ ಸರ್ವಸ್ವವನ್ನು ಅಪಹರಿಸಲೂ ಬಯಸುವುದಿಲ್ಲವೆಂದನು.

"ಎಂಥಾ ಮಾತಾಡಿದೆ ನೀನು! " ಎಂದನು ರಾಜ ; "ನಾವು ಇಷ್ಟು ಹಣವನ್ನಲ್ಲದೆ ಇನ್ನೇನನ್ನೂ ಅವರಿಂದ ಅಪಹರಿಸುತ್ತಿಲ್ಲವಲ್ಲ. ನಷ್ಟವೇನಿದ್ದರೂ ಆ ಆಸ್ತಿಯನು ಕೊಳ್ಳುವವರಿಗೆ. ಏಕೆಂದರೆ, ಆ ಸ್ವತ್ತಿನ ಮಾಲಿಕರು ನಾವಲ್ಲವೆಂಬುದು ಪತ್ತೆಯಾದ ಕೂಡಲೆ-ನಾವು ಇಲ್ಲಿಂದ ಕಾಲ್ತೆಗೆದ ಮೇಲೆ ಅದಕ್ಕೆ ಹೆಚ್ಚು ಕಾಲವೇನೂ ಹಿಡಿಯುವುದಿಲ್ಲ-ಕ್ರಮ ಊರ್ಜಿತವಾಗುವುದಿಲ್ಲ, ಅದಷ್ಟು ಯಾರು ಹಕ್ಕುದಾರರೋ ಅವರಿಗೆ ಹಿಂದಿರುಗುತ್ತದೆ. ಈ ನಿನ್ನ ತಬ್ಬಲಿಗಳಿಗೆ ಅವರ ಮನೆ ಮತ್ತೆ ಲಭಿಸುತ್ತದೆ,

ಅದು ಸಾಕು ಅವರಿಗೆ; ಅವರಿನ್ನೂ ಚಿಕ್ಕವರು, ಜಾಣೆಯರು, ಬಲು ಸುಲಭವಾಗಿ ತಾವು ಬದುಕುವ ದಾರಿಯನ್ನು ಕಂಡುಕೊಳ್ಳಬಲ್ಲರು. ಅವರೆಂದಿಗೂ ಕಷ್ಟಪಡಬೇಕಾಗು ವುದಿಲ್ಲ. ಅಷ್ಟೇ ಏಕೆ, ಇನ್ನೂ ಯೋಚಿಸುತ್ತ ಹೋದರೆ, ಅವರಷ್ಟೂ ಅನುಕೂಲವಂತ ರಲ್ಲದ ಮಂದಿ ಅಸಂಖ್ಯಾತವಾಗಿದ್ದಾರೆ ಅವರು ಕೊರಗಬೇಕಾದದ್ದು ಯಾವುದೂ ಇಲ್ಲದಿರುವುದಕ್ಕಾಗಿ, ನೀನೇ ನಿನ್ನ ಬೆನ್ನನ್ನು ತಟ್ಟಿಕೊಳ್ಳಬೇಕು. "

ರಾಜ ತನ್ನ ವಾಕ್ ಚಾತುರ್ಯದಿಂದ ಅವನನ್ನ ಸೋಲಿಸಿದನು; ಕಡೆಗೆ ಅವನು ಒಪ್ಪಿಕೊಂಡನು, ಸರಿ ಆಗಲಿ ಎಂದನು. ಆದರೂ ಇನ್ನು ನಿಲ್ಲುವುದು ಶುದ್ಧ ಮೂರ್ಖ ತನವೆಂದೂ ಆ ವೈದ್ಯ ತಮ್ಮ ಮೇಲೆ ಹೊಂಚು ಹಾಕುತ್ತಿರುವನೆಂದೂ ತಾನು ನಂಬಿರು ವುದಾಗಿ ತಿಳಿಸಿದನು. ರಾಜ ಹೇಳಿದ:

"ವೈದ್ಯ ಹಾಳಾದ ! ಅವನಿಗೆ ನಾವೇಕೆ ಲಕ್ಷ್ಯಕೊಡಬೇಕು ? ಈ ಊರಿನಲ್ಲಿರುವ ದಡ್ಡರೆಲ್ಲರೂ ನಮ್ಮ ಕಡೆಗೆ ಇಲ್ಲವೆ ? ಆದ್ದರಿಂದ ಅದು ನಮಗೆ ಈ ಊರಿನಲ್ಲಿ ಸಾಕಷ್ಟು ದೊಡ್ಡ ಬಹುಮತವಲ್ಲವೆ ? "

ಅವರಿಬ್ಬರೂ ಮಹಡಿಯಿಳಿದು ಕೆಳಕ್ಕೆ ಹೋಗಲು ಸಿದ್ಧವಾದರು. ಡ್ಯೂಕ್ ಹೇಳಿದ:

"ನಾವು ಆ ಹಣವನ್ನು ಸುರಕ್ಷಿತವಾದ ಸ್ಥಳದಲ್ಲಿಡಲಿಲ್ಲವೆಂದು ನನಗೆ ತೋರುತ್ತದೆ "

ಆ ಮಾತನ್ನು ಕೇಳಿ ನಾನು ಗೆಲುವಾದೆ. ನನಗೆ ನೆರವಾಗುವ ಯಾವೊಂದು ಸೂಚನೆಯೂ ನನಗೆ ಸಿಕ್ಕಲಾರದೆಂದು ನಾನು ಭಾವಿಸತೊಡಗಿದ್ದೆ,–ಆದ್ದರಿಂದ. ರಾಜ ಹೇಳಿದ;

"ಏಕೆ ? "

"ಏಕೆಂದರೆ ಇನ್ನು ಸ್ವಲ್ಪದರಲ್ಲೇ ಮೇರಿ ಜೇನ್ ಸಂತಾಪ ಸೂಚಕ ವಸ್ತ್ರಗಳನ್ನು ಧರಿಸಲಿದ್ದಾಳೆ ; ಮೊದಲಿಗೇ ನಿನಗೆ ಗೊತ್ತು, ಈ ಕೊಠಡಿಗಳನ್ನು ಶುಚಿಯಾಗಿಡುವ ನೀಗ್ರೋ ಇದ್ದಾನಲ್ಲ, ಅವನು. ಇಲ್ಲಿರುವ ತೆರೆಯನ್ನು ಸರಿಸಿ ಬಟ್ಟೆ ಬರೆಗಳನ್ನು ಪೆಟ್ಟಿಗೆಗೆ ಹಾಕಿ ದೂರವಾಗಿಡುವುದಕ್ಕೆ ಅವಳು ಅನುಮತಿಯನ್ನು ಪಡೆಯುತ್ತಾನೆ. ಆ ಸಮಯದಲ್ಲಿ ಹಣವನ್ನು ಅಕಸ್ಮಾತ್ತಾಗಿ ಕಂಡಯಾವ ನೀಗ್ರೋವಾದರೂ, ಅದರಲ್ಲಿ ಸ್ವಲ್ಪವನ್ನಾದರೂ ಎಳೆದುಕೊಳ್ಳುವುದಿಲ್ಲವೆಂದು ತಿಳಿದಿರುವೆಯಾ ನೀನು ? "

"ನಿನ್ನ ಯೋಚನೆ ಸರಿಯಾದ್ದೆಂದು ನನಗೆ ತಿಳಿಯಿತು, ಡ್ಯೂಕ್" ಎಂದನು ರಾಜ. ಅವನು ನಾನಿದ್ದ ಬಳಿಗೆ ಎರಡು ಮೂರು ಅಡಿಗಳಷ್ಟು ಹತ್ತಿರ ಬಂದು ಪರದೆಯ ತಳವನ್ನು ತಡಕಾಡಿದನು. ನಾನು ಭದ್ರವಾಗಿ ಗೋಡೆಗೆ ಕಚ್ಚಿಕೊಂಡು ಮೈನಡುಗು ತ್ತಿದ್ದರೂ ಉಸಿರಾಡದೆ ನಿಂತಿದ್ದೆ. ಆ ಆಸಾಮಿಗಳ ಕೈಗೆ ನಾನೇನಾದರೂ ಸಿಕ್ಕಿ ಬಿದ್ದಿದ್ದರೆ ಅವರೇನೆನ್ನುತ್ತಿದ್ದರೋ ನಾನು ಕಾಣೆ ! ಅವರು ನನ್ನನ್ನು ಹಿಡಿದಿದ್ದರೆ ನಾನು

ಏನು ಮಾಡಬೇಕಾಗಿತ್ತು ಎಂಬುದನ್ನೇ ನಾನು ಯೋಚಿಸತೊಡಗಿದೆ. ನಾನು ನನ್ನ ಯೋಚನೆಯಲ್ಲಿ ಅರ್ಧದಾರಿಗೆ ಬರುವುದರೊಳಗಾಗಿ, ರಾಜ ಹಣದ ಗಂಟನ್ನು ಕೈಗೆ ತೆಗೆದುಕೊಂಡನು. ಸದ್ಯ ಅವನಿಗೆ ನಾನೆಲ್ಲಿರುವೆನೆಂಬ ಸಂಶಯವೇನೂ ಬರಲಿಲ್ಲ. ಅವರು ಅದನ್ನು ಕೊಂಡು ಹೋಗಿ, ತುಪ್ಪಳದ ಹಾಸಿಗೆಯೊಂದರ ಕೆಳಗೆ ಹಾಸಿದ್ದ ಹುಲ್ಲಿನ ಚೀಲದ ಒಂದಂಚಿನಲ್ಲಿ ಸ್ವಲ್ಪ ಹರಿದು ಹಣದ ಗಂಟನ್ನು ಅದರೊಳಕ್ಕೆ ಒಂದೆರಡು ಅಡಿಗಳ ತನಕ ನೂಕಿ ಭದ್ರಪಡಿಸಿ ಇನ್ನು ಅದು ಸುರಕ್ಷಿತವೆಂದುಕೊಂಡರು. ಏಕೆಂದರೆ, ನೀಗ್ರೋಗಳು ದಿನವೂ ಸರಿಪಡಿಸಿ ಹಾಸುವುದು ಮೇಲಿರುವ ತುಪ್ಪಳದ ಹಾಸುಗೆಯನ್ನೇ; ಕೆಳಗಿನ ಹುಲ್ಲಿನ ಹಾಸುಗೆಯನ್ನು ಮುಟ್ಟುವುದು ವರುಷಕ್ಕೆ ಸಾಮಾನ್ಯವಾಗಿ ಎರಡೇ ಬಾರಿ. ಈ ಕಾರಣದಿಂದ ಇನ್ನದು ಅಪಹೃತವಾಗುವ ಅಪಾಯವಿರಲಿಲ್ಲ.

ನಾನು ಅವರಿಗಿಂತ ಬುದ್ಧಿವಂತ. ಅವರಿನ್ನೂ ಮಹಡಿಯ ಮೆಟ್ಟಿಲುಗಳನ್ನು ಪೂರ್ತಿ ಇಳಿಯುವುದರೊಳಗೇ ನಾನು ಅದನ್ನು ಹರಿದು ತಂದೆ. ಕತ್ತಲೆಯಲ್ಲೇ ನನ್ನ ಚಿಕ್ಕ ಕೋಣೆಗೆ ತಡವರಿಸುತ್ತ ಹಿಂದಿರುಗಿದೆ. ಇನ್ನೊಂದು ಉತ್ತಮ ಮಾರ್ಗ ನನಗೆ ಹೊಳೆಯುವ ತನಕ ಇಲ್ಲೇ ಇರಲೆಂದು ಅದನ್ನು ಬಚ್ಚಿಟ್ಟು ಜೋಪಾನ ಮಾಡಿದೆ. ಅದನ್ನು ಮನೆಯ ಹೊರಗೆ ಎಲ್ಲಾದರೂ ಬಚ್ಚಿಡುವುದು ಮೇಲೆಂದು ನನಗೆ ತೋರಿತು, ಏಕೆಂದರೆ, ಅದು ತಮ್ಮ ಕೈಜಾರಿಹೋಯಿತೆಂದು ತಿಳಿದಾಗ ಅವರು ಶೋಧಿಸುತ್ತಿದ್ದುದು ಆ ಮನೆಯನ್ನು ಮಾತ್ರ; ನನಗದು ಚೆನ್ನಾಗಿ ಗೊತ್ತು. ಬಟ್ಟೆ ಮೈಮೇಲಿರುವಂತೆಯೇ ನಾನು ಮಲಗಿದೆ; ನಿದ್ದೆಮಾಡುವ ಅಪೇಕ್ಷೆ ನನಗೆಷ್ಟಿದ್ದರೂ, ನಿದ್ದೆಮಾಡುವುದು ಮಾತ್ರ ನನಗೆ ಸಾಧ್ಯವೇ ಇರಲಿಲ್ಲ. ನನ್ನ ಮುಂದಿನ ಕೆಲಸದ ಬಗೆಗೆ ನಾನು ಅಂಥಾ ತರಾತುರಿಯಲ್ಲಿದ್ದೆ. ಕ್ರಮೇಣ ರಾಜನೂ ಡ್ಯೂಕನೂ ಮೇಲಕ್ಕೆ ಹತ್ತಿ ಬರುತ್ತಿರುವುದು ನನಗೆ ಚೆನ್ನಾಗಿ ಕೇಳಿಸಿತು. ಆಗ ನಾನು ನನ್ನ ಹುಲ್ಲಿನ ಹಾಸುಗೆಯಿಂದ ಈಚೆಗೆ ಹೊರಳಿ, ನನ್ನ ಏಣಿಯ ತುದಿಮೆಟ್ಟಿಲಮೇಲೆ ನನ್ನ ಗಲ್ಲವನ್ನಿಟ್ಟುಕೊಂಡು, ಏನಾದರೂ ನಡೆಯುತ್ತದೆಯೋ ನೋಡೋಣವೆಂದು ಕಾದಿದ್ದೆ. ಅಂಥಾದ್ದೇನೂ ನಡೆಯಲಿಲ್ಲ.

ಏರಿದ ರಾತ್ರಿಯ ಮುಗಿವಿನ ದನಿಗಳಡಗಿ, ಮುಂಬೆಳಗಿನ ಮೊತ್ತಮೊದಲಿನ ದನಿಗಳು ಮೂಡದಿರುವ ತನಕ ನಾನು ಹಾಗೆಯೇ ಇದ್ದೆ. ಅನಂತರ ನಾನು ಏಣಿಯಿಂದ ಮೆಲ್ಲನಿಳಿದೆ.

# ೨೭

ನಾನವರ ಬಾಗಿಲ ಬಳಿಗೆ ತೆವಳಿ, ಕಿವಿಯೊಡ್ಡಿದೆ; ಅವರು ಗೊರಕೆ ಹೊಡೆಯು ತ್ತಿದ್ದರು. ನಾನು ಮೆಟ್ಟಿಂಗಾಲಿಟ್ಟುಕೊಂಡು ಹೋಗಿ ಸುಸೂತ್ರವಾಗಿ ಮೆಟ್ಟಿಲುಗಳನ್ನು ಇಳಿದು ಹೋದೆ. ಎಲ್ಲೆಲ್ಲವೂ ನಿಶಬ್ದವಾಗಿತ್ತು. ಊಟದ ಕೋಣೆಯ ಬಾಗಿಲ ಬಿರುಕಿನ ಮೂಲಕ ನಾನು ಇಣಿಕಿದೆ. ಅಲ್ಲಿ ಶವವನ್ನು ಕಾಯುತ್ತಿದ್ದವರು ತಮ್ಮ ಕುರ್ಚಿಗಳಲ್ಲೆ ಗಾಢನಿದ್ರೆಯಲ್ಲಿರುವುದು ನನಗೆ ಕಂಡುಬಂದಿತು. ಅದರ ಬಾಗಿಲು ಶವ ವನ್ನು ಇಟ್ಟಿದ್ದ ಕೊಠಡಿಯ ಕಡೆಗೆ ತೆರೆದಿತ್ತು; ಎರಡು ಕೋಣೆಗಳಲ್ಲೂ ಮೋಂಬತ್ತಿಯ ದೀಪವಿತ್ತು. ನಾನು ಮುನ್ನಡೆದೆ, ಕೋಣೆಯ ಬಾಗಿಲು ತೆರೆದಿತ್ತು, ಅಲ್ಲಿ ಪೀಟರಿನ ಅವ ಶೇಷ ವಿನಾ ಇನ್ನು ಯಾರೂ ಇಲ್ಲದಿರುವುದು ನನಗೆ ಕಾಣಿಸಿತು: ಆದ್ದರಿಂದ ನಾನು ಅಲ್ಲಿಗೆ ಮೆಲ್ಲನೆ ನುಸುಳಿದೆ; ಆದರೆ ಮುಂಬಾಗಿಲಿಗೆ ಬೀಗ ಹಾಕಿತ್ತು,ಬೀಗದಕೈ ಅಲ್ಲಿರಲಿಲ್ಲ, ಅದೇ ಸಮಯಕ್ಕೆ ಯಾವನೋ ನನ್ನ ಹಿಂದೆಯೇ ಮೆಟ್ಟಿಲಿಳಿದು ಬರುತ್ತಿರುವುದು ನನಗೆ ಕೇಳಿಸಿತು. ನಾನು ಕೋಣೆಯೊಳಗೆ ಓಡಿಹೋಗಿ ತಟ್ಟನೆ ಹಿಂದಿರುಗಿ ನೋಡಿದೆ. ನಾನು ಆ ಹಣದ ಚೀಲವನ್ನು ಬಚ್ಚಿಡಲು ಸ್ಥಳವಿದ್ದುದು ಆ ಶವದ ಪೆಟ್ಟಿಗೆಯೊಂದರಲ್ಲೇ ಎಂಬುದು ಸ್ಪಷ್ಟವಾಗಿತ್ತು. ಅದರ ಮುಚ್ಚಳವನ್ನು ಸುಮಾರು ಒಂದು ಅಡಿಯಷ್ಟು ಕೆಳಗೆ ಜರುಗಿಸಿದ್ದರು; ಅದರ ಮೂಲಕ ಒದ್ದೆಯ ಬಟ್ಟೆಯಿಂದ ಮರೆಮಾಡಿದ್ದ ಅವನ ಮುಖ ವನ್ನು ನೋಡಬಹುದಾಗಿತ್ತು; ಅದರ ತಲೆಗೆ ಮುಸುಕನ್ನು ಹಾಕಿತ್ತು. ಹಣದ ಚೀಲ ವನ್ನು ನಾನು ಆ ಮುಚ್ಚಳದ ಕೆಳಗೆ; ಹೆಣದ ಕೈ-ಕಟ್ಟಿನ ಸ್ವಲ್ಪ ಕೆಳಗೆ ಹಾಕಿಬಿಟ್ಟೆ. ಆ ಕೈಗಳೋ ತಣ್ಣಗೆ ಕೊರೆಯುತ್ತಿದ್ದವು; ನನ್ನ ಮೈ ಜುಮ್ಮೆಂದಿತು. ಬಳಿಕ ನಾನು ಸರ್‍ರನೆ ನನ್ನ ಕೋಣೆಗೆ ಓಡಿಹೋಗಿ ಬಾಗಿಲು ಹಾಕಿಕೊಂಡೆ.

ನನ್ನ ಹಿಂದೆ ಬರುತ್ತಿದ್ದವಳು ಮೇರಿ ಜೇನ್. ಅವಳು ಮೆಲ್ಲಗೆ ಹೆಣದ ಪೆಟ್ಟಿಗೆಯ ಬಳಿಗೆ ಹೋದಳು, ಮಂಡಿಯೂರಿ ಕುಳಿತಳು, ಒಳಗೆ ನೋಡಿದಳು. ಆಮೇಲೆ ತನ್ನ ಕರವಸ್ತ್ರದಿಂದ ಕಣ್ಮುಚ್ಚಿಕೊಂಡಳು. ಅವಳು ಅಳುತ್ತಿರುವುದನ್ನು ನಾನು ಕಂಡೆ; ಅದು ನನ್ನ ಕಿವಿಗೇನೂ ಬೀಳಲಿಲ್ಲ. ಅವಳು ನನ್ನ ಕಡೆಗೆ ಬೆನ್ನುತಿರುಗಿಸಿದ್ದಳು. ನಾನು ಈಚೆಗೆ ಬಂದೆ; ಊಟದ ಕೋಣೆಯನ್ನು ಹಾದುಹೋಗುತ್ತಿದ್ದಾಗ, ನನ್ನನ್ನು ಕಾವಲಿದ್ದವರಲ್ಲಿ ಯಾರೂ ನೋಡಲಿಲ್ಲವೆಂಬುದನ್ನು ದೃಢಪಡಿಸಿಕೊಳ್ಳುವುದೇ ಮೇಲೆಂದುಕೊಂಡೆ. ಅದ ಕ್ಕಾಗಿ ನಾನು ಬಾಗಿಲಸಂದಿಯ ಮೂಲಕ ಮತ್ತೆ ನೋಡಿದೆ. ಎಲ್ಲವೂ ಸರಿಯಾಗಿತ್ತು. ಅದರು ಅಲ್ಲಾಡಿರಲಿಲ್ಲ.

ಹತ್ತಿಬಂದು ಮೆತ್ತಗೆ ನನ್ನ ಹಾಸುಗೆಗೆ ಸೇರಿಕೊಂಡೆ. ನಾನು ಇಷ್ಟೆಲ್ಲಾ ಕಷ್ಟಪಟ್ಟು ಅಪಾಯಗಳನ್ನೆದುರಿಸಿದ ಮೇಲೆ ಇದು ಹೀಗೆ ಪರ್ಯವಸಾನವಾಗುತ್ತಿದೆಯಲ್ಲ ಎಂದು ಮನಸ್ಸು ಹುಳಿಹುಳಿಯಾಯಿತು. ಹಣದ ಥೈಲಿ ಈಗೆಲ್ಲಿದೆಯೋ ಅಲ್ಲೇ ಉಳಿಯುವು

ದಾದರೆ ಎಲ್ಲವೂ ಸುಗಮವಾದೀತು ಎಂದುಕೊಂಡೆ; ಏಕೆಂದರೆ ನಾನು ನದಿಯಲ್ಲಿ ನೂರಿನ್ನೂರು ಮೈಲಿಗಳದೂರ ಪ್ರಯಾಣ ಮಾಡಿದಮೇಲೆ ನಾನು ಆ ನಿಧಿ ಎಲ್ಲಿದೆ ಎಂಬುದನ್ನು ಮೇರಿ ಜೇನಳಿಗೆ ಪತ್ರಮುಖೇನ ತಿಳಿಸಬಹುದಾಗಿತ್ತು. ಆದರೆ ಮುಂದೆ ಹಾಗೆಯೇ ನಡೆಯುವ ಹೋಗಬಹುದು; ಇನ್ನು ಹೇಗೆ ನಡೆಯುಬಹುದೆಂದರೆ, ಅವಳು ಪೆಟ್ಟಿಗೆಯ ಮುಚ್ಚಳಕ್ಕೆ ತಿರುಗುಮೊಳೆಯನ್ನು ಹೊಡೆಯಲು ಬಂದಾಗ ಆ ಹಣ ಒಳಗಿರುವುದನ್ನು ಕಂಡುಕೊಳ್ಳುತ್ತಾರೆ. ಅದು ಮತ್ತೆ ರಾಜನ ವಶಕ್ಕೆ ಬಂದುಬಿಡುತ್ತದೆ; ಅದನ್ನು ಅವನಿಂದ ಮತ್ತೆ ಕಿತ್ತುಕೊಳ್ಳುವ ಇನ್ನೊಂದು ಅವಕಾಶವನ್ನೇ ಅವನು ಎಂದಿಗೂ ಯಾರಿಗೂ ಕೊಡುವುದಿಲ್ಲ. ಹಾಗಾಗುವುದಕ್ಕೆ ಮುನ್ನವೇ ನಾನೇ ಅಲ್ಲಿಗೆ ಹೋಗಿ ಅದನ್ನೂ ತಂದುಬಿಡೋಣ ಎನ್ನಿಸಿತು ನನಗೆ; ಆದರೆ ಅದಕ್ಕೆ ಕೈಹಾಕುವ ಧೈರ್ಯವಿರಲಿಲ್ಲ. ಕ್ಷಣಕ್ಷಣಕ್ಕೆ ಬೆಳಗು ಹತ್ತಿರವಾಗುತ್ತ ಬಂದಿತ್ತು; ಇನ್ನೇನು ಈಗಲೋ ಆಗಲೋ ಆ ಕಾವಲುಗಾರರಲ್ಲಿ ಕೆಲವರು ಎಚ್ಚರಗೊಳ್ಳುತ್ತಾರೆ, ನಾನು ಅವರ ಕೈಗೆ ಸಿಕ್ಕಿಬೀಳುತ್ತೇನೆ—ಆ ಆರು ಸಾವಿರ ಡಾಲರುಗಳ ರಕ್ಷಣೆಗೆ ನನ್ನನ್ನು ಯಾರೂ ನೇಮಿಸದಿದ್ದರೂ, ಆ ನಿಧಿಯೊಂದಿಗೆ ಸಿಕ್ಕಿಬೀಳುತ್ತೇನೆ. ಎಂದು ನನಗೆ ತೋರಿತು. ನಾನು ಅಂಥಾ ಕೃತ್ಯಗಳಲ್ಲಿ ಸಿಕ್ಕಿಹಾಕಿಕೊಳ್ಳಲು ಇಷ್ಟಪಡುವುದಿಲ್ಲ, ಎಂದುಕೊಂಡೆ.

ನಾನು ಬೆಳಗಾಗ ಮಹಡಿಯಿಂದಿಳಿದು ಕೆಳಗೆ ಬಂದಾಗ, ಶವದ ಪೆಟ್ಟಿಗೆಯಿದ್ದ ಕೋಣೆಯ ಬಾಗಿಲು ಮುಚ್ಚಿತ್ತು, ಕಾವಲುಗಾರರು ಹೊರಟುಹೋಗಿದ್ದರು. ಸುತ್ತಮುತ್ತ ಅಲ್ಲಿದ್ದವರೆಂದರೆ–ಮನೆಯವರು, ವಿಧವೆ ಬಾರ್ಟ್ಲೆ ಮತ್ತು ನಾವು, ಅಷ್ಟೇ. ಏನು ನಡೆಯುತ್ತಿದೆ ಎಂಬುದನ್ನರಿಯಲು ನಾನು ಅವರ ಮುಖಗಳನ್ನೇ ವೀಕ್ಷಿಸಿದೆ, ನನಗೆ ಏನೂ ಅರ್ಥವಾಗಲಿಲ್ಲ.

ಮಧ್ಯಾಹ್ನದ ಹೊತ್ತಿಗೆ ಶವಸಂಸ್ಕಾರಕ್ಕೆ ನಿಯಮಿತನಾದವನು ಆಳೊಬ್ಬನನ್ನು ಕಟ್ಟಿಕೊಂಡು ಅಲ್ಲಿಗೆ ಬಂದ. ಅವರು ಕೆಲವು ಕುರ್ಚಿಗಳನ್ನು ಕೋಣೆಯ ಮಧ್ಯಕ್ಕೆ ತಂದು ಜೋಡಿಸಿ ಅದರಮೇಲೆ ಶವದ ಪೆಟ್ಟಿಗೆಯನ್ನಿಟ್ಟರು; ಆಗ ನಾವೆಲ್ಲರೂ ಸಾಲು ಸಾಲಾಗಿ ನಮ್ಮನಮ್ಮ ಕುರ್ಚಿಗಳಲ್ಲಿ ಕುಳಿತೆವು. ನೆರೆಹೊರೆಯವರಿಂದ ಹೆಚ್ಚುಹೆಚ್ಚಾಗಿ ಕುರ್ಚಿಗಳನ್ನು ಎರವಲು ತಂದು ಹಾಕಿದ್ದೆವು; ಪಡಸಾಲೆಯೂ, ಕೋಣೆಯೂ ಊಟದ ಕೋಣೆಯೂ ಕುರ್ಚಿಗಳಿಂದ ತುಂಬಿಹೋಗಿತ್ತು. ಶವದ ಪೆಟ್ಟಿಗೆಯ ಮುಚ್ಚಳ ಹಿಂದಿನಂತೆಯೇ ಇತ್ತು. ಅದನ್ನು ನಾನು ನೋಡಿದೆ, ಸುತ್ತಮುತ್ತ ಇಷ್ಟೊಂದು ಜನರಿರುವಾಗ ಅವರೆದುರಿಗೆ ನಾನು ಅದರ ಬಳಿಗೆ ಹೋಗಿ ಇಣಿಕಿ ನೋಡಲಾಗಲಿಲ್ಲ.

ಆಮೇಲೆ ಜನರು ಅಲ್ಲಿಗೆ ಗುಂಪುಕೂಡಿ ಬರುವುದು ಪ್ರಾರಂಭವಾಯಿತು. ಶವದ ಪೆಟ್ಟಿಗೆಯ ಶಿರೋಭಾಗದ ಕಡೆಗೆ ಹಾಕಿದ್ದ ಮುಂದಿನ ಪಂಕ್ತಿಯಲ್ಲಿ ಕಾವಲುಗಾರರೂ ಆ ಹುಡುಗಿಯರೂ ಕುಳಿತರು. ಸುಮಾರು ಅರ್ಧಗಂಟೆಯವರೆಗೂ ಸಾಲುನಿಂತು ಒಬ್ಬೊಬ್ಬರಾಗಿ ನಿಧಾನವಾಗಿ ನಡೆದುಹೋಗಿ ಮೃತನ ಮುಖವನ್ನು ಒಂದು ನಿಮಿಷ ಕಾಲ

ನೋಡಿ ಮುಂದೆ ಸಾಗುತ್ತಿದ್ದರು; ಕೆಲವರು ಕಂಬನಿಗರೆದರು. ಎಲ್ಲವೂ ಬಲು ನಿಶ್ಶಬ್ದವಾಗಿ ಗಂಭೀರವಾಗಿ ನಡೆಯಿತು. ಆ ಹುಡುಗಿಯರೂ ಕಾವಲುಗಾರರೂ ಕರವಸ್ತ್ರಗಳಿಂದ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡು, ತಲೆತಗ್ಗಿಸಿ ಗದ್ಗದಿಸುತ್ತಿದ್ದರು. ನೆಲದ ಮೇಲೆ ಎಳೆದು ಎಳೆದು ಇಡುತ್ತಿದ್ದ ಹೆಜ್ಜೆಯ ಕರಕರ ಶಬ್ದವನ್ನೂ. ಆಗಾಗ ಮೂಗಿನಿಂದ ಗಟ್ಟಿಯಾಗಿ ಊಸಿರುಗರೆಯುತ್ತಿದ್ದುದನ್ನೂ ಬಿಟ್ಟರೆ ಇನ್ನೊಂದು ಸದ್ದು ಅಲ್ಲಿರಲಿಲ್ಲ. ಏಕೆಂದರೆ, ಚರ್ಚಿನಲ್ಲಿ ವಿನಾ, ಜನರು ಹೆಚ್ಚಾಗಿ ಮೂಗನ್ನು ಹಿಂಡಿ ಒರಸಿಕೊಳ್ಳುವುದು ಸಾಮಾನ್ಯವಾಗಿ ಶವಸಂಸ್ಕಾರ ಸಮಯಗಳಲ್ಲಿಯೇ.

ಇದ್ದ ಸ್ಥಳವಷ್ಟು ಜನಸಂದಣಿಯಿಂದ ಕಿಕ್ಕಿರಿದ ಮೇಲೆ, ಶವಸಂಸ್ಕಾರದ ಗುತ್ತಿಗೆದಾರ ತನ್ನ ಕೈಗೆ ಕರಿಯ ಗವಸುಗಳನ್ನು ಹಾಕಿಕೊಂಡು ಕಟ್ಟಕಡೆಯ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದನು; ಜನರನ್ನೂ ಸಾಮಾನು ಸರಂಜಾಮನ್ನೂ ಅಣಿಗೊಳಿಸಿಕೊಳ್ಳುತ್ತಿದ್ದನು ; ಬೆಕ್ಕಿನಂತೆ, ಸದ್ದುಮಾಡದೆ ಚಲಿಸುತ್ತಿದ್ದನು. ಅವನು ಒಂದು ಮಾತನ್ನೂ ಆಡಲಿಲ್ಲ ; ಜನರನ್ನು ಹಿಂದಕ್ಕೆ ಸರಿಸುತ್ತಿದ್ದನು ; ಹೊತ್ತಾಗಿ ಬಂದವರನ್ನು ಒಳಕ್ಕೆ ದಬ್ಬುತ್ತಿದ್ದನು ; ಉದ್ದಕ್ಕೂ ದಾರಿ ಬಿಡಿಸುತ್ತಿದ್ದನ . ಅವನು ಇಷ್ಟೆಲ್ಲವನ್ನೂ ತಲೆಯನ್ನು ಅಲ್ಲಾಡಿಸುವುದರಿಂದಲೇ, ಕೈ ಸನ್ನೆಗಳಿಂದಲೇ ನಿರ್ವಹಿಸುತ್ತಿದ್ದನು. ಆಮೇಲೆ ಅವನು ತನ್ನ ಸ್ಥಳಕ್ಕೆ ಹಿಂದಿರುಗು ಗೋಡೆಯೊರಗಿ ನಿಂತನು. ಅವನಂಥಾ ಅತಿ ನಿಶ್ಶಬ್ದವಾಗಿ, ಕದ್ದು ನುಸುಳುವ ಮನುಷ್ಯನನ್ನೇ ನಾನು ನೋಡಿಲ್ಲ. ಹದಗೊಳಿಸಿದ ಹಂದಿಯ ಮಾಂಸದಲ್ಲಿ ಎಷ್ಟು ಕಿರುನಗೆ ಇರುತ್ತದೆಯೋ, ಅಷ್ಟೇ ಕಿರುನಗೆಯಿತ್ತು ಅವನ ಮುಖದಲ್ಲಿ.

ಅವರೊಂದು ಪೂರಾ ಹಳೆಯ ಹಾರ್ಮೋನಿಯಮ್ಮನು ತಂದಿದ್ದರು; ಸರ್ವಸಿದ್ಧತೆಗಳೂ ಮುಗಿದ ಮೇಲೆ ಹುಡುಗಿಯೊಬ್ಬಳು ಅದರ ಮುಂದೆ ಬಂದು ಕುಳಿತು ಮೀಟತೊಡಗಿದಳು. ಅದು ತುಂಬಾ ಕಿರುಗುಟ್ಟುತ್ತ ನರಳುತ್ತಲಿತ್ತು ; ಎಲ್ಲರೂ ದನಿಗೂಡಿಸಿ ಹಾಡಿದರು. ನನಗಂತೂ ಸತ್ಪುರುಷನೆಂದರೆ ಪೀಟರೊಬ್ಬನೇ ಎಂದು ತೋರಿತು. ಬಳಿಕ ಪೂಜ್ಯ ಹಾಬ್ಸನ್ ಮೆಲ್ಲಗೆ ಗಂಭೀರವಾಗಿ ಎದ್ದು ಮಾತನಾಡತೊಡಗಿದನು. ಆಗ ತತ್‌ಕ್ಷಣವೇ ಆ ಕೋಣೆಯಲ್ಲಿ ಹಿಂದೆಂದೂ ಕೇಳಿಬರದಿದ್ದ ಅಸಾಧ್ಯ ಗದ್ದಲ ವೆದ್ದಿತು. ಒಂದು ನಾಯಿ ಒಳಕ್ಕೆ ನುಗ್ಗಿಬಂದಿತ್ತು, ಅಷ್ಟೇ; ಆದರೂ ಅದು ಅಸಾಧ್ಯ ಗದ್ದಲವೆಬ್ಬಿಸಿತು ಆ ಗದ್ದಲವೇ ಮುಂಬರಿಯುತ್ತಿತ್ತು, ಶವದಪೆಟ್ಟಿಗೆಯ ಮೇಲೆ ಬಾಗಿದ ಪುರೋಹಿತ ಹಾಗೆಯೇ ನಿಂತು ಕಾಯಬೇಕಾಯಿತು. ಆಗದ್ದಲದಲ್ಲಿ ನಿಮ್ಮ ಧ್ವನಿಯೇ ನಿಮಗೆ ಕೇಳಿಸುತ್ತಿಲ್ಲ, ಯೋಚನೆ ಮಾಡಲು ಅವಕಾಶವಿರಲಿಲ್ಲ. ಪರಿಸ್ಥಿತಿ ತುಂಬಾ ಅಸಹ್ಯವಾಯಿತು, ಮುಂದೇನು ಮಾಡಬೇಕೆಂಬುದು ಯಾರಿಗೂ ಹೊಳೆಯಲಿಲ್ಲ. ಆಗ ಒಡನೆಯೇ ಅಲ್ಲಿದ್ದವನಲ್ಲಿ ಆ ಉದ್ದನೆಯ ಕಾಲಿನ ಶವಸಂಸ್ಕಾರದ ಗುತ್ತಿಗೆದಾರ, ಅವನು ಪುರೋಹಿತನ ಕಡೆಗೆ ತಿರುಗಿ "ನೀನು ಯೋಚಿಸಬೇಕಾದ್ದಿಲ್ಲ–ಅದನ್ನು ನನಗೆ

ಬಿಟ್ಟುಬಿಡು" ಎಂದೂ ಹೇಳಿದಂತೆ ಸನ್ನೆಮಾಡಿದನು. ಆಮೇಲೆ ಅವನು ತಲೆತಗ್ಗಿಸಿ ಗೋಡೆಯ ಅಂಚಿನಲ್ಲೇ ಮೆಲ್ಲಗೆ ಹೆಜ್ಜೆಯಿಡುತ್ತ ಸಾಗಿದನು; ಹಾಗೆ ನಡೆದಾಗ ಅವನ ಭುಜಗಳು ಮಾತ್ರ ಮುಂದಿಯ ತಲೆಯ ಮೇಲೆ ಕಾಣಿಸುತ್ತಿದ್ದವು. ಅವನು ಮೆಲ್ಲಗೆ ಜರುಗುತ್ತಿದ್ದಂತೆ, ಜನಗಳ ಗದ್ದಲವೂ ದಾಂಧಲೆಯೂ ಹೆಚ್ಚು ಹೆಚ್ಚು ಅಸಾಧ್ಯವಾಯಿತು. ಕೋಣೆಯ ಎರಡು ಪಕ್ಕಗಳನ್ನು ದಾಟಿದ ಮೇಲೆ ಅವನು ಅದೃಶ್ಯನಾದನು. ಒಂದೆರಡು ಸೆಕೆಂಡುಗಳಲ್ಲಿ ಭಾರೀ ಸ್ಫೋಟವೊಂದು ಕೇಳಿಸಿತು, ನಾಯಿ ಒಂದೆರಡು ಸಲ ವಿಕಾರವಾಗಿ ಬೊಗಳಿ ತೀರಿಕೊಂಡಿತು. ಮತ್ತೆ ಎಲ್ಲವೂ ಪರಮ ಮೌನದಲ್ಲಿ ಮುಳುಗಿತು. ಪುರೋಹಿತ ತನ್ನ ಗಂಭೀರ ಭಾಷಣವನ್ನು ತಾನು ಎಲ್ಲಿ ಬಿಟ್ಟಿದ್ದನೋ ಅಲ್ಲಿಂದ ಎತ್ತಿಕೊಂಡು, ಮುಂಬರಿದನು. ಒಂದೆರಡು ನಿಮಿಷಗಳಲ್ಲಿ ಈ ಶವಸಂಸ್ಕಾರದ ಗುತ್ತಿಗೆದಾರನ ಬೆನ್ನೂ ಭುಜಗಳೂ ಗೋಡೆಯಂಚಿನಲ್ಲಿ ಮೆಲ್ಲನೆ ಜರುಗಿಬರುತ್ತಿರುವುದು ಕಂಡುಬಂತು. ಅವನು ಹಾಗೆಯೇ ಕೋಣೆಯ ಮೂರು ಪಕ್ಕಗಳನ್ನು ದಾಟಿದನು; ಆಮೇಲೆ ತಲೆಯೆತ್ತಿದನು, ತನ್ನ ಕೈಯಿಂದ ಬಾಯನ್ನು ಮರೆಮಾಡಿಕೊಂಡು ಪುರೋಹಿತನ ಕಡೆಗೆ ತನ್ನ ಕೊರಳನ್ನು ಚಾಚಿ ಒಂದು ಬಗೆಯ ಒರಟಾದ ಪಿಸುಮಾತಿನಲ್ಲಿ "ಅವನ ಬಳಿ ಒಂದು ಇಲಿ ಇತ್ತು!" ಎಂದನು. ಬಳಿಕ ತಲೆತಗ್ಗಿಸಿ ಗೋಡೆಯಂಚಿನಲ್ಲಿ ಸರಿದು ತನ್ನ ಸ್ಥಳಕ್ಕೆ ಹಿಂದಿರುಗಿದನು. ಆದರಿಂದ ಜನರಿಗೆ ತುಂಬಾ ಸಮಾಧಾನವಾಗಿತ್ತೆಂಬುದನ್ನು ನೀವು ಕಾಣಬಹುದಾಗಿತ್ತು; ಅವರಿಗೆ ಏನಾಯಿತೆಂಬುದನ್ನು ತಿಳಿಯುವ ಕುತೂಹಲ ಸಹಜವಾಗಿತ್ತು. ಅಂಥ ಸಣ್ಣಪುಟ್ಟ ವಿಷಯಗಳಿಗೆ ಯಾವ ಬೆಲೆಯೂ ಇಲ್ಲದಿದ್ದರೂ, ಅಂಥ ಸಣ್ಣಪುಟ್ಟ ವಿಷಯಗಳೇ ಮನುಷ್ಯನಿಗೆ ಎಲ್ಲರ ಗೌರವವನ್ನೂ ಪ್ರೀತಿಯನ್ನೂ ಗಳಿಸಿಕೊಡುತ್ತವೆ. ಆ ಶವಸಂಸ್ಕಾರದ ಗುತ್ತಿಗೆದಾರನಿಗಿಂತಲೂ ಜನಪ್ರಿಯನಾದವನು ಆ ಊರಿನಲ್ಲೇ ಇರಲಿಲ್ಲ.

ಶವಸಂಸ್ಕಾರ ಪ್ರವಚನ ಬಹಳ ಚೆನ್ನಾಗಿತ್ತಾದರೂ ಬಲು ಉದ್ದವಾಗಿ ಆಯಾಸಕರವಾಗಿತ್ತು. ಬಳಿಕ ರಾಜ ತಲೆಹಾಕಿ ತನ್ನ ಯಥಾರೀತಿಯ ಅಬದ್ಧ ಪ್ರಲಾಪವೊಂದಿಷ್ಟನ್ನು ಒದರಿದನು. ಈ ಕೆಲಸ ಮುಗಿದ ಮೇಲೆ ಗುತ್ತಿಗೆದಾರನು ತನ್ನ ಮೊಳೆ ತಿರುಗಿಸುವ ಉಪಕರಣದೊಂದಿಗೆ ಶವದ ಪೆಟ್ಟಿಗೆಯ ಬಳಿಗೆ ಮೆಲ್ಲನೆ ನುಸುಳಿದನು. ನನಗಂತೂ ಆಗ ಮೈತುಂಬಾ ಬೆವರಿತು; ನಾನವನನ್ನು ಎವೆಯಿಕ್ಕದೆ ನೋಡುತ್ತಿದ್ದೆ. ಅವನು ಅದರೊಳಕ್ಕೆ ಕೈಹಾಕಲೇ ಇಲ್ಲ; ಬಲು ಮೃದುವಾಗಿ ಅದರ ಮುಚ್ಚಳವನ್ನು ಸರಿಪಡಿಸಿ ಬಲು ಬಿಗಿಯಾಗಿ ಮೊಳೆ ತಿರುಗಿಸಿದನು. ನಾನು ಮಾಡಿದ್ದ ಕೆಲಸ ಹೀಗಾಯಿತು; ಹಣ ಅದರೊಳಗಿತ್ತೋ ಇರಲಿಲ್ಲವೋ ನನಗೆ ತಿಳಿಯದೆಹೋಯಿತು. ಒಂದು ವೇಳೆ ಯಾರಾದರು ಆ ಥೈಲಿಯನ್ನು ಎಗರಿಸಿಕೊಂಡು ಹೋಗಿದ್ದರೆ?–ಎಂದುಕೊಂಡೆ ನಾನು. ಇನ್ನು ನಾನು ಮೇರಿ ಜೇನಳಿಗೆ ಪತ್ರ ಬರೆಯಬೇಕೋ ಬೇಡವೋ?–ನನಗೆ ತಿಳಿಯುವುದಾದರೂ ಹೇಗೆ? ಒಂದು ವೇಳೆ ಅವಳು ಹೂಳಿದ್ದ ಹೆಣವನ್ನು ಹೊರಗೆತೆಗೆಸಿದಳು

ಎನ್ನಿ, ಅದರಲ್ಲಿ ಏನೂ ಇರಲಿಲ್ಲ ಎನ್ನಿ, ಅವಳು ನನ್ನನ್ನು ಎಂಥವನೆಂದು ತಿಳಿದಾಳು? ಸರ್ವನಾಶವಾಯಿತು, ಎಂದು ಭಾವಿಸಿದೇ ನಾನು; ನನ್ನನ್ನು ಹಿಡಿದು ಜೈಲಿಗೆ ಹಾಕುತ್ತಾರೆ; ಆದ್ದರಿಂದ ನಾನು ತಲೆ ಮರೆಸಿಕೊಂಡು ಅಡಗಿಕೊಳ್ಳುವುದೇ ಮೇಲು, ಪತ್ರ ಬರೆಯುವ ಗೋಜಿಗೇ ಕೈಹಾಕಬಾರದು; ಮಾಡಿದ ಕೆಲಸವಷ್ಟೂ ಪೇಚಾಟಕ್ಕೆ; ಎಡೆಗೊಟ್ಟಿದೆ; ಅದನ್ನೇನೋ ತಿದ್ದಲು ಹೋಗಿ, ನಾನದನ್ನು ನೂರ್ಮಡಿ ಹೊಲಸು ಮಾಡಿದ್ದೇನೆ.ನಾನದರ ತಂಟೆಗೇ ಕೈಹಾಕದಿದ್ದರೆ ಚೆನ್ನಾಗಿತ್ತು ಎಂದುಕೊಂಡೆ; ಅದು ಹಾಳಾಗಿಹೋಗಲಿ ಎಂದುಬಿಡಬೇಕಾಗಿತ್ತು;

ಅವರು ಅವನನ್ನು ಹೂತರು; ನಾವೆಲ್ಲರೂ ಮನೆಗೆ ಹಿಂದಿರುಗಿದೆವು. ನಾನು ಮತ್ತೆ ಅಲ್ಲಿದ್ದವರ ಮುಖವನ್ನೇ ನೋಡುತ್ತಲಿದ್ದೆ ಅದರಿಂದ ತಪ್ಪಿಸಿಕೊಳ್ಳುವುದು ನನ್ನಿಂದಾಗಲಿಲ್ಲ, ನನಗೆ ಮನಶ್ಶಾಂತಿಯೇ ಇರಲಿಲ್ಲ. ಆದರೆ ಅದರಿಂದೇನೂ ಆಗಲಿಲ್ಲ; ಆ ಮುಖಗಳು ನನಗೇನನ್ನೂ ತಿಳಿಸದಹೋದವು. ಸಂಜೆಯಲ್ಲಿ ರಾಜ ನೆರೆಯವರೆಲ್ಲರಿಗೂ ಭೇಟಿಕೊಟ್ಟು ಎಲ್ಲರನ್ನೂ ಸಂತೋಷಗೊಳಿಸಿದನು; ಎಲ್ಲರೊಂದಿಗೆ ತುಂಬಾ ಸ್ನೇಹದಿಂದ ವರ್ತಿಸಿದನು ಇಂಗ್ಲೆಂಡಿನಲ್ಲಿರುವ ತನ್ನ ಸಂಸ್ಥೆ ತನ್ನ ಬಗೆಗೆ ಬಲು ತದಿಗುದಿಯಿಂದಿರುವುದರಿಂದ ತಾನು ಈ ಆಸ್ತಿ ಪಾಸ್ತಿಯನ್ನು ಕೂಡಲೇ ಇತ್ಯರ್ಥಗೊಳಿಸಿ ಹಿಂದಿರುಗಬೇಕಾಗಿದೆಯೆಂದೂ ಅವರಿಗೆ ಸೂಚನೆ ಕೊಟ್ಟನು. ತಾನು ತುಂಬಾ ಅವಸರಿಸುತ್ತಿರುವುದರಿಂದ ತನಗೆ ವ್ಯಥೆಯಾಗಿದೆ ಎಂದನು. ಎಲ್ಲರೂ ತಮಗೂ ವ್ಯಥೆಯಾಗಿದೆ ಎಂದರು. ಅವನು ಇನ್ನಷ್ಟು ದಿನ ಇಲ್ಲಿದ್ದರೆ ಚೆನ್ನಾಗಿತ್ತಾದರೂ, ಅದು ಸಾಧ್ಯವಿಲ್ಲದಿರುವುದನ್ನು ತಾವು ಅರಿತಿರುವುದಾಗಿ ಹೇಳಿದರು. ತಾನೂ, ವಿಲಿಯಮನೂ ತಮ್ಮೊಂದಿಗೆ ಆ ಹುಡುಗಿಯರನ್ನು ಕರೆದುಕೊಂಡು ಹೋಗುವುದಾಗಿ ಹೇಳಿದನು; ಅದರಿಂದ ಎಲ್ಲರಿಗೂ ಸಂತೋಷವಾಯಿತು. ಏಕೆಂದರೆ ಹಾಗೆ ಮಾಡುವುದರಿಂದ ಆ ಹುಡುಗಿಯರು ತಮ್ಮ ಬಂಧುಗಳೊಂದಿಗೆ ಉತ್ತಮ ಸ್ಥಿತಿಯಲ್ಲಿರುವುದು ಸಾಧ್ಯವಿತ್ತು. ಹುಡುಗಿಯರಿಗೂ ಅದರಿಂದ ಹರ್ಷವಾಯಿತು ಈ ಪ್ರಪಂಚದಲ್ಲಿ ತಮಗೆ ಒಂದಾದರೂ ತೊಂದರೆ ಇರಲೇಇಲ್ಲವೆನ್ನುವ ಮಟ್ಟಿಗೆ ಅವರು ನಲಿದಾಡಿದರು. ಅವನು ಬಯಸಿದಂತೆ ಆದಷ್ಟು ಬೇಗ ಆಸ್ತಿಪಾಸ್ತಿಗಳನ್ನು ಮಾರಿಬಿಡಬೇಕೆಂದೂ, ತಾನು ಹೊರಡಲು ಸಿದ್ಧರಾಗುವುದಾಗಿಯೂ ಅವರು ಹೇಳಿದರು. ಆ ಬಡಪಾಯಿಗಳಿಗೆ ಎಷ್ಟು ಸುಖಸಂತೋಷಗಳುಂಟಾದವೆಂದರೆ, ಅವರು ಎಷ್ಟರಮಟ್ಟಿಗೆ ಸುಳ್ಳನ್ನು ನಂಬಿ ಮೋಸ ಹೋದರೆಂಬುದನ್ನು ನೆನೆದು ನನಗೆ ಬಲು ಸಂಕಟವಾಯಿತು. ನಾನ ಈ ಮಧ್ಯೆ ಪ್ರವೇಶಿಸಲು ಯಾವ ನಿರಪಾಯದ ಮಾರ್ಗವೂ ನನಗೆ ಕಂಡುಬರಲಿಲ್ಲ, ಅವರ ಪಲ್ಲವಿಯ ಶ್ರುತಿಯನು ಬದಲಿಸುವುದು ನನ್ನಿಂದಾಗದೆಂದು ತೋರಿತು.

ಬಳಿಕ ರಾಜ ತತ್‌ಕ್ಷಣವೇ ಆ ಮನೆಯನ್ನೂ, ನೀಗ್ರೋಗಳನ್ನೂ ಸಮಸ್ತ ಆಸ್ತಿಪಾಸ್ತಿಗಳನ್ನೂ ಹರಾಜಿಗಿಟ್ಟಿರುವುದಾಗಿ ಸಾರದೆ ಹೋಗಿದ್ದರೆ ಕೇಳಿ–ಆದೂ ಅಂತ್ಯಕ್ರಿಯೆ

ನಡೆದ ಎರಡೇ ದಿನಗಳೊಳಗೆ ಈ ಮಾರಾಟ; ಆದರೆ ಯಾರಾದರೂ ಇಷ್ಟಪಟ್ಟಲ್ಲಿ ಅವಕ್ಕೆ ಮುಂಚಿತವಾಗಿ ನೇರವಾಗಿ ವ್ಯವಹರಿಸಿ ಅವುಗಳನ್ನು ಕೊಳ್ಳಬಹುದಾಗಿತ್ತು.

ಅಂತ್ಯಕ್ರಿಯೆ ನಡೆದ ಮಾರನೆಯ ದಿನ ಮಧ್ಯಾಹ್ನದ ಹೊತ್ತಿಗೆ ಆ ಹುಡುಗಿಯರ ಸಂತೋಷಕ್ಕೆ ಮೊದಲನೆಯ ಪೆಟ್ಟು ಬಿತ್ತು. ಕೆಲವರು ನೀಗ್ರೋ ವರ್ತಕರು ಅಲ್ಲಿಗೆ ಬಂದರು; ಮನೆಯಲ್ಲಿ ಜೀತಕ್ಕಿದ್ದ ನೀಗ್ರೋಗಳನ್ನು ರಾಜ ಆ ವ್ಯಾಪಾರಿಗಳಿಗೆ ನ್ಯಾಯವಾದ ಬೆಲೆಗೆ, ಮೂರುದಿನಗಳಲ್ಲಿ ಹಣಬರುವ ಹುಂಡಿಗೆ ಮಾರಿಬಿಟ್ಟನು, ಅವರು ಹೊರಟುಹೊದರು; ತಾಯಿ ನದಿಯ ಮೇಗಣ ಆರ್ಲಿಯನ್ಸಿಗೂ, ಅವಳ ಇಬ್ಬರು ಮಕ್ಕಳು ನದಿ ಕೆಳಗಣ ಮೆಂಫಿಸಿಗೂ ಹೊರಟುಹೋದರು. ಅಗಲಿಕೆಯ ವೇಳೆಯಲ್ಲಿ ಆ ಬಡಪಾಯಿ ಹುಡುಗಿಯರೂ ನೀಗ್ರೋಗಳೂ ತುಂಬಾ ಸಂಕಟ ಪಟ್ಟರೆಂದು ನನಗೆ ತಿಳಿಯಿತು; ಅವರು ಒಟ್ಟುಗೂಡಿ ಅತ್ತು ಕೊರಗಿದರು. ನನಗೆ ಅದನ್ನು ನೋಡಿ ತುಂಬಾ ವ್ಯಸನವಾಯಿತು. ಒಂದು ಸಂಸಾರಕ್ಕೆ ಸೇರಿದವರನ್ನು ಹೀಗೆ ಬೇರ್ಪಡಿಸಿ ಊರಾಚೆಗೆ ಮಾರಿಬಿಡುವುದನ್ನು ತಾವು ನೋಡಬೇಕಾಗುವುದೆಂದು ತಾವು ಕನಸುಮನಸಿನಲ್ಲಿಯೂ ತಿಳಿದಿರಲಿಲ್ಲವೆಂದು ಆ ಹುಡುಗಿಯರು ಹೇಳಿದರು. ಸಂಕಟಕ್ಕೆ ಸಿಕ್ಕಿಕೊಂಡ ಆ ಬಡಪಾಯಿ ಹುಡುಗಿಯರ ಮತ್ತು ಒಬ್ಬರ ಕೊರಳಿಗೆ ಇನ್ನೊಬ್ಬರು ಜೋತುಬಿದ್ದು ಅಳುತ್ತಿದ್ದ ಆ ನೀಗ್ರೋಗಳ ದೃಶ್ಯವನ್ನು ನಾನೆಂದಿಗೂ ಮರೆಯಲಾರೆ. ನನಗದನ್ನು ಸಹಿಸುವುದು ಅಸಾಧ್ಯವೆನಿಸಿತು; ಆ ಮಾರಾಟ ಊರ್ಜಿತವಾಗುವುದಿಲ್ಲ ವೆಂಬುದೂ, ಒಂದೆರಡು ವಾರಗಳಲ್ಲಿ ಆ ನೀಗ್ರೋಗಳು ಸ್ವಸ್ಥಳಕ್ಕೆ ಹಿಂದಿರುಗುವರೆಂದೂ ನನಗೆ ತಿಳಿಯದೆ ಹೋಗಿದ್ದರೆ, ನಾನು ಹಾರಿ ಹೋಗಿ ನಮ್ಮ ತಂಡದವರ ಮೇಲೆ ತಪ್ಪುಹೊರಿಸುತ್ತಿದ್ದೆ.

ಈ ಘಟನೆ ಊರೊಳಗೆ ದೊಡ್ಡದಾಗಿ ಗುಲ್ಲೆಬ್ಬಿಸಿತು; ತಾಯಿ ಮಕ್ಕಳನ್ನು ಹೀಗೆ ಪ್ರತ್ಯೇಕಿಸುವುದು ಅಯೋಗ್ಯರು ಮಾಡುವ ಕೆಲಸವೆಂದು ಅಲ್ಲಿಗೆ ರಹಸ್ಯವಾಗಿ ಬಂದಿದ್ದ ಹಲವರು ಹೇಳಿದರು. ಅದರಿಂದ ಈ ಮೋಸಗಾರರ ಪ್ರತಿಷ್ಠೆಗೆ ಸ್ವಲ್ಪ ಕುಂದು ತಟ್ಟಿತು; ಡ್ಯೂಕ್ ಏನು ಹೇಳಿದರೂ ಏನು ಮಾಡಿದರೂ ಆ ಮುದಿ ಮೂರ್ಖ ತನ್ನ ದಾರಿಯೇ ತನಗೆ ಎಂದು ಮುಂಬರಿದನು. ಡ್ಯೂಕಿಗೆ ಇದರಿಂದ ತುಂಬಾ ವ್ಯಸನ ವಾಯಿತು ಎಂದು ನಿಮಗೆ ಹೇಳಬೇಕಾಗಿಲ್ಲ.

ಮರುದಿನವೇ ಹರಾಜು ನಡೆಯುವ ದಿನ. ಬೆಳಗಿನ ಸುಮಾರು ಹೊತ್ತಿನ ಮೇಲೆ ರಾಜನೂ ಡೂಕನೂ ನನ್ನ ಗೂಡಿಗೆ ಬಂದು, ಮಗಿದ್ದ ನನನ್ನು ಎಬ್ಬಿಸಿದರು. ಅವರ ನೋಟವೇ ನನಗೆ ಅಪಾಯ ಕಾದಿದೆ ಎಂದು ಸಾರುತ್ತಿತ್ತು. ರಾಜ ಕೇಳಿದ :

"ಮೊನ್ನೆಯ ರಾತ್ರಿ ನೀನು ನನ್ನ ಕೋಣೆಗೆ ಬಂದಿದ್ದೆಯೊ" ?

"ಇಲ್ಲ, ಮಹಾಪ್ರಭು "

"ನಿನ್ನಾಣೆಗೂ, ಈಗ-ಸುಳ್ಳು ಕೂಡದು."

"ನನ್ನಾಣೆಗೂ, ಮಹಾಪ್ರಭು, ನಾನು ತಮಗೆ ಸತ್ಯವನ್ನೇ ಹೇಳುತ್ತಿದ್ದೇನೆ. ಮಿಸ್ ಮೇರಿ ಜೇನಳು ತಮ್ಮನ್ನೂ ಡ್ಯೂಕನ್ನೂ ಕರೆದುಕೊಂಡು ಹೋಗಿ ತಮ್ಮ ಕೊಠಡಿಗೆ ಬಿಟ್ಟ ಗಳಿಗೆಯಿಂದಲೂ ನಾನು ಅತ್ತ ಕಡೆಗೇ ಬಂದಿಲ್ಲ."

ಡ್ಯೂಕ್ ಕೇಳಿದ :

"ಇನ್ನೂ ಯಾರಾದರೂ ಅಲ್ಲಿಗೆ ಹೋದದ್ದನ್ನು ನೀನು ಕಂಡೆಯಾ ?"

"ಇಲ್ಲ, ಮಹಾಸ್ವಾಮಿ; ನನಗೆ ನೆನಪಿರುವ ಮಟ್ಟಿಗೆ, ಇಲ್ಲವೆಂದೇ ನನ್ನ ನಂಬಿಕೆ"

ಸ್ವಲ್ಪ ಹಾಗೆಯೇ ಯೋಚಿಸಿ ಹೇಳು."

ನಾನು ಸ್ವಲ್ಪ ಹಾಗೆಯೇ ಯೋಚಿಸಿದೆ : ನನಗೊಂದು ಉಪಾಯ ಹೊಳೆಯಿತು :

"ಹೌದು ; ನೀಗ್ರೋಗಳು ಅಲ್ಲಿಗೆ ಹಲವಾರು ಬಾರಿ ಹೋದದನ್ನು ನಾನು ಕಂಡೆ".

ಇಬ್ಬರೂ ಕೊಂಚ ದಿಗ್ಗನೆ ಎಗರಿದರು ; ಮೊದಲು ತಾವು ಹೀಗಾಗುವುದೆಂದು ನಿರೀಕ್ಷಿಸದೆ ಹೋದುದಾಗಿಯೂ, ಆಮೇಲೆ ತಾವು ನಿರೀಕ್ಷಿಸಿದ್ದಂತೆಯೇ ಅದು ಆಯಿತೆಂದೂ ಅಭಿನಯಿಸಿದರು. ಆಗ ಡ್ಯೂಕ್ ಕೇಳಿದ :

"ಏನು, ಎಲ್ಲಾ ನೀಗ್ರೋಗಳೂ ?"

"ಇಲ್ಲ-ಪ್ರಾಯಶಃ ಎಲ್ಲರೂ ಒಮ್ಮೆಲೆ ಅಲ್ಲ-ಹಾಗೆಂದರೆ, ಒಬ್ಬೊಬ್ಬನಾಗಿ ಬಂದರೇ ಹೊರತು ಎಲ್ಲರೂ ಒಟ್ಟಿಗೆ ಹೊರಗೆ ಬರಲಿಲ್ಲವೆಂಬುದನ್ನು ನಾನು ಕಂಡಂತೆ ನೆನಪಿದೆ."

"ಏನಪ್ಪಾ ! ಅದು ಎಂದು, ಎಷ್ಟು ಹೊತ್ತಿನಲ್ಲಿ ?"

"ಅದೆ ?-ನಾವು ಶವಸಂಸ್ಕಾರವನ್ನಿಟ್ಟುಕೊಂಡಿದ್ದ ದಿನ, ಬೆಳಗಾಗ. ಬಲು ಮುಂಚೆಯೂ ಅಲ್ಲ, ಏಕೆಂದರೆ ನಾನು ಇನ್ನೂ ನಿದ್ದೆ ಮಾಡುತ್ತಿದ್ದೆ. ನಾನು ಎದ್ದವನೇ ಏಣಿಯಿಂದ ಕೆಳಗೆ ಇಳಿಯುತ್ತಿದ್ದೆ. ಆಗ ನಾನು ಅವರನ್ನು ಕಂಡೆ."

"ಸರಿ ಹೇಳು, ಹೇಳು:- ಅವರು ಏನು ಮಾಡಿದರು ? ಅವರು ಹೇಗೆ ನಟಿಸಿದರು ?"

"ಅವರು ಏನೂ ಮಾಡಲಿಲ್ಲ. ನಾನು ಕಂಡ ಮಟ್ಟಿಗೆ ಅವರು ಎಂತೂ ನಟಿಸಲಿಲ್ಲ. ಅವರು ಮೆಟ್ಟಂಗಾಲಿಟ್ಟುಕೊಂಡು ಹೊರಟುಹೋದರು ; ತಾವು ಎದ್ದಿರಬಹುದೆಂದು ತಿಳಿದು ಅವರು ಮಹಾಪ್ರಭುಗಳ ಕೊಠಡಿಯನ್ನು ಗುಡಿಸಿ ನೇರ್ಪಡಿಸಲು ಒಳಗೆಹೋದು ದನ್ನೇನೋ ನಾನು ಕಂಡೆ ; ತಾವು ಇನ್ನೂ ಎದ್ದಿರಲಿಲ್ಲವೇನೋ, ಆದರಿಂದ ಅವರು ತಮಗೆ ಅಷ್ಟರೊಳಗೇ ಎಚ್ಚರವಾಗದಿದ್ದರೆ, ನಿದ್ರಾಭಂಗ ಮಾಡಿ ತೊಂದರೆಗೆ ಸಿಕ್ಕಿಕೊಳ್ಳ ಬಾರದೆಂದು ಯೋಚಿಸಿ ಈಚೆಗೆ ಬಂದುಬಿಡಲು ತವಕಿಸುತ್ತಿದ್ದರು."

"ಅಯ್ಯೋ ದೇವರೆ, ಇದು ಭಾರೀ ಹೊಡೆತ!" ಎಂದನು ರಾಜ; ಇಬ್ಬರೂ ತುಂಬಾ ವ್ಯಸನಪಡುವಂತೆ, ತಮ್ಮ ತಪ್ಪಿಗೆ ತಾನೇ ಕೈಹಿಸುಕಿಕೊಳ್ಳುತ್ತಿರುವಂತೆ, ಕಂಡು ಬಂದರು. ಒಂದು ಕ್ಷಣಕಾಲ ಅವರು ಅವಲಕ್ಷಣವಾಗಿ ತಲೆಕೆರೆದುಕೊಳ್ಳುತ್ತ ಅಲ್ಲೇ ನಿಂತರು. ಡ್ಯೂಕ್, ಬಂದು ಬಗೆಯಾಗಿ ಕೊಂಚ ಲೊಚಗುಟ್ಟುತ್ತಾ ಹೇಳಿದನು:

"ಆ ನೀಗ್ರೋಗಳು ಎಷ್ಟು ನುಣುಪಾಗಿ ತಮ್ಮ ಕೈ ಚಳಕ ತೋರಿಸಿದರೆನ್ನುವುದು ಪರಮಾಶ್ಚರ್ಯ. ಈ ಪ್ರಾಂತದಿಂದ ತಾವು ಹೊರಟುಹೋಗುತ್ತಿರುವುದಕ್ಕಾಗಿ ವ್ಯಸನವಾಗುತ್ತಿದೆಯೆಂದು ನಟಿಸಿದರು! ಅವರಿಗೆ ವ್ಯಸನವಾಗಿರಲೇಬೇಕೆಂದು ನಾನಂದುಕೊಂಡೆ, ನೀನೂ ಹಾಗೆಯೇ ತಿಳಿದೆ, ಎಲ್ಲರೂ ನಂಬಿದ್ದರು. ನೀಗ್ರೋ ಎನಿಸಿಕೊಂಡವನಿಗೆ ನಟನೆಯ ಕುಶಲತೆ ಇರುವುದಿಲ್ಲವೆಂದು ನನಗೆ ಹೇಳುವುದು ಬೇಡ. ಏಕೆ, ಅವರು ಈ ಕೆಲಸ ಮಾಡಿರುವ ರೀತಿಯನ್ನು ನೋಡಿದರೆ, ಅದು ಯಾರನ್ನಾದರೂ ಮೋಸಗೊಳಿಸುತ್ತಿತ್ತು. ನನ್ನ ಅಭಿಪ್ರಾಯದಲ್ಲಿ ಅದರಲ್ಲೊಂದು ಅದೃಷ್ಟವೇ ಇದೆ. ಸಾಕಷ್ಟು ಹಣವೂ ಒಂದು ನಾಟಕಮಂದಿರವೂ ನನ್ನ ಕೈಲಿದ್ದರೆ, ನನಗೆ ಅದಕ್ಕಿಂತ ಉತ್ತಮವಾದ ಪ್ರಸಂಗವೇ ಬೇಕಾಗಿರಲಿಲ್ಲ--ಇಲ್ಲಿ ನಾವು ಆ ಕುಶಲತೆಯಷ್ಟನ್ನೂ ಪುಡಿಗಾಸಿಗೆ ಒಂದು ಹಾಡಿಗೆ, ಮಾರಿಕೊಂಡಿದ್ದೇವೆ. ಹೌದು, ನಾವಿನ್ನೂ ಆ ಹಾಡನ್ನು ಹಾಡಲು ಅರ್ಹರಾಗಿಲ್ಲ. ಅಯ್ಯೋ, ಆಹಾಡು—ಆ ಹುಂಡಿ ಎಲ್ಲಿದೆ?"

"ಬ್ಯಾಂಕಿನಲ್ಲಿದೆ, ವಸೂಲಿಗೆ ಹೋಗಿದೆ. ಅದು ಇನ್ನೆಲ್ಲಿರುತ್ತದೆ?"

"ಅದು ಸರಿಹೋಯಿತು, ನಮ್ಮ ಪುಣ್ಯಕ್ಕೆ."

ನಾನು ಅಂಜಿಕೆಯಿಂದಲೇ ಕೇಳಿದೆ:

"ಏನಾದರೂ ಕೈಕೊಟ್ಟಿತೆ ನಿಮಗೆ?"

ರಾಜ ಸರಕ್ಕನೆ ತಿರುಗಿ, ಹೊಡೆದಂತೆ ನುಡಿದ;

"ಅದು ನಿನಗೆ ಸಂಬಂಧಪಟ್ಟಿದ್ದಲ್ಲ! ನಿನ್ನ ತಲೆಯನ್ನು ನೆಟ್ಟಗೆ ಇಟ್ಟುಕೋ, ನಿನ್ನ ಕೆಲಸವೇನೋ ಅದನ್ನು ನೋಡಿಕೋ—ಅಂಥುದೇನಾದರೂ ನಿನಗಿದ್ದಲ್ಲಿ, ನೀನು ಈ ಊರಲ್ಲಿರುವತನಕ ಅದನ್ನು ಮರೆಯಕೂಡದು ತಿಳಿಯಿತೆ?" ಬಳಿಕ ಡ್ಯೂಕಿನ ಕಡೆಗೆ ತಿರುಗಿ ಹೇಳಿದ, "ನಾವು ಅದನ್ನು ಸುಮ್ಮನೆ ನುಂಗಿಕೊಂಡು ಇದ್ದುಬಿಡಬೇಕು, ಅದರ ಸುದ್ದಿ ಎತ್ತಲೆ ಬಾರದು. ಬಾಯಿ-ಬೀಗವೆನ್ನುತ್ತಾರಲ್ಲ, ಅದೇ ನಮಗೆ ಒಪ್ಪುವಮಾತು."

ಅವರು ಏಣಿಯಿಳಿದು ಹೊರಡಲಿದ್ದಾಗ ಡ್ಯೂಕ್ ಮತ್ತೆ ಲೊಚಗುಟ್ಟಿ ಹೇಳಿದ:
"ಕ್ಷಿಪ್ರವಾದ ಮಾರಾಟ ಅಲ್ಪ ಲಾಭ!–ಇದು ಒಳ್ಳೆಯ ವ್ಯಾಪಾರ–ಹೌದು."

ರಾಜ ಅವನ ಕಡೆಗೆ ಗುರುಗುಟ್ಟಿ ನೋಡಿ ಹೇಳಿದ:

"ಅಷ್ಟು ಕ್ಷಿಪ್ರವಾಗಿ ಅವರನ್ನು ಮಾರಿ ಉತ್ತಮ ಲಾಭವನ್ನು ಗಳಿಸುವುದಕ್ಕೇ ನಾನು ಹೊರಟಿದ್ದು. ಪರಿಣಾಮದಲ್ಲಿ ಲಾಭ ಸೊನ್ನೆಯಾಯಿತು, ಬಲು ತೆಳ್ಳಗಾಯಿತು ಕೈಗೆ ಸಿಕ್ಕಲೇ ಇಲ್ಲ. ಇದಕ್ಕೆಲ್ಲ ಕಾರಣ ನನ್ನ ತಪ್ಪು ನಿನ್ನ ತಪ್ಪಿಗಿಂತ ಹೆಚ್ಚೇನಲ್ಲವಷ್ಟೆ?"

"ಹಾಗಾದರೆ ಅವರಿನ್ನೂ ಈ ಮನೆಯಲ್ಲೇ ಇರುವವರು ; ನನ್ನ ಸಲಹೆಗೆ ಕಿವಿಗೊಡುವುದಾದಲ್ಲಿ ನಾವಂತೂ ಇಲ್ಲಿರುವುದಿಲ್ಲ."

ರಾಜ ಕ್ಷೇಮವೆನಿಸುವಷ್ಟು ದೂರ ಹಿಂದೆ ಸರಿದು ಸುತ್ತಲೂ ನೋಡಿ ನನ್ನ ಮೇಲೆ ತಿರುಗಿಬಿದ್ದನು. ತನ್ನ ಕೊಠಡಿಯಿಂದ ಹೊರಗೆ ಬರುತ್ತಿದ್ದ ಆ ನಿಗ್ರೋಗಳು ನಟಿಸಿದ ರೀತಿಯನ್ನು ನಾನು ನೋಡಿದೆನಾದರೂ ತನ್ನ ಬಳಿಗೆ ಬಂದು ಅದನ್ನು ತಿಳಿಸದಿದ್ದುದಕ್ಕಾಗಿ ನನಗೆ ಬಲವಾಗಿ ಒಡೆತಗಳನ್ನು ಬಿಗಿದು, ಅಲ್ಲಿ ಏನು ನಡೆಯುತ್ತಿದೆ ಎಂಬುದು ಎಂಥ ಹೆಡ್ಡನಿಗೆ ಕೂಡ ಗೊತ್ತಾಗುತ್ತಿತ್ತು, ಎಂದನು. ಆಮೇಲೆ ಅವನು ಹೆಜ್ಜೆ ಕುಟ್ಟುತ್ತಾ ತನ್ನನ್ನು ಶಪಿಸಿಕೊಂಡನು. ಇಷ್ಟಕ್ಕೆಲ್ಲಾ ಕಾರಣ ತಾನು ಬೇಗ ನಿದ್ದೆಹೋದದ್ದು ಮತ್ತು ಆದಿನ ಬೆಳಗಾಗ ತನ್ನ ಸಹಜ ವಿಶ್ರಾಂತಿಯನ್ನು ಪಡೆಯದೆ ಹೋದದ್ದು. ಇನ್ನೊಂದೇ ಆಗಲಿ ತಾನು ಹಾಗೆ ಮಾಡಿದಲ್ಲಿ ತನ್ನನ್ನು ಏನುಬೇಕಾದರೂ ಅನ್ನಿರಿ ಎಂದನು. ಬಳಿಕ ಇಬ್ಬರೂ ಹಲ್ಲುಮಸೆಯುತ್ತ ಹೊರಟುಹೋದರು. ಹೀಗೆ ನಾನು ಅದೆಲ್ಲವನ್ನೂ ಹೇಗೋ ಮಾಡಿ ಆ ನೀಗ್ರೋಗಳ ತಲೆಗೆ ಕಟ್ಟಿದೆನಾದರೂ, ಅವರಿಗೆ ಅದರಿಂದ ಯಾವ ಅಪಾಯವೂ ತಟ್ಟಲಿಲ್ಲವಲ್ಲ ಎಂದು ನಾನು ತುಂಬಾ ಸಂತೋಷಪಟ್ಟೆ.

## ೨೮

ಆಮೇಲಾಮೇಲೆ ನಿದ್ದೆ ಮುಗಿದು ಏಳುವ ಹೊತ್ತಾಯಿತು. ನಾನು ಏಣಿಯಿಳಿದು ಕೆಳಗೆಬಂದೆ. ನಾನು ಆ ಹುಡುಗಿಯರ ಕೊಠಡಿಯ ಬಳಿಗೆ ಬಂದಾಗ ಬಾಗಿಲು ತೆರೆದಿತ್ತು, ಮೇರಿ ಜೇನ್ ತೆರೆದಿದ್ದ ತನ್ನ ಹಳೆಯ ಪೆಟ್ಟಿಗೆಯ ಹತ್ತಿರ ಕುಳಿತಿದ್ದಳು, ತನಗೆ ಬೇಕಾದ ಸಾಮಾನುಗಳನ್ನು ತಂದು ಅದರಲ್ಲಿ ಅಣಿಯಾಗಿ ಜೋಡಿಸುತ್ತಿದ್ದಳು–ಇಂಗ್ಲೆಂಡಿಗೆ ಹೋಗುವುದಕ್ಕೆ ಸಿದ್ಧವಾಗುತ್ತಿದ್ದಳು, ಆದರೆ ಈಗೇಕೋ ಅವಳು ತನ್ನ ತೊಡೆಯ ಮೇಲೆ ಮಡಿಸಿದ ನಿಲುವಂಗಿಯನ್ನು ಇಟ್ಟುಕೊಂಡು ಕೈಗಳಿಂದ ಮುಖ ಮುಚ್ಚಿಕೊಂಡು ಅಳುತ್ತಿದ್ದಳು, ನನಗದನ್ನು ನೋಡುವುದೇ ಬಲು ಕಷ್ಟವಾಯಿತು; ಯಾರಿಗಾದರೂ ಅಷ್ಟೇ. ನಾನು ಒಳಗೆ ಹೋಗಿ ಕೇಳಿದೆ:

"ಮಿಸ್ ಮೇರಿ ಜೇನ್, ಕಷ್ಟದಲ್ಲಿರುವರವನ್ನು ನೋಡಿ ನೀನು ಸಹಿಸಲಾರೆ; ನಾನೂ ಸಹಿಸಲಾರೆ–ಯಾವಾಗಲೂ ಹಾಗೆಯೇ ಅದರ ವಿಷಯ ಹೇಳುವೆಯ ?"

ಅವಳು ಹೇಳಿದಳು. ಅದು ನಾನು ನಿರೀಕ್ಷಿಸಿದ್ದಂತೆ-ನೀಗ್ರೋಗಳ ವಿಷಯವೇ ಆಗಿತ್ತು, ನಾನು ಇಂಗ್ಲೆಂಡಿಗೆ ತೆರಳಲು ಕೈಗೊಳ್ಳಲಿದ್ದ ಸುಂದರ ಪ್ರವಾಸ ಬಹುಮಟ್ಟಿಗೆ ಕೆಟ್ಟಿತೆಂದಳು;ತಾಯಿ ಮಕ್ಕಳು ಇನ್ನೆಂದಿಗೂ ಒಬ್ಬರ ಮುಖವನ್ನು ಇನ್ನೊಬ್ಬರು ನೋಡದಂತಾಗಿರುವುದನ್ನು ತಿಳಿದಮೇಲೆ ತಾನು ಇಂಗ್ಲೆಂಡಿಗೆ ಹೋಗಿ ಅಲ್ಲಿ ಸುಖವಾಗಿರುವುದು ಹೇಗೆನ್ನುವುದೇ ತನಗೆ ತಿಳಿಯದೆಂದಳು—ಬಳಿಕ ಗೊಳೋ ಎಂದು ಎಂದಿಗಿಂತ ಹೆಚ್ಚಾಗಿ ಅತ್ತುಬಿಟ್ಟಳು ; ತನ್ನ ಕೈಗಳನ್ನು ಮೇಲೆತ್ತಿದ್ದಳು; ಅವಳು ಹೇಳಿದಳು,

"ಓ ಆಪ್ತಮಿತ್ರನೆ, ಅವರು ಇನ್ನೆಂದಿಗೂ ಪರಸ್ಪರ ಮುಖ ದರ್ಶನಮಾಡುವುದು ಸಾಧ್ಯವೇ ಇಲ್ಲವೆಂಬುದನ್ನು ನೆನೆಯುವುದೂ ದುಃಖಕರವೇ!"

"ಆದರೆ ಮತ್ತೆ ಕೂಗಿಕೊಳ್ಳುತ್ತಾರೆ-ಇನ್ನೆರಡುವಾರದೊಳಗೆ-ನನಗದು ಗೊತ್ತು" ಎಂದೆ ನಾನು.

ನಾನು ಯೋಚಿಸುವ ಮುನ್ನವೇ ಅದು ಬಯಲಾಗಿ ಹೋಯಿತಲ್ಲ! ನಾನು ಕದಲುವ ಮುನ್ನವೇ ಅವಳು ತನ್ನ ತೋಳುಗಳನ್ನು ನನ್ನ ಕೊರಳಿನ ಸುತ್ತ ಬೀಸಿ, ಅದನ್ನು ಮತ್ತೆ ಹೇಳು, ಅದನ್ನು ಮತ್ತೆ ಹೇಳು, ಅದನ್ನು ಮತ್ತೆ ಹೇಳು ಎಂದು ನನ್ನನ್ನು ಕೇಳಿಕೊಂಡಳು.

ನಾನು ಬಲು ಅನಿರೀಕ್ಷಿತವಾಗಿ ತುಂಬಾ ಮಾತಾಡಿದೆ ಎನ್ನುವುದೂ ನಾವಿಬ್ಬರೇ ಮರೆಯಲ್ಲಿರುವುದೂ ನನಗೆ ತಿಳಿಯಿತು. ಒಂದು ನಿಮಿಷದವಟ್ಟಿಗೆ ಆಲೋಚಿಸಲು ಅವಕಾಶ ಕೊಡು, ನಾನು ಅವಳನ್ನು ಕೇಳಿಕೊಂಡೆ. ಎಳ್ಳಷ್ಟೂ ತಾಳ್ಮೆಯಿಲ್ಲದ, ಉದ್ರಿಕ್ತಳಾದ ಆ ಚೆಲುವೆ ನನ್ನೆದುರಿಗೆ ಕುಳಿತಿದ್ದಳು. ಹಲ್ಲನ್ನು ಕೀಳಿಸಿಕೊಂಡ ಮನುಷ್ಯನಂತೆ, ಒಂದು ವಿಧದಲ್ಲಿ ಹರ್ಷಗೊಂಡು ಆರಾಮವಾಗಿರುವಂತೆ ಕಂಡುಬಂದಳು. ನಾನು ಆ ವಿಷಯವನ್ನೇ ಆಲೋಚಿಸತೊಡಗಿದ್ದೆ. ನನಗೆ ಅದರ ಅನುಭವವಿಲ್ಲದಿದ್ದರೂ, ಖಂಡಿತವಾಗಿ ಹೇಳಲಾರೆನಾದರೂ, ನಾನು ಮನಸ್ಸಿನಲ್ಲೇ ಅಂದುಕೊಂಡೆ; ಯಾವ ಪ್ರಮಾಣಿಕ ಮನುಷ್ಯನೇ ಆಗಲಿ ಇಂಥಾ ಇಕ್ಕಟ್ಟಿಗೆ ಸಿಕ್ಕಿದಾಗ ಸತ್ಯವನ್ನು ನುಡಿಯುವುದಾದರೆ ಅನೇಕ ಅಪಾಯಗಳಿಗೆ ಸಿಕ್ಕಿಕೊಳ್ಳಬೇಕಾಗುತ್ತದೆ. ನನಗೇನೋ ಹಾಗೆ ತೋರುತ್ತದೆ. ಆದರೆ, ನನ್ನ ಪುಣ್ಯಕ್ಕೆ, ಈ ಸಂದರ್ಭದಲ್ಲಿ ಸುಳ್ಳಿಗಿಂತಲೂ ಸತ್ಯವೇ ಒಳ್ಳೆಯದೆಂದು ನನಗೆ ತೋರಿಬರದಿದ್ದರೆ, ಕೇಳಿ! ನಾನದನ್ನು ನನ್ನ ಮನಸ್ಸಿನಲ್ಲೇ ಇಟ್ಟುಕೊಂಡಿರಬೇಕು; ಯಾವಾಗಲಾದರೂ ಅದನ್ನು ಪುನರಾಲೋಸಬೇಕು. ಏಕೆಂದರೆ ನನಗದು ಅಷ್ಟು ವಿಚಿತ್ರವಾಗಿ ಕ್ರಮಹೀನವಾಗಿ ತೋರಿತು, ನಾನಂಥಾದ್ದನ್ನು ಎಂದೂ ನೋಡಿಲ್ಲ, ಕಡೆಗೆ, ಒಂದುಸಲ ಪರೀಕ್ಷಿಸಿಯೇಬಿಡೋಣ ಎಂದುಕೊಂಡೆ. ನಾನೀಸಲ ನೇರವಾಗಿ ಸತ್ಯವನ್ನೇ ಹೇಳಿಬಿಡುತ್ತೇನೆ, ಸಿಡಿಮದ್ದಿನ ಮೂಟೆಯಮೇಲೆ ಕುಳಿತು ಎಲ್ಲಿಗೆ ಹೋಗುತ್ತೇನೋ ನೋಡೋಣ ಎಂದು ಅದಕ್ಕೆ ಬೆಂಕಿ ತೋರಿಸಿದಂತಾದರೂ ಸರಿಯೆ. ಬಳಿಕ ನಾನು ಹೇಳಿದೆ:

"ಮಿಸ್ ಮೇರಿಜೇನ್, ನೀನು ಹೋಗಿ ಮೂರುನಾಲ್ಕು ದಿವಸ ತಂಗಬಹುದಾದು ಸ್ಥಳ ಯಾವುದಾದರೊಂದು ಈ ಊರಿನ ಸಮೀಪದಲ್ಲಿದೆಯೇ ?"

"ಹೌದು ಇದೆ; ಮಿ. ಲೋತ್ರಾಪ್ ಅವರ ಮನೆ ಇದೆ. ಏಕೆ ?"

"ಏಕಾದರೂ ಆಗಲಿ, ಅದನ್ನು ನೀನು ಯೋಚಿಸಬೇಕಾದಿಲ್ಲ. ಒಂದು ವೇಳೆ ನಾನು ನಿನಗೆ-ಇನ್ನೆರಡು ವಾರದೊಳಗಾಗಿ-ಇಲ್ಲೇ ಈ ಮನೆಯಲ್ಲೇ ಆ ನೀಗ್ರೋಗಳು ಪರಸ್ಪರ ಭೇಟಿಯಾಗುವ ವಿಚಾರ ನನಗೆ ಗೊತ್ತಾದುದು ಹೇಗೆಂಬುದನ್ನು ತಿಳಿಸಿದರೆ, ಹಾಗೆ ತಿಳಿಯಿತೆಂಬುದನ್ನು ರುಜುವಾತು ಮಾಡಿಕೊಟ್ಟರೆ, ನೀನು ಮಿ. ಲೋತ್ರಾಪ್ ಅವರಲ್ಲಿಗೆ ಹೋಗಿ ಅವರ ಮನೆಯಲ್ಲಿ ನಾಲ್ಕು ದಿನಗಳ ಮಟ್ಟಿಗೆ ಇದ್ದು ಬಿಡುವೆಯಾ ? "

"ನಾಲ್ಕು ದಿನಗಳೇ ! " ಎಂದವಳು ; "ಒಂದು ವರುಷಕಾಲ ಅಲ್ಲಿರುತ್ತೇನೆ"

"ಸರಿ ಹಾಗಾದರೆ," ಎಂದೆ ನಾನು, "ನೀನು ಕೊಟ್ಟಿರುವ ಈ ಒಂದು ಮಾತಲ್ಲದೆ ನನಗೆ ಹೆಚ್ಚಿಗೇನೂ ಬೇಕಾಗಿಲ್ಲ. ಇನ್ನೊಬ್ಬ ಮನುಷ್ಯ ಬೈಬಲಿಗೆ ಮುತ್ತಿಟ್ಟು ಹೇಳುವ ಮಾತಿಗಿಂತಲೂ ನನಗೆ ಈ ನಿನ್ನ ಒಂದು ಮಾತು ಹೆಚ್ಚು ಬೆಲೆಯಾದದ್ದು." ಅವಳು ನಸುನಕ್ಕಳು ;

ಅತಿಶಯವಾದ ನಾಚಿಕೆಯಿಂದ ಅವಳ ಮೈ ಕೆಂಪಾಯಿತು. ನಾನು ಹೇಳಿದೆ ;

"ನೀನು ಮನಸ್ಸಿಗೆ ಏನೂ ತಿಳಿದುಕೊಳ್ಳದೆ ಹೋದರೆ, ನಾನು ಬಾಗಿಲನ್ನು ಮುಚ್ಚಿ ಚಿಲಕವನ್ನು ಬಾಕಿಬಿಡುತ್ತೇನೆ. "

ನಾನು ಹಿಂದಿರುಗಿ ಮತ್ತೆ ಕುಳಿತು ಹೇಳಿದೆ ;

"ಗಟ್ಟಿಯಾಗಿ ಮಾತನಾಡಬಾರದು. ಸುಮ್ಮನೆ ಅಲ್ಲಾಡದೆ ಕುಳಿತಿರು ; ಎದೆಗೆಡದೆ ನಾನು ಹೇಳುವುದನ್ನು ಕೇಳು. ನಾನು ಸತ್ಯವನ್ನೇ ಹೇಳಬೇಕಾಗಿದೆ ; ನೀನ್ನ ಬಿಗಿಯಾಗಿರಬೇಕಾಗಿದೆ, ಮಿಸ್ ಮೇರಿ. ಏಕೆಂದರೆ ಅದು ಬಲು ಕೆಟ್ಟ ಸುದ್ದಿ; ಅದನು ಕೇಳುವುದೂ ಕಷ್ಟವೇ. ಆದರೆ ಬೇರೆ ಉಪಾಯವೇ ಇಲ್ಲ. ನಿನ್ನ ಈ ಚಿಕ್ಕಪ್ಪಂದಿರು ಚಿಕ್ಕಪ್ಪಂದಿರಲ್ಲವೇ ಅಲ್ಲ ; ಇಬ್ಬರು ಮೋಸಗಾರರವರು-ಪಕ್ಕಾ ಕಳ್ಳರು. ಇಲ್ಲಿಗೆ ನಾನು ನಿನಗೆ ತಿಳಿಸಬೇಕಾಗಿದ್ದ ಬಲು ಕೆಟ್ಟು ಸುದ್ದಿ ಮುಗಿಯಿತು, ಇನ್ನುಳಿದುದನ್ನು ನೀನು ಸರಾಗವಾಗಿ ಸಹಿಸಿಕೊಳ್ಳಬಹುದು. "

ಅದು ಅವಳನ್ನು ಪೂರಾ ಧೃತಿಗೆಡಿಸಿತೇನೋ ಹೌದು ; ಆದರೆ ನಾನೀಗ ಆಳವಿಲ್ಲದ ನೀರಿನಲ್ಲಿ ಚಲಿಸುತ್ತಿದ್ದೆ, ನನ್ನ ಕಥನ ನಿರಾತಂಕವಾಗಿ ಸಾಗಿತು ; ಅವಳ ಕಣ್ಣುಗಳು ಉದ್ದಕ್ಕೂ ಉಕ್ಕೇರುವ ಕ್ರೋಧಾಗ್ನಿಯಿಂದ ಪ್ರಜ್ವಲಿಸುತ್ತಿದ್ದವು; ಹಬೆದೋಣಿಗೆ ಹೋಗುತ್ತಿದ್ದ ಆ ದಡ್ಡ ಹುಡುಗ ನಮಗೆ ಸಿಕ್ಕಿದ್ದರಿಂದ ಮೊದಲು ಮಾಡಿ ಅವಳು ಹೊರಬಾಗಿಲಲ್ಲಿ ರಾಜನ ಬಳಿಗೆ ಹಾರಿಬಂದು ಅವನೆದೆಯನ್ನು ಅಪ್ಪಿಕೊಂಡು ಅವಳನ್ನು ಅವನು ಹದಿನಾರು ಹದಿನೇಳುಸಲ ಚುಂಬಿಸಿದವರೆಗೆ ವಿಶಿಷ್ಟ ಸಂಗತಿಗಳನ್ನು —

ಒಂದನ್ನೂ ಬಿಡದೆ ನಾನವಳಿಗೆ ಹೇಳಿಬಿಟ್ಟೆ. ಅವಳು ಥಟ್ಟನೆ ಮೇಲೆದ್ದು ನಿಂತಳು. ಅವಳ ಮುಖ ಸಂಜೆಗೆಂಪಿನಂತೆ ಉರಿಯುತ್ತಿತ್ತು. ಅವಳು ಹೇಳಿದಳು :

ಧೂರ್ತ ! ಬಾ, ಒಂದು ನಿಮಿಷವನ್ನೂ-ಒಂದು ಸೆಕೆಂಡನ್ನೂ-ವ್ಯರ್ಥ ಮಾಡಬೇಡ. ನಾವು ಅವರಿಗೆ ಮಸಿ ಬಳಿಸಿ ರೆಕ್ಕೆ ಪುಕ್ಕ ಕಟ್ಟಿಸಿ ಅವರನ್ನು ನದಿಗೆ ಉರುಳಿಸೋಣ !"

ನಾನೆಂದೆ :

ಖಂಡಿತವಾಗಿ. ಆದರೆ ನೀನು ಹಾಗೆಮಾಡಬೇಕೆಂದಿರುವುದು, ಮಿ. ಲೋತ್ರಾಪರ ಮನೆಗೆ ನೀನು ಹೋಗುವ ಮುನ್ನವೋ ಇಲ್ಲ—"

"ಓ, " ಎಂದಳವಳು, "ನಾನು ಯೋಚಿಸುತ್ತಿರುವುದು ಆ ವಿಷಯವನ್ನೇ " ಎಂದಳವಳು. ಅವಳು ತಟ್ಟನೆ ಅಲ್ಲೇ ಕುಳಿತುಬಿಟ್ಟಳು, "ನಾನು ಹೇಳಿದ್ದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ-ದಯವಿಟ್ಟು ಹಾಗೆಮಾಡಬೇಡ-ಹಾಗೆ ಮಾಡುವುದಿಲ್ಲ, ಈಗ, ಮಾಡುವೆಯ ? " ಎಂದಳು. ತನ್ನ ಕೋಮಲವಾದ ಕೈಯನ್ನು ನನ್ನ ಕೈಮೇಲಿಟ್ಟಳು ; ಅದು ಹೇಗಿತ್ತೆಂದರೆ, ಅದಕ್ಕೆ ಮೊದಲಾಗಿ ನಾನು ಸಾಯುತ್ತೇನೆ ಎಂದು ನನ್ನಿಂದ ಹೇಳಿಸುವಂತಿತ್ತು. "ಅದು ನನ್ನನ್ನು ಇಷ್ಟರಮಟ್ಟಿಗೆ ಕೆರಳಿಸುವು ದೆಂದು ನಾನೆಂದಿಗೂ ತಿಳಿದಿರಲಿಲ್ಲ" ಎಂದಳವಳು ; "ಈಗ ಮುಂದೆ ಹೇಳು, ಇನ್ನು ಮುಂದೆ ಹಾಗೆ ಮಾಡುವುದಿಲ್ಲ. ಏನು ಮಾಡಬೇಕೆಂಬುದನ್ನು ನೀನು ಹೇಳು, ನೀನು ಹೇಳುವಂತೆ ನಾನು ನಡೆದುಕೊಳ್ಳುತ್ತೇನೆ "

"ಸರಿ" ಎಂದೆ ನಾನು, "ಅದೊಂದು ಧೂರ್ತರ ಗುಂಪು, ಅವರಿಬ್ಬರೂ ಮೋಸಗಾರರು, ನನಗಿಷ್ಟವಿರಲಿ ಇಲ್ಲದಿರಲಿ ಅವರೊಂದಿಗೆ ಸಿಕ್ಕಿಕೊಂಡು ನಾನು ಸ್ವಲ್ಪ ಕಾಲ ಪ್ರಯಾಣಮಾಡಬೇಕಾಗಿ ಬಂದಿದೆ. ಅದು ನನಗೆ ಇಷ್ಟವೇ ಇಲ್ಲ. ಕಾರಣವನ್ನೂ ಹೇಳುತ್ತೇನೆ. ನೀನವರ ಮೇಲೆ ತಿರುಗಿ ಬೀಳುವುದಾದರೆ ಈ ಊರು ನನ್ನನ್ನು ಅವರ ಕಾಟದಿಂದ ಬಿಡುಗಡೆಮಾಡುತ್ತದೆ; ನಾನೇನೋ ಸುಖಿಯಾಗುತ್ತೇನೆ. ಆ ನೀನರಿಯದ ಇನ್ನೊಬ್ಬ ಮನುಷ್ಯನಿದ್ದಾನೆ ಇಲ್ಲಿ; ಅವನು ಘೋರ ಕಷ್ಟಕ್ಕೆ ಸಿಕ್ಕಿಬೀಳುತ್ತಾನೆ. ನಾವು ಅವನನ್ನು ಕಾಪಾಡಬೇಕಾಗಿದೆ, ಅಲ್ಲವೇ ? ಕಾಪಾಡಬೇಕು. ಹಾಗಾದರೆ, ನಾವು ಅವರ ಮೇಲೆ ತಿರುಗಿ ಬೀಳಬಾರದು. "

ಈ ಮಾತನ್ನಾಡುತ್ತಾ ಇರುವಾಗಲೇ ನನಗೊಂದು ಒಳ್ಳೆಯ ಯೋಚನೆ ಹೊಳೆಯಿತು. ಈ ಮೋಸಗಾರರ ಬಲೆಯಿಂದ ನಾನೂ ಜಿಮ್ಮನೂ ಪಾರಾಗುವ ಸಾಧ್ಯತೆ ಗೋಚರಿಸಿತು : ಅವರನ್ನು ಸೆರೆಮನೆಗೆ ಕಳಿಸುವುದು, ಬಳಿಕ ನಾವು ಇಲ್ಲಿಂದ ಕಾಲ್ತೆಗೆ ಯುವುದು. ಆದರೆ ಯಾರಾದರೂ ಎತ್ತುವ ಪ್ರಶ್ನೆಗೆ ಉತ್ತರ ಕೊಡಲು ಯಾರಾದ ರಿನ್ನೊಬ್ಬ ನನ್ನ ಜೊತೆಗೆ ಇಲ್ಲದೆ ನಾನು ಹಗಲು ಹೊತ್ತಿನಲ್ಲಿ ತೆಪ್ಪವನ್ನು ನಡಸುಲು ಇಷ್ಟ

ಪಡಲಿಲ್ಲ. ಆದ್ದರಿಂದ ಆ ರಾತ್ರಿ ಸರಿಹೊತ್ತಿನ ತನಕ ನನ್ನ ಯೋಜನೆಯನ್ನು ಕಾರ್ಯ ರೂಕ್ಕೆ ತರುವುದು ನನಗೆ ಇಷ್ಟವಿರಲಿಲ್ಲ. ನಾನು ಹೇಳಿದೆ :

"ಮಿಸ್ ಮೇರಿ ಜೇನ್, ನಾವೇನು ಮಾಡಬೇಕಾಗಿದೆ ಎಂಬುದನ್ನು ನಾನು ನಿನಗೆ ಹೇಳುತ್ತೇನೆ. ನೀನು ಮಿ. ಲೋತ್ರಾಪರ ಮನೆಯಲ್ಲಿ ಹೆಚ್ಚುಹೊತ್ತು ಇರಬೇಕಾಗಿಲ್ಲ. ಅದು ಇಲ್ಲಿಗೆ ಎಷ್ಟು ದೂರ ? "

"ನಾಲ್ಕು ಮೈಲಿಗಳಿಗೆ ಸ್ವಲ್ಪ ಕಡಿಮೆ–ಅದು ಈ ಊರ ಹಿಂದೆಯೇ ಇದೆ.'

"ಸರಿ, ಅದು ಸರಿಹೋಯಿತು. ನೀನೀಗ ಅಲ್ಲಿಗೆ ಹೋಗಿಬಿಡು ; ಈ ರಾತ್ರಿ ಒಂಬತ್ತು ಒಂಬತ್ತುವರೆಯ ತನಕ ತಲೆಮರೆಸಿಕೊಂಡಿರು. ಆಮೇಲೆ ನಿನ್ನನ್ನು ಮನೆಗೆ ಕರೆದುಕೊಂಡು ಬರಲು ಅವರು ಅಲ್ಲಿಗೆ ಬರುವಂತೆ ಮಾಡು-ಯಾವುದೋ ಉಪಾಯ ನಿನಗೆ ಹೊಳೆದಿದೆ ಎಂದು ಅವರಿಗೆ ಹೇಳು. ಹನ್ನೊಂದು ಗಂಟೆಯೊಳಗಾಗಿ ನೀನಿಲ್ಲಿಗೆ ಬಂದರೆ, ಈ ಕಿಟಕಿಯಲ್ಲಿ ಒಂದು ಮೋಂಬತ್ತಿಯನ್ನು ಹಚ್ಚಿಡು; ನಾನು ಬರದೆ ಹೋದರೆ ಹನ್ನೊಂದು ಗಂಟೆಯ ತನಕ ಕಾದಿರು; ಆಗಲೂ ನಾನು ಬರದೆ ಹೋದರೆ ನಾನು ಆಚೆಗೆ ಹೊರಟುಹೋದೆನೆಂದೂ, ಸುರಕ್ಷಿತವಾಗಿರುವೆನೆಂದೂ ಅರ್ಥ. ಆಮೇಲೆ ನೀನು ಈಚೆಗೆ ಬಂದು, ಸುದ್ದಿಯನ್ನು ಸುತ್ತಲೂ ಹಬ್ಬಿಸು, ಈ ವಂಚಕರನ್ನು ಸೆರೆಗೆ ಹಾಕಿಸು."

"ಸರಿ, ನಾನದನ್ನು ಮಾಡುವೆನು" ಎಂದಳವಳು.

"ಮತ್ತು ಒಂದುವೇಳೆ ನಾನು ಇಲ್ಲಿಂದ ಹೊರಟುಹೋಗುವುದು ಸಾಧ್ಯವಾಗದೆ ಅವರೊಂದಿಗೆ ಸಿಕ್ಕಿಬಿದ್ದು ಸೆರೆಗೆ ಹೋಗುವುದಾದರೆ, ಆಗ ನೀನು ಬಂದು ನಾನು ಇಡೀ ವಿಷಯವನ್ನು ನಿನಗೆ ಮುಂಚಿತವಾಗಿಯೇ ತಿಳಿಸಿದ್ದೆನೆಂದು ಹೇಳಬೇಕು, ನಿನ್ನ ಕೈಲಾದ ಮಟ್ಟಿಗೆ ನನ್ನ ಪರವಾಗಿ ನಿಲ್ಲಬೇಕು."

"ನಿನ್ನ ಪರವಾಗಿ ನಿಲ್ಲುವುದು! ಖಂಡಿತವಾಗಿಯೂ ಹಾಗೆ ಮಾಡುತ್ತೇನೆ. ನಿನ್ನ ಒಂದು ತಲೆಗೂದಲನ್ನೂ ಮುಟ್ಟಲಾರರವರು!" ಎಂದಳವಳು; ಆಗ ಅವಳ ಮೂಗಿನ ಹೊಳ್ಳೆಗಳು ಅರಳುವುದನ್ನೂ, ಕಣ್ಣುಗಳು ಹಾರುವುದನ್ನೂ ನಾನು ಕಂಡೆ ನಾನೆಂದೆ: "ನಾನು ಹೊರಟುಹೋದರೆ, ಈ ಅಲೆಮಾರಿಗಳು ನಿಮ್ಮ ಚಿಕ್ಕಪ್ಪಂದಿರಲ್ಲ ಎಂದು ರುಜು ವಾತುಪಡಿಸಲು ನಾನಿಲ್ಲಿರುವುದಿಲ್ಲ; ನಾನಿಲ್ಲಿದ್ದರೂ ಅದನ್ನು ಮಾಡುವಂತಿಲ್ಲ, ಇವರು ಕಪಟಿಗಳು, ಠಕ್ಕರು ಎಂದು ಪ್ರಮಾಣಮಾಡಿ ಹೇಳಬಹುದಾಗಿತ್ತು, ಅಷ್ಟೇ; ಅದಕ್ಕೂ ಸ್ವಲ್ಪ ಬೆಲೆಯಿದ್ದೀತು. ಅದನ್ನು ನನಗಿಂತ ಚೆನ್ನಾಗಿ ಮಾಡಬಲ್ಲ ಇತರರಿದ್ದಾರೆ, ನನ್ನ ಮಾತನ್ನು ತೆಗೆದುಹಾಕುವಷ್ಟು ಬೇಗ ಅವರ ಮಾತನ್ನು ತೆಗೆದುಹಾಕಲಾರರು. ಅವರನ್ನು ಎಲ್ಲಿ ಹುಡುಕಬೇಕೆಂಬುದನ್ನು ನಿನಗೆ ಹೇಳುತ್ತೇನೆ. ಎಲ್ಲಿ, ಒಂದು ಪೆನ್ಸಿಲನ್ನು ಒಂದು ಚೂರು ಕಾಗದವನ್ನೂ ಕೊಡು. ಇಲ್ಲಿ ನೋಡು—"ರಾಜಯೋಗ್ಯ ಅಪ್ರತಿಮದೃಶ್ಯ ಬ್ರಿಕ್ಸ್‌ವಿಲ್," ಇದನ್ನು ಭದ್ರವಾಗಿಟ್ಟುಕೋ, ಕಳೆದುಕೊಳ್ಳಬೇಡ, ಈ ಇಬ್ಬರ ಬಗೆಗೆ

ಏನನ್ನಾದರೂ ತಿಳಿದುಕೊಳ್ಳಲು ನ್ಯಾಯಾಲಯ ಅಪೇಕ್ಷಿಸಿದರೆ ಬ್ರಿಕ್ಸ್‌ವಿಲ್ಲೆಗೆ ಹೇಳಿಕಳಿಸಲಿ, "ರಾಜಯೋಗ್ಯ ಅಪ್ರತಿಮ ದೃಶ್ಯ"ವನ್ನು ಅಭಿನಯಿಸಿದವರು ಸಿಕ್ಕಿಬಿದ್ದಿದ್ದಾರೆ ಎಂದು ಹೇಳಿ ಕೆಲವರು ಸಾಕ್ಷಿಗಳು ಬೇಕೆಂದು ಕೇಳಲಿ—ಆಗ ಕೆಲವರೇ ಏಕೆ, ಊರಿಗೆ ಊರೇ ಸಾಕ್ಷಿ ನುಡಿಯಲು ಮುಂದೆ ಬರುತ್ತದೆ, ನೀನು ಕಣ್ಣು ಮಿಟುಕಿಸುವುದರೊಳಗಾಗಿ,— ಮಿಸ್, ಮೇರಿ ಮತ್ತು ಅವರು ಕುದಿದೆದ್ದು ಬರುತ್ತಾರೆ."

ಅಷ್ಟು ಹೊತ್ತಿಗೆ ಎಲ್ಲವನ್ನೂ ನಾವು ಏರ್ಪಡಿಸಿಕೊಂಡಿದ್ದಾಯಿತು ಎಂದು ನಾನು ಭಾವಿಸಿದೆ ಆಗ ನಾನು ಹೇಳಿದೆ :

"ಇನ್ನು ಹರಾಜು ತನ್ನ ಪಾಡಿಗೆ ತಾನು ನಡೆದುಹೋಗಲಿ, ನೀನು ಯೋಚಿಸಬೇಕಾದ್ದಿಲ್ಲ. ಸಾಕಷ್ಟು ಮುನ್‌ಸೂಚನೆ ಕೊಡದೆ ಹರಾಜು ನಡೆಯುವುದರಿಂದ, ಕೊಂಡವರು ಯಾರೂ ಅದು ನಡೆದ ಮರುದಿವಸದ ತನಕ ಹಣವನ್ನು ಕೊಡಬೇಕಾಗಿಲ್ಲ; ಆ ಹಣ ಕೈಗೆ ಬರವತನಕ ಅವರು ಇಲ್ಲಿಂದ ಹೊರಡುವುದಿಲ್ಲ. ನಾವು ಏರ್ಪಡಿಸಿಕೊಂಡಿರುವ ಹಾಗೆ ನೋಡಿದರೆ, ಈ ಮಾರಾಟ ಊರ್ಜಿತವಾಗದು, ಹಣವೂ ಅವರಿಗೆ ಕೈಸೇರದು, ನೀಗ್ರೋಗಳ ಮಾರಾಟದಲ್ಲಿ ಹೇಗಾಯಿತೋ, ಅದೇ ರೀತಿಯಲ್ಲಿ ಇದೂ ಆಗುತ್ತದೆ, ಅದು ಮಾರಾಟವೇ ಅಲ್ಲ; ನೀಗ್ರೋಗಳು ಬಲುಬೇಗ ಹಿಂದಿರುತ್ತಾರೆ, ಅಷ್ಟೇ ಏಕೆ, ನೀಗ್ರೋಗಳನ್ನು ಮಾರಿದ್ದಕ್ಕಾಗಿ ಅವರು ನಿರೀಕ್ಷಿಸುತ್ತಿರುವ ಹಣವಿನ್ನೂ ಅವರ ಕೈಗೆ ಬಂದಿಲ್ಲ-ಅವರು ಪೂರಾ ತಾಪತ್ರಯಕ್ಕೆ ಸಿಕ್ಕಿ ಬಿದ್ದಿದ್ದಾರೆ. ಮಿಸ್‌ಮೇರಿ."

"ಸರಿ; ನಾನೀಗ ಬೆಳಗಿನ ಉಪಾಹಾರಕ್ಕಾಗಿ ಇಳಿದುಹೋಗುತ್ತೇನೆ. ಆಮೇಲೆ ನೆಟ್ಟಗೆ ಮಿ. ಲಾತ್ರೋಪರ ಮನೆಗೆ ಹೊರಡುತ್ತೇನೆ" ಎಂದಳವಳು.

"ಹಾಗೆ ಮಾಡಲೇ ಬಾರದು, ಮಿಸ್ ಮೇರಿಜೇನ್" ಎಂದೆ ನಾನು, "ಖಂಡಿತವಾಗಿಯೂ ಹಾಗೆ ಮಾಡಲೇಬಾರದು; ಬೆಳಗಿನ ಉಪಾಹಾರಕ್ಕೆ ಮೊದಲೇ ಹೊರಡು."

"ಏಕೆ?"

"ನೀನು ಅಲ್ಲಿಗೆ ಹೋಗಬೇಕೆಂದು ನಾನು ಹೇಳಿದ್ದರ ಉದ್ದೇಶವಾದರೂ ಏನು, ಮಿ. ಮೇರಿ?"

"ಸರಿ, ನಾನು ಅದನ್ನು ಯೋಚಿಸಿರಲಿಲ್ಲ– ಹಾಗೆಯೇ ನೋಡಿದರೆ ನನಗದು ತಿಳಿಯದು. ಏನದು?"

"ಏಕೆಂದರೆ ನೀನು ಈ ಭಾವರಹಿತ ಮುಖಗಳುಳ್ಳ ಮಂದಿಯಲ್ಲಿ ಒಬ್ಬಳಲ್ಲ, ನಿನ್ನ ಮುಖಕ್ಕಿಂತ ಹೆಚ್ಚು ಸ್ಪಷ್ಟವಾದ ಪುಸ್ತಕವೇ ನನಗೆ ಬೇಕಿಲ್ಲ. ಎಂಥವನೂ ಎದುರಿಗೆ ಕುಳಿತು ದಪ್ಪಕ್ಷರಗಳನ್ನು ಓದುವಂತೆ ಅದನ್ನು ಓದಿಕೊಳ್ಳಬಲ್ಲ, ಸುಪ್ರಭಾತದ ಮುತ್ತನ್ನಿಡಲು ನಿನ್ನ ಚಿಕ್ಕಪ್ಪಂದಿರು ಬಂದಾಗ ನೀನು ಹೋಗಿ ಮುಖ ಕೊಡಬಲ್ಲೆಯೆಂದು ಎಣಿಸಿದ್ದೀಯೇನು, ಎಂದಿಗೂ ಅವರಿಗೆ ಯಾವ ಸುಳಿವನ್ನೂ ಕೊಡದೆ?"

"ಇನ್ನು, ಇನ್ನು. ಬೇಡ ಆ ಮಾತು! ಆಗಲಿ, ನಾನು ಬೆಳಗಿನ ಉಪಹಾರಕ್ಕೆ ಮುನ್ನವೇ ಹೋಗುತ್ತೇನೆ—ಹೋಗಲು ಹರ್ಷಿಸುತ್ತೇನೆ. ನನ್ನ ತಂಗಿಯರನ್ನು ಅವರೊಂದಿಗೆ ಬಿಟ್ಟುಹೋಗುವುದೇ ?"

"ಹೌದು; ಅವರ ವಿಷಯದಲ್ಲಿ ಚಿಂತಿಸಬೇಡ ಅವರು ಅದನ್ನು ಸ್ವಲ್ಪಕಾಲ ತಾಳಿಕೊಳ್ಳಬೇಕು. ನೀವು ಮೂವರೂ ಹೋಗುವುದಾದರೆ ಅವರಿಗೆ ಏನೋ ನಡೆಯುತ್ತಿದೆ ಎಂಬ ಸಂಶಯ ಬರಬಹುದು. ನೀನು ಅವರನ್ನಾಗಲೀ ನಿನ್ನ ತಂಗಿಯರನ್ನಾಗಲೀ ಈ ಊರವರಲ್ಲಿ ಯಾರನ್ನಾಗಲೀ ನೋಡುವುದು ನನಗಿಷ್ಟವಿಲ್ಲ. ಅಕ್ಕಪಕ್ಕದ ಯಾವನಾದರೂ ನಿನ್ನನ್ನು ನಿಮ್ಮ ಚಿಕ್ಕಪ್ಪಂದಿರು ಈಗ ಹೇಗಿದ್ದಾರೆಂದು ಕೇಳಿದರೆ ನಿನ್ನ ಮುಖವೇ ಸ್ವಲ್ಪಮಟ್ಟಿಗೆ ಉತ್ತರಕೊಡುತ್ತದೆ. ಬೇಡ, ನೀನು ನೆಟ್ಟಗೆ ಹೊರಟುಹೋಗು. ಮಿಸ್ ಮೇರಿ ಜೇನ್,—ನಾನು ಉಳಿದವರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತೇನೆ. ನಿನ್ನ ಒಲವಿನರಿಕೆಗಳನ್ನು ನಿನ್ನ ಚಿಕ್ಕಪ್ಪಂದಿರಿಗೆ ತಲುಪಿಸಬೇಕೆಂದು, ಕೆಲವೇ ಗಂಟೆಗಳ ಮಟ್ಟಿಗೆ ವಿಶ್ರಾಂತಿಗಾಗಿ ಮತ್ತು ಸ್ಥಳಬದಲಾವಣೆಗಾಗಿ ಅಥವಾ ಸ್ನೇಹಿತರನ್ನು ನೋಡುವುದಕ್ಕಾಗಿ ನೀನು ಹೋಗಿರುವೆಯೆಂದೂ ಈ ರಾತ್ರಿಗೋ ನಾಳೆ ಬೆಳಿಗ್ಗೆಯೋ ನೀನು ಹಿಂದಿರುಗುವೆಯೆಂದೂ ಅವರಿಗೆ ತಿಳಿಸಬೇಕೆಂದು ನಾನು ಮಿಸ್, ಸೂಸಾನಳಿಗೆ ಹೇಳುತ್ತೇನೆ."

"ಸ್ನೇಹಿತನೊಬ್ಬನನ್ನು ನೋಡಲು ಹೋಗಿದ್ದೇನೆನ್ನುವುದು ಸರಿ. ನನ್ನ ಒಲವಿನರಿಕೆಗಳನ್ನು ನಾನೆಂದಿಗೂ ಅವರಿಗೆ ಕೊಡೆನು."

"ಸರಿ, ಹಾಗಾದರೆ, ಅದನ್ನು ಕೊಡುವುದು ಬೇಡ." ಅವಳಿಗೆ ಹಾಗೆ ಹೇಳುವುದೇ ಬಲು ಸೂಕ್ತವಾಗಿತ್ತು—ಅದರಲ್ಲಿ ತೊಂದರೆಯೇನಿರಲಿಲ್ಲ. ಅದು ಬಲು ಸಣ್ಣ ವಿಷಯ, ಹಾಗೆ ಮಾಡಿದ್ದರಿಂದ ತೊಂದರೆಯುಂಟಾಗಲಿಲ್ಲ. ಈ ಸಣ್ಣ ಪುಟ್ಟ ಹೊಂದಾಣಿಕೆಗಳೇ ಈ ಇಲ್ಲಿನವರ ಮಾರ್ಗವನ್ನು ಸುಗಮವಾಗಿಸುವುದು; ಅದು ಮೇರಿ ಜೇನಳಿಗೆ ಸಂತೋಷವನ್ನು ಕೊಡುವುದಾಗಿತ್ತು; ನನ್ನ ಕೈಯಿಂದ ತಾನೆ ಏನು ಹೋಗುತ್ತಿತ್ತು? ಬಳಿಕ ನಾನು ಹೇಳಿದ್ದೆ. "ಇನ್ನೂ ಒಂದು ವಿಷಯವಿದೆ—ಆ ಹಣದ ಥೈಲಿ."

"ಅದನ್ನು ಅವರು ಇಟ್ಟುಕೊಂಡಿದ್ದಾರೆ. ಅವರು ಹೇಗೆ ಅದನ್ನು ಪಡೆದರೆಂಬುದನ್ನು ನೆನೆದರೆ ನನ್ನ ಹೆಡ್ಡತನಕ್ಕೆ ತಾನೇ ನಾಚಬೇಕಾಗುತ್ತದೆ."

"ಇಲ್ಲ ಅದೇ ನಿಮ್ಮ ತಪ್ಪುತಿಳಿವಳಿಕೆ, ಅದು ಅವರ ಕೈಯಲ್ಲಿಲ್ಲ."

"ಏಕೆ? ಅದು ಯಾರ ಬಳಿ ಇದೆ?"

ನನಗದು ತಿಳಿಯದು, ತಿಳಿದಿದ್ದರೆ ಚೆನ್ನಾಗಿತ್ತು. ಅವರ ಹತ್ತಿರವಿದ್ದುದನ್ನು ನಾನು ಕದ್ದದ್ದರಿಂದ, ಅದು ನನ್ನಲ್ಲೇ ಇತ್ತು; ನಿನಗೆ ಕೊಡುವ ಉದ್ದೇಶದಿಂದಲೇ ನಾನು ಅದನ್ನು ಕದ್ದೆ; ನಾನದನ್ನು ಎಲ್ಲಿ ಬಚ್ಚಿಟ್ಟೆನೆಂಬುದು ನನಗೆ ಗೊತ್ತು; ಆದರೆ ಈಗ ಅಲ್ಲಿಲ್ಲವೆನ್ನುವ ಅಂಜಿಕೆ ನನಗೆ. ನನಗೆ ತುಂಬಾ ವಿಷಾದವಾಗಿದೆ, ಮಿಸ್ ಮೇರಿ ಜೇನ್, ನನಗೆ ತಡೆಯಲಾಗದಷ್ಟು ವಿಷದವಾಗಿದೆ; ಆದರೂ ನನಗೆ ಉತ್ತಮವೆನ್ನಿಸಿದು

ದನ್ನು ನಾನು ಮಾಡಿದೆ ; ಪ್ರಾಮಾಣಿಕವಾಗಿ ಮಾಡಿದೆ. ನಾನು ಇನ್ನೇನು ಸಿಕ್ಕಿಬೀಳು ವುದರಲ್ಲಿದ್ದೆ, ಆದ್ದರಿಂದ ನನಗೆ ತಟಕ್ಕನೆ ಮೊದಲ ಸಲ ಸಿಕ್ಕಿದ ಸ್ಥಳದಲ್ಲೇ ಅದನ್ನು ಬಚ್ಚಿಟ್ಟು ಓಡಬೇಕಾಯಿತು–ಅದೇನಂಥ ಒಳ್ಳೆಯ ಸ್ಥಳವೇ ಅಲ್ಲ."

"ಓ, ನೀನು ನಿನ್ನ ಮೇಲೆ ತಪ್ಪು ಹಾಕಿಕೊಳ್ಳುವುದನ್ನು ಅಲ್ಲಿಗೇ ನಿಲ್ಲಿಸು – ಹಾಗೆ ಮಾಡುವುದು ಬಲು ಕೆಟ್ಟದ್ದು, ನಾನದಕ್ಕೆ ಎಡೆಗೊಡುವುದಿಲ್ಲ ನೀನು ಅದನ್ನು ಹಾಗೆ ಮಾಡದೆಯೆ ಇರುವುದು ಸಾಧ್ಯವಿರಲಿಲ್ಲ ; ಅದು ನಿನ್ನ ತಪ್ಪಲ್ಲ. ನೀನದನ್ನು ಎಲ್ಲಿ ಬಚ್ಚಿಟ್ಟೆ ?"

ಅವಳು ತನ್ನ ತಾಪತ್ರಯಗಳನ್ನೇ ಕುರಿತು ಯೋಚಿಸತೊಡಗುವುದಕ್ಕೆ ನಾನು ಅವಕಾಶ ಕೊಡಲಿಲ್ಲ; ಅದಕ್ಕೆ ನಾನು ಇಷ್ಟಪಡಲಿಲ್ಲ. ತನ್ನ ಹೊಟ್ಟೆಯ ಮೇಲೆ ಹಣದ ಥೈಲಿಯನ್ನು ಇಟ್ಟುಕೊಂಡು ಪೆಟ್ಟಿಗೆಯೊಳಗೆ ಮಲಗಿರುವ ಹೆಣವನ್ನು ಅವಳು ನೋಡುವಂತೆ ಮಾಡುವ ಆ ವಿಷಯವನ್ನು ಅವಳಿಗೆ ಹೇಳಲು ಬಾಯಿ ಬಾರದೆ ಹೋಯಿತು. ಆದ್ದರಿಂದ ಕ್ಷಣಕಾಲ ನಾನು ಏನನ್ನೂ ಹೇಳಲಿಲ್ಲ. ಆ ಮೇಲೆ ಹೇಳಿದೆ;

"ಮಿಸ್ ಮೇರಿ ಜೇನ್, ನನ್ನನ್ನು ಬಿಟ್ಟುಕೊಡುವುದರಿಂದ ನಿನ್ನ ಮನಸ್ಸಿಗೆ ವ್ಯಥೆಯಾಗದಿದ್ದರೆ, ನಾನದನ್ನು ಎಲ್ಲಿ ಬಚ್ಚಿಟ್ಟೆನೆಂಬುದನ್ನು ನಿನಗೆ ಹೇಳದಿರುವುದೇ ಮೇಲು. ಆದರೂ ನಿನಗಾಗಿ ಅದನ್ನು ಒಂದು ಚೂರುಕಾಗದದ ಮೇಲೆ ಬರೆದು ಕೊಡುತ್ತೇನೆ; ನೀನದನ್ನು ಮಿ. ಲೋತ್ರಾಪರ ಮನೆಗೆ ಹೊಗುವ ದಾರಿಯಲ್ಲಿ, ಬೇಕಾದರೆ ಓದಿಕೋ. ಅಷ್ಟು ಸಾಕೆಂದು ನಿನಗೆ ಅನ್ನಿಸಿತೆ ?"

"ಓ, ಆಗಲಿ."

ಅದಕ್ಕಾಗಿ ನಾನು ಬರೆದೆ : "ನಾನದನ್ನು ಶವದ ಪೆಟ್ಟಿಗೆಯಲ್ಲಿ ಹಾಕಿದೆ. ಆ ರಾತ್ರಿಯಲ್ಲಿ ನೀನಲ್ಲಿ ಅಳುತ್ತಿದ್ದಾಗ ಅದು ಅಲ್ಲಿತ್ತು. ನಾನು ಬಾಗಿಲ ಮರೆಯಲ್ಲಿದ್ದೆ. ನಿನಗಾಗಿ ನಾನು ತುಂಬಾ ವ್ಯಸನಪಡುತ್ತಿದ್ದೆ, ಮಿಸ್ ಮೇರಿ ಜೇನ್."

ಆ ರಾತ್ರಿಯಲ್ಲಿ ಅವಳು ಒಬ್ಬಂಟಿಗಳಾಗಿ ಅಳುತ್ತಿದ್ದುದನ್ನೂ, ಆ ರಕ್ಕಸರು ಅವಳ ಮನೆಯೊಳಗೇ ಸೇರಿಕೊಂಡು ಅವಳಿಗೆ ಅವಮಾನ ಮಾಡಿ ಅವಳ ಸ್ವತ್ತನ್ನು ಅಪಹರಿಸಿದ್ದನ್ನೂ ನೆನೆದು ನನ್ನ ಕಣ್ಣಲಿ ಹನಿ ತುಂಬಿತು. ನಾನು ಆ ಕಾಗದದ ಚೂರನ್ನು ಮಡಿಸಿ ಅವಳ ಕೈಗೆ ಹಾಕಿದಾಗ, ಅವಳ ಕಣ್ಣಲ್ಲೂ ನೀರು ಬಂದಿದ್ದನ್ನು ತಾನು ಕಂಡೆ ಅವಳು ನನ್ನ ಕೈಯನ್ನು ಭದ್ರವಾಗಿ ಹಿಡಿದು ಕುಲುಕಿಸಿದಳು ; ಹೇಳಿದಳು :

"ನಿನಗೆ ಒಳ್ಳೆಯದಾಗಲಿ ! ನೀನು ನನಗೆ ಹೇಳಿರುವಂತೆಯೇ ನಾನು ಎಲ್ಲವನ್ನೂ ಮಾಡಿಯೇ ತೀರುತ್ತೇನೆ. ನಾನು ಮತ್ತೆಂದೂ ನಿನ್ನನ್ನು ನೋಡದೆ ಹೋದರೆ, ನಾನೆಂದಿಗೂ ನಿನ್ನನ್ನು ಮರೆಯುವುದಿಲ್ಲ; ನಾನು ನಿನ್ನನ್ನು ಮೇಲಿಂದ ಮೇಲೆ ನೆನೆಯುತ್ತೇನೆ, ನಿನಗಾಗಿ "ಪ್ರಾರ್ಥನೆ ಸಲ್ಲಿಸುತ್ತೇನೆ."–ಅವಳು ಹೊರಟು ಹೋದಳು.

ನನಗಾಗಿ ಪ್ರಾರ್ಥನೆ ! ಅವಳಿಗೆ ನನ್ನ ವಿಷಯವೆಲ್ಲ ತಿಳಿದಿದ್ದರೆ, ಅವಳು ತನ್ನ ಕೈಯಲ್ಲಿ ಸಾಗುವಂಥದನ್ನು ಮಾತ್ರ ಮಾಡುತ್ತಿದ್ದಳು ಎಂದುಕೊಂಡೆ ; ಅವಳು ಅದನ್ನೇ, ಅದನ್ನೇ ಮಾಡಿಬಿಟ್ಟಳು–ಆ ಜಾತಿಯ ಹೆಣ್ಣವಳು. ಅವಳಿಗೆ ಆ ಭಾವನೆ ಬಂದಿದ್ದರೆ ಅವಳು ಜೂಡಾಸಿಗಾಗಿ ಕೂಡ ಪ್ರಾರ್ಥನೆ ಸಲ್ಲಿಸುವ ಮನೋದಾರ್ಢ್ಯ ವಿತ್ತವಳಿಗೆ–ಹಿಮ್ಮೆಟ್ಟುವವಳೇ ಅಲ್ಲ ಎಂದುಕೊಂಡೆ. ನೀವು ಏನು ಬೇಕಾದರೂ ಹೇಳಿ,–ನನ್ನ ಅಭಿಪ್ರಾಯದಲ್ಲಿ, ನಾನು ನೋಡಿದ ಎಲ್ಲಾ ಹೆಣ್ಣುಮಕ್ಕಳಿಗಿಂತಲೂ ಅವಳು ಬಲು ಧೈರ್ಯಶಾಲಿ. ಪೂರಾ ದಿಟ್ಟ ಹೆಣ್ಣವಳು. ಈ ಮಾತು ಹೊಗಳಿಕೆ ಯೆಂದು ತೋರಬಹುದು ; ಆದರೆ ಇದು ಹೊಗಳಿಕೆಯೇ ಅಲ್ಲ. ಮತ್ತು, ಸೌಂದರ್ಯದ ಮತ್ತು ಸೌಜನ್ಯದ ಮಾತಿಗೆ ಅಂದರೆ ಅವಳು ಅವರೆಲ್ಲರನ್ನೂ ಮೀರಿಸುತ್ತಾಳೆ. ಅವಳು ಆ ಬಾಗಿಲಾಚೆಗೆ ಹೋದದ್ದನ್ನು ನಾನು ಕಂಡಾಗಿನಿಂದ ಈಚೆಗೆ ನಾನವಳನ್ನು ನೋಡಿಯೇ ಇಲ್ಲ ; ಇಲ್ಲ, ನಾನವಳನ್ನು ಆಗಿನಿಂದ ನೋಡಿಯೇ ಇಲ್ಲ. ಆದರೆ ಅವಳನ್ನೂ, ನನಗಾಗಿ ಪ್ರಾರ್ಥನೆ ಸಲಿಸುವೆನೆಂದು ಅವಳು ಹೇಳಿದ್ದನ್ನೂ ನಾನ ಕೋಟ್ಯಾಂತರ ಸಲ ಜ್ಞಾಪಿಸಿಕೊಂಡಿದ್ದೇನೆಂದು ನನ್ನ ಭಾವನೆ. ಅವಳಿಗಾಗಿ ಪ್ರಾರ್ಥನೆ ಮಾಡುವುದರಿಂದ ನನಗೇನಾದರೂ ಒಳ್ಳೆಯದಾಗುವುದೆಂದು ನನಗೆ ತೋರಿಬಂದಿದ್ದರೆ, ನಾನು ಹಾಗೆ ಮಾಡದೆಯೇ ಹೋಗಿದ್ದರೆ, ಇಲ್ಲವೆ, ಸಾಯದೆ ಹೋಗಿದ್ದರೆ, ನನ್ನನ್ನು ಏನು ಬೇಕಾದರೂ ಅನ್ನಿ.

ಮೇರಿ ಜೇನ್ ಹಿಂಬಾಗಿಲಿನಿಂದ ಹೊರಟುಹೋದಳೆಂದು ನಾನು ಭಾವಿಸಿದೆ ; ಏಕೆಂದರೆ ಅವಳು ಹೊರಗೆ ಹೊದದ್ದನ್ನು ಯಾರೂ ನೋಡಿರಲಿಲ್ಲ. ನಾನು ಸುಸಾನಳನ್ನೂ ಸೀಳುತುಟಿಯವಳನ್ನೂ ಭೇಟಿ ಮಾಡಿ, ಕೇಳಿದೆ :

"ನದಿಯ ಆಚೆಯ ಕರೆಯಲ್ಲಿದ್ದಾರಲ್ಲ–ನೀವು ಅವರ ಮನೆಗೆ ಕೆಲವೊಮ್ಮೆ ಹೋಗುತ್ತಾ ಇದ್ದಿರಲ್ಲ,–ಅವರ ಹೆಸರೇನು ?"

ಅವರು ಹೇಳಿದರು :

"ಅನೇಕರಿದ್ದಾರೆ ; ಬಹು ಮಟ್ಟಿಗೆ, ಪಕೀಲರಿದ್ದಾರಲ್ಲ—"

"ಅವರೆ, ಅವರ ಹೆಸರು ಅದೇ." ಎಂದೆ ನಾನು ; "ನನಗೆ ಕೊಂಚ ಮರೆತು ಹೋಗಿತ್ತು. ಅಲ್ಲಿಗೆ ತಾನು ತರಾತುರಿಯಲ್ಲಿ ಹೋಗಿರುವುದಾಗಿಯೂ–ಅವರಲ್ಲಿ ಯಾರಿಗೋ ಕಾಯಿಲೆ ಯಾಗಿದೆಯೆಂದೂ ನಿಮಗೆ ತಿಳಿಸಬೇಕೆಂದು ಮಿಸ್ ಮೇರಿ ಜೇನ್ ನನಗೆ ಹೇಳಿದಳು."

"ಕಾಯಿಲೆ ಯಾರಿಗಂತೆ ?"

"ನನಗೆ ತಿಳಿಯದು, ನನಗೆ ಕೊಂಚ ಮರೆವು ಬೇರೆ. ನನಗೆ ನೆನಪಿರುವ ಹಾಗೆ, ಯಾರಿಗೆ ಎಂದರೆ—?

"ಸದ್ಯ, ಹ್ಯಾನ್ನರಿಗಲ್ಲವಷ್ಟೆ ?

"ಅದು ಹ್ಯಾನ್ನರಿಗೇ ಎಂದು ತಿಳಿಸಲು ನನಗೆ ವಿಷಾದವಾಗುತ್ತಿದೆ" ಎಂದೆ ನಾನು.

"ಕರ್ಮ ಕರ್ಮ ! ಅವಳನ್ನು ಹೋದವಾರ ಕಂಡಿದ್ದೆ, ಎಷ್ಟು ಚೆನ್ನಾಗಿದ್ದಳು ! ಅವಳ ದೇಹಸ್ಥಿತಿ ಅಷ್ಟರವಟ್ಟಿಗೆ ಕೆಟ್ಟುಹೋಯಿತೆ ?"

"ಅದನ್ನು ಅಷ್ಟು ಸರಳವಾಗಿ ಯೋಚಿಸಲಾಗದು. ಅವರು ರಾತ್ರಿಯೆಲ್ಲಾ ಅವಳ ಪತ್ತಿರದಲ್ಲೇ ಕುಳಿತಿರುತ್ತಾರೆಂದೂ, ಅವಳ ಇನ್ನು ಹೆಚ್ಚು ಕಾಲ ಬದುಕುವುದಿಲ್ಲವೆಂದು ಅವರಿಗೆ ತೋರುತ್ತಿದೆಯೆಂದೂ ಮಿಸ್ ಮೇರಿ ಜೇನ್ ನನಗೆ ತಿಳಿಸಿದಳು."

"ಆಶ್ಚರ್ಯ, ಆಶ್ಚರ್ಯ ! ಅವಳಿಗೆ ಆಗಿರುವುದಾದರೂ ಏನು ?" ಆಗ ಸಮಂಜಸವಾದ ಯಾವುದೂ ನನ್ನ ಬುದ್ಧಿಗೆ ತಟ್ಟನೆ ಹೊಳೆಯಲಿಲ್ಲ. ಅದರೂ ಹೇಳಿಬಿಟ್ಟೆ :

"ಮಂಗಬಾವು"

"ಮಂಗಬಾವಂತೆ ನಿಮ್ಮಜ್ಜಿಯ ತಲೆ ! ಯಾರೂ ಮಂಗಬಾವು ಎದ್ದಿರುವವರ ಹತ್ತಿರ ಕುಳಿತುಕೊಳ್ಳುವುದಿಲ್ಲ."

"ಕುಳಿತುಕೊಳ್ಳುವುದಿಲ್ಲ. ಹಾಗೇನು ? ಈ ವಿಧವಾದ ಮಂಗಬಾವು ಎದ್ದಾಗ ಅವರು ಹತ್ತಿರ ಕುಳಿತೇ ಇರುತ್ತಾರೆ ಪಂಥಕಟ್ಟು, ಈ ಮಂಗಬಾವು ಬೇರೆ ಜಾತಿಯದು, ಅದೊಂದು ಹೊಸಜಾತಿಯದೆಂದು ಮೇರಿ ಜೇನ್ ಹೇಳಿದಳು."

"ಅದು ಹೇಗೆ ಹೊಸ ಜಾತಿಯದು ?"

"ಏಕೆಂದರೆ, ಅದು ಇನ್ನೂ ಕೆಲವನ್ನು ಕಟ್ಟಿಕೊಂಡು ಬರುತ್ತದೆ."

"ಅವು ಯಾವುವು ?"

"ಸರಿ, ಗೋಣೆತಟ್ಟು, ನಾಯಿಕೆಮ್ಮು, ಚರ್ಮರೋಗ, ಹಳದಿಕಾಯಿಲೆ, ಬುದ್ಧಿ ವಿಕಾರ ಇತ್ಯಾದಿ. ಇನ್ನು ಏನೇನೋ ನನಗೆ ಗೊತ್ತಿಲ್ಲ"

"ಅಬ್ಬ, ಆದರೂ ಅದನ್ನು ಮಂಗಬಾವು ಎಂದೇ ಕರೆಯುತ್ತಾರೆ ?"

"ಮೇರಿ ಜೇನ್ ಹೇಳಿದ್ದು ಹಾಗೆ."

"ಹಾಗಾದರೆ ಈ ಪ್ರಪಂಚದಲ್ಲಿ, ಅದನ್ನು ಮಂಗಬಾವು ಎಂದು ಮಾತ್ರ ಏಕೆ ಕರೆಯುತ್ತಾರೆ ?"

"ಅದು ಮಂಗಬಾವೇ ಆಗಿರುವುದರಿಂದ. ಅದು ಪ್ರಾರಂಭವಾಗುವುದೇ ಹಾಗೆ."

"ಹಾಗಾದರೆ ಅದು ಅರ್ಥಹೀನವಾದದ್ದು, ಒಬ್ಬ ಮನುಷ್ಯ ತನ್ನ ಕಾಲ್ಬೆರಳನ್ನು ಜಜ್ಜಿಕೊಂಡು ವಿಷಪಾನಮಾಡಿ, ಬಾವಿಗೆ ಬಿದ್ದು ಕತ್ತು ಮುರಿದುಕೊಂಡು, ತಲೆ ಯೊಡೆದು ಹೋಗಿ ಸತ್ತಿರಬಹುದು. ದಾರಿಯಲ್ಲಿ ಹೋಗುತ್ತಿದ್ದ ಯಾರೋ ಬಂದು ಇವನ ಸಾವಿನ ಕಾರಣವೇನೆಂದರೆ ಇನ್ನೊಬ್ಬ ದಡ್ಡ ಇವನು ತನ್ನ ಕಾಲ್ಬೆರಳನ್ನು ಜಜ್ಜಿ ಕೊಂಡಿದ್ದರಿಂದ ಸತ್ತುಹೋದ ಎಂದ ಹಾಗೆಯೇ ಆಯಿತು ಇದು, ಅದಕ್ಕೇನಾದರೂ ಅರ್ಥವಿದೆಯೋ ? "ಇಲ್ಲ. ಹಾಗೆಯೇ ಇದೂ ಅರ್ಥಹೀನವೇ ಸರಿ, ಅದು ಇನ್ನೂ ಕಾಟ ಕೊಡುತ್ತಲೇ ಇದೆಯೋ ?"

"ಅದಿನ್ನೂ ಮೆಟ್ಟಿಕೊಂಡಿದಿಯೋ ? ಎಂಥಾ ಮಾತು ನಿನ್ನದು, ನೀನು ಕತ್ತಲೆಯಲ್ಲಿ ಕಾಣದೆ ಕಾಲಿಟ್ಟಾಗ, ಗದ್ದೆ ಹರಗುವ ಸಲಿಕೆ ಇದೆಯಲ್ಲ ಅದು ಸಿಕ್ಕಿಸಿಕೊಳ್ಳುತ್ತದೆಯೆ ಎಂದ ಹಾಗಾಯಿತು. ನೀನು ಒಂದು ಹಲ್ಲಿಗೆ ಸಿಕ್ಕಿಬೀಳದಿದ್ದರೆ, ಅಲ್ಲೇ ಆಗಲೇ ಇನ್ನೊಂದು ಹಲ್ಲಿಗೆ ಸಿಕ್ಕಿಕೊಳ್ಳುವುದಂತೂ ತಪ್ಪದು. ನೀನು ಆ ಒಂದು ಹಲ್ಲಿನೊಂದಿಗೆ ಓಡಿಹೋಗುವುದು ಸಾಧ್ಯವೇ ಇಲ್ಲ, ಇಡೀ ಸಲಿಕೆಯನ್ನೇ ಉದ್ದಕ್ಕೂ ಎಳೆದುಕೊಂಡು ಬಾರದೆ, ಅಲ್ಲವೆ ? ಹಾಗೆಯೇ ಈ ಜಾತಿಯ ಮಂಗಬಾವೂ ಅದೇ ಕಾಲದಲ್ಲೇ ಏಕೆ ಇಂಗ್ಲೆಂಡಿನಲ್ಲಿ ಸಂತಸದ ದಿನಗಳನ್ನು ಕಳೆಯಬಾರದು ? ಇದೇಕೆ ನೀನು ಮುಡ್ಡಿಯಂತೆ ಮಾತಾಡುತ್ತಿದ್ದೀಯೆ ?"

"ಏನೇ ಆಗಲಿ, ನೀನು ನಿಮ್ಮ ಅಕ್ಕಪಕ್ಕದ ಮನೆಯವರಿಗಾದರೂ, ಅವರಲ್ಲಿ ಕೆಲವರಿಗಾದರೂ, ಹೇಳುವುದು ಒಳ್ಳೆಯದು."

"ಇಲ್ಲಿ ಕೇಳು, ಈಗ. ಅಪ್ಪಟ ಮೂರ್ಖರಲ್ಲಿ ನೀನು ಅಗ್ರಗಣ್ಯನೇ ಸರಿ. ಅವರು ಹೋಗಿ ಹೇಳುವರೆಂಬುದು ನಿನಗೆ ಹೊಳೆಯುವುದೇ ಇಲ್ಲವೆ? ಯಾರಿಗೂ ಏನನ್ನೂ ಹೇಳದಿರುವುದಕ್ಕಿಂತ ಮೇಲಾದ ಮಾರ್ಗವೇ ಇನ್ನೊಂದಿಲ್ಲ."

"ನೀನು ಹೇಳುವುದೇ ಸರಿಯಾದ್ದೇನೋ—ಹೌದು, ನಿನ್ನ ಮಾತು ಸರಿ, ಎಂದೊಪ್ಪುತ್ತೇನೆ."

"ಎಂತಾದರೂ ನಾವು ಚಿಕ್ಕಪ್ಪ ಹಾರ್ವೆಯ ಬಳಿಗೆ ಹೋಗಿ ಹೀಗೆ ಇವಳು ಇಲ್ಲೇ ಎಲ್ಲೋ ಹೋಗಿದ್ದಾಳೆ ಎಂದು, ಅವನು ಅವಳ ಬಗೆಗೆ ತಪ್ಪು ತಿಳಿಯದಂತೆ ಮಾಡುವುದಕ್ಕಾದರೂ, ಹೇಳಲೇಬೇಕೆಂದು ನನಗೆ ತೋರುತ್ತದೆ."

"ಹೌದು ; ನೀನು ಹಾಗೆ ಮಾಡಬೇಕೆಂಬುದೇ ಮಿಸ್ ಮೇರಿ ಜೇನಳ ಅಪೇಕ್ಷೆ. 'ಚಿಕ್ಕಪ್ಪಂದಿರಾದ ಹಾರ್ವೆಗೂ ವಿಲಿಯಮ್ಮಿಗೂ ನನ್ನ ಒಲವಿನರಿಕೆಯನ್ನೂ ಮುತ್ತನ್ನೂ ಸಲ್ಲಿಸಿ, ಮಿ.—ಇವರನ್ನು ನೋಡುವುದಕ್ಕಾಗಿ ಹೊಳೆಯ ಆಚೆಯ ಕೆರೆಗೆ ಹೋಗಿದ್ದೇನೆಂಬುದನ್ನು ನನ್ನ ಸೋದರಿಯರು ತಿಳಿಸುವಂತೆ ಹೇಳು' ಎಂದು ನನಗೆ ಸ್ಪಷ್ಟವಾಗಿ ಹೇಳಿದಳು. ಮಿ.—ಇವರು, ಮಿ.—ಇವರು,–ನಿಮ್ಮ ಚಿಕ್ಕಪ್ಪ ಪೀಟರಿಗೆ ಅವರ ವಿಷಯದಲ್ಲಿ ತುಂಬಾ ಗೌರವವಿತ್ತಲ್ಲ, ಆ ಶ್ರೀಮಂತರ ಮನೆಯ ಹೆಸರೇನು?–ನನ್ನ ಮನಸ್ಸಿನಲ್ಲಿದೆ ಅದು ಬಾಯಿಗೆ ಬರವೊಲ್ಲದು—"

"ಅದೇ ? ಅಪ್‌ಥಾರ್ಪ್ಸ್ ಮನೆಯವರೇ ಇರಬೇಕು, ಅಲ್ಲವೆ ?"

"ಹೌದು ; ತಾಪತ್ರಯಕೊಡುವ ಹೆಸರುಗಳು ; ಏಕೋ ಏನೋ ಅವುಗಳನ್ನು ಜ್ಞಾಪಿಸಿಕೊಳ್ಳುವ ಹೊತ್ತಿಗೇ ಅರ್ಧಕಾಲ ಕಳೆದುಹೋಗುತ್ತದೆ. ಹೌದು, ಅವಳು ಹೇಳಿದಳು; ಅಪ್‌ಥಾರ್ಪ್ಸ್ ಮನೆಯವರು ಹರಾಜಿಗೆ ಬಂದು ಈ ಮನೆಯನ್ನು ಕೊಳ್ಳುವರೆಂಬುದನ್ನು ಖಚಿತಪಡಿಸಿಕೊಳ್ಳಲು ತಾನು ಅಲ್ಲಿಗೆ ಹೋಗಿರುವುದಾಗಿ ಹೇಳೆಂದು,

ಅವಳು ಹೇಳಿಯೇ ಇದ್ದಳು. ಏಕೆಂದರೆ, ಈ ಮನೆ ಒಂದು ರೀತಿಯ ಸಲಿಕೆಯೋ ಎಂದಿಟ್ಟುಕೊಳ್ಳಬಹುದು—ಆದರೆ ಇದು ಸಲಿಕೆಯಂತೆ ಡೊಂಕಡೊಂಕಾಗಿ ಬರುವುದಿಲ್ಲ; ನೀವೇ ನೇರ ಬಂದು ಸಿಕ್ಕಿಕೊಳ್ಳುವಂತೆ ಮಾಡುತ್ತದೆ.

"ಹಾಗಾದರೆ ಅದು ಪ್ರಮಾದಕರವೇ ; ನಾನು ಹೋಗಿ ಚಿಕ್ಕಪ್ಪ ಹಾರ್ವೆಯನ್ನು ಮತ್ತು—" ಇದು ಸೀಳುತುಟಿಯವಳು ಅಂದ ಮಾತು.

"ಓ. ಸರಿ" ಎಂದೆ ನಾನು, "ನಾನು ಹಾಗೆಯೇ ಮಾಡುತ್ತಿದ್ದೆ, ನಾನಾದರೂ ಹಾಗೆಯೇ ಮಾಡುತ್ತಿದ್ದೆ. ಕೊಂಚವೂ ತಡಮಾಡುತ್ತಿರಲಿಲ್ಲ."

"ಹಾಗೋ, ಅದೇಕೆ ನೀನು—?"

"ಒಂದು ನಿಮಿಷ ಸುಮ್ಮನೆ ಹಾಗೆಯೇ ಯೋಚನೆಮಾಡು; ಆದು ನಿನಗೆ ಹೊಳೆಯಬಹುದು. ನಿಮ್ಮ ಚಿಕ್ಕಪ್ಪಂದಿರು ಆದಷ್ಟು ಜಾಗ್ರತೆಯಾಗಿ ಇಂಗ್ಲೆಂಡಿಗೆ ಹಿಂದಿರುಗಲೇಬೇಕಾಗಿ ಬಂದಿದೆಯಲ್ಲವೆ? ಈ ಸಂದರ್ಭದಲ್ಲಿ ನಿಮ್ಮಪಾಡಿಗೆ ನೀವು ಆಮೇಲೆ, ಜತೆಗೆ ಯಾರೂ ಕಂಡವರಿಲ್ಲದೆ, ಅಷ್ಟು ದೂರದ ಪ್ರಯಾಣವನ್ನು ಕೈಗೊಂಡು ಬನ್ನಿ ಎಂದು ಹೇಳಿ ನಿಮ್ಮನ್ನು ಬಿಟ್ಟುಹೋಗುವಷ್ಟು ನೀಚರವರೆಂದು ತಿಳಿದಿರುವೆಯ? ನಿಮಗೋಸ್ಕರ ಅವರು ಕಾಯುತ್ತಾರೆಂದು ನೀನು ಬಲ್ಲೆ. ಅಲ್ಲಿಯ ತನಕ, ಎಲ್ಲವೂ ನೇರವೇ ಆಮೇಲೆ ನಿಮ್ಮ ಚಿಕ್ಕಪ್ಪ, ಹಾರ್ವೆ, ಉಪದೇಶಕನಲ್ಲವೆ ? ಹಾಗಾದಮೇಲೆ, ಯಾವ ಉಪದೇಶಕನಾದರೂ ಹಡೆದೋಣಿಯ ಗುಮಾಸ್ತನಿಗೆ ಮೋಸಮಾಡುತ್ತಾನೆಯೆ ? ಹಡಗಿನ ಗುಮಾಸ್ತನಿಗೆ ಮೋಸಮಾಡುತ್ತಾನೆಯೆ?—ಮಿಸ್ ಮೇರಿ ಜೇನಳನ್ನು ಆವರು ಹತ್ತಿಸಿಕೊಳ್ಳಲೆಂಬ ಕಾರಣಕ್ಕಾಗಿ? ಅವನು ಅಂಥವನಲ್ಲ ಎಂಬುದು ನಿನಗೆ ತಿಳಿದಿದೆ ಈಗ. ಬಳಿಕ ಅವನು ಏನುಮಾಡುತ್ತಾನೆ? 'ಇದು ಅನ್ಯಾಯವೇ ಸರಿ; ಆದರೂ ನನ್ನ ಚರ್ಚಿನ ವ್ಯವಹಾರಗಳು ತಮಗೆ ಹೇಗೆ ನಡೆಯುವುದು ಸೂಕ್ತವೆನ್ನಿಸುವುದೋ ಹಾಗೆ ನಡೆಯಲೇ ಬೇಕು; ನನ್ನ ಸೋದರನ ಮಗಳು ಇಲ್ಲಿ ದಾರುಣವಾದ ಮಿಶ್ರಜಾತಿಯ ಮಂಗಬಾವಿನ ಸೋಂಕನ್ನು ಅಂಟಿಸಿಕೊಳ್ಳುವುದರಲ್ಲಿದ್ದಾಳೆ, ಆದ್ದರಿಂದ ಇದು ಅವಳ ಮೈಯಲ್ಲಿ, ಒಂದುವೇಳೆ ಸೇರಿಕೊಂಡಿದ್ದಲ್ಲಿ, ಹೊಮ್ಮುವುದಕ್ಕೆ ಹಿಡಿಯುವ ಮೂರು ತಿಂಗಳಕಾಲವೂ ನಾನಿಲ್ಲಿ ಕುಳಿತು ಕಾಯುವುದು ನನ್ನ ಪರಮಕರ್ತವ್ಯ'ಎನ್ನುತ್ತಾನೆ. ಅದು ಹೇಗಾದರೂ ಇರಲಿ, ನಿಮ್ಮ ಚಿಕ್ಕಪ್ಪ ಹಾರ್ವೆಗೆ ಹೇಳಿಬಿಡುವುದೇ ಉತ್ತಮವೆಂದು ನಿನಗೆ ತೋರಿದರೆ.—"

"ಮಣ್ಣು, ಮೇರಿ ಜೇನಳಿಗೆ ಅದು ತಗುಲಿದೆಯೋ ಇಲ್ಲವೇ ಎಂಬುದನ್ನು ಕಂಡುಕೊಳ್ಳುವುದಕ್ಕಾಗಿ ನಾವು ಕಾಯುತ್ತಲೇ ಇದ್ದು ಇನ್ನೊಬ್ಬರ ಕೈಗೆ ಹೋಗುವುದರ ಬದಲು ಅವರಿಗೆ ಸೇರಿದರೆ ತನ್ನ ಚಿಕ್ಕಪ್ಪ ಪೀಟರಿಗೆ ಸಮಾಧಾನವಾಗುತ್ತದೆ ಎಂದು ಅವಳು ನಂಬಿದ್ದಾಳೆ. ತಾವು ಬರುವುದಾಗಿ ಹೇಳುವತನಕ ತಾನು ಅವರನ್ನು ಬಿಡುವುದಿಲ್ಲವೆಂದೂ, ಆಮೇಲೆ, ತನಗೆ ತುಂಬಾ ದಣಿವಾಗದಿದ್ದರೆ, ಮನೆಗೆ ಬಂದು ಬಿಡುವುದಾಗಿಯೂ; ದಣಿವಾಗಿದ್ದರೆ ನಾಳೆ ಬೆಳಗಾಗ, ಏನಾಗಲಿ, ಬರುವುದಾಗಿಯೂ ಅವಳು ಹೇಳಿದಳು.

ವಕೀಲರ ವಿಚಾರವಾಗಿ ಏನನ್ನೂ ಹೇಳಕೂಡದೆಂದೂ, ಅಪ್‌ತಾರ್ಪ್ಸ್‌ರ ವಿಷಯವನ್ನು ಮಾತ್ರ ಹೇಳಬೇಕೆಂದೂ,–ಏಕೆಂದರೆ ಅದು ಸಂಪೂರ್ಣವಾಗಿ ಸತ್ಯವಾಗಿರುತ್ತೆಂದೂ, ಏಕೆಂದರೆ ಈ ಮನೆಯನ್ನು ಅವರು ಕೇಳುವ ವಿಷಯದಲ್ಲಿ ಪ್ರಸ್ತಾಪಮಾಡಲು ತಾನಲ್ಲಿಗೆ ಹೋಗುತ್ತಿರುವುದಾಗಿಯೂ ಅವಳು ನನಗೆ ಹೇಳಿದಳು. ನನಗೆ ಅದು ಗೊತ್ತು ಅವಳೇ ನನಗೆ ಹಾಗೆ ಹೇಳಿದಳು.

"ಸರಿ, ಹಾಗಾದರೆ," ಎಂದರವರು: ತಮ್ಮ ಚಿಕ್ಕಪ್ಪಂದಿರನ್ನು ಕಂಡು ಅವರಿಗೆ ಆ ಒಲವಿನರಿಕೆಗಳನ್ನೂ ಮುತ್ತುಗಳನ್ನೂ ಸಲಿಸಿ ಸಮಾಚಾರವನ್ನು ತಿಳಿಸಲು ತಟ್ಟನೆ ಹೊರಟುಬಿಟ್ಟರು.

ಈಗ ಎಲ್ಲವೂ ಸರಿಹೋಯಿತು. ಆ ಹುಡುಗಿಯರು ಇನ್ನು ಯಾರಿಗೂ ಏನನ್ನೂ ಹೇಳುವುದಿಲ್ಲ: ಏಕೆಂದರೆ ಅವರು ಇಂಗ್ಲೆಂಡಿಗೆ ಹೋಗಬೇಕೆಂದಿದ್ದರು. ರಾಜನ ಮತ್ತು ಡ್ಯೂಕನ ದೃಷ್ಟಿಯಲ್ಲಿ ಮೇರಿ ಜೇನ್ ವೈದ್ಯ ರಾಬಿನ್ಸನ್ನನ ಕೈಗೆ ನಿಲುಕುವಂತೆ ಇರುವುದಕ್ಕಿಂತಲೂ, ಹರಾಜಿಗೆ ಗಿರಾಕಿಗಳನ್ನು ತರಲು ದೂರ ಹೋಗಿರುವುದೇ ಮೇಲೆನ್ನಿಸಿತ್ತು. ನನಗೆ ಬಲು ಹಿತವಾಯಿತು; ನಾನು ಅದನ್ನು ಬಲು ಒಪ್ಪವಾಗಿ ಮಾಡಿದ್ದೇನೆ ಎಂದುಕೊಂಡೆ–ಟಾಮ್ ಸಾಯರ್ ಕೂಡ ಇದಕ್ಕಿಂತ ಯಶಸ್ವಿಯಾಗಿ ಮಾಡುತ್ತಿರಲಿಲ್ಲವೆಂದುಕೊಂಡೆ. ನಿಜಕ್ಕೂ ಅವನು ಈ ಕಾರ್ಯಕ್ರಮಕ್ಕೆ ಅತಿಶಯವಾದ ಮೆರುಗನ್ನು ಕೊಡುತ್ತಿದ್ದನು; ಆದರೆ ಅದು ನನ್ನಿಂದ ಸಾಧ್ಯವಿಲ್ಲ, ನನ್ನನ್ನು ಅದಕ್ಕನುಗುಣವಾಗಿ ಬೆಳೆಸಿಲ್ಲ.

ಅವರು ಹರಾಜು ನಡಸುತ್ತಿದ್ದುದು ಬೀದಿಯ ಚೌಕದಲ್ಲಿ. ಸಂಜೆಯಾಗುತ್ತ ಬಂದರೂ ಅದು ನಡೆಯುತ್ತಲೇ ಇತ್ತು. ಎಳೆದುಕೊಂಡು ಹೋಗುತ್ತಲೇ ಇತ್ತು. ಆ ಮುದುಕ ತನ್ನ ಅಂತಸ್ತಿಗೆ ಒಪ್ಪುವಂತೆ ತೋರ್ಪಡಿಸಿಕೊಳ್ಳುತ್ತಾ ಹತ್ತಿರದಲ್ಲೇ ಇದ್ದನು, ಹರಾಜು ಹಾಕುತ್ತಿದ್ದವನ ಪಕ್ಕದಲ್ಲೇ ನಿಂತುಕೊಂಡು, ಕ್ಷಣಕೊಮ್ಮೆ ತನ್ನ ಕೈಲಿದ್ದ ಚಿಕ್ಕ ಬೈಬಲನ್ನು ತೆರೆದುನೋಡುತ್ತಾ ಒಂದು ಬಗೆಯ ಘನವಾದ ಮಾತುಗಳನ್ನು ಸ್ವಲ್ಪ ಸ್ವಲ್ಪ ಆಡುತ್ತಾ ಇದ್ದನು. ಡ್ಯೂಕ್ ಜನರ ಮರುಕವನ್ನು ಗಳಿಸುವುದಕ್ಕೆ ತನ್ನಲ್ಲಿದ್ದ ಒಂದೇ ಸಾಧನವಾದ ಗೂ-ಗೂ-ಕೂಗನ್ನು ಬಳಸುತ್ತಾ ಇಲ್ಲಲ್ಲಿ ಸುತ್ತಾಡಿ ಸಾಮಾನ್ಯವಾಗಿ ಎಲ್ಲರ ಪರಿಚಯವನ್ನೂ ಮಾಡಿಕೊಳ್ಳುತ್ತಿದ್ದನು.

ಹರಾಜು ಮುಗಿಯುವುದಕ್ಕೆ ತುಂಬಾಹೊತ್ತು ಹಿಡಿಯಿತು. ಎಲ್ಲವನ್ನೂ ಗೋರಿಯೊಳಗಿದ್ದ ಆ ಬೆಲೆಬಾಳದ ಕೃಶ ಮುದಿ ದೇಹವೊಂದರ ಹೊರತು ಇದ್ದುದೆಲ್ಲವನ್ನೂ ಮಾರಿದ್ದಾಯಿತು. ಅದನ್ನು ಯಶಸ್ವಿಯಾಗಿಸಲು ಅವರು ಅಷ್ಟರ ಮಟ್ಟಿಗೆ ಏರ್ಪಾಡುಗಳನ್ನು ಮಾಡಿಕೊಂಡಿದ್ದರು. ಸರ್ವ ಭಕ್ಷಕನಾಗಲಪೇಕ್ಷಿಸಿದ ಆ ರಾಜನಂಥ ಜಿರಾಫೆಯನ್ನ ನಾನು ಎಂದೂ ಕಂಡಿಲ್ಲ. ಅವರು ಈ ಕೆಲಸದಲ್ಲಿದ್ದಾಗ ಹಬೆದೋಣಿಯೊಂದು ಊರ

ಬಳಿಗೆ ಬಂದು ನಿಂತಿತು. ಎರಡೇ ನಿಮಿಷಗಳಲ್ಲಿ ಜನರ ಗುಂಪೊಂದು ಬೊಬ್ಬೆಹಾಕುತ್ತಾ ಕಿರಿಚುತ್ತಾ ಗಹಗಹಿಸಿ ನಗುತ್ತಾ ತೋರಿದಂತೆ ಆಡುತ್ತಾ ಬಂದು—

"ಇಲ್ಲಿದ್ದಾರೆ ನಿಮ್ಮ ಎದುರಾಳಿಗಳು! ಮುದುಕ ಪೀಟರ್ ವಿಲ್ಕ್ಸನ ಆಸ್ತಿಪಾಸ್ತಿಗಳಿಗೆ ಒಂದಲ್ಲ ಎರಡು ಜೊತೆ ಹಕ್ಕುದಾರರು ಇಲ್ಲಿದ್ದಾರೆ. ನೀವು ನಿಮ್ಮ ಹಣವನ್ನು ಕೊಡಿ, ನಿಮಗೆ ಬೇಕಾದುದನ್ನು ನೀವು ಆಯ್ಕೆ ಮಾಡಿ!" ಎಂದು ಘೋಷಿಸುತ್ತಾ ನುಗ್ಗಿ ಬಂತು.

## ೨೯

ಬಲು ಚೆಲುವನಂತೆ ಕಾಣುತ್ತಿದ್ದ ಒಬ್ಬ ವೃದ್ಧನನ್ನೂ, ಬಲು ಚೆಲುವನಂತೆ ಕಾಣುತ್ತಿದ್ದ ಒಬ್ಬ ತರುಣನನ್ನೂ ಅವರು ತಮ್ಮ ಜೊತೆಗೆ ಕರೆದುಕೊಂಡು ಬಂದಿದ್ದರು; ಆ ತರುಣನ ಬಲಗೈ ಅವನ ಕೊರಳಿನಿಂದ ಇಳಿಯಬಿಟ್ಟಿದ್ದ ತೂಗು ಕಟ್ಟಿನಲ್ಲಿತ್ತು. ಮಂದಿ ಉದ್ದಕ್ಕೂ ಹೇಗೆ ಕಿರಿಚುತ್ತಿದ್ದರು, ನಗುತ್ತಿದ್ದರು! ನನಗೆ ಅದರಲ್ಲಿ ತಮಾಷೆಯೇನೂ ಕಂಡು ಬರಲಿಲ್ಲ. ಅದನ್ನು ಕಂಡೊಡನೆಯೇ ಡ್ಯೂಕನೂ ರಾಜನೂ ಸುಸ್ತಾಗಿ ಬಿಡುವರೆಂದು ನನಗನ್ನಿಸಿತು. ಆದರೆ ಇಲ್ಲ. ಅವರು ರವೆಯಷ್ಟು ಕಳೆಗುಂದಲಿಲ್ಲ. ತನ್ನ ಮುಂದೆ ಆಗುತ್ತಿರುವ ಗದ್ದಲದ ಬಗೆಗೆ ತನಗೆ ಏನೋ ಸಂಶಯವುಂಟಾಗಿದೆ ಎಂದು ಡ್ಯೂಕ್ ತೋರಿಸಿಕೊಳ್ಳಲೇ ಇಲ್ಲ. ಮಜ್ಜಿಗೆ ಕುಲುಕುವ ಜಾಡಿಯಂತೆ ಅವನು ಸಂತಸದಿಂದ, ನೆಮ್ಮದಿಯಿಂದ ಸುತ್ತಲೂ ಗೂಗುಟ್ಟಿ ತಿರುಗುತ್ತಿದ್ದನು; ರಾಜನಾದರೋ 'ಇಂಥಾ ಮೋಸಗಾರರೂ ಧೂರ್ತರೂ ಪ್ರಪಂಚದಲ್ಲಿರುವುದು ಸಾಧ್ಯವೇ, ಎಂದು ಯೋಚಿಸುವುದರಿಂದಲೇ ತನ್ನ ಹೊಟ್ಟೆಯಾಳದಲ್ಲಿ ತಳಮಳವುಂಟಾಗಿದೆ ಎಂಬಂತೆ ಆ ಹೊಸಬರ ಕಡೆಗೆ ಎವೆಯಿಕ್ಕದೆ ನೋಡಿ ವ್ಯಸನದಿಂದ ಕೆಳಗಣ್ಣು ಹಾಕಿದನು. ಓ ಅವನ ನಟನೆ ಪ್ರಶಂಸಾರ್ಹವಾಗಿತ್ತು. ತಾವು ಅವನ ಕಡೆಗಿರುವುದನ್ನು ಅವನಿಗೆ ಸೂಚಿಸುವುದಕ್ಕಾಗಿ ಮುಖಂಡರನೇಕರು ರಾಜನನ್ನು ಸುತ್ತುಗಟ್ಟಿದರು. ಹೊಸತಾಗಿ ಅಲ್ಲಿಗೆ ಬಂದಿದ್ದ ಆ ವೃದ್ಧ ಮಹನೀಯನು 'ಇನ್ನು ನನ್ನ ಕಥೆಯೇ ಮುಗಿಯಿತು' ಎನ್ನುವ ಮಟ್ಟಿಗೆ ದಿಗ್ಭ್ರಾಂತನಾದನು. ಸ್ವಲ್ಪ ಹೊತ್ತಿನೊಳಗಾಗಿ ಅವನು ಮಾತಾಡತೊಡಗಿದನು; ಅವನ ಉಚ್ಚಾರಣೆ ಇಂಗ್ಲಿಷಿನವನ ಉಚ್ಚಾರಣೆಯಂತೆಯೇ ಇತ್ತು—ರಾಜನ ಅನುಕರಣ ಬಲು ಚೆನ್ನಾಗಿದ್ದರೂ, ಅವನ ಉಚ್ಚಾರಣೆ ಹೀಗಿರಲಿಲ್ಲ. ನಾನು

ಆ ವೃದ್ಧ ಮಹನೀಯನ ಮಾತುಗಳನ್ನು ಇಲ್ಲಿ ಕೊಡಲಾರೆ, ನಾನು ಅವನನ್ನು ಅನುಕರಿಸುವುದೂ ಸಾಧ್ಯವಿಲ್ಲ. ಅವನು ಮಂದಿಯ ಕಡೆಗೆ ತಿರುಗಿ ಸುಮಾರು ಇಷ್ಟನ್ನು ಹೇಳಿದನು.

"ನನಗಿದೊಂದು ಅನಿರೀಕ್ಷಿತ ಸೋಜಿಗವಾಗಿದೆ ; ಇದನ್ನು ಎದುರಿಸಿ ಉತ್ತರಿಸುವ ಸುಸ್ಥಿತಿಯಲ್ಲಿ ನಾನಿಲ್ಲವೆಂದು ಮುಚ್ಚುಮರೆಯಿಲ್ಲದೆ ನೇರವಾಗಿ ಒಪ್ಪಿಕೊಳ್ಳುತ್ತೇನೆ; ಏಕೆಂದರೆ ನಾನು ನನ್ನ ತಮ್ಮನೂ ದುರದೃಷ್ಟಗಳ ಪರಂಪರೆಯನ್ನೇ ಅನುಭವಿಸಿ ಬಂದಿದ್ದೇವೆ ; ಅವನು ಕೈಮುರಿದುಕೊಂಡಿದ್ದಾನೆ ; ಈ ಸ್ಥಳಕ್ಕೆ ಉತ್ತರದಲ್ಲಿರುವ ಒಂದೂರಿನಲ್ಲಿ ಕಳೆದ ರಾತ್ರಿ ಕತ್ತಲೆಯಲ್ಲಿ ಯಾವುದೋ ಅಚಾತುರ್ಯದಿಂದ ನಮ್ಮ ಗಂಟು ಮೂಟೆಗಳು ಹಿಂದೆಯೇ ಉಳಿದಿದ್ದವು. ನಾನು ಪೀಟರ್ ವಿಲ್ಕ್ಸನ ಸೋದರನಾದ ಹಾರ್ವೆ ; ಅವನ ತಮ್ಮನಾದ ವಿಲ್ಲಿಯಮ್ ಇವನು; ಇವನು ಕಿವುಡ, ಮೂಕ—ಅಷ್ಟಾಗಿ ಸನ್ನೆ ಮಾಡಲೂ ಅರಿಯದವನಿವನು ; ಇವನು ಒಂದು ಕೈಯಿಂದಲೇ ಆ ಕೆಲಸವನ್ನು ಮಾಡಬೇಕಾಗಿದೆ. ನಾವು ಯಾರೆಂದು ಈಗ ಹೇಳಿಕೊಂಡೆವೋ ಅವರೇ ನಾವು ; ಒಂದೆರಡು ದಿನಗಳಲ್ಲಿ ನಮ್ಮ ಗಂಟು ಮೂಟೆಗಳು ನಮ್ಮ ಕೈ ಸೇರಿದಾಗ, ನಾನೀ ಮಾತನ್ನು ಸ್ಥಿರಗೊಳಿಸುತ್ತೇನೆ. ಅಲ್ಲಿವರೆಗೆ ನಾನಿನ್ನೇನನ್ನೂ ಹೇಳುವುದೇ ಇಲ್ಲ, ಹೋಟಲಿಗೆ ಹೋಗಿ ಕಾದಿರುತ್ತೇನೆ."

ಅವನೂ ಅವನ ಜೊತೆಗೆ ಬಂದಿದ್ದ ಹೊಸ ಮಾದರಿಯೂ ಹೊರಟುಹೋದರು. ರಾಜನಿಗೆ ತುಂಬಾ ನಗೆ ಬಂತು, ಅವನು ಬಾಯ್ತೆರೆದ:

"ಕೈ ಮುರಿದುಕೊಂಡನಂತೆ—ಇದ್ದೀತು, ಇದ್ದೀತು, ಅಲ್ಲವೆ ?—ಮತ್ತು ಅದು ಕೈಸನ್ನೆಮಾಡುವ ಅಗತ್ಯವಿದ್ದು ಅದನ್ನು ಕಲಿಯದಿರುವ ಮೋಸಗಾರನಿಗೆ ಅನುಕೂಲ ವಾಗಿಯೇ ಇದೆ. ಗಂಟು ಮೂಟೆಗಳನ್ನು ಕಳೆದುಕೊಂಡರಂತೆ ! ಬಲು ಒಳ್ಳೆಯದು ಅದು !—ಬಲು ನವಿರಾದ ತಂತ್ರವೂ ಹೌದು—ಈ ಪರಿಸ್ಥಿತಿಯಲ್ಲಿ !"

ಅವನು ಮತ್ತೆ ನಕ್ಕ ; ಮೂವರು ನಾಲ್ವರನ್ನು, ಹೆಚ್ಚೆಂದರೆ ಬಹುಶಃ ಆರು ಮಂದಿಯನ್ನು ಬಿಟ್ಟು, ಉಳಿದವರೆಲ್ಲರೂ ಹಾಗೆಯೇ ಮಾಡಿದರು, ಆ ವೈದ್ಯನೂ ಅವರಲ್ಲೊಬ್ಬ ; ಇನ್ನೊಬ್ಬನೆಂದರೆ, ಲೆವಿ ಬೆಲ್—ಲೂಯಿಸ್‌ವಿಲ್ಲಿಗೆ ಹೋಗಿ ಬಂದಿದ್ದ ವಕೀಲ. ಅವನು ಬಲು ಚಾಣಾಕ್ಷನಾದ ಗಣ್ಯನಂತೆ ಕಂಡುಬರುತ್ತಿದ್ದನು ; ಜಮಖಾನದ ತೇಪೆಗಳಿಂದ ತಯಾರಿಸಿದ ಹಳೆಯ ಶೈಲಿಯ ಜಮಖಾನದ ಚೀಲವೊಂದನ್ನು ಅವನು ಹಿಡಿದುಕೊಂಡಿದ್ದನು; ಆಗತಾನೆ ಹಬೆದೋಣಿಯಿಂದ ಬಂದಿದ್ದು, ವೈದ್ಯನೊಡನೆ ತಗ್ಗಿದ ದನಿಯಲ್ಲಿ ಮಾತಾಡುತ್ತಿದ್ದನು. ಅವರಿಬ್ಬರೂ ಆಗಾಗ ರಾಜನ ಕಡೆಗೆ ಕಣ್ಣು ಹಾಯಿಸಿ ತಲೆಯಲ್ಲಾಡಿಸುತ್ತಿದ್ದರು. ಮತ್ತೊಬ್ಬ ಎತ್ತರವಾದ ಒರಟನಾದ ಧಾಂಡಿಗನೂ ಅಲ್ಲಿದ್ದನು ; ಅವನು ಆ ಮುದುಕ ಹೇಳಿದ್ದೆಲ್ಲವನ್ನೂ ಕೇಳಿದವನಾಗಿದ್ದು, ಈಗ

ರಾಜನ ಮಾತುಗಳನ್ನು ಕಿವಿಯಲ್ಲಿ ಹಾಕಿಕೊಳ್ಳುತ್ತಿದ್ದನು. ರಾಜನ ಭಾಷಣ ಮುಗಿದ ಮೇಲೆ, ಈ ಧಾಂಡಿಗ ಎದ್ದು ನಿಂತು ಹೇಳಿದ ;

"ಏ, ನೋಡಿಲ್ಲಿ ; ನೀನೇ ಹಾರ್ವೆ ವಿಲ್ಕ್ಸ್ ಆಗಿದ್ದಲ್ಲಿ, ನೀನು ಈ ಊರಿಗೆ ಎಂದು ಬಂದೆ ?"

"ಶವಸಂಸ್ಕಾರದ ಹಿಂದಿನ ದಿನ, ಗೆಳೆಯ" ಎಂದನು ರಾಜ.

"ಎಷ್ಟು ಹೊತ್ತಿಗೆ ?"

"ಸಂಜೆಗೆ-ಸೂರ್ಯ ಮುಳುಗುವುದಕ್ಕೆ ಒಂದೆರಡು ಗಂಟೆಗಳ ಮುನ್ನ."

"ಹೇಗೆ ಬಂದೆ ?"

"ಸಿನ್ಸಿನ್ನಾಟಿಯಿಂದ **ಸೂಸಾನ್ ಪೊವೆಲ್ಲಿ** ನಲ್ಲಿ ಬಂದೆ ನಾನು."

"ಹಾಗಾದರೆ ನೀನು ಆ ದಿನ ಬೆಳಗಾಗ ಪಿಂಟಿನ ಬಳಿ-ಕಿರುದೋಣಿಯಲ್ಲಿ-ಇದ್ದದ್ದು ಹೇಗೆ ?"

"ಆ ದಿನ ಬೆಳಗಾಗ ನಾನು ಪಿಂಟನ ಬಳಿ ಇರಲೇ ಇಲ್ಲ."

"ಅದು ಸುಳ್ಳು."

ಆಗ ಅಲ್ಲಿದ್ದ ಕೆಲವರು ಅವನ ಬಳಿಗೆ ಧಾವಿಸಿ, ಮುದುಕನೂ ಉಪದೇಶಕನೂ ಆದವನೊಂದಿಗೆ ಹಾಗೆಲ್ಲ ಮಾತನಾಡಬಾರದೆಂದು ಬೇಡಿಕೊಂಡರು.

ಉಪದೇಶಕನಾಗಿ ಹಾಳಾದ, ಅವನು ಮೋಸಗಾರ, ಸುಳ್ಳ. ಅವನು ಆ ದಿನ ಬೆಳಗಾಗ ಪಿಂಟಿನಲ್ಲಿದ್ದೂ. ಅಲ್ಲೇ ಅಲ್ಲವೆ ನಾನಿರುವುದೂ ? ಸರಿ ನಾನು ಅಲ್ಲಿದ್ದೆ, ಅವನೂ ಅಲ್ಲಿದ್ದ. ಅವನನ್ನು ನಾನು ಅಲ್ಲಿ ಕಂಡೆ. ಟಿಮ್ ಕಾಲಿನ್ಸನ್ನೂ ಇನ್ನೊಬ್ಬ ಹುಡುಗನನ್ನೂ ಕಟ್ಟಿಕೊಂಡು ಅವನು ಕಿರುದೋಣಿಯಲ್ಲಿ ಬಂದ."

ವೈದ್ಯ ಎದ್ದು ಕೇಳಿದ :

"ಮತ್ತೆ ಆ ಹುಡುಗನನ್ನು ಕಂಡರೆ ನೀನು ಗುರುತಿಸಬಲ್ಲೆಯಾ, ಹೈನ್ಸ್ ?"

"ಬಲ್ಲೆನೆಂದುಕೊಂಡಿದ್ದೇನೆ, ಆದರೆ ಹೇಗಾದೀತೋ. ಏಕೆ, ಈಗ ಅವನು ಅಲ್ಲೇ ಇದ್ದಾನೆ. ಅಕೋ ! ನಾನವನನ್ನು ಚೆನ್ನಾಗಿ ಬಲ್ಲೆ."

ಅವನು ತೋರಿಸಿದ್ದು ನನ್ನನ್ನು, ವೈದ್ಯ ಹೇಳಿದ :

"ನೆರೆಹೊರೆಯವರೆ, ಈ ಹೊಸಬರು ಮೋಸಗಾರರೋ, ಅಲ್ಲವೋ ನನಗೆ ತಿಳಿಯದು ಆದರೆ ಈ ಇಬ್ಬರಿದ್ದಾರಲ್ಲ, ಇವರು ಮೋಸಗಾರರಲ್ಲದೆ ಹೋದರೆ, ನನ್ನನ್ನು ತಿಳಿಗೇಡಿ ಅನ್ನಿ, ಅಷ್ಟೇ. ನಾವು ಈ ವಿಷಯವನ್ನು ಪರಿಶೀಲಿಸುವ ತನಕ ಅವರು ಅಲ್ಲಿಂದ ಹೊರಟುಹೋಗದಂತೆ, ನೋಡಿಕೊಳ್ಳುವುದು ನಮ್ಮ ಕರ್ತವ್ಯವೆಂದು ತಿಳಿಯುತ್ತೇನೆ. ಇತ್ತ ಬಾ, ಹೈನ್ಸ್ ; ಇತ್ತ ಬನ್ನಿ ಉಳಿದವರೂ, ನಾವು ಈ ಆಸಾಮಿಗಳನ್ನು ಪಥಿಕಾಶ್ರಮಕ್ಕೆ ಕರೆದೊಯ್ದು ಆ ಇನ್ನೊಂದು ಜತೆಯ ಮುಂದೆ

ನಿಲ್ಲಿಸೋಣ. ಆಗ ಕೊನೆಯೊಳಗಾಗಿ ನಾವು ಯಾವುದನ್ನೂ ಪತ್ತೆ ಮಾಡಬಹುದೆಂದು ನನಗೆ ತೋರುತ್ತದೆ."

ಅದು ಅಲ್ಲಿ ನೆರೆದಿದ್ದ ಮಂದಿಗೆ ಒಪ್ಪಿಗೆಯಾಯಿತು; ರಾಜನ ಸ್ನೇಹಿತರಿಗೆ ಹೇಗಾಯಿತೋ, ಅದಿರಲ್ಲಿ, ನಾವೆಲ್ಲರೂ ಹೊರಟೆವು. ಅಷ್ಟು ಹೊತ್ತಿಗೆ ಸಂಜೆಯಾಗುತ್ತಿತ್ತು. ವೈದ್ಯ ನನ್ನನ್ನು ಕೈ ಹಿಡಿದು ಕರೆದುಕೊಂಡು ಹೋದನು, ನನ್ನೊಡನೆ ಸಾಕಷ್ಟು ಮೃದುವಾಗಿಯೇ ನಡೆದುಕೊಂಡನು, ಆದರೆ ನನ್ನ ಕೈಯನ್ನು ಮಾತ್ರ ಬಿಡಲಿಲ್ಲ.

ನಾವೆಲ್ಲರೂ ಹೋಟಲಿನ ದೊಡ್ಡ ಕೊಟಡಿಯೊಂದನ್ನು ಪ್ರವೇಶಿಸಿದೆವು, ಕೆಲವು ಮೋಂಬತ್ತಿಗಳನ್ನು ಹಚ್ಚಿದೆವು, ಆ ಇಬ್ಬರು ಹೊಸಬರನ್ನು ಬಳಿಗೆ ಕರೆಸಿಕೊಂಡೆವು. ಮೊದಲು ವೈದ್ಯ ಹೇಳಿದ :

"ಈ ಇಬ್ಬರ ಬಗೆಗೆ ಕಠಿಣವಾಗಿ ನಡೆಯಲಪೇಕ್ಷಿಸುವುದಿಲ್ಲ ನಾನು, ಆದರೆ ನಾನಿವರನ್ನು ಮೋಸಗಾರರೆಂದು ತಿಳಿಯುತ್ತೇನೆ, ಮತ್ತು ಇವರೊಡನೆ ಈ ಕೆಲಸದಲ್ಲಿ ಸಹಕರಿಸಿದ ಇತರರೂ ಇರಬೇಕು. ಅವರ ಬಗೆಗೆ ನಮಗೇನೂ ತಿಳಿಯದು, ಅಂಥವರಿದ್ದರೆ, ಅವರು ಪೀಟರ್ ವಿಲ್ಕ್ಸ್ ಬಿಟ್ಟು ಹೋದ ಚಿನ್ನದ ಥೈಲಿಯನ್ನು ಎತ್ತಿಕೊಂಡು ಹೋಗಿರುವುದಿಲ್ಲವೆ ? ಅದು ಸಂಭವನೀಯವೆ. ಇವರು ಒಂದು ವೇಳೆ ಮೋಸಗಾರರಲ್ಲದೆ ಹೋಗಿದ್ದರೆ, ನಾವು ಆ ಹಣವನ್ನು ತಂದುಕೊಡಿ ಎಂದು ಕೇಳುವುದಕ್ಕೂ, ಇವರೇ ಹಕ್ಕುದಾರರೆನ್ನುವುದನ್ನು ಸ್ವತಃ ಖಚಿತಪಡಿಸುವ ತನಕ ಆ ಹಣವನ್ನು ನಾವು ಇಟ್ಟುಕೊಂಡಿರುವುದಕ್ಕೂ ಅಡ್ಡಿ ಮಾಡಲಾರರು, ಅಲ್ಲವೆ ?"

ಎಲ್ಲರೂ ಅದಕೊಪ್ಪಿದರು. ಹೀಗೆ ಪ್ರಾರಂಭದಲ್ಲಿಯೇ ಅವರು ನಮ್ಮ ತಂಡದವರನ್ನು ಬಲು ಇಕ್ಕಟ್ಟಿಗೆ ಸಿಕ್ಕಿಸಿಕೊಂಡಿದ್ದಾರೆಂದು ನಾನು ಭಾವಿಸಿದೆ. ಆದರೆ ರಾಜ ತನಗೆ ತುಂಬಾ ದುಃಖವಾಗಿದೆ ಎಂದು ನಟಿಸಿ, ಹೇಳಿದನು ;

"ಮಹನೀಯರೆ, ಆ ಹಣ ಅಲ್ಲಿದ್ದರೆ ಚೆನ್ನಾಗಿಯೇ ಇತ್ತು. ಏಕೆಂದರೆ, ಈ ಅನಿಷ್ಟ ವ್ಯವಹಾರದ ಬಗೆಗೆ ನ್ಯಾಯರೀತಿಯಲ್ಲಿ, ಸ್ವಲ್ಪವೂ ಮುಚ್ಚುಮರೆಯಿಲ್ಲದೆಯೆ ನಡೆಯಲಿರುವ ವಿಚಾರಣೆಗೆ ಭಂಗತರುವ ಉದ್ದೇಶವೇ ನನಗಿಲ್ಲ. ಆದರೆ, ಹಾ ! ಹಣ ಅಲ್ಲಿಲ್ಲ, ನಿಮಗೆ ಬೇಕಾದರೆ ನೀವು ಯಾರನ್ನಾದರೂ ಕಳಿಸಿ ನೋಡಿಕೊಳ್ಳಬಹುದು."

"ಅದೆಲ್ಲಿದೆ, ಹಾಗಾದರೆ ?"

"ಸರಿ, ನನ್ನ ತಮ್ಮನ ಹುಡುಗಿ ತನಗಾಗಿ ಇಟ್ಟುಕೊಂಡಿರೆಂದು ನನಗದನ್ನು ತಂದುಕೊಟ್ಟ ಮೇಲೆ, ನಾನದನ್ನು ನನ್ನ ಹಾಸುಗೆಯ ಹುಲ್ಲಿನ ಚೀಲದಲ್ಲಿ ಬಚ್ಚಿಟ್ಟೆ. ನಾವು ಇಲ್ಲಿರುವ ಕೆಲವು ದಿನಗಳ ಮಟ್ಟಿಗೆ ಅದನ್ನು ಬ್ಯಾಂಕಿನಲ್ಲಿಡುವುದು ಅನಗತ್ಯವೆನಿಸಿತು, ಹಾಸುಗೆಯೇ ಸುರಕ್ಷಿತ ಸ್ಥಳವೆಂದುಕೊಂಡಿದ್ದೆವು. ನಮಗೆ ನೀಗ್ರೊಗಳ ಪರಿಚಯವೇ ಇರಲಿಲ್ಲ. ಇಂಗ್ಲೆಂಡಿನಲ್ಲಿರುವ ಸೇವಕರಂತೆ ಅವರು ಪ್ರಾಮಾಣಿಕರಾಗಿರುವರೆಂದು ನಂಬಿದ್ದೆವು. ಮಾರನೆಯ ಬೆಳಗಾಗ ನಾನು ಮಹಡಿಯಿಂದಿಳಿದು

ಹೋಗಿದ್ದಾಗ ನೀಗ್ರೋಗಳು ಅದನ್ನು ಕದ್ದರು. ಅವರನ್ನು ನಾನು ಮಾರಿದ ಸಮಯದಲ್ಲಿ ಈ ಹಣ ನನ್ನ ಕೈ ಬಿಟ್ಟು ಹೋಗಿರಲಿಲ್ಲ. ಆದ್ದರಿಂದ ಅವರು ಸಲೀಸಾಗಿ ಹಾರಿಸಿ ಕೊಂಡು ಹೋದರು. ಇಲ್ಲಿರುವ ಈ ನನ್ನ ಸೇವಕ ಅದರ ವಿಷಯವನ್ನು ನಿಮಗೆ ತಿಳಿಸಬಲ್ಲವನಾಗಿದ್ದಾನೆ ಮಹನೀಯರೆ"

ವೈದ್ಯನೂ ಅಲ್ಲಿದ್ದ ಇತರರೂ "ಮಣ್ಣು!" ಎಂದರು; ಯಾರೂ ಅವನ ಮಾತನ್ನು ಪೂರ್ತಿ ನಂಬಲಿಲ್ಲವೆಂದೇ ನನಗೆ ಕಂಡುಬಂತು. ನೀಗ್ರೋಗಳು ಅದನ್ನು ಕದಿಯುತ್ತಿದ್ದುದನ್ನು ನೀನು ಕಂಡೆಯ ಎಂದು ನನ್ನನ್ನು ಒಬ್ಬ ಕೇಳಿದ. ಇಲ್ಲ ಎಂದೆ ನಾನು; ನೀಗ್ರೋಗಳು ಕೊಠಡಿಯ ಹೊರಕ್ಕೆ ಮೆಲ್ಲನೆ ಬರುತ್ತಿರುವುದನ್ನು ತಟ್ಟನೆ ಹೋದುದನ್ನೂ ನಾನು ಕಂಡದ್ದುಂಟೆಂದೂ, ನನ್ನ ಯಜಮಾನನಿಗೆ ಎಚ್ಚರವಾಯಿತೆಂದು ಅವರು ಗಾಬರಿಗೊಂಡು, ಅವನು ಎದ್ದು ಅವರನ್ನು ತರಾಟೆಗೆ ತೆಗೆದುಕೊಳ್ಳುವುದಕ್ಕೆ ಓಡಿಹೋಗಲು ಯತ್ನಿಸಿದ್ದರೆಂದೂ ನಾನು ಭಾವಿಸಿದೆ, ಎಂದೆನು. ಅಷ್ಟೇ ಅವರು ನನ್ನನ್ನು ಕೇಳಿದ್ದು. ಆಗ ವೈದ್ಯ ಸರಕ್ಕನೆ ನನ್ನ ಕಡೆಗೆ ತಿರುಗಿ ಕೇಳಿದ;

"ನೀನೂ ಇಂಗ್ಲಿಷಿನವನೋ ?"

ನಾನು ಹೌದು ಎಂದೆ; ಅವನೂ, ಇನ್ನು ಕೆಲವರೂ ನಕ್ಕು "ಅಬದ್ಧ!" ಎಂದರು.

ಆಮೇಲೆ ಅವರು ಒಟ್ಟು ವಿಷಯವನ್ನು ಸಂಶೋಧಿಸಲು ಹೊರಟರು; ಅಲ್ಲಿ ನಮಗೆ ತುಂಬಾ ಶ್ರಮವಾಯಿತು. ಮೇಲಕ್ಕೆ ಹೋಗುವುದು, ಕೆಳಕ್ಕೆ ಬರುವುದು, ಒಂದು ಗಂಟೆಯ ಕಾಲ ಹೊರಗೆ, ಒಂದು ಗಂಟೆಯ ಕಾಲ ಒಳಗೆ–ಹೀಗೆ ಅದು ನಡೆಯಿತು, ಯಾರೂ ಊಟದ ಮಾತನ್ನೇ ಎತ್ತಲಿಲ್ಲ; ಯಾರಿಗೂ ಅದು ನೆನಪಾಗಲಿಲ್ಲ ಅವರು ಹೀಗೆಯೇ ಮಾಡುತ್ತ ಹೋದರು; ಇಂಥ ಅತಿ ಕ್ಲಿಷ್ಟವಾದ ಸಮಸ್ಯೆಯನ್ನು ನೀವು ಕಂಡಿರಲಾರಿರಿ. ರಾಜನ ಬಾಯಿಂದ ಅವನ ಕಥೆಯನ್ನೂ, ಮುದುಕನ ಬಾಯಿಂದ ಅವನ ಕಥೆಯನ್ನೂ ಅವರು ಹೇಳಿಸಿದರು. ತುಂಬಾ ಪೂರ್ವಗ್ರಹ ಪೀಡಿತರಾದ ಮೂರ್ಖರ ಹೊರತು ಇನ್ನು ಯಾರಿಗಾದರೂ ಆ ಮುದುಕನ ಮಾತು ಸತ್ಯವೆಂದೂ, ಆ ಇನ್ನೊಬ್ಬನ ಮಾತು ಸಟೆಯೆಂದೂ ಕಂಡುಬರುತ್ತಿತ್ತು. ಕ್ರಮೇಣ ನಿನಗೆ ತಿಳಿದಿರುವುದನ್ನು ಹೇಳು ಎಂದು, ಅವರು ನನಗೆ ತಗುಲಿಕೊಂಡರು. ರಾಜ ತನ್ನ ಕಣ್ಣಂಚಿನಿಂದ ನನ್ನನ್ನು ಒಂದು ಸಲ ವಕ್ರವಾಗಿ ನೋಡಿದನು; ಆದ್ದರಿಂದ ನಾನು ಸರಿಯಾದ ಪಕ್ಷವಹಿಸಿ ಮಾತನಾಡಬೇಕೆಂಬುದು ನನಗೆ ಸಾಕಷ್ಟು ಅರಿಯಿತು. ನಾನು ಷೆಫೀಲ್ಡಿನ ವಿಷಯವನ್ನೂ, ನಾವು ಅಲ್ಲಿ ಹೇಗೆ ಬಾಳುತ್ತಿದ್ದೆವೆಂಬುದನ್ನೂ, ಇಂಗ್ಲಿಷ್ ವಿಲ್ಕ್ಸ್‌ರ ಬಗಗೆ ಎಲ್ಲವನ್ನೂ ಇತ್ಯಾದಿ ಇತ್ಯಾದಿ ಹೇಳತೊಡಗಿದೆನು. ನನ್ನ ಮಾತು ಹೆಚ್ಚು ದೂರ ಹೋಗುವುದರೊಳಗಾಗಿ ಆ ವೈದ್ಯ ನಕ್ಕನು, ವಕೀಲ ಲೆವಿ ಬೆಲ್ ಹೇಳಿದ;

"ಕುಳಿತುಕೋ, ಮಗು ; ನಾನೇ ನೀನಾಗಿದ್ದರೆ ನಾನಿಷ್ಟರ ಮಟ್ಟಿಗೆ ಶ್ರಮಪಡು ತ್ತಿರಲಿಲ್ಲ. ಸುಳ್ಳು ಹೇಳುವುದಕ್ಕೆ ನಿನಗೆ ಬಾರದೆಂಬುದು ನನಗೆ ತಿಳಿದಿದೆ, ಅದು ನಿನಗೆ ಸರಿಯಾಗಿ ಒದಗಿ ಬರುತ್ತಲೂ ಇಲ್ಲ ; ನಿನಗೆ ಇನ್ನೂ ಅನುಭವ ಸಾಲದು. ನೀನದನ್ನು ಸರಿಯಾಗಿ ಮಾಡಲೂ ಅರಿಯೆ."

ಅವನ ಹೊಗಳಿಕೆಗೆ ನಾನು ಗಮನ ಕೊಡಲಿಲ್ಲ ; ಆದರೆ ಹೇಗಾದರೂ ನನ್ನನ್ನು ಬಿಟ್ಟುಬಿಟ್ಟರೆ ಸಾಕು ಎನ್ನಿಸಿತ್ತು.

ವೈದ್ಯ ಏನನ್ನೋ ಹೇಳತೊಡಗಿ, ಒಂದು ಪಕ್ಕಕ್ಕೆ ತಿರುಗಿ ಹೇಳಿದ ; "ಲಿವಿ ಬೆಲ್, ನೀನು ಮುಂಚಿತವಾಗಿಯೇ ಊರಿಗೆ ಬಂದುಬಿಟ್ಟಿದ್ದರೆ—"

ರಾಜ ನಡುವೆ ತಲೆಹಾಕಿ, ತನ್ನ ಕೈಯನ್ನು ಮುಂದೆ ನೀಡಿ ಹೇಳಿದ:

"ಓ, ಇದು ನನ್ನ ನಿರ್ಭಾಗ್ಯನಾದ ಮೃತ ಸೋದರನ ಹಳೆಯ ಸ್ನೇಹಿತರಲ್ಲವೆ ? ನಿಮ್ಮ ವಿಚಾರವಾಗಿ ಅವನು ಅನೇಕಸಲ ನನಗೆ ಬರೆದಿದ್ದಾನೆ."

ವಕೀಲನೂ ಅವನೂ ಪರಸ್ಪರ ಕೈಕುಲುಕಿದರು. ವಕೀಲ ನಸುನಕ್ಕನು, ಸಂತುಷ್ಟ ನಾದಂತೆ ತೋರ್ಪಡಿಸಿಕೊಂಡನು; ಇಬ್ಬರೂ ಸ್ವಲ್ಪಹೊತ್ತು ಹಾಗೆಯೇ ಮಾತಾಡುತ್ತಿ ದ್ದರು. ಬಳಿಕ ವಕೀಲ ಒಂದು ಪಕ್ಕಕ್ಕೆ ಸರಿದು ಮೆಲುದನಿಯಲ್ಲಿ ಮಾತಾಡಿದನು ಆಮೇಲೆ ಅವನು ಈಚೆಗೆ ಬಂದು ಹೇಳಿದನು:

"ಹಾಗೆ ಮಾಡಿದರೆ ಅದು ಇತ್ಯರ್ಥವಾಗುತ್ತದೆ. ನಾನು ಅಪ್ಪಣೆಯನ್ನು ಪಡೆದ. ನಿನ್ನ ಸೋದರನೊಂದಿಗೆ ಕಳಿಸಿಕೊಡುತ್ತೇನೆ. ಎಲ್ಲವೂ ಸರಿಯಾಗಿಯೇ ಇದೆ ಎಂಬುದು ಅವರಿಗೆ ಆಗ ತಿಳಿಯುತ್ತದೆ."

ಸರಿ ಅವರು ಒಂದು ಬಿಳಿಯ ಹಾಳೆಯನ್ನೂ ಒಂದು ಲೇಖನಿಯನ್ನೂ ತಂದರು. ರಾಜ ಅಲ್ಲೇ ಕುಳಿತುಕೊಂಡು ತನ್ನ ತಲೆಯನ್ನು ಒಂದು ಪಕ್ಕಕ್ಕೆ ತಿರುಗಿಸಿ, ನಾಲಗೆ ಯಿಂದ ತುಟಿಯನ್ನು ಸವರುತ್ತಾ ಏನನ್ನೋ ಗೀಚಿ ಹಾಕಿದನು. ಬಳಿಕ ಅವರು ಲೇಖನಿ ಯನ್ನು ಡ್ಯೂಕ್‌ನ ಮುಂದೆ ಇಟ್ಟರು — ಆಗ ಪ್ರಥಮತಃ ಡ್ಯೂಕನಿಗೆ ಆಕಾಶವೇ ಕಳಚಿ ಬಿದ್ದಂತೆ ತೋರಿತು. ಆದರೂ ಅವನು ಲೇಖನಿಯನ್ನು ಹಿಡಿದು ಬರೆದನು, ವಕೀಲ ಆ ಹೊಸ ಮುದುಕನ ಕಡೆಗೆ ತಿರುಗಿ ಹೇಳಿದ:

"ನೀನೂ ನಿನ್ನ ತಮ್ಮನೂ ದಯವಿಟ್ಟು ಒಂದೆರಡು ಪಂಕ್ತಿಗಳನ್ನು ಬರೆದು ನಿಮ್ಮ ರುಜು ಹಾಕಿ."

ಆ ಮುದುಕ ಬರೆದ; ಅವನು ಬರೆದದ್ದನ್ನು ಯಾರಿಗೂ ಓದಲಾಗಲಿಲ್ಲ. ವಕೀಲ ನಿಗೆ ಮಹದಾಶ್ಚರ್ಯವಾಯಿತು, ಅವನು ಹೇಳಿದ :

"ಇದು ನನಗೆ ಅರ್ಥವೇ ಆಗುತ್ತಿಲ್ಲ;" ತನ್ನ ಜೇಬಿನಿಂದ ಒಂದು ಕಂತೆ ಹಳೆಯ ಕಾಗದಗಳನ್ನು ಈಚೆಗೆ ತೆಗೆದಿಟ್ಟು ಅವುಗಳನ್ನು ಪರಿಶೀಲಿಸಿದನು. ಆಮೇಲೆ ಆ ಮುದುಕನ ಕೈಬರಹವನ್ನು, ರಾಜ ಮತ್ತು ಡ್ಯೂಕರ ಕೈಬರಹವನ್ನೂ ಪರಿಶೀಲಿಸಿದನು,

ಬಳಿಕ ಅವನು ಹೇಳಿದ ;" ಈ ಹಳೆಯ ಕಾಗದಗಳು ಹಾರ್ನೆವಿಲ್ಕ್ಸಿಂದ ಬಂದವು; ಇಲ್ಲಿ ಈ ಎರಡು ಕೈ ಬರಹಗಳಿವೆ. ಇವೆರಡರಲ್ಲಿ ಯಾವೊಂದೂ ವಿಲ್ಕ್ಸನ ಕೈಬರಹವಲ್ಲವೆಂದು ಯಾರೂ ತಿಳಿಯಬಲ್ಲರು"––(ರಾಜನೂ ಡ್ಯೂಕನೂ ಇಲ್ಲಿಗೆ ಸುಸ್ತಾದಂತೆಯೂ ತಾವು ತಿಳಿಗೇಡಿಗಳೆಂದೂ ತೋರ್ಪಡಿಸಿಕೊಂಡರು; ವಕೀಲ ತಮಗೆ ಹೇಗೆ ಕೈಕೊಟ್ಟನೆಂಬುದು ಅವರಿಗೆ ಅರಿವಾಗಿತ್ತೆಂದು ಹೇಳಬೇಕಾಗಿಲ್ಲ)—"ಮತ್ತು ಈ ಮುದುಕನ ಕೈಬರಹವಿದೆಯಲ್ಲ, ಇದು ವಿಲ್ಕ್ಸ್ ಬರೆದದ್ದಲ್ಲವೆಂದು ಯಾರೂ ಸುಲಭವಾಗಿ ಹೇಳಬಲ್ಲರು—ನಿಜಾಂಶವೇನೆಂದರೆ, ಇವನು ಬರೆಯುವ ಗೀಚುಗೆರೆಗಳು ಬರವಣಿಗೆಯ ಜಾತಿಗೇ ಸೇರಿದವಲ್ಲ. ಇಲ್ಲಿ ಕೆಲವು ಕಾಗದಗಳಿವೆ, ನೋಡಿ—"

ಹೊಸ ಮುದುಕ ಹೇಳಿದ ;

"ನಾನು ಸ್ವಲ್ಪ ವಿವರಿಸುತ್ತೇನೆ, ದಯವಿಟ್ಟು ಅವಕಾಶ ಕೊಡಿ. ಇಲ್ಲಿರುವ ನನ್ನ ಸೋದರನನ್ನು ಬಿಟ್ಟರೆ ಇನ್ನು ಯಾರೂ ನನ್ನ ಕೈಬರಹವನ್ನು ಓದಲಾರರು—ಅದಕ್ಕಾಗಿ ಅವನು ಅದನ್ನು ನಕಲು ಮಾಡುತ್ತಾನೆ. ಇಲ್ಲಿ ನಿಮ್ಮ ಬಳಿ ಇರುವುದು ಅವನ ಕೈಬರಹವೇ ಹೊರತು ನನ್ನದಲ್ಲ,"

"ಸರಿ, ಸರಿ, ಇದು ಅತಿ ವಿಚಿತ್ರವಾದ ಪರಿಸ್ಥಿತಿ, ವಿಲ್ಲಿಯಮ್ಮಿನ ಕೆಲವು ಕಾಗದಗಳೂ ನನ್ನ ಹತ್ತಿರ ಇವೆ. ಆದ್ದರಿಂದ ನೀವು ಕೈಯಲ್ಲಿ ಒಂದೆರಡು ಪಂಕ್ತಿಗಳನ್ನು ಬರೆಸುವಿರಾದರೆ ಆಗ ನಾವು—"

"ಅವನು ತನ್ನ ಎಡಗೈಯಲ್ಲಿ ಬರೆಯಲಾರ, ಎಂದನು ಮುದುಕ. "ತನ್ನ ಬಲಗೈಯನ್ನು ಬಳಸುವುದು ಅವನಿಗೆ ಸಾಧ್ಯವಿದ್ದಿದ್ದರೆ, ತನ್ನ ಕಾಗದಗಳನ್ನೂ ನನ್ನ ಕಾಗದಗಳನ್ನೂ ಬರೆದವನು ಅವನೇ ಎಂಬುದು ನಿಮಗೆ ಕಂಡುಬರುತ್ತಿತ್ತು. ಎರಡನ್ನೂ ದಯವಿಟ್ಟು ನೋಡಿ—ಎರಡೂ ಒಬ್ಬನವೇ."

ವಕೀಲ ಹಾಗೆ ಮಾಡಿದ, ಮತ್ತು ಹೇಳಿದ:

"ಅದು ಹಾಗೆಯೇ ಇದೆ ಎಂದು ನಾನು ನಂಬುತ್ತೇನೆ—ಒಂದು ವೇಳೆ ಎರಡೂ ಒಂದೇ ಅಲ್ಲದಿದ್ದರೂ, ನನಗೆ ಮೊದಲು ಕಂಡುಬಾರದಿದ್ದ, ಅತಿ ಹತ್ತಿರದ ಹೋಲಿಕೆ ಬೇಕಾದಷ್ಟಿದೆ. ಸರಿ, ಸರಿ, ಸರಿ! ನಾವು ಈ ಸಮಸ್ಯೆಯನ್ನು ಬಗೆಹರಿಸುವ ಜಾಡಿನಲ್ಲಿದ್ದೆವೆಂದು ನನಗನ್ನಿಸಿತು, ಆದರೆ ಅದೀಗ ಬಹುಮಟ್ಟಿಗೆ ಮಣ್ಣುಗೂಡಿತು. ಏನೇ ಆಗಲಿ, ಒಂದಂತೂ ನಿಶ್ಚಯ—ಇವರಿಬ್ಬರಲ್ಲಿ ಯಾವೊಬ್ಬನೂ ವಿಲ್ಕ್ಸ್ ಅಲ್ಲವೆಂಬುದು."—ಅವನು ರಾಜನ ಕಡೆಗೂ ಡ್ಯೂಕನ ಕಡೆಗೂ ತಲೆಯಾಡಿಸಿದನು.

ಸರಿ, ಏನು ಹೇಳುತ್ತೀರ? ಆ ಗೋಜಲು ಮೆದುಳಿನ ಮುದಿ ಮೂರ್ಖ ಆಗಲೂ ಬಿಡಲಾರ! ಅವನು ಅದನ್ನು ಅಲ್ಲಿಗೆ ಬಿಡಲೇ ಇಲ್ಲ: ಇದು ಪಕ್ಷಪಾತರಹಿತವಾದ ತನಿಖೆಯೇ ಅಲ್ಲವೆಂದನು. ತನ್ನ ಸೋದರನಾದ ವಿಲ್ಲಿಯಂ ಈಗ ಜಗತ್ತಿನಲ್ಲೇ ಅತಿ ತುಚ್ಛನಾದ ತಮಾಷೆಗಾರನೆಂದೂ, ಅವನು ಬರೆಯಲು ಪ್ರಯತ್ನಿಸಿರಲಿಲ್ಲವೆಂದೂ—

ಕಾಗದದಮೇಲೆ ಲೇಖನಿಯನ್ನು ಇಟ್ಟಕ್ಷಣವೇ ಅವನು ತನ್ನ ವಿನೋದಗಳಲ್ಲಿ ಒಂದನ್ನು ಪ್ರದರ್ಶಿಸುತ್ತಿದ್ದನೆಂಬುದು ತಾನು ಕೂಡ ವಿಷಯುವೇದೂ ಹೇಳಿದನು. ಹಾಗೆಯೇ ಅವನು ಉತ್ತೇಜನಗೊಂಡು, ತಾನು ಆಡುತ್ತಿದ್ದ ಮಾತಷ್ಟೂ ತನಗೇ ಎಂಬುದು ತನಗೆ ತೋರತೊಡಗುವವರೆಗೂ ಹಾಡುತ್ತಲೇ ಹೋದನು. ಆದರೆ ಈ ಹೊಸ ಮುಂದುಕ ನಡುವೆ ಬಾಯಿಹಾಕಿ ಹೇಳಿದ:

"ನನಗಿನ್ನೊಂದು ಹೊಳೆಯಿತು. ನನ್ನ ಸೋದರನನ್ನು—ಗತಿಸಿದ ಪೀಟರ್ ವಿಲ್ಕ್ಸನ್ನು ಮಣ್ಣುಮಾಡುವ ಸಮಯದಲ್ಲಿ ನೆರವಾದವರಲ್ಲಿ ಯಾರಾದರೂ ಇಲ್ಲಿ ದ್ದಾರೆಯೆ ?"

"ಹೌದು" ಎಂದನು ಒಬ್ಬ, "ನಾನೂ ಆ್ಯಬ್ ಟರ್ನರೂ ಆ ಕೆಲಸವನ್ನು ಮಾಡಿ ದೆವು. ಇಬ್ಬರೂ ಇಲ್ಲೇ ಇದ್ದೇವೆ."

ಆಗ ಆ ಮುಂದುಕ ರಾಜನ ಕಡೆಗೆ ತಿರುಗಿ ಹೇಳಿದ:

"ಅವನು ಎದೆಯ ಮೇಲೆ ಏನನ್ನು ಹಚ್ಚೆ ಹಾಕಲಾಗಿತ್ತೆಂಬುದನ್ನು ಈ ಮಹನೀಯ ನನಗೆ ಹೇಳಿಯಾನು."

ಆ ಪ್ರಶ್ನೆಗೆ ತಟಕ್ಕನೆ ಉತ್ತರ ಕೊಡಲು ರಾಜ ಹೆಣಗಾಡಲೇ ಬೇಕಿರದಿದ್ದರೆ, ಕೇಳಿ! ಇಲ್ಲದೆ ಹೋದಲ್ಲಿ ಅವನು, ನದಿಯ ನೀರು ತನ್ನ ತಳವನ್ನು ಕೊರೆದು ಹಾಕಿರಲು ಕಡಿ ದಾದ ದಡ ಧಡಕ್ಕನೆ ಕುಸಿಯುವಂತೆ, ಕುಸಿದು ಬೀಳುತ್ತಿದ್ದನು; ಈ ಹೊಡೆತ ಅಷ್ಟು ಅನಿರೀಕ್ಷಿತವಾಗಿತ್ತು. ಅಂಥದೊಂದು ಸಂಶಯಾಸ್ಪದವಲ್ಲದ ಅನಿರಿಕ್ಷಿತ ಮುಖ್ಯ ಪ್ರಮಾಣದ ಎದುರಿನಲ್ಲಿ ಎಂಥವರೂ ಕುಸಿದು ಬೀಳುವಂತಿತ್ತು, ನೋಡಿ; ಅ ಉದ್ದೇಶ ದಿಂದಲೇ ಅವನು ಅದನ್ನು ಮುಂದಿಟ್ಟಿದ್ದು. ಏಕೆಂದರೆ, ಅವನ ಎದೆಯಮೇಲೆ ಯಾವ ಹಚ್ಚೆಯಿತ್ತೆಂದು ಬಲ್ಲವರಾರು? ರಾಜನ ಮುಖ ಬಿಳಿಚಿತು; ಅದನ್ನು ತಡೆಯುವುದಕ್ಕೆ ಅವನಿಂದಾಗಲಿಲ್ಲ; ಅವನು ಅಚಲವಾಗಿ ನಿಂತುಬಿಟ್ಟನು. ಎಲ್ಲರೂ ಮುಂದಕ್ಕೆ ತಲೆಬಾಗಿ ಅವನನ್ನೇ ಎವೆಯಿಕ್ಕದೆ ನೋಡುತ್ತಿದ್ದರು, ಇನ್ನವನು ಸಮ್ಮತ ಹೊಡೆಯುತ್ತಾನೆ— ಇನ್ನದರಿಂದ ಯಾವ ಪ್ರಯೋಜನವೂ ಇಲ್ಲ, ಎಂದುಕೊಂಡೆ, ಅವನು ಹಾಗೆ ಮಾಡಿ ದನೆ? ಯಾರೂ ಅದನ್ನು ನಂಬಲಾರರು, ಅವನು ಹಾಗೆ ಮಾಡಲಿಲ್ಲ. ಆ ಜನರೆಲ್ಲರೂ ಸುಸ್ತಾಗಿ ಚೆದರಿ ಹೋಗುವಂತೆ ತಾನು ಮಾಡುವತನಕ ಮತ್ತು ತನಗೂ ಡ್ಯೂಕನಿಗೂ ಆಲ್ಲಿಂದ ಕಾಲ್ತೆಗೆಯಲು ಅವಕಾಶ ಸಿಕ್ಕುವ ತನಕ ತಾನು ಹೀಗೆಯೇ ಇದನ್ನು ಎಳೆದು ಕೊಂಡು ಹೋಗಬಹುದೆಂದಿದ್ದನೆಂದು ನನಗೆ ತೋರಿತು. ಅದು ಹೇಗಿರಲಿ, ಅವನು ಅಲ್ಲೇ ಕುಳಿತಿದ್ದ; ಬಲುಬೇಗ ಸ್ವಲ್ಪ ನಸುನಕ್ಕು ನುಡಿದ:

"ಅಂ! ಇದೊಂದು ಅತಿ ಜಟಿಲವಾದ ಪ್ರಶ್ನೆಯಲ್ಲವೆ, ಇದಲ್ಲವೆ? ಹೌದು, ಸ್ವಾಮಿ, ಅವನೆದೆಯ ಮೇಲಿದ್ದ ಹಚ್ಚೆ ಯಾವುದೆಂದು ನಾನು ನಿಮಗೆ ಹೇಳಬಲ್ಲೆ. ಅದೊಂದು ಕೇವಲ ಚಿಕ್ಕದಾದ, ತೆಳುವಾದ ನೀಲಿಯ ಬಾಣ—ಅಷ್ಟೇ ಅದು. ನೀವ

ದನ್ನು ಬಲು ಹತ್ತಿರದಿಂದ ನೋಡದೆ ಹೋದರೆ ಅದು ನಿಮ್ಮ ಕಣ್ಣಿಗೇ ಬೀಳುವುದಿಲ್ಲ, ಏ!—ಈಗ ಏನು ಹೇಳುವೆ?"

ನಾನಂಥಾ ಪಳಗಿದ ಪಕ್ಕಾ ಭಂಡನನ್ನು ಎಂದೂ ನೋಡಿಯೇ ಇಲ್ಲ. ಈ ಹೊಸ ಮುಂದುಂಕ ತಟ್ಟನೆ ಆ್ಯಬ್‌ಟರ್ನರಿನ ಮತ್ತು ಜೊತೆಯವನ ಕಡೆಗೆ ತಿರುಗಿ ನೋಡಿದ; ಈಸಲ ಈ ಆಸಾಮಿಯನ್ನು ಹಿಡಿದು ಹಾಕಿದೆ ಎಂಬ ನಂಬಿಕೆಯಿಂದ ಅವನ ಕಣ್ಣುಗಳು ಮಿಂಚಿದವು. ಅವನು ಹೇಳಿದ:

"ಕೇಳಿದಿರ—ಅವನು ಹೇಳಿದ್ದನ್ನು ಕೇಳಿದಿರ! ಪೀಟರ್ ವಿಲ್ಕ್ಸ್‌ನ ಎದೆಯ ಮೇಲೆ ಆ ಪಚ್ಚೆಯಿದ್ದದ್ದನ್ನು ನೀವು ಕಂಡಿರ ?"

ಇಬ್ಬರೂ ಒಡನೆಯೇ ಹೇಳಿದರು:

"ನಾವು ಅಂಥಾ ಯಾವ ಗುರುತನ್ನೂ ಕಾಣಲಿಲ್ಲ."

"ಒಳ್ಳೆಯದಾಯಿತು!" ಎಂದನು ಮುಂದುಂಕ. "ಅವನೆದೆಯ ಮೇಲೆ ನೀವು ಮಾಸಿಹೋದ ಸಣ್ಣ 'ಪಿ' ಒಂದನ್ನೂ, 'ಬಿ' ಒಂದನ್ನೂ ('ಬಿ' ಅವನು ಚಿಕ್ಕಂದಿನಲ್ಲೇ ಬಿಟ್ಟುಬಿಟ್ಟ ಅಂಕಿತದ ಮೊದಲಕ್ಷರ), ಜತೆಗೆ 'ಡಬ್ಲ್ಯು' ಒಂದನ್ನೂ ನಡುವಣ ಗೀಟುಗಳೊಂದಿಗೆ, 'ಪಿ–ಬಿ–ಡಬ್ಲ್ಯು' ಎಂದಿರುವುದನ್ನು ನೋಡಿಯೇ ಇದ್ದಿರಿ," ಅವನು ಒಂದು ಚೂರು ಕಾಗದದ ಮೇಲೆ ಅದನ್ನು ಬರೆದು ತೋರಿಸಿದನು, "ಬನ್ನಿ, ನೀವು ನೋಡಿದ್ದು ಅದನ್ನಲ್ಲದೆ ?"

ಅವರಿಬ್ಬರೂ ಏಕಕಾಲದಲ್ಲಿ ಹೇಳಿದರು:

"ಇಲ್ಲ, ನಾವು ನೋಡಲಿಲ್ಲ. ನಾವು ಯಾವ ಗುರುತುಗಳನ್ನೂ ಕಾಣಲೇ ಇಲ್ಲ." ಅಷ್ಟುಹೊತ್ತಿಗೆ ಎಲ್ಲರೂ ಒಂದು ನಿರ್ಧಾರಕ್ಕೆ ಬಂದಿದ್ದರು, ಎಲ್ಲರೂ ಕೂಗಿದರು:

"ಇವರೆಲ್ಲರೂ ಇಡೀ ಮೋಸಗಾರರು! ಇವರನ್ನು ಹಿಡಿದು ಹಾಕೋಣ! ನದಿಯಲ್ಲಿ ಮುಳುಗಿಸೋಣ! ಇವರನ್ನು ಊರ ಸುತ್ತಲೂ ಮೆರವಣಿಗೆ ಮಾಡೋಣ!" ಎಲ್ಲರೂ ಏಕಕಾಲದಲ್ಲಿ ಬೊಬ್ಬೆ ಹಾಕುತ್ತಿದ್ದರು, ಕಿವಿ ಬಿರಿಯುವಂತೆ ಗದ್ದಲವೆದ್ದಿತು. ಆದರೆ ವಕೀಲ ಮೇಜಿನಮೇಲೆ ಎಗರಿ ನಿಂತು ಕಿರಿಚಿದನು, ಹೇಳಿದನು;

"ಮಹನೀಯರೆ—ಮಹನೀಯರೆ! ನನ್ನ ಒಂದು ಮಾತನ್ನು ಕೇಳಿ—ಕೇವಲ ಒಂದು ಮಾತು—ದಯವಿಟ್ಟು! ಇನ್ನೂ ಒಂದು ಮಾರ್ಗವಿದೆ–ನಾವು ಹೋಗಿ ಹೆಣವನ್ನು ಅಗೆದು ತೆಗೆದು ನೋಡೋಣ."

ಆ ಮಾತು ಅವರನ್ನು ಸುಮ್ಮನಾಗಿಸಿತು.

"ಹೂರೇ!" ಎಂದೆಲ್ಲರೂ ಕೂಗಿದರು; ಅಲ್ಲಿಂದಲೇ ನೇರ ಹೊರಡಲು ಸಿದ್ಧವಾದರು. ಆಗ ವೈದ್ಯನೂ ವಕೀಲನೂ ಅವರನ್ನು ತಡೆದು ಹೇಳಿದರು;

"ನಿಲ್ಲಿ, ನಿಲ್ಲಿ ! ಈ ನಾಲ್ವರನ್ನೂ ಆ ಹುಡುಗನನ್ನೂ ಕಟ್ಟಿಹಾಕಿ ಅವರನ್ನೂ ಕರೆದುಕೊಂಡು ಬನ್ನಿ!"

"ನಾವದನ್ನು ಮಾಡುತ್ತೇವೆ!" ಎಂದೆಲ್ಲರೂ ಅರಚಿದರು ; "ಆ ಚಿಹ್ನೆಗಳು ಅಲ್ಲಿಲ್ಲದೆ ಹೋದರೆ ಇಡೀ ಇವರ ತಂಡವನ್ನು ಬಲಿಹಾಕುತ್ತೇವೆ."

ನನಗೆ ಹೆದರಿಕೆಯಾಯಿತು, ನೋಡಿ. ಕಳಚಿಕೊಳ್ಳಲು ದಾರಿಯೇ ಇರಲಿಲ್ಲ, ನೋಡಿ. ಅವರು ನಮ್ಮೆಲ್ಲರ ಕೈಗಳನ್ನೂ ಬಿಗಿಯಾಗಿ ಹಿಡಿದು ನೆಟ್ಟಗೆ ನೇರ ಸ್ಮಶಾನಕ್ಕೆ ಅಟ್ಟಿಕೊಂಡು ಹೋದರು. ಅದು ನದಿಯ ಕೆಳಗೆ ಒಂದೂವರೆ ಮೈಲಿಯ ದೂರದಲ್ಲಿತ್ತು. ಊರಿಗೆ ಊರೇ ನಮ್ಮನ್ನು ಹಿಂಬಾಲಿಸಿತ್ತು. ನಾವೂ ಸಾಕಷ್ಟು ಗದ್ದಲ ಮಾಡಿದೆವು, ಅಗಿನ್ನೂ ಸಂಜೆಯ ಒಂಬತ್ತು ಗಂಟೆ.

ನಾವು ನಮ್ಮ ಮನೆಯ ಮುಂದೆಯೇ ಹೋಗುತ್ತಿದ್ದಾಗ, ನಾನು ಮೇರಿ ಜೇನಳನ್ನು ಊರಾಚೆಗೆ ಕಳಿಸಬಾರದಾಗಿತ್ತು ಎನ್ನಿಸಿತು. ಈಗ ನಾನು ಅವಳಿಗೆ ಕಣ್ಸನ್ನೆ ಮಾಡಿದ್ದರೆ ಅವಳು ಈಚೆಗೆ ಬಂದು ನನ್ನನ್ನು ಸಂರಕ್ಷಿಸುತ್ತಿದ್ದಳು, ನಮ್ಮ ಮಹಾಮೋಸಗಾರರನ್ನು ಬಯಲಿಗೆಳೆಯುತ್ತಿದ್ದಳು

ಸರಿ, ನಾವು ಕಾಡುಬೆಕ್ಕುಗಳಂತೆ ವರ್ತಿಸುತ್ತ, ನದಿಯ ದಾರಿಯುದ್ದಕ್ಕೂ ಹೋದೆವು. ಅದನ್ನು ಇನ್ನಷ್ಟು ಬೆದರಿಸಲು, ಬಾನು ಕಪ್ಪೇರಿತು, ಮಿಂಚು ಓರೆಗಣ್ಣಿನಿಂದ ನೋಡಿ ಅಲ್ಲಲ್ಲೇ ಆರಿಹೋಗಲಾರಂಭಿಸಿತು, ಗಾಳಿ ಎಲೆಗಳ ನಡುವೆ ನಡುಗತೊಡಗಿತು. ಇದೀಗ ನಾನೆಂದೂ ಸಿಕ್ಕಿಬಿಳದಿದ್ದ ಮಹಾ ಭಯಂಕರವೂ ಮಹಾ ಅಪಾಯಕರವೂ ಆದ ಸಂದರ್ಭವಾಗಿತ್ತು; ನನಗೆ ಕೊಂಚ ದಿಗ್ಭ್ರಮೆಯಾಯಿತು ; ಎಲ್ಲವೂ ನನ್ನ ನಿರೀಕ್ಷೆಗೆ ವಿರುದ್ಧವಾದ ದಿಕ್ಕಿನಲ್ಲಿ ಸಾಗುತ್ತಿತ್ತು; ನನಗೆ, ಬೇಕಿದ್ದರೆ, ಎಷ್ಟು ಕಾಲ ಅಗತ್ಯವೋ ಅಷ್ಟನ್ನೂ ತೆಗೆದುಕೊಂಡು, ನೆಮ್ಮದಿಯಾಗಿದ್ದುಕೊಂಡು, ನಡೆಯುವ ತಮಾಷೆಗಳೆಲ್ಲವನ್ನೂ ನೋಡಿಕೊಂಡು, ನನ್ನ ರಕ್ಷಣೆಗೆ ಮೇರಿ ಜೇನಳ ಬೆಂಬಲವನ್ನು ಪಡೆದು, ಕಡೆಯ ಅಂಕದಲ್ಲಿ ಬಿಡುಗಡೆ ಹೊಂದುವಂಥಾ ಏರ್ಪಾಡಿಗೆ ಬದಲಾಗಿ, ಇಲ್ಲಿ ನನಗೆ ಒದಗಿದ್ದೇನು ? ನನಗೂ ಅನಿರೀಕ್ಷಿತ ಮೃತ್ಯುವಿಗೂ ನಡುವೆ ಆ ಹಚ್ಚೆಗುರುತುಗಳಲ್ಲದೆ ಇನ್ನೇನೂ ಇಲ್ಲವಾಗಿದೆ, ಅವರಿಗೆ ಅದು ಕಂಡುಬಾರದೆ ಹೋದರೆ—

ಅದರ ಬಗೆಗೆ ಯೋಚಿಸುವುದೇ ನನಗೆ ಶಕ್ಯವಾಗಲಿಲ್ಲ; ಆದರೆ, ಏಕೋ ಏನೋ, ಇನ್ನೇನನ್ನು ಯೋಚಿಸುವುದೂ ನನ್ನಿಂದಾಗಲಿಲ್ಲ. ಕತ್ತಲೆ ಕಗ್ಗತ್ತಲೆ ತುಂಬುತ್ತ ಬಂತು ; ಆ ಜನಜಂಗುಳಿಯಿಂದ ನುಣುಚಿಕೊಳ್ಳಲು ಅದು ಪಸಂದಾದ ಕಾಲವಾಗಿತ್ತು; ಆದರೆ ಆ ದೈತ್ಯ—ಹೈನ್ಸ್—ಭದ್ರವಾಗಿ ನನ್ನ ಕೈ ಹಿಡಿದಿದ್ದನು. ಅವನ ಹಿಡಿತದಿಂದ ತಪ್ಪಿಸಿಕೊಳ್ಳುವುದು, ಆ ಫಿಲಿಸ್ಟೀನ್ ದೈತ್ಯ ಗೋಲಿಯಾತನಿಂದ ಪಾರಾಗುವಷ್ಟೇ ಸುಲಭವಾಗಿತ್ತು! ಅವನು ನನ್ನನ್ನು ಉದ್ದಕ್ಕೂ ಎಳೆದುಕೊಂಡ

ಹೋಗುತ್ತಿದ್ದನು, ಅವನಿಗೆ ಅಷ್ಟು ಉತ್ಸುಕತೆಯುಂಟಾಗಿತ್ತು, ನಾನು ಅವನ ಜತೆಗಿರಲು ಓಡಬೇಕಾಗಿತ್ತು.

ಸ್ಮಶಾನವನ್ನು ಸಮೀಪಿಸಿದ ಕೂಡಲೇ ಎಲ್ಲರೂ ಅಲ್ಲಿಗೆ ಪ್ರವಾಹದಂತೆ ಉಕ್ಕೇರಿ ಒಟ್ಟಿಗೆ ನುಗ್ಗಿದರು. ಅವರು ಆ ಗೋರಿಯ ಬಳಿಗೆ ಬಂದಾಗ ಅವರ ಬಳಿ ಎಷ್ಟು ಸಲಿಕೆಗಳಿದ್ದರೆ ಸಾಕಾಗಿತ್ತೋ ಅದಕ್ಕೆ ನೂರ್ಮಡಿ ಸಲಿಕೆಗಳಿದ್ದುದು ಅವರಿಗೆ ಗೊತ್ತಾಯಿತು; ಆದರೂ ಒಂದು ಲಾಂದ್ರವನ್ನು ತರಬೇಕೆಂಬುದು ಮಾತ್ರ ಅವರಲ್ಲಿ ಯಾರಿಗೂ ಹೊಳೆದಿರಲಿಲ್ಲ, ಚಂಚಲಿಸುವ ಮಿಂಚಿನ ಬೆಳಕಿನಲ್ಲೇ ಅವರು, ಹೇಗಾದರೂ ಸರಿಯೆ ಎಂದು ಅಗೆಯತೊಡಗಿದರು; ಒಂದು ಲಾಂದ್ರವನ್ನು ಎರವಲು ತರುವುದಕ್ಕಾಗಿ ಅರ್ಧಮೈಲಿಯಾಚೆಗಿದ್ದ ಬಲು ಹತ್ತಿರದ ಮನೆಗೆ ಒಬ್ಬನನ್ನು ಕಳಿಸಿದರು.

ಅವರು ಅಸಾಧ್ಯವಾಗಿ ಅಗೆದದ್ದೂ ಅಗೆದದ್ದೇ; ಕಗ್ಗತ್ತಲೆ ತುಂಬಿಹೋಗಿತ್ತು, ಮಳೆ ಮೊದಲಾಗಿತ್ತು, ಗಾಳಿ ಉದ್ದಕ್ಕೂ ಬೀಸುಗಟ್ಟುತ್ತಿತ್ತು, ಬೇಗ ಬೇಗ ಮಿಂಚು ಒಡೆದು ಹಾರತೊಡಗಿತ್ತು, ಗುಡುಗು ಗರ್ಜಿಸುತ್ತಿತ್ತು. ಈ ಜನ ಅದನ್ನು ಗಮನಿಸಲೇ ಇಲ್ಲ, ಅವರು ತಮ್ಮ ಕೆಲಸದಲ್ಲಿ ಅಷ್ಟು ತಲ್ಲೀನರಾಗಿದ್ದರು; ಒಂದು ನಿಮಿಷದ ಮಟ್ಟಿಗೆ ಆ ಜನಜಂಗುಳಿಯಲ್ಲಿದ್ದ ಪ್ರತಿಯೊಂದನ್ನೂ ಪ್ರತಿಯೊಂದು ಮುಖವನ್ನೂ ನೋಡಬಹುದಾಗಿತ್ತು, ಗೋರಿಯೊಳಗಿನಿಂದ ಏಳುತ್ತಿದ್ದ ಸಲಿಕೆಗಟ್ಟಲೆ ಮಣ್ಣಿನರಾಶಿಯನ್ನೂ ನೋಡಬಹುದಾಗಿತ್ತು; ಮರು ಸೆಕೆಂಡಿನಲ್ಲೇ ಕತ್ತಲೆ ಎಲ್ಲವನ್ನೂ ತೊಡೆದುಹಾಕಿಬಿಡುತ್ತಿತ್ತು, ನಿಮಗೆ ಏನೊಂದೂ ಕಾಣಿಸುತ್ತಲೇ ಇರಲಿಲ್ಲ.

ಕಟ್ಟಕಡೆಗೆ ಅವರು ಶವದ ಪೆಟ್ಟಿಗೆಯನ್ನು ಈಚೆಗೆ ತೆಗೆದರು; ಅದರ ಮುಚ್ಚಳವನ್ನು ಬಿಚ್ಚತೊಡಗಿದರು, ಆಮೇಲೆ ನೀವೆಂದೂ ನೋಡಿರದಂಥ ನೂಕುನುಗ್ಗಲು; ಭುಜಗಳ ಮಸೆತ, ಹಿಂದಕ್ಕೆ ತಳ್ಳುವುದು, ಒಂದು ಇಣಿಕೆಗಾಗಿ ಒಬ್ಬರಮೇಲೊಬ್ಬರು ತಲೆಚಾಚುವುದು; ಕತ್ತಲೆಯಲ್ಲಿ ಆ ರೀತಿ ಮಾಡುವುದು ಬಲು ಕೆಟ್ಟದ್ದು. ಹೈನ್ಸ್ ನನ್ನ ಮಣಿಕಟ್ಟನ್ನು ಎಳೆದು ಜಗ್ಗಿಸಿ ನನ್ನನ್ನು ಬಲು ನೋಯಿಸಿದನು. ನಾನು ಈ ಪ್ರಪಂಚದಲ್ಲಿರುವುದೇ ಅವನಿಗೆ ಮರೆತುಹೋಯಿತು. ಅವನು ತುಂಬಾ ಉದ್ರಿಕ್ತನಾಗಿದ್ದನು, ಏದುಸಿರೆಳೆಯುತ್ತಿದ್ದನು.

ಇದ್ದಕ್ಕಿದ್ದಂತೆಯೇ ಮಿಂಚು ತಟಾರನೆ ಬಿಳಿ ಜ್ವಾಲೆಯ ಬಿಡುಗಿಂಡಿಯೊಂದನ್ನು ತೆರೆಯಿತು; ಯಾರೋ ಕೂಗಿಕೊಂಡರು;

"ಆಶ್ಚರ್ಯ, ಪರಮಾಶ್ಚರ್ಯ! ಇಲ್ಲಿ ಅವನೆದೆಯಮೇಲೆ ಚಿನ್ನದ ನಾಣ್ಯಗಳ ಥೈಲಿಯೊಂದಿದೆ!"

ಹೈನ್ಸ್, ಎಲ್ಲರಂತೆಯೇ, ತಾನೂ ಜೊಬ್ಬೆಹಾಕಿದನು, ನನ್ನ ಮಣಿಕಟ್ಟನ್ನು ಬಿಟ್ಟುಬಿಟ್ಟನು, ದಾರಿಮಾಡಿಕೊಂಡು ಮುನ್ನುಗ್ಗಿ ನೋಡಲು ಎದೆ ಮುಂದಾಗಿ

ತೂರಿದನು ; ನಾನು ಅಲ್ಲಿಂದ ಹೇಗೆ ಹಾರಿ ದಾರಿಯತ್ತ ಧಾವಿಸಿದೆನೆಂಬುದನ್ನು ಯಾರೂ ಹೇಳಲಾರರು.

ಇಡೀ ದಾರಿ ನನ್ನೊಬ್ಬನದೇ ಆಗಿತ್ತು ; ನಾನು ಸುಮಾರಾಗಿ ಹಾರಿ ಬಂದೆ. ಹೆಪ್ಪುಗಟ್ಟಿದ ಕತ್ತಲೆಯನ್ನೂ, ಒಮ್ಮೊಮ್ಮೆ ಹೊರಳುತ್ತಿದ್ದ ಮಿಂಚುಗಳನ್ನೂ, ಮಳೆಯ ಮೊರೆತ, ಗಾಳಿಯ ಹೊಡೆತ, ಸಿಡಿಲಿನ ಸಿಡಿತಗಳನ್ನೂ ಬಿಟ್ಟರೆ ಇಡೀ ದಾರಿ ನನ್ನದಾಗಿತ್ತು, ನಾನು ಅದನ್ನು ಉದ್ದಕ್ಕೂ ಹಿಡಿದು ಬಂದದ್ದು ನಿಮ್ಮ ಹುಟ್ಟಿನಷ್ಟೇ ದಿಟವಾದುದು.

ನಾನು ಊರಿಗೆ ಬಂದಾಗ, ಅಲ್ಲಿ ಮಳೆಗಾಳಿಯಲ್ಲಿ ಯಾರೂ ನನ್ನ ಕಣ್ಣಿಗೆ ಬೀಳಲಿಲ್ಲ, ಆದ್ದರಿಂದ ನಾನು ಸಂದಿಗೊಂದಿಗಳನ್ನು ಹುಡುಕುವುದಕ್ಕೇ ಹೋಗಲಿಲ್ಲ; ದೊಡ್ಡ ಬೀದಿಯಲ್ಲೇ ರಾಜಾರೋಷಾಗಿ ನಡೆದೆ ; ನಮ್ಮ ಮನೆಯ ಬಳಿಗೆ ಬಂದಾಗ, ನಾನು ಕಣ್ಣೆತ್ತಿ ನೋಡಿದೆ. ಅಲ್ಲಿ ದೀಪವಿರಲಿಲ್ಲ : ಮನೆಯಲ್ಲಿ ಪೂರ್ತಿ ಕತ್ತಲೆಯಡರಿತ್ತು, ಅದು ನನಗೆ ವಿಷಾದವನ್ನೂ, ನಿರಾಶೆಯನ್ನೂ ತಂದಿತು ; ಕಾರಣವೇ ನನಗೆ ತಿಳಿಯದೆ ಹೋಯಿತು. ಆದರೆ ಕಡೆಗೆ ನಾನು ಸುಮ್ಮನೆ ಹೊರಟುಹೋಗುತ್ತಿರು ವಾಗ, ಮೇರಿ ಜೇನಳ ಕಿಟಕಿಯಲ್ಲಿ ತಟ್ಟನೆ ದೀಪ ಹೊಳೆಯಿತು ! ನನ್ನೆದೆ, ಇದ್ದಕ್ಕಿದ್ದಂತೆಯೇ ಬಿರಿದು ಹೋಯಿತೇನೋ ಎನ್ನುವ ಮಟ್ಟಿಗೆ, ಉಬ್ಬಿಹೋಯಿತು ; ಅದೇ ಸೆಕೆಂಡಿನಲ್ಲಿ ಆ ಮನೆಯೂ ಮತ್ತು ಎಲ್ಲವೂ ನನ್ನ ಹಿಂದೆಯೇ ಅಂಧಕಾರದಲ್ಲಿ ಸೇರಿಹೋದವು, ಇನ್ನು ಮುಂದೆ ಈ ಲೋಕದಲ್ಲಿ ಅವು ನನ್ನ ಕಣ್ಣಮುಂದೆ ಬರು ವಂತೆಯೇ ಇಲ್ಲ. ನಾನು ನೋಡಿದ ಹುಡುಗಿಯರಲ್ಲೆಲ್ಲ ಅವಳು ಬಲು ಒಳ್ಳೆಯವಳು, ಬಲು ಗಟ್ಟಿಗಳು. ತೆಪ್ಪದ ನಿಲ್ದಾಣದ ಬಳಿಗೆ ಹೋಗುವುದು ನನಗೆ ಸಾಧ್ಯವಾದೀತೆ ಎಂಬುದನ್ನು ಕಂಡುಕೊಳ್ಳಲು ನಾನು ಊರಾಚೆಗೆ ಸ್ವಲ್ಪ ದೂರ ಹೋದ ನಿಮಿಷವೇ, ದೋಣಿಯೊಂದನ್ನು ಎರವಲು ತರಲು ಚುರುಕಾಗಿ ಹುಡುಕತೊಡಗಿದೆ. ಮೊದಲ ಬಾರಿಗೆ ಹೊಳೆದ ಮಿಂಚೇ ನನಗೆ ಸರಪಣಿಯಿಂದ ಕಟ್ಟಿಹಾಕದಿದ್ದ ದೋಣಿಯೊಂದನ್ನು ನನಗೆ ಕಾಣಿಸಿತು. ನಾನದನ್ನು ಸರಕ್ಕನೆ ಹಿಡಿದು ಕುಳಿತು ಮೀಟುತ್ತ ಹೋದೆ. ಅದೊಂದು ಕಿರುದೋಣಿ ; ಕೇವಲ ಹಗ್ಗದಿಂದ ಅದನ್ನು ಕಟ್ಟಿಹಾಕಲಾಗಿತ್ತು. ನಿಲ್ದಾಣ ತುಂಬಾ ದೂರದಲ್ಲಿ, ಅಲ್ಲೆಲ್ಲೋ ನದಿಯ ಮಧ್ಯಭಾಗದಲ್ಲಿತ್ತು ; ಆದರೆ ನಾನು ತಡಮಾಡಲಿಲ್ಲ. ನಾನು ತೆಪ್ಪವನ್ನು ತಲಪಿದ ಕೂಡಲೇ ಸುಮ್ಮನೆ ಅದರಲ್ಲಿ ಬಿದ್ದು ಕೊಂಡು ನಿರಾತಂಕವಾಗಿ ಉಸಿರು ಹೊಯ್ದುಕೊಳ್ಳಲೆ ಎನ್ನುವ ಮಟ್ಟಿಗೆ ನನಗೆ ಸುಸ್ತಾಗಿತ್ತು. ಆದರೆ ನಾನು ಅದರ ಮೇಲೆಗರಿ ಕೂಗಿಕೊಂಡೆ ;

"ಎದ್ದೇಳು, ಜಿಮ್, ಅದನ್ನು ಬಿಚ್ಚು ! ದೇವರು ದೊಡ್ಡವ,
ನಮಗೆ ಇನ್ನು ಮೇಲೆ ಅವರ ಕಾಟವಿಲ್ಲ !"

ಜಿಮ್ ಎದ್ದ ; ಆನಂದಭರಿತನಾಗಿ ತನ್ನೆರಡೂ ಕೈಗಳನ್ನು ಚಾಚುತ್ತ ನನ್ನ ಬಳಿಗೆ ಬರುತ್ತಿದ್ದನು. ಮಿಂಚಿನ ಬೆಳಕಿನಲ್ಲಿ ನಾನವನ ಕಡೆಗೆ ಕಣ್ಣೆಸೆದಾಗ ನನ್ನ ಜೀವವೆ ಹಾರಿ ಹೋದಂತಾಗಿ, ಹಿಂದಕ್ಕೆ ಲಾಗ ಹಾಕಿದೆ. ಏಕೆಂದರೆ ನನಗೆ ಅವನು ಲಿಯರ್ ರಾಜನ ಮತ್ತು ಮುಳುಗಿದಅ್ಯ–ರಬ್ಬನ-ಇಬ್ಬರ ಪಾತ್ರಗಳನ್ನೂ ಏಕಕಾಲದಲ್ಲಿ ಧರಿಸಿರುವುದು ಮರೆತೇ ಹೋಗಿತ್ತು. ಆ ದೃಶ್ಯ ನನ್ನ ಜಂಘಾಬಲವೇ ಬಿದ್ದು ಹೋಗುವಂತೆ ಮಾಡಿತ್ತು. ಜಿಮ್ ನನ್ನನ್ನು ನೀರಿನಿಂದ ಮೇಲಕ್ಕೆತ್ತಿ ತಂದನು ; ನಾನು ಹಿಂದಿರುಗಿದ್ದುದರಿಂದಲೂ, ರಾಜನ ಮತ್ತು ಡ್ಯೂಕನ ಕಾಟ ನಮಗೆ ತಪ್ಪಿಹೋಗಿದುದ್ದರಿಂದಲೂ ತನಗೆ ಬಲು ಸಂತೋಷವಾಯಿತೆಂದು ನನ್ನನ್ನು ಅಪ್ಪಿಕೊಂಡು ಹರಸಲು ಬಂದನು. ನಾನು ಹೇಳಿದೆ ;

"ಈಗ ಬೇಡ. ಅದು ಬೆಳಗಿನ ಉಪಹಾರದ ವೇಳೆಗಿರಲಿಲ್ಲ ; ಅದು ಬೆಳಗಿನ ಉಪಹಾರದ ವೇಳೆಗಿರಲಿಲ್ಲಿ ! ತೆಪ್ಪವನ್ನು ಬಿಚ್ಚಿ ಬಿಡು ; ಅದು ತೇಲಿಕೊಂಡು ಹೋಗಲಿ !"

ಆ ಮೇಲೆ ಎರಡೇ ನಿಮಿಷಗಳಲ್ಲಿ ನಾವು ನದಿಯಲ್ಲಿ ಜಾರಿಕೊಂಡು ಹೋಗುತ್ತಿದ್ದೆವು. ನಾವು ಮತ್ತೆ ಸ್ವತಂತ್ರರಾದದ್ದೂ, ಆ ಮಹಾನದಿಗೆಲ್ಲ ನಾವಿಬ್ಬರೇ ಆಗಿರುವುದೂ, ನಮ್ಮನ್ನು ಕಾಡುವವರು ಯಾರೂ ಇಲ್ಲದಿರುವುದೂ ಬಲು ಸೊಗಸಾಗಿ ಕಂಡಿತು. ನಾನು ಕೊಂಚ ಸುತ್ತಲೂ ಕುಣಿದು, ಎಗರಿ, ಕೆಲವು ಸಲ ಹಿಮ್ಮಡಿಮುರಿದುಕೊಳ್ಳಬೇಕಾದಾಯಿತು–ನಾನದನ್ನು ತಡೆಯಲಾಗಲಿಲ್ಲ. ಆದರೆ ಮೂರನೆಯ ಮುರಿತದ ಸುಮಾರಿಗೆ, ನನಗೆ ತುಂಬಾ ಪರಿಚಿತವಾದ ಶಬ್ದವೊಂದನ್ನು ನಾನು ಗಮನಿಸಿದೆ. ಉಸಿರು ಕಟ್ಟಿ ಕೇಳಿದೆ, ಕಾದೆ. ಮಾರನೆಯ ಮಿಂಚು ಹೊಡೆದಾಗ ನೀರೆಲ್ಲ ಬೆಳಕಾಯಿತು, ಅವರು ಇತ್ತ ಬರುತ್ತಿದ್ದರು ?–ಹುಟ್ಟುಗಳನು ಸುಮ್ಮನೆ ಹಿಡಿದುಕೊಂಡು ತಮ್ಮ ಚಿಕ್ಕ ದೋಣಿ ಮೆಲುದನಿಯಲ್ಲಿ ಜಾರುವಂತೆ ಮಾಡಿದ್ದರು ! ಅವರು–ರಾಜ ಮತ್ತು ಡ್ಯೂಕ್ !

ಆಗ ನಾನು ಹಲಗೆಗಳ ಮೇಲೆ ಉರುಳಿ, ಅದದ್ದಾಗಲಿ ಎಂದಿದ್ದೆ. ಅಳುವನ್ನು ತಡೆಯಲು ನಾನು ಮಾಡಬಹುದಾಗಿದ್ದುದಷ್ಟೇ.

## ೩೦

ಅವರು ತೆಪ್ಪಕ್ಕೆ ಹತ್ತಿಬಂದಾಗ, ರಾಜ ನನ್ನನ್ನು ಹಿಡಿದುಕೊಂಡ; ನನ್ನ ಕುತ್ತಿಗೆ ಪಟ್ಟಿ ಹಿಡಿದು ನನ್ನನ್ನು ಅಲ್ಲಾಡಿಸಿದ; ಹೇಳಿದ:

"ನಮ್ಮಿಂದ ನುಣುಚಿಕೊಳ್ಳಲು ತೊಡಗಿದ್ದೆಯ, ನೀನು, ಎಲೆ ಕುನ್ನಿ! ನಮ್ಮ ಸಹವಾಸ ನಿನಗೆ ಬೇಸರವಾಯಿತೆ, ಏ?"

ನಾನು ಹೇಳಿದೆ;

"ಇಲ್ಲ, ಮಹಾ ಪ್ರಭೋ, ನಾವು ಹಾಗೆ ಮಾಡಿಲ್ಲ—ನೀವು ದಯವಿಟ್ಟು ಹೀಗೆ ಮಾಡಬೇಡಿ, ಮಹಾಪ್ರಭೋ!"

"ಹಾಗಾದರೆ ಬೇಗ ಹೇಳು, ನೀನು ಏನು ಯೋಚನೆ ಮಾಡಿದ್ದೆ ಎನ್ನುವುದನ್ನು; ಇಲ್ಲವಾದರೆ ನಿನ್ನನ್ನು ನಾಶ ಮಾಡಿಬಿಡುತ್ತೇನೆ!"

"ನನ್ನಾಣೆಗೂ ನಾನು ಎಲ್ಲವನ್ನೂ ನಡೆದಂತೆಯೇ ನಿಮಗೆ ಹೇಳಿಬಿಡುತ್ತೇನೆ, ಮಹಾಪ್ರಭೋ. ನನ್ನ ಕೈಯನ್ನು ಹಿಡಿದುಕೊಂಡಿದ್ದ ಮನುಷ್ಯ ನನ್ನ ಬಗೆಗೆ ಬಲು ಒಳ್ಳೆಯವನಾಗಿದ್ದನು; ತನಗೆ ನನ್ನಂತೆಯೇ ಇದ್ದ ಒಬ್ಬ ಮಗನಿದ್ದನೆಂದೂ ಅವನು ಕಳೆದ ವರುಷ ಸತ್ತುಹೋದನೆಂದೂ, ಇಂಥಾ ಅಪಾಯಕ್ಕೆ ಒಬ್ಬ ಹುಡುಗ ಸಿಕ್ಕಿಬಿದ್ದಿರುವುದನ್ನು ಕಂಡು ತನಗೆ ಬಲು ದುಃಖವಾಗುತ್ತಿದೆ ಎಂದೂ ಅವನು ಉದ್ದಕ್ಕೂ ಹೇಳುತ್ತಲೇ ಬಂದ; ಮತ್ತು ಅವರು ಚಿನ್ನದ ನಾಣ್ಯಗಳನ್ನು ಕಂಡು ಬೆಕ್ಕಸ ಬೆರಗಾಗಿ ಶವದ ಪೆಟ್ಟಿಗೆಯ ಬಳಿಗೆ ನುಗ್ಗಿದಾಗ, ಅವನು ನನ್ನ ಕೈಯನ್ನು ಬಿಟ್ಟು 'ಈಗ ತಪ್ಪಿಸಿಕೊಂಡು ಹೋಗು ನೀನು, ಇಲ್ಲವಾದರೆ ಅವರು ನಿನ್ನನ್ನು ಗಲ್ಲಿಗೇರಿಸುತ್ತಾರೆ—ಅದು ನಿಶ್ಚಯ' ಎಂದು ನನ್ನ ಕಿವಿಯಲ್ಲಿ ಹೇಳಿದನು. ಅಲ್ಲಿ ನಿಲ್ಲುವುದು ನನಗೆ ಏನೂ ಒಳ್ಳೆಯದಲ್ಲವೆಂದು ತೋರಿತು;— ನಾನಿನ್ನೇನನ್ನೂ ಮಾಡುವುದು ಶಕ್ಯವಿರಲಿಲ್ಲ; ಅಲ್ಲಿಂದ ಹೇಗಾದರೂ ಕಳಚಿಕೊಳ್ಳುವುದು ನನಗೆ ಸಾಧ್ಯವಿದ್ದರೆ, ಅವರ ಕೈಯಲ್ಲಿ ನೇಣು ಹಾಕಿಸಿಕೊಳ್ಳುವುದು ನನಗಿಷ್ಟವಾಗಲಿಲ್ಲ. ಆದ್ದರಿಂದ ಕಿರುದೋಣಿಯವರೆಗೂ ನಾನು ಒಂದೇ ಉಸಿರಿನಲ್ಲಿ ಓಡಿಬಂದೆ; ಮತ್ತು ಇಲ್ಲಿಗೆ ಬಂದ ಕೂಡಲೇ ನಾನು ಜಿಮ್ಮನಿಗೆ ತ್ವರೆಮಾಡೆಂದೂ, ಇಲ್ಲದಿದ್ದರೆ ಅವರು ನನ್ನನ್ನು ಹಿಡಿದುಕೊಂಡು ಹೋಗಿ ಗಲ್ಲಿಗೇರಿಸುವರೆಂದೂ, ನೀವೂ ಡ್ಯೂಕನೂ ಇಷ್ಟುಹೊತ್ತಿಗೆ ಜೀವಸಹಿತ ಉಳಿದಿರಲಾರಿರಿ ಎಂಬ ಸಂಶಯ ನನಗಿದೆ ಎಂದೂ ಹೇಳಿದೆ. ನನಗೆ ತುಂಬಾ ವ್ಯಸನವಾಯಿತು; ಜಿಮ್ಮನಿಗೂ ಹಾಗೆಯೇ; ನೀವು ಬರುತ್ತಿರುವುದನ್ನು ಕಂಡಾಗ ನಮಗೆ ಬಲು ಸಂತೋಷವಾಯಿತು. ನಾನು ಹಾಗೆ ಹೇಳಿಲ್ಲವೆ ಎಂದು ನೀವು ಜಿಮ್ಮನನ್ನು ಕೇಳಬಹುದು."

ನಾನು ಹಾಗೆ ಹೇಳಿದ್ದುಂಟೆಂದು ಜಿಮ್ ನುಡಿದ; ರಾಜ ಅವನನ್ನು ಬಾಯಿ ಮುಚ್ಚೆಂದು ಗದರಿಸಿ, "ಓ, ಹೌದು, ಅದು ಬಹುಮಟ್ಟಿಗೆ ಹಾಗೇ ಆಗಿರಬಹುದು!" ಎಂದನು; ಮತ್ತು ನನ್ನನ್ನು ಮತ್ತೆ ಹಿಡಿದು ಅಲ್ಲಾಡಿಸಿದನು, ಅವನು ನನ್ನನ್ನು ನದಿಯಲ್ಲಿ ಮುಳುಗಿಸಬೇಕೆಂದು ತನಗೆ ತೋರಿತೆಂದನು, ಆದರೆ ಡ್ಯೂಕ್ ಹೇಳಿದ:

"ಏ ಮುದಿ ಮೂರ್ಖ! ಆ ಹುಡುಗನನ್ನು ಬಿಟ್ಟುಬಿಡು. ಒಂದುವೇಳೆ ನೀನೇ ಆಗಿದ್ದರೆ ಇನ್ನೇನು ಮಾಡುತ್ತಿದ್ದೆ? ನೀನು ಅಲ್ಲಿಂದ ನುಣುಚಿಕೊಂಡಾಗ ಅವನಿಗಾಗಿ ಅಲ್ಲೆಲ್ಲ ಹುಡುಕಿದೆಯು? ನನಗೆ ನೀನು ಹಾಗೆ ಮಾಡಿದ ನೆನಪಿಲ್ಲ."

ಬಳಿಕ ರಾಜ ನನ್ನನ್ನು ಬಿಟ್ಟುಬಿಟ್ಟನು; ಆ ಊರನ್ನೂ ಅಲ್ಲಿನ ಎಲ್ಲರನ್ನೂ ಶಪಿಸತೊಡಗಿದನು. ಆದರೆ ಡ್ಯೂಕ್ ಹೇಳಿದ:

"ಅದಕ್ಕಿಂತಲೂ ನೀನು ನಿನ್ನನ್ನೇ ಚೆನ್ನಾಗಿ ಬೈದುಕೊಳ್ಳುವುದು ಹೆಚ್ಚು ಸಮಂಜಸವಾದುದು; ಏಕೆಂದರೆ ಅದರಲ್ಲಿನ ಹೆಚ್ಚುಪಾಲಿಗೆ ಅರ್ಹನಾದವನೆಂದರೆ ನೀನೇ. ಪ್ರಾರಂಭದಿಂದಲೂ ನೀನು, ಆ ಕಲ್ಪನೆಯು ನೀಲಿ-ಬಾಣದ ಗುರುತನ್ನು ನೀನು ಸಾವಧಾನವಾಗಿ ಧೈರ್ಯದಿಂದ ಮುಂಡಿಸಿದ್ದೊಂದನ್ನು ಬಿಟ್ಟರೆ, ಸ್ವಲ್ಪವಾದರೂ ಸಾರ್ಥಕವಾದ ಒಂದು ಕೆಲಸವನ್ನೂ ಮಾಡಿಲ್ಲ. ಅದು ಅದ್ಭುತವಾಗಿತ್ತು;—ಸಮಯಕ್ಕೊದಗಿದ ಪ್ರಬಲಸಾಧನವಾಗಿತ್ತು; ನಮ್ಮ ಜೀವನವನ್ನು ಉಳಿಸಿದ್ದೆಂದರೆ ಅದೊಂದೇ. ಏಕೆಂದರೆ, ಅದೊಂದಿಲ್ಲದೆ ಹೋಗಿದ್ದರೆ, ಅವರು ನಮ್ಮನ್ನು ಆ ಇಂಗ್ಲಿಷಿನವನ ಗಂಟು ಮೂಟೆಗಳು ಬರುವವರೆಗೂ ಸೆರೆಯಲ್ಲಿ ಕೊಳೆಯಬಿಡುತ್ತಿದ್ದರು—ಆ ಮೇಲೆ—ತುರುಂಗವಾಸ ಗಟ್ಟಿ! ಆದರೆ ನಿನ್ನ ಉಪಾಯ ಅವರನ್ನು ಸ್ಮಶಾನದ ಬಳಿಗೆ ಕರೆದೊಯ್ದಿತು, ಮತ್ತು ಅವರ ಕಣ್ಣಿಗೆ ಆ ಚಿನ್ನದ ಗಂಟು ಬಿದ್ದುದಿದೆಯಲ್ಲ ಅದರಿಂದ ತುಂಬಾ ಉಪಕಾರವಾಯಿತು; ಏಕೆಂದರೆ ಅದನ್ನು ಕಂಡು ಕೆರಳಿದ ಆ ದಡ್ಡರು ನಮ್ಮ ಕೈಗಳನ್ನು ಬಿಟ್ಟು ಅಲ್ಲಿಗೆ ಧಾವಿಸದೆ ಹೋಗಿದ್ದರೆ ನಾವು ಈ ರಾತ್ರಿ ಸೆರೆಮನೆಯ ಕತ್ತುಪಟ್ಟಿಯೊಳಗೆ ಕೊರಳಿಟ್ಟು—ನಮಗೆ ಅಗತ್ಯವಾದುದಕ್ಕಿಂತ ಹೆಚ್ಚು ಕಾಲ ಬಾಳಿಕೆ ಬರುವ ಕತ್ತುಪಟ್ಟಿಯೊಳಗೆ ಕೊರಳಿಟ್ಟು—ಮಲಗುತ್ತಿದ್ದೆವು.

ಒಂದು ನಿಮಿಷಕಾಲ-ಆ ಯೋಚನೆಯಲ್ಲಿ,-ಎಲ್ಲವೂ ನಿಶ್ಶಬ್ದವಾಗಿತ್ತು; ಬಳಿಕ ರಾಜ, ತಾನೆಲ್ಲೋ ತನ್ನ ಮನಸ್ಸೆಲ್ಲೋ ಎಂಬಂತೆ, ಹೇಳಿದ:

"ಹುಂ! ಅದನ್ನು ಆ ನೀಗ್ರೋಗಳು ಕದ್ದರೆಂದು ನಾವೆಣಿಸಿದ್ದೆವು!"

ಅದು ನನ್ನನ್ನು ಹಿಡಿದು ಹಿಂಡಿದಂತಿತ್ತು.

ಒಂದು ರೀತಿಯಲ್ಲಿ ನಿಧಾನವಾಗಿ. ಬೇಕೆಂತಲೇ, ತಿರಸ್ಕಾರ ಪೂರ್ವಕವಾಗಿ ಡ್ಯೂಕ್ ನುಡಿದ, "ಹೌದು, ಕದ್ದವರು ನಾವು."

"ಹಾಗೆಂದರೆ, ನಾನು ಕದ್ದೆ."

ಡ್ಯೂಕ್ ಅದೇ ಧಾಟಿಯಲ್ಲಿ ಉತ್ತರಿಸಿದ:

"ಹಾಗಲ್ಲ, ನಾನು ಕದ್ದೆ."

ರಾಜ ಕ್ಷುಬ್ಧಗೊಂಡು ನುಡಿದ :

"ಇಲ್ಲಿ ನೋಡು ಬಿಲ್ಜ್ ವಾಟರ್, ನೀನು ಸೂಚಿಸುತ್ತಿರುವುದೇನು ?"

ಡ್ಯೂಕ್ ಪಟಪಟನೆ ಮರುನುಡಿದ :

"ಅಲ್ಲಿಗೆ ಬಂದರೆ, ನೀನು ಸೂಚಿಸುತ್ತಿದ್ದುದೇನೆಂದು ನಾನು ಕೇಳಬಹುದಲ್ಲವೆ ?" ರಾಜ ಮೂದಲಿಸುವ ದನಿಯಿಂದ "ಮಣ್ಣು! ನನಗಂತೂ ತಿಳಿಯದು—ನೀನು ನಿದ್ದೆ ಮಾಡುತ್ತಿದ್ದೆಯೋ, ಏನೋ ; ನೀನು ಆಡುತ್ತಿದ್ದ ಮಾತು ನಿನಗೇ ತಿಳಿಯದಿರ ಬಹುದು."

ಡ್ಯೂಕ್ ಥಟ್ಟನೆದ್ದು ಹೇಳಿದ :

"ಓ, ಈ ಅರ್ಥವಿಲ್ಲದ ಹೊಲಸುಮಾತನ್ನು ಬಿಟ್ಟುಬಿಡು ನೀನು ; ನೀನು ನನ್ನನ್ನು ಶುದ್ಧ ದಡ್ಡನೆಂದು ತಿಳಿದಿರುವೆಯಾ ? ಆ ಶವದ ಪೆಟ್ಟಿಗೆಯಲ್ಲಿ ಆ ಹಣವನ್ನು ಇಟ್ಟವರಾರೆಂಬುದು ನನಗೆ ತಿಳಿಯದೆಂದಿರುವೆಯ ?"

"ಹೌದು, ಸ್ವಾಮಿ ! ನಿನಗದು ಗೊತ್ತೆಂದು ನನಗೆ ತಿಳಿದಿದೆ ; ಏಕೆಂದರೆ ಅದನ್ನು ಮಾಡಿದವನು ನೀನೇ !"

"ಅದು ಸುಳ್ಳು!"—ಡ್ಯೂಕ್ ಅವನನ್ನು ಹಿಡಿಯಹೋದನು. ರಾಜ ಕೂಗಿದ :

"ನಿನ್ನ ಕೈಗಳನ್ನು ತೆಗೆಯಾಚೆ !-ನನ್ನ ಗಂಟಲನ್ನು ಬಿಟ್ಟುಬಿಡು !-ನಾನು ಆಡಿದ ಮಾತನ್ನು ಮರಳಿ ಪಡೆದಿದ್ದೇನೆ."

ಡ್ಯೂಕ್ ಹೇಳಿದ :

"ನನಗೆ ಇಂದಲ್ಲ ನಾಳೆ ಕೈಕೊಡಬೇಕೆಂಬ ಉದ್ದೇಶದಿಂದಲೇ ನೀನು ಆ ಹಣವನ್ನು ಅಲ್ಲಿ ಮುಚ್ಚಿಟ್ಟದ್ದುಂಟೆಂದು ಮೊದಲು ಒಪ್ಪಿಕೋ, ಹಾಗಾದರೆ ಆಮೇಲೆ ಬಂದು ಅದನ್ನು ಅಗೆದು ತೆಗೆದು ನೀನೇ ಎಲ್ಲವನ್ನೂ ದೋಚಿಕೊಳ್ಳುವುದು ನಿನ್ನ ಹಂಚಿಕೆ ಯಾಗಿತ್ತು, ಅಲ್ಲವೆ ?"

"ಒಂದು ನಿಮಿಷ ತಾಳು, ಡ್ಯೂಕ್—ನನಗೆ ಈ ಒಂದು ಪ್ರಶ್ನೆಗೆ ಪ್ರಾಮಾಣಿಕ ವಾಗಿ ನ್ಯಾಯವಾಗಿ ಉತ್ತರ ಕೊಡು : ನೀನು ಆ ಹಣವನ್ನು ಅಲ್ಲಿ ಹಾಕಿರದಿದ್ದರೆ, ಹಾಗೆಯೇ ಹೇಳು, ನಾನು ನಿನ್ನ ಮಾತನ್ನು ನಂಬುತ್ತೇನೆ, ನಾನಾಡಿದ ಅಷ್ಟು ಮಾತನ್ನೂ ಮರಳಿ ಪಡೆಯುತ್ತೇನೆ."

"ಎಲವೋ ಘಾಟಿ ಮುದುಕ, ನಾನು ಹಾಗೆ ಮಾಡಲಿಲ್ಲ ; ನಾನು ಹಾಗೆ ಮಾಡಿಲ್ಲವೆಂಬುದು ನಿನಗೂ ಗೊತ್ತು. ಈಗ ಏನು ಹೇಳುವೆ !"

"ಹಾಗಾದರೆ ಸರಿ, ನಾನು ನಿನ್ನನ್ನು ನಂಬುತ್ತೇನೆ. ಆದರೆ ಇನ್ನೊಂದೇ ಪ್ರಶ್ನೆಗೆ, ಇದಕ್ಕೆ, ಉತ್ತರಕೊಡು—ಹುಚ್ಚನಂತಾಡಬೇಡ ; ಆ ಹಣವನ್ನು ಹಾರಿಸಿ ಕೊಂಡು ಹೋಗಿ ಬಚ್ಚಿಡಬೇಕೆಂಬುದು ನಿನ್ನ ಮನಸ್ಸಿನಲ್ಲಾದರೂ ಇರಲಿಲ್ಲವೆ ?"

ಡ್ಯೂಕ್ ಸ್ವಲ್ಪಹೊತ್ತು ಯಾವ ಮಾತನ್ನೂ ಆಡಲಿಲ್ಲ, ಆ ಬಳಿಕ ಹೇಳಿದ:

"ನಾನು ಹಾಗೆ ಮಾಡಿದ್ದರೂ ನನಗೆ ವ್ಯಥೆಯಿಲ್ಲ; ಏನಾಗಲಿ, ನಾನದನ್ನು ಮಾಡಲಿಲ್ಲ. ಆದರೂ ಹಾಗೆ ಮಾಡುವ ಉದ್ದೇಶ ನಿನ್ನ ಮನಸ್ಸಿನಲ್ಲಿ ಇದ್ದುದು ಮಾತ್ರವಲ್ಲ, ನೀನದನ್ನು ಮಾಡಿಯೂ ಮಾಡಿದೆ."

"ನಾನು ಆ ಕೆಲಸವನ್ನು ಮಾಡಿದ್ದರೆ, ಸಾವೂ ನನ್ನನ್ನು ಮುಟ್ಟದಿರಲಿ! ಇದು ಸತ್ಯ. ನಾನದನ್ನು ಮಾಡುತ್ತಲೇ ಇರಲಿಲ್ಲವೆನ್ನುವುದಿಲ್ಲ, ಏಕೆಂದರೆ ನಾನು ಹಾಗೆ ಮಾಡುತ್ತಲೇ ಇದ್ದೆ. ಆದರೆ ನೀನು—ಎಂದರೆ ಇನ್ನು ಯಾರೋ ಎಂದು ನನ್ನ ಅರ್ಥ—ನನಗಿಂತ ಮುಂದಾದರು."

"ಅದು ಸುಳ್ಳು! ಅದನ್ನು ಮಾಡಿದವನೇ ನೀನು, ಮಾಡಿದೆನೆಂದು ನೀನು ಹೇಳಲೇ ಬೇಕು, ಇಲ್ಲವಾದರೆ—"

ರಾಜ ಗೊರಗುಟ್ಟತೊಡಗಿದನು, ಬಳಿಕ ಏದುಸಿರಿನಲ್ಲಿ ಹೇಳಿದನು;-

"ಬೇಡ!—ನಾನು ಒಪ್ಪಿಕೊಳುತ್ತೇನೆ."

ಅವನು ಹಾಗೆ ಹೇಳಿದ್ದರಿಂದ ನನಗೆ ಬಲು ಸಂತೋಷವಾಯಿತು; ಮೊದಲಿಗಿಂತಲೂ ನನ್ನ ಮನಸ್ಸಿಗೆ ಬಲು ನೆಮ್ಮದಿಯಾಯಿತು. ಆಗ ಡ್ಯೂಕ್ ತನ್ನ ಕೈಗಳನ್ನು ಹಿಂದೆಗೆದುಕೊಂಡು ಹೇಳಿದ:

ಮತ್ತೆಂದಾದರೂ ನೀನು ಅದನ್ನು ನಿರಾಕರಿಸಿದರೆ, ನಾನು ನಿನ್ನನ್ನು ಮುಳುಗಿಸಿಬಿಡುತ್ತೇನೆ. ಅಲ್ಲಿ ಕುಳಿತುಕೊಂಡು ಮಗುವಿನಂತೆ ಬಿಕ್ಕಿ ಬಿಕ್ಕಿ ಅಳುವುದು ನಿನಗೆ ಕ್ಷೇಮ.— ನೀನು ನಡೆದುಕೊಂಡ ರೀತಿಯನ್ನು ನೋಡಿದರೆ ಅದು ನಿನಗೆ ಒಪ್ಪುತ್ತದೆ. ನಿನ್ನನ್ನು ನಾನು ನನ್ನ ತಂದೆಯೆಂದೇ ತಿಳಿದು ನಿನ್ನಲ್ಲಿ ಈತನಕ ನಂಬಿಕೆಯನ್ನು ಇಟ್ಟಿದ್ದೆ—ಇಂಥಾ ಸರ್ವಭಕ್ಷಕನಾಗಲಪೇಕ್ಷಿಸುವ ಮುದಿ ಉಷ್ಟ್ರಪಕ್ಷಿಯನ್ನು ನಾನೆಂದೂ ನೋಡಲಿಲ್ಲ. ಇವರ ಹೊಣೆಯನ್ನೆಲ್ಲ ಆ ನಿರಪರಾಧಿ ನಿಗ್ರೋಗಳ ತಲೆಗೆ ಕಟ್ಟಿದ್ದನ್ನು ಕೇಳಿಕೊಂಡು ನೀನು ಸುಮ್ಮನಿದ್ದುದಕ್ಕಾಗಿ ನಿನಗೆ ನಾಚಿಕೆಯೂ ಆಗಲಿಲ್ಲವೆ? ನೀನು ಅವರ ಪರವಾಗಿ ಒಂದು ಮಾತನ್ನೂ ಆಡಲಿಲ್ಲ. ಆ ಕಟ್ಟುಕಥೆಯನ್ನು ನಂಬುವ ಮಟ್ಟಿಗೆ ನಾನು ಹೆಡ್ಡನಾದೆನಲ್ಲ ಎಂಬುದನ್ನು ಯೋಚಿಸಿದರೇ ಸಾಕು ನನ್ನ ಪರಿಸ್ಥಿತಿ ನನಗೇ ವಿಚಿತ್ರವಾಗಿ ತೋರಿಬರುತ್ತದೆ. ಬೆಂಕಿ ಬಿತ್ತು ನಿನಗೆ, ಹಣದ ಎಣಿಕೆಯಲ್ಲಿ ಕೊರೆಯಾದುದನ್ನು ತುಂಬಲು ನೀನು ಬಲು ಉತ್ಸಾಹದಿಂದ ಮುಂದೆ ಬಂದುದೇಕೆನ್ನುವುದು ನನಗೆ ಈಗ ಅರ್ಥವಾಯಿತು ನಾನು ಅಪ್ರತಿಮ ಪ್ರದರ್ಶನದಿಂದಲೂ ಇತರ ವಿಧಗಳಿಂದಲೂ ಗಳಿಸಿದ್ದ ಹಣವೆಲ್ಲವನ್ನೂ ಸುಲಿದುಕೊಂಡು ನನಗೆ ಮೋಸಮಾಡುವುದು ನಿನ್ನ ಹಂಚಿಕೆಯಾಗಿತ್ತು!"

ರಾಜ, ಇನ್ನೂ ತಾನು ಬುಸ್ ಬುಸ್ ಎನ್ನುತ್ತಿರುವಾಗಲೇ, ಅಳುಕಿನಿಂದ ನುಡಿದ:

"ಹಾಗಲ್ಲ ಡ್ಯೂಕ್, ಕೊರೆಯನ್ನು ಭರ್ತಿಮಾಡುವುದಾಗಿ ಹೇಳಿದವನು ನೀನು—ನಾನಲ್ಲ."

"ಮುಚ್ಚು ಸಾಕು. ನೀನು ನನಗೆ ಇನ್ನೇನನ್ನೂ ಹೇಳಬೇಕಾಗಿಲ್ಲ, ನಾನು ಕೇಳುವುದೂ ಇಲ್ಲ!" ಎಂದನು ಡ್ಯೂಕ್. "ಅದರ ಫಲವಾಗಿ ನಿನಗೆ ಆದ ಲಾಭವನ್ನು ಈಗ ನೋಡು. ಅವರು ತಮ್ಮ ಹಣವಷ್ಟನ್ನೂ ಮರಳಿ ಪಡೆದಿರುವುದಲ್ಲದೆ ಜತೆಗೆ, ಒಂದೆರಡು ಬೆಳ್ಳಿಯ ನಾಣ್ಯಗಳು ವಿನಾ, ನಮ್ಮಲ್ಲಿದ್ದುದೆಲ್ಲವನ್ನೂ ಕೊಂಡುಹೋದರು. ಹೋಗು ಮಲಗು; ಇನ್ನು ನೀನು ಬದುಕಿರುವ ತನಕ ಆ ಕೊರೆ-ಗಿರೆ ಮಾತಿಗೆ ನನ್ನ ಬಳಿಗೆ ಬಂದರೆ ಜೋಕೆ!"

ಬಳಿಕ ರಾಜ ಗೂಡಾರದೊಳಗೆ ತೂರಿಕೊಂಡನು; ಮನಶ್ಶಾಂತಿಗಾಗಿ ತನ್ನ ಮದ್ಯದ ಸೀಸೆಯನ್ನಾಶ್ರಯಿಸಿದನು. ಸ್ವಲ್ಪ ಹೊತ್ತಿನಲ್ಲೇ ಡ್ಯೂಕನೂ ತನ್ನ ಸೀಸೆಯೆತ್ತಿದನು. ಅರ್ಧಗಂಟೆಯೊಳಗಾಗಿ ಮತ್ತೆ ಕಳ್ಳಕಳ್ಳರು ಆಪ್ತರಾದರು. ಕುಡಿತದ ಅಮಲೇರಿದಂತೆಲ್ಲ ಅವರ ಪರಸ್ಪರ ಪ್ರೀತಿ ಹೆಚ್ಚಿತು. ಪರಸ್ಪರ ಬಾಹು ಬಂಧನದಲ್ಲಿ ಇಬ್ಬರೂ ಗೊರಕೆ ಹೊಡೆಯುತ್ತಿದ್ದರು. ಇಬ್ಬರೂ ಬಲು ಮೆತ್ತಗಾಗಿದ್ದರು; ಆದರೆ ಆ ಹಣದ ಥೈಲಿಯನ್ನು ತಾನು ಬಚ್ಚಿಟ್ಟದನ್ನು ನಿರಾಕರಿಸಬಾರದು ಎಂಬುದನ್ನು ಮರೆಯುವಷ್ಟೇನೂ ರಾಜ ಮೆತ್ತಗಾಗಿರಲಿಲ್ಲ. ನಾನದನ್ನು ಗಮನಿಸಿದೆ. ಅದು ನನಗೆ ನೆಮ್ಮದಿಯನ್ನು ತೃಪ್ತಿಯನ್ನೂ ತಂದುಕೊಟ್ಟಿತು. ಅವರು ಗೊರಕೆ ಹೊಡೆಯಲು ಪ್ರಾರಂಭಿಸಿದ ಮೇಲೆ ನಮಗೆ ಹರಟೆಹೊಡೆಯಲು ಯಥೇಚ್ಛವಾದ ಅವಕಾಶ ಸಿಕ್ಕಿತು. ಜಿಮ್ಮನಿಗೆ ನಾನು ಎಲ್ಲವನ್ನೂ ಹೇಳಿದೆ.

## ೩೧

ಆ ಮೇಲೆ ಅನೇಕ ದಿನಗಳವರೆಗೆ ನಮಗೆ ಯಾವ ಊರಿನಲ್ಲಿ ತಂಗುವುದಕ್ಕೂ ಧೈರ್ಯವಿರಲಿಲ್ಲ. ನದಿಯ ಮೇಲೆಯೇ ನೇರವಾಗಿ ಸಾಗುತ್ತಿದ್ದೆವು. ಈಗ ಬೆಚ್ಚನೆಯ ಹವೆಯ ದಕ್ಷಿಣಸೀಮೆಯಲ್ಲಿ ಬಲುದೂರ ಬಂದುಬಿಟ್ಟಿದ್ದೆವು. ನಮ್ಮ ಮನೆಮಠ ಬಲು ದೂರದಲ್ಲಿತ್ತು. ಸ್ಪ್ಯಾನಿಷ್ ಪಾಚಿ ಬೆಳೆದಿದ್ದ ತರುಲತೆಗಳ ಸಮೀಪಕ್ಕೆ ಬರುತ್ತಲಿದ್ದೆವು; ಅದು ಉದ್ದನೆಯ ಬಿಳಿಯ ದಾಡಿಗಳಂತೆ, ಟೊಂಗೆ ಟಿಸಿಲುಗಳಿಂದ ಇಳಿಯಬಿದ್ದು ತೂಗುತ್ತಿದ್ದವು. ಅವು ಹಾಗೆ ಬೆಳೆದಿರುವುದನ್ನು ನಾನು ನೋಡಿದ್ದು ಇದೇ ಮೊದಲ

ಸಲವಾಗಿತ್ತು. ಆದರಿಂದ ಇಡೀ ಕಾಡಿನ ನೋಟವೇ ನಿಷ್ಠುರವೂ ದುಃಖಪೂರ್ಣವೂ ಆಗಿತ್ತು. ಈಗ ತಾವು ಅಪಾಯದ ನೆಲೆಯನ್ನು ದಾಟಿರುವುದಾಗಿ ಆ ಕಪಟಿಗಳು ತಿಳಿದರು; ಮತ್ತು ಹಳ್ಳಿಗಳಲ್ಲಿ ತಮ್ಮ ಕೈಚಳಕವನ್ನು ಮತ್ತೆ ತೋರಿಸತೊಡಗಿದರು.

ಪ್ರಥಮತಃ ಅವರು ಪಾನನಿರೋಧದ ಬಗೆಗೆ ಭಾಷಣ ಮಾಡಿದರು; ಆದರೆ ತಮ್ಮಿಬ್ಬರಿಗೂ ಕುಡಿತಕ್ಕೆ ಅಗತ್ಯವಾದಷ್ಟು ಹಣವನ್ನೇನೂ ಅವರು ಗಳಿಸಲಿಲ್ಲ. ಮುಂದೆ ಇನ್ನೊಂದು ಹಳ್ಳಿಯಲ್ಲಿ ಅವರು ನೃತ್ಯಶಾಲೆಯನ್ನು ತೆರೆದರು; ಆದರೆ ಕುಣಿತದ ವಿಷಯ ಕ್ಯಾಂಗರೂವಿಗೆ ಎಷ್ಟು ತಿಳಿದಿದೆಯೋ ಅಷ್ಟೇ ಅವರಿಗೂ ತಿಳಿದಿತ್ತು; ಆದ್ದರಿಂದ ಅವರ ಮೊದಲ ನೆಗೆತವೇ ಜನರು ವೇದಿಕೆಗೆ ನುಗ್ಗಿ ಅವರನ್ನು ಊರಾಚೆಗೆ ಓಡಿಸುವಂತೆ ಮಾಡಿತು. ಮತ್ತೊಮ್ಮೆ ಅವರು ವಾಕ್ಚಾತುರ್ಯ ಪ್ರದರ್ಶನವೊಂದನ್ನು ಏರ್ಪಡಿಸಿದರು; ಅವರು ತಮ್ಮ ವಾಕ್ಚಾತುರ್ಯವನ್ನು ಪೂರಾ ಪ್ರದರ್ಶಿಸುವುದರೊಳಗಾಗಿ ಶ್ರೋತೃಗಳು ಮೇಲೆದ್ದು ಸಿಕ್ಕಾಬಟ್ಟೆ ಬೈದು ಅವರನ್ನು ಓಡಿಸಿದರು. ಕಟ್ಟಕಡೆಗೆ ಅವರಿಗೆ ಪೂರಾ ಸುಸ್ತಾಗಿ ಹೋಗಿತ್ತು; ಅವರು ತುಂಬಾ ನಿರಾಶರಾಗಿ ದಿಕ್ಕುತೋರದೆ, ಸದಾ—ಕೆಲವು ವೇಳೆ ಅರ್ಧದಿನದ ಪರ್ಯಂತ—ಯೋಚನೆಮಾಡುತ್ತಾ ಕೊರಗುತ್ತಾ, ಮಾತಾಡದೆ, ತೆಪ್ಪದ ಮೇಲೆ ಬಿದ್ದುಕೊಂಡರು; ತೆಪ್ಪ ಮುಂದೆ ಮುಂದೆ ಹೋಗುತ್ತಿತ್ತು.

ಕೊನೆಗೆ ಅವರು ತಮ್ಮ ಚರ್ಯೆಯನ್ನು ಬದಲಾಯಿಸಿದರು; ಗೂಡಾರದೊಳಗೆ ಇಬ್ಬರೂ ಪಕ್ಕಪಕ್ಕದಲ್ಲಿ ತಲೆಯಿಟ್ಟುಕೊಂಡು ಮಲಗಿ—ಒಂದೊಂದು ಸಲ ಎರಡು ಮೂರು ಗಂಟೆಗಳ ಪರ್ಯಂತ—ಮೆಲುದನಿಯಲ್ಲಿ ಗುಟ್ಟಾಗಿ ಮಾತಾಡಿಕೊಳ್ಳತೊಡಗಿದರು. ಜಿಮ್ಮನಿಗೂ ನನಗೂ ಯೋಚನೆಗಿಟ್ಟುಕೊಂಡಿತು. ಈ ನೋಡವೇ ನಮಗೆ ಸರಿಬೀಳ ಲಿಲ್ಲ. ಅವರು ಹಿಂದಿನದಕ್ಕಿಂತ ಹೆಚ್ಚು ಕೀಳಾದ ಯಾವುದೋ ಒಂದು ಕುತಂತ್ರವನ್ನು ಹೂಡಿಕೊಳ್ಳುತ್ತಿರುವರೆಂದು ನಮಗೆ ತೋರಿತು. ಇದನ್ನೆ ನಾವು ನಮ್ಮ ಮನಸ್ಸಿನಲ್ಲಿ ಮತ್ತೆ ಮತ್ತೆ ತಿರುವಿಹಾಕಿದೆವು. ಅವರು ಯಾರ ಮನೆಗೋ ಅಂಗಡಿಗೋ ಕನ್ನ ಹಾಕುವುದನ್ನೋ, ಇಲ್ಲವೇ ಖೋಟಾ-ನಾಣ್ಯದ ಬೇಹಾರಕ್ಕೆ ಇಳಿಯುವುದನ್ನೋ, ಇಲ್ಲವೇ ಇಂಥಾದ್ದೇ ಇನ್ನೊಂದನ್ನೋ ಮಾಡಿಯಾರೆಂದು ನಿಶ್ಚೈಸಿದೆವು. ಆಗ ನಮಗೆ ತುಂಬಾ ಹೆದರಿಕೆಯಾಯಿತು. ಈ ಪ್ರಪಂಚದಲ್ಲೇ ನಡೆಯುವ ಅಂಥಾ ಯಾವ ಕಾರ್ಯ ಕ್ರಮಕ್ಕೂ ನಮಗೂ ಯಾವ ಸಂಬಂಧವೂ ಇರದಂತೆ ನೋಡಿಕೊಳ್ಳಬೇಕೆಂದು ನಾವಿಬ್ಬರೂ ತೀರ್ಮಾನಿಸಿದೆವು. ಅಂಥಾದ್ದು ಯಾವುದನ್ನಾದರೂ ಅವರು ಮಾಡಿ ಯಾರೆಂಬ ಸುಳಿವು ನಮಗೆ ಸಿಕ್ಕಿದಕೂಡಲೇ ನಾವು ಅವರನ್ನು ಖಂಡಾಖಂಡಿತವಾಗಿ ತ್ಯಜಿಸಿ ಹೊರಟುಹೋಗಬೇಕೆಂದು ನಿರ್ಧರಿಸಿದೆವು. ಹೀಗಿರಲು ಒಂದು ದಿನ ನಾವು ತೆಪ್ಪವನ್ನು, ಪೈಕ್ಸ್‌ವಿಲ್ ಎಂಬ ಹೆಸರಿನ ಚಿಕ್ಕ ಹೊಲಸು ಹಳ್ಳಿಯೊಂದರ ಕೆಳಗೆ ಸುಮಾರು ಎರಡು ಮೈಲಿ ದೂರದಲ್ಲಿರುವ ಸುರಕ್ಷಿತವಾದ ತಾಣದಲ್ಲಿ ಬಚ್ಚಿಟ್ಟೆವು, ರಾಜ ದಡಕ್ಕೆ ಹತ್ತಿ, ತಾನು ಆ ಊರಿಗೆ ಹೋಗಿ ತಮ್ಮ "ರಾಜಯೋಗ್ಯ ಅಪತ್ರಿವ್ಯ

ಪ್ರದರ್ಶನ"ದ ಸುದ್ದಿ ಅಲ್ಲಿನವರ ಕಿವಿಗೇನಾದರೂ ಮುಟ್ಟಿತ್ತೆ ಎಂಬುದನ್ನು ತಾನು ಸೂಕ್ಷ್ಮವಾಗಿ ತಿಳಿದು ಬರುವ ತನಕ ನಾವೆಲ್ಲರೂ ಇದ್ದಲ್ಲೇ ಬಚ್ಚಿಟ್ಟುಕೊಂಡಿರಬೇಕೆಂದು ಹೇಳಿದನು. ("ಕನ್ನ ಹಾಕಲು ಮನೆಯನ್ನು ಹುಡುವುದಕ್ಕಾಗಿ ಎಂದು ನಿನ್ನ ಅರ್ಥ; —ನೀನು ಕಳವು ಮಾಡಿ ಇಲ್ಲಿಗೆ ಹಿಂದಿರುಗಿದಾಗ ನಾನೂ ಜಿಮ್ಮನೂ ತೆಪ್ಪವೂ ಎಲ್ಲಿಗೆ ಹೋಗಿರಬೇಕೆಂದು ಅಚ್ಚರಿಪಡುವೆ— ನೀನದನ್ನು ಅತ್ಯಾಶ್ಚರ್ಯಕರವೆಂದೇ ಪರಿಗಣಿಸ ಬೇಕಾಗುತ್ತದೆ," ಎಂದು ಕೊಡೆ ನಾನು.) ತಾನು ಮಧ್ಯಾಹ್ನದೊಳಗಾಗಿ ಹಿಂದಿರುಗ ದಿದ್ದರೆ, ಎಲ್ಲವೂ ಸರಿಯಾಗಿದೆ ಎಂದು ನಾವು ತಿಳಿಯಬೇಕೆಂದೂ, ನಾವೂ ಅಲ್ಲಿಗೆ ಬಂದುಬಿಡಬೇಕೆಂದೂ ತಿಳಿಸಿದನು.

ಅದಕ್ಕಾಗಿ ನಾವು ಇದ್ದ ಬಳಿಯಿಂದ ಕದಲಲಿಲ್ಲ. ಡ್ಯೂಕನಂತೂ ಅಸಾಧ್ಯವಾಗಿ ಎಗರಿ ಬೀಳುತ್ತಿದ್ದನು. ಅವನಿಗೆ ತುಂಬಾ ಕೋಪ ಬಂದಿತ್ತು. ಯಾವುದೊಂದಕ್ಕೂ ಅವನು ನಮ್ಮನ್ನು ಬಯ್ಯುತ್ತಿದ್ದನು. ನಾವು ಯಾವ ಕೆಲಸವನ್ನೂ ಸರಿಯಾಗಿ ಮಾಡ ಬಲ್ಲವರಲ್ಲವೆಂದು ಅವನಿಗೆ ತೋರಿತು. ಸಣ್ಣಪುಟ್ಟ ಕೆಲಸಗಳಲ್ಲೂ ತಪ್ಪುಹಿಡಿಯುತ್ತಿದ್ದನು. ಖಂಡಿತವಾಗಿಯೂ ಏನೋ ಆಗುವುದರಲ್ಲಿದೆ, ಎಂದುಕೊಂಡೆ. ಮಧ್ಯಾಹ್ನವಾಯಿತು, ಆದರೂ ರಾಜ ಬಂದಿರಲಿಲ್ಲ; ನನಗೆ ಬಲು ಸಂತೋಷವಾಯಿತು. ಎಂತಾಗಲಿ, ನಮಗೆ ಇಲ್ಲಿಂದ ಕದಲುವ ಅವಕಾಶವಿತ್ತು—ಅದು ಅನಿರೀಕ್ಷಿತವಿರಬಹುದು. ತುಂಬಾ ಅನಿರೀಕ್ಷಿತವಿರಬಹುದು. ಆಗ ನಾನೂ ಡ್ಯೂಕನೂ ಹಳ್ಳಿಗೆ ಹೋದೆವು, ರಾಜನಿಗಾಗಿ ತುಂಬಾ ಹುಡುಕಾಡಿದೆವು. ಆಮೇಲಾಮೇಲೆ ಅವನೊಂದು ತಗ್ಗಾದ ಚಿಕ್ಕ ಹೆಂಡದಂಗ ಡಿಯ ಹಿಂಬದಿಯ ಕೋಣೆಯಲ್ಲಿದ್ದುದನ್ನು ಪತ್ತೆಮಾಡಿದೆವು ತುಂಬಾ ಕುಡಿದಿದ್ದನು; ಒಂದು ಹಿಂಡು ಪೋಲಿಗಳು ಅವನನ್ನು ತಮಾಷೆಗಾಗಿ ರೇಗಿಸುತ್ತಿದ್ದರು; ಅವನು ತನ್ನ ಕೈಲಾದಮಟ್ಟಿಗೆ ಅವರನ್ನು ಬೈಯುತ್ತಲೂ ಬೆದರಿಸುತ್ತಲೂ ಇದ್ದನು; ಒಂದು ಹೆಜ್ಜೆಯಿಡುವಷ್ಟು, ಅವರನ್ನು ದಬಾಯಿಸುವಷ್ಟು ಕೂಡ ಅವನಿಗೆ ಶಕ್ತಿಯಿರಲಿಲ್ಲ, ಅವನು ಅಷ್ಟು ಕುಡಿದಿದ್ದನು. ಡೂಕ್ ಅವನನ್ನು ಮುದಿದಡ್ಡನೆಂದು ನಿಂದಿಸತೊಡಗಿ ದನು; ಅವನು ಅದನ್ನೇ ಹಿಂದಿರುಗಿಸಲು ಯತ್ನಿಸಿದನು. ಅವರು ಹೀಗೆಯೇ ಮಾಡುತ್ತಿದ್ದಾಗ, ನಾನು ಒಂದು ನಿಮಿಷದಲ್ಲಿ ಅಲ್ಲಿಂದ ಕಾಲ್ತೆಗೆದು, ನಾವು ನಿರೀಕ್ಷಿಸು ತ್ತಿದ್ದ ಅವಕಾಶ ಸಿಕ್ಕಿದ್ದರಿಂದ, ಹೇಳದೆ ಕೇಳದೆ, ಜಿಂಕೆಯಂತೆ ನದಿಯ ದಾರಿಯಲ್ಲಿ ದೌಡುಹಾಕಿದೆ. ಇನ್ನವರು ನನ್ನನ್ನೂ ಜಿಮ್ಮನನ್ನೂ ಕಾಣಬೇಕಾದರೆ ತುಂಬಾ ದಿನಗಳಾಗುತ್ತವೆ ಎಂದು ನಿಶ್ಚಯಿಸಿದೆ. ಮೇಲುಸಿರೆಳೆಯುತ್ತಿದ್ದರೂ ಆನಂದಭರಿತ ನಾಗಿ ನಾನಲ್ಲಿಗೆ ಬಂದು ಕೂಗಿದೆ:

"ಜಿಮ್, ತೆಪ್ಪವನ್ನು ಬಿಚ್ಚು; ನಮಗಿನ್ನು ಯಾವ ತೊಂದರೆಯೂ ಇಲ್ಲ!" ಅದಕ್ಕೆ ಉತ್ತರವೇ ಇಲ್ಲ; ಗೂಡಾರದೀಚೆಗೆ ಯಾರೂ ಬರಲಿಲ್ಲ. ಜಿಮ್ ಹೊರಟು ಹೋಗಿದ್ದ! ನಾನು ಒಂದು ಬಾರಿ—ಮತ್ತೊಂದು ಬಾರಿ—ಮಗದೊಂದು ಬಾರಿ

ಕೂಗು ಹಾಕಿದೆ; ಅತ್ತ ಇತ್ತ ಕಾಡಿನಲ್ಲಿ ಓಡಾಡಿದೆ; ಬೊಬ್ಬೆ ಹಾಕಿದೆ, ಕಿರಿಚಿದೆ; ಏನೂ ಆಗಲಿಲ್ಲ—ಹಳೆಯ ಜಿಮ್ ಹೊರಟು ಹೋಗಿದ್ದ. ಬಳಿಕ ನಾನು ಕುಳಿತು ಅತ್ತುಬಿಟ್ಟೆ; ಅದನ್ನು ತಡೆಯಲಾಗಲಿಲ್ಲ. ಕೂಡಲೆ ನಾನು ಇನ್ನೇನು ಮಾಡಲಿ ಎಂದು ಯೋಚಿಸುತ್ತಾ ದಾರಿ ಹಿಡಿದಿದ್ದಾಗ ಒಬ್ಬ ಹುಡುಗ ಸಿಕ್ಕಿದ. ಇಂಥಿಂಥ ಉಡುಪನ್ನು ಧರಿಸಿದ್ದ ವಿಚಿತ್ರ ನೀಗ್ರೋ ಒಬ್ಬನನ್ನು ನೀನು ಕಂಡೆಯಾ ಎಂದು ನಾನು ಅವನನ್ನು ಕೇಳಿದೆ. ಅವನು ಹೇಳಿದ:

"ಹೌದು."

"ಎಲ್ಲಿ?" ಎಂದೆ ನಾನು.

"ಇಲ್ಲಿಗೆ ಎರಡು ಮೈಲಿ ದೂರದಲ್ಲಿರುವ ಸೈಲಾಫ್ ಫೆಲ್ಪ್ಸ್‌ನ ಸ್ಥಳಕ್ಕೆ. ಅವನೊಬ್ಬ ತಪ್ಪಿಸಿಕೊಂಡು ಬಂದಿದ್ದ ನೀಗ್ರೋ; ಅವನನ್ನು ಹಿಡಿದುಹಾಕಿದ್ದಾರೆ. ನೀನು ಅವನಿಗಾಗಿ ಹುಡುಕುತ್ತಿದ್ದೀಯೊ?"

"ಹುಡುಕುತ್ತಿದ್ದೇನೆಯೆ! ಅವನು ನನಗೆ ಒಂದೆರಡು ಗಂಟೆಗಳ ಹಿಂದೆ ಕಾಡಿನಲ್ಲಿ ಸಿಕ್ಕಿದ; ಸದ್ದು ಮಾಡಿದರೆ ನನ್ನನ್ನು ನುಂಗಿಸಿಬಿಡುವುದಾಗಿ ಹೆದರಿಸಿದ—ನಾನು ನೆಲದ ಮೇಲೆ ಮಲಗಿ ಇದ್ದಲ್ಲಿ ಇರಬೇಕೆಂದು ಹೇಳಿದ. ನಾನು ಹಾಗೆಯೇ ಮಾಡಿದೆ. ಆಗಿನಿಂದ ಅಲ್ಲೇ ಇದ್ದೆ; ಹೊರಗೆ ಬರುವುದಕ್ಕೇ ಭಯವಾಯಿತು."

"ಸರಿ" ಎಂದನವನು, "ನೀನವನಿಗೆ ಇನ್ನು ಹೆದರಬೇಕಾದ್ದಿಲ್ಲ, ಏಕೆಂದರೆ ಅವರು ಅವನನ್ನು ಹಿಡಿದುಹಾಕಿದ್ದಾರೆ. ಅವನು ದಕ್ಷಿಣಸೀಮೆಯಲ್ಲೆಲ್ಲಿಂದಲೋ ತಪ್ಪಿಸಿಕೊಂಡಿದ್ದ."

"ಅವನನ್ನು ಅವರು ಹಿಡಿದದ್ದು ಒಳ್ಳೆಯ ಕೆಲಸವಾಯಿತು."

"ನನಗೂ ಹಾಗೆಯೇ ತೋರುತ್ತದೆ. ಅವನನ್ನು ಪತ್ತೆಮಾಡಿದವರಿಗೆ ಇನ್ನೂರು ಡಾಲರುಗಳ ಬಹುಮಾನ ಕಾದಿದೆ. ಅವರಿಗೆ ದಾರಿಯಲ್ಲಿ ಹೋಗುತ್ತಾ ಇರುವಾಗ ನಿಧಿ ಸಿಕ್ಕಿದ ಹಾಗಾಗಿದೆ."

"ಹೌದು, ಅದು ನಿಜ. ನಾನು ಸ್ವಲ್ಪ ದೊಡ್ಡವನಾಗಿದ್ದರೆ ನನಗೇ ಅದು ಸಿಕ್ಕುತ್ತಿತ್ತು; ಅವನನ್ನು ಮೊದಲು ನೋಡಿದವ ನಾನು. ಅವನನ್ನು ಹಿಡಿದವರು ಯಾರು?"

"ಅವನೊಬ್ಬ ಮುದುಕ—ಹೊಸಬ—ಅವನು ತನಗೆ ಲಭಿಸಿದ ಭಾಗ್ಯವನ್ನು ನಲವತ್ತು ಡಾಲರುಗಳಿಗೆ ಮಾರಿಕೊಂಡ. ಏಕೆಂದರೆ ಅವನು ನದಿಯ ಮೇಗಣ ಸೀಮೆಗೆ ಹೋಗಬೇಕಿತ್ತು, ಅವನಿಗೆ ಪುರಸೊತ್ತಿರಲಿಲ್ಲ. ಅದನ್ನು ಯೋಚಿಸು, ಈಗ! ನಾನೇ ಆಗಿದ್ದರೆ ಏಳು ವರುಷಗಳವರೆಗೆ ಬೇಕಾದರೂ ಕಾದಿರುತ್ತಿದ್ದೆ."

"ನನಗೂ ಪ್ರತಿಸಲವೂ ಹಾಗೆಯೇ" ಎಂದೆ ನಾನು. "ಅದನ್ನು ಅಷ್ಟು

ಅಗ್ಗವಾಗಿ ಮಾರುವುದಾದರೆ ಅವನ ಸುಯೋಗ ಅದಕ್ಕಿಂತ ಹೆಚ್ಚು ಬೆಲೆ ಬಾಳದೇನೋ. ಅದರಲ್ಲಿ ಏನೋ ಕುತಂತ್ರವಿರಲೂ ಬಹುದು."

"ಆದರೂ ಅದು ತಂತಿಯಂತೆ ನೇರವಾಗಿಯೇ ಇದೆ. ನಾನೇ ಕೈಚೀಟಿಯನ್ನು ಕಂಡಿದ್ದೇನೆ. ಹೇಗಿದ್ದಾನೆಯೋ ಹಾಗೆಯೇ ಅದು ಅವನನ್ನು ವರ್ಣಿಸುತ್ತದೆ—ಅವನ ಚಿತ್ರ ಮೂಡುವಂತೆ ವರ್ಣಿಸುತ್ತದೆ, ನ್ಯೂ ಆರ್ಲಿಯನ್ಸ್ ಕೆಳಗಣ ಯಾವ ಕೃಷಿಕ್ಷೇತ್ರದಿಂದ ಅವನು ಬಂದನೆಂಬುದನ್ನು ತಿಳಿಸುತ್ತದೆ. ಇಲ್ಲವೇ ಇಲ್ಲ, ಆ ವಿಷಯದಲ್ಲಿ ಯಾವ ಸಮಸ್ಯೆಯೂ ಇಲ್ಲ. ಖಂಡಿತ. ಅಯ್ಯಾ, ಒಂದು ತುಣುಕು ತಂಬಾಕನ್ನು ಕೊಡು ; ಕೊಡುವುದಿಲ್ಲವೆ ?

ಅದು ನನ್ನಲ್ಲಿರಲಿಲ್ಲ, ಆದ್ದರಿಂದ ಅವನು ಹೊರಟುಹೋದ. ನಾನು ತೆಪ್ಪದ ಬಳಿಗೆ ಹಿಂದಿರುಗಿದೆ, ಯೋಚನೆ ಮಾಡೋಣವೆಂದು ಗೂಡಾರದಲ್ಲಿ ಕುಳಿತೆ. ಅದು ನಿಷ್ಫಲವಾಯಿತು. ತಲೆನೋವು ಹಿಡಿಯುವ ತನಕ ನಾನು ಯೋಚನೆ ಮಾಡಿದೆ ; ತೊಂದರೆಯಿಂದ ಪಾರಾಗಲು ಮಾರ್ಗವೇ ತೋರಲಿಲ್ಲ. ಇಷ್ಟುದೂರ ಬಂದದ್ದೂ, ನಾವು ಆ ದುಷ್ಟರಿಗೆ ಇಷ್ಟೆಲ್ಲ ಉಪಕಾರ ಮಾಡಿದ್ದೂ ಎಲ್ಲವು ನಿಷ್ಫಲವಾಗಿತ್ತು. ಎಲ್ಲವೂ ಮುರಿದು ನಾಶವಾಗಿತ್ತು. ಏಕೆಂದರೆ ಕೇವಲ ನಲವತ್ತು ಡಾಲರುಗಳಿಗಾಗಿ ಅವರು, ಜಿಮ್ಮನ ಮೇಲೆ ಇಂಥಾ ಕುತಂತ್ರವನ್ನು ಹೂಡಿ ಅವನನ್ನು ಮತ್ತೆ ಜೀವಾವಧಿ ಜೀತದಾಳಾಗಿಸಿ ಅಪರಿಚಿತರ ನಡುವೆ ಕೆಡಹುವಷ್ಟು, ಕಟುಕರಾಗಿದ್ದರು. ಒಮ್ಮೆ ನನಗನ್ನಿಸಿತು, ಒಂದುವೇಳೆ ಜಿಮ್ ಜೀತದಾಳಾಗಿಯೇ ಇರಬೇಕಾದರೆ ಅವನು ಅಷ್ಟುಕಾಲವೂ ತನ್ನ ಮನೆಯಲ್ಲೇ, ತನ್ನ ಸಂಸಾರ ಇರುವಲ್ಲೇ, ಜೀತದಾಳಾಗಿರುವುದು ಸಾವಿರಪಾಲು ಮೇಲು, ಎಂದು. ಆದ್ದರಿಂದ ನಾನು ಟಾಮ್ ಸಾಯರನಿಗೆ ಒಂದು ಪತ್ರವನ್ನು ಬರೆದು ಜಿಮ್ ಎಲ್ಲಿದ್ದಾನೆ ಎಂಬುದನ್ನು ಮಿಸ್. ವ್ಯಾಟ್ಸನ್ನಳಿಗೆ ಹೇಳಿಬಿಡು ಎಂದು ತಿಳಿಸುವುದು ಒಳ್ಳೆಯದೆಂದು ತೋರಿತು. ಆದರೆ ಆ ಯೋಚನೆಯನ್ನು ನಾನು ಕೂಡಲೆ ಕೈ ಬಿಡುವುದಕ್ಕೆ ಎರಡು ಕಾರಣಗಳಿದ್ದವು : ಒಂದು, ಅವಳು ಸಿಟ್ಟಿಗೆದ್ದು, ತನ್ನನ್ನು ಬಿಟ್ಟುಹೋದ್ದಕ್ಕಾಗಿ ಅವನ ಪುಂಡತನಕ್ಕೂ ಕೃತಘ್ನತೆಗೂ ಬೇಸರಗೊಳ್ಳಬಹುದು ಮತ್ತು ಆ ಕಾರಣದಿಂದ ಅವನನ್ನು ಮತ್ತೆ ನದಿಯ ಕೆಳಗಣ ಸೀಮೆಗೆ ತತ್‌ಕ್ಷಣ ಮಾರಿಬಿಡಬಹುದು ಎನ್ನುವುದು ; ಇನ್ನೊಂದು, ಅವಳು ಹಾಗೆ ಮಾಡದಿದ್ದರೂ, ಉಳಿದವರೆಲ್ಲರೂ ಅವನನ್ನು ಕೃತಘ್ನ ನೀಗ್ರೋ ಎಂದು ತಚ್ಚವಾಗಿ ಕಾಣುವರು, ಅವನು ಉದ್ದಕ್ಕೂ ಅದಕ್ಕಾಗಿ ಪರಿತಪಿಸುವಂತೆ ಮಾಡುವರು, ಮತ್ತು ಹೀಗಾಗಿ ಜಿಮ್ ದುಃಖವನ್ನೂ ಅವಮಾನವನ್ನೂ ಅನುಭವಿಸಬೇಕಾಗುವುದು, ಎನ್ನುವುದು. ಆಗ ನನ್ನ ಪಾಡೇನು ! ಹಕ್‌ಫಿನ್ ನೀಗ್ರೋ ಒಬ್ಬನ ಬಿಡುಗಡೆಗಾಗಿ ನೆರವಾದನು ಎಂದು ಸುತ್ತಲೂ ವದಂತಿ ಹಬ್ಬುತ್ತದೆ. ಆ ಊರಿನಿಂದ ಬಂದ ಯಾರನ್ನಾದರೂ ನಾನು ಎಂದಾದರೂ ಕಂಡಲ್ಲಿ, ನಾನು ಅವರ ಮುಂದೆ ನಾಚಿಕೆಯಿಂದ

ತಲೆತಗ್ಗಿಸಬೇಕಾಗುತ್ತದೆ. ಆಗುವುದೇ ಹಾಗೆ : ಒಬ್ಬ ಮನುಷ್ಯ ನೀಚಕೃತ್ಯವೊಂದನ್ನು ಮಾಡುತ್ತಾನೆ, ಎನ್ನಿ, ಅವನು ಆಮೇಲೆ ಅದರ ಯಾವ ಪರಿಣಾಮಗಳಿಗೂ ತಲೆಯೊಡ್ಡಲು ಇಷ್ಟಪಡುವುದಿಲ್ಲ. ತಾನು ತಲೆಮರೆಸಿಕೊಂಡಿರುವ ತನಕ, ತನಗದು ಅವಮಾನಕರವಲ್ಲ ಎಂದು ಕೇಳುತ್ತಾನೆ. ನನ್ನ ಸ್ಥಿತಿಯೂ ನಿಜವಾಗಿ ಅದೇ. ನಾನಿದನ್ನು ಆಳವಾಗಿ ಚಿಂತಿಸಿದಂತೆಲ್ಲ ನನ್ನ ಅಂತಸಾಕ್ಷಿ ನನ್ನನ್ನು ಚುಚ್ಚುತ್ತಲೇ ಇತ್ತು, ನಾನು ಪರಮ ದುಷ್ಟ, ನೀಚ ಮತ್ತು ಗರ್ಹ್ಯನೆನ್ನುವ ಭಾವನೆ ನನಗೆ ಬಂತು. ನನಗೆ ಯಾವ ತೋದರೆಯನ್ನೂ ಮಾಡದಿದ್ದ ಬಡಮುದುಕಿಯೊಬ್ಬಳ ನೀಗ್ರೋವನ್ನು ನಾನು ಅಪಹರಿಸುತ್ತಿರುವಾಗ ನನ್ನ ಕೇಡಿಗತನವನ್ನು ತಾನು ಸ್ವರ್ಗದೆತ್ತರದಿಂದ ಸದಾಕಾಲವೂ ವೀಕ್ಷಿಸುತ್ತಿರುವುದನ್ನು ನನಗೆ ಮನವರಿಕೆ ಮಾಡಿಕೊಡುತ್ತಲೂ ನನ್ನ ಮುಖದ ಮೇಲೆ ಛಟೀರೆಂದು ಹೊಡೆಯುತ್ತಲೂ ಇರುವ ಭಗವಂತನ ಪ್ರತ್ಯಕ್ಷ ಹಸ್ತವಿದೆಂಬುದು ನನಗೆ ಕಟ್ಟಕಡೆಗೆ ಇದ್ದಕಿದ್ದಂತೆಯೇ ಅನುಭವಕ್ಕೆ ಬಂತು. ಅದು ನನಗೆ ಸದಾ ಕಾವಲು ಕುಳಿತಿರುವ ಸರ್ವಸಾಕ್ಷಿಯೊಬ್ಬನಿರುವನೆಂದೂ, ಅವನು ಇಂಥಾ ಹೀನಕೃತ್ಯಗಳು ಮಿತಿ ಮೀರಲು ಎಡೆಗೊಡುವುದಿಲ್ಲವೆಂದೂ ನನಗೆ ತಿಳಿಸುತ್ತದೆ ಎಂದು ತೋರಿತು. ಒಡನೆಯೇ ನನಗೆ ದಾರಿಯಲ್ಲೇ ಕಾಲು ಕುಸಿಯಿತು ; ನನಗೆ ಅಷ್ಟು ಭಯವಾಯಿತು. ನನ್ನನ್ನು ಬೆಳಸಿದ್ದೇ ಕೇಡಿಗನಹಾಗೆ, ನನ್ನನ್ನು ಅಷ್ಟಾಗಿ ದೂರುವುದಕ್ಕೆ ಕಾರಣವಿಲ್ಲ ಎಂದು ನಾನು ನನ್ನನ್ನೇ ಸಾಧ್ಯವಾದಷ್ಟು ಮಟ್ಟಿಗೆ ಒಂದಲ್ಲ ಒಂದು ರೀತಿಯಲ್ಲಿ ಸಮಾಧಾನ ಮಾಡಿಕೊಂಡೆ. ಆದರೂ ನನ್ನ ಒಳಗೇ ಏನೂ ನುಡಿಯುತ್ತಿತ್ತು :" ಭಾನುವಾರದ ಶಾಲೆ ಇದೆ ; ನೀನಲ್ಲಿಗೆ ಹೋಗಬೇಕಾಗಿತ್ತು ; ನೀನು ಹಾಗೆ ಮಾಡಿದರೆ, ಆ ನೀಗ್ರೋವಿನ ಬಗೆಗೆ ನೀನು ಮಾಡಿರುವ ಕೆಲಸದಂಥ ದುಷ್ಕಾರ್ಯಗಳನ್ನು ಮಾಡಿದವರು ನಿರಂತರ ನರಕಾಗ್ನಿಗೆ ತುತ್ತಾಗುತ್ತಾರೆಂಬುದನ್ನು ನಿನಗವರು ತಿಳಿಸುತ್ತಿದ್ದರು

ಅದು ನನ್ನನ್ನು ನಡುಗಿಸಿತು. ಪ್ರಾರ್ಥನೆ ಮಾಡೋಣವೆಂದು ನಾನು ನಿರ್ಧರಿಸುವುದರಲ್ಲಿದ್ದೆ ; ನಾನು ಈ ತನಕ ಒಂದು ಬಗೆಯ ಹುಡುಗನ ಹಾಗೆ ಇದ್ದೆನಲ್ಲ— ಅದನ್ನು ಬಿಟ್ಟು, ಅದಕ್ಕಿಂತ ಒಳ್ಳೆಯವನಾಗುವುದಕ್ಕೆ ಪ್ರಯತ್ನಿಸುವುದು ನನ್ನಿಂದಾಗಲಿಲ್ಲ. ನಾನು ಮಂಡಿಯೂರಿಯೇನೋ ಕುಳಿತೆ. ಆದರೆ ಬಾಯಲ್ಲಿ ಮಾತೇ ಹೊರಡವು. ಏಕೆ ಹೀಗಾಯಿತು ? ಪ್ರಯತ್ನಮಾಡಿ ಅದು ದೇವರ ಕಣ್ಣಿಗೆ ಬೀಳದಂತೆ ಮಾಡುವುದು ಆಗದ ಕೆಲಸ. ಅದನ್ನು ನನ್ನ ಅರಿವಿನಿಂದ ಮರೆಸಿ ಹೊರಡುವುದೂ ಅಷ್ಟೇ ನಿಷ್ಫಲವಾದುದು ಏಕೆಂದರೆ ನನ್ನ ಹೃದಯ ಶುದ್ಧವಾಗಿರಲಿಲ್ಲ ; ಅದಕ್ಕೆ ಕಾರಣ, ನನ್ನ ನಡತೆ ಯೋಗ್ಯವಾಗಿರಲಿಲ್ಲ ; ನಾನು ಕಪಟನಾಟಕವಾಡುತ್ತಿದ್ದೆ. ಪಾಪಕಾರ್ಯವನ್ನು ಬಿಟ್ಟುಬಿಡುವೆನೆನ್ನುವಂತೆ ಮೇಲೆ ಮೇಲೆ ನಟಿಸುತ್ತಿದ್ದೆ ; ಆದರೆ ಹೃದಯಾಂತರಾಳದಲ್ಲಿ ಮಹಾಪಾಪಗಳಲ್ಲಿ ಅತಿ ಹೇಯವಾದುದಕ್ಕೆ ಅಂಟಿಕೊಂಡೇ ಇದ್ದೆ. ನಾನು ಧರ್ಮಾವಿರುದ್ಧವೂ ಶುದವೂ ಆದುದನ್ನು ಮಾಡುವೆನೆಂದೂ, ಆ ನೀಗ್ರೋವಿನ ಒಡತಿಗೆ

ಕಾಗದ ಬರೆದು ಅವನೆಲ್ಲಿರುವನೆಂಬುದನ್ನು ಆಕೆಗೆ ತಿಳಿಸುವೆನೆಂದೂ ನನ್ನ ಬಾಯಿಂದ ಹೇಳಿಸತೊಡಗಿದ್ದೆನಾದರೂ, ಅದು ಸುಳ್ಳೆಂಬುದು ನನ್ನ ಮನಸಾಕ್ಷಿಗೂ ಗೊತ್ತಿತ್ತು, ದೇವರಿಗೂ ತಿಳಿದಿತ್ತು. ನೀವು ಸುಳ್ಳಿನಿಂದ ಕೂಡಿದ ಪ್ರಾರ್ಥನೆಯನ್ನು ಮಾಡಲಾರಿರಿ– ನಾನದನ್ನು ಅರಿತುಕೊಂಡೆ.

ನನಗೆ ತುಂಬಾ ತೊಂದರೆಯಾಯಿತು, ಎಷ್ಟಾಗಬಹುದೋ ಅಷ್ಟೂ ಆಯಿತು. ಏನು ಮಾಡಬೇಕೆಂಬುದೇ ತೋರಲಿಲ್ಲ, ಕಡೆಗೊಂದು ದಾರಿ ಹೊಳೆಯಿತು. ಸರಿ, ನಾನು ಮೊದಲು ಹೋಗಿ ಪತ್ರವನ್ನು ಬರೆದು ಹಾಕುತ್ತೇನೆ—ಆಮೇಲಾದರೂ ಪ್ರಾರ್ಥನೆ ಮಾಡುವುದು ನನಗೆ ಸಾಧ್ಯವಾದೀತೆ ಎಂದು ನೋಡುತ್ತೇನೆ, ಎಂದುಕೊಂಡೆ. ಇದೀಗ ಪರಮಾಶ್ಚರ್ಯ !—ಒಡನೆಯೇ ನನ್ನ ಮನಸ್ಸು ಹಕ್ಕಿಗರಿಯಷ್ಟು ಹಗುರ ವಾಯಿತು, ನನ್ನ ತೊಂದರೆಗಳೆಲ್ಲವೂ ಮಾಯವಾದವು. ನಾನು ಒಂದು ಸೀಸದಕಡ್ಡಿ ಯನ್ನೂ ಕಾಗದವನ್ನು ತಂದುಕೊಂಡು, ಹರ್ಷೋದ್ರೇಕಗಳಲ್ಲಿ ಮುಳುಗಿಹೋಗಿ, ಅಲ್ಲೇ ಕುಳಿತು ಬರೆದೆ :

ಮಿಸ್ ವ್ಯಾಟ್ಸನ್, ಓಡಿಹೋಗಿರುವ ನಿಮ್ಮ ನೀಗ್ರೋ ಆಳು ಜಿಮ್ ಇಲ್ಲೇ ಪೈಕ್ಸ್‌ವಿಲ್‌ಗೆ ಎರಡುಮೈಲಿ ದೂರದಲ್ಲಿದ್ದಾನೆ; ಮತ್ತು ಮಿ. ಫೆಲ್ಪ್ಸ್ ಅವನನ್ನು ಹಿಡಿದಿದ್ದಾನೆ. ನೀವು ಬಹುಮಾನವನ್ನು ಕಳಿಸಿದಲ್ಲಿ ಅವನು ಇವನನ್ನು ನಿಮಗೆ ಒಪ್ಪಿಸು ತ್ತಾನೆ.

ಹಕ್‌ಫಿನ್

ನನ್ನ ಮನಸ್ಸಿಗೆ ಹಿತವಾಯಿತು ; ನನ್ನ ಜೀವಮಾನದಲ್ಲೇ ಇದು ನನಗೆ ಪಾಪ ವಿಮೋಚನೆಯ ಪ್ರಪ್ರಥಮ ಅನುಭವವಾಗಿತ್ತು. ನಾನೀಗ ಪ್ರಾರ್ಥನೆ ಮಾಡಬಹು ದೆಂದು ನನಗೆ ಗೊತ್ತಾಯಿತು. ನಾನದನ್ನು ತತ್‌ಕ್ಷಣವೇ ಮಾಡಲಿಲ್ಲ; ಆದರೆ ಪತ್ರ ವನ್ನು ಕೆಳಗಿಟ್ಟು ಯೋಚನೆಮಾಡುತ್ತಾ—ಇದೆಲ್ಲಾ ಹೀಗೆ ಆದದ್ದು ಎಷ್ಟು ಒಳ್ಳೆಯ ದೆಂದೂ, ನಾನು ದಾರಿಗೆಟ್ಟು ನರಕಕ್ಕೆ ಎಷ್ಟು ಹತ್ತಿರ ಹೋಗಿದ್ದೆನೆಂದು ಯೋಚನೆ ಮಾಡುತ್ತ ಅಲ್ಲೇ ಕುಳಿತೆ. ಯೋಚನೆ ಮಾಡುತ್ತಲೇ ಇದ್ದೆ. ನಾವು ನದಿಯ ಮಾರ್ಗ ವಾಗಿ ಕೈಕೊಂಡ ಪಯಣವನ್ನು ಕುಳಿತು ಮನಸಿನಲ್ಲೇ ಮೆಲುಕು ಹಾಕುತ್ತಿದೆ ; ಸದಾ ಜಿಮ್ ನನ್ನ ಕಣ್ಣಿಗೆ ಕಟ್ಟಿದಂತಿದ್ದ; ಹಗಲಲ್ಲಿ, ರಾತ್ರಿಯಲ್ಲಿ, ಕೆಲವು ಸಲ ಬೆಳ್ದಿಂಗಳಲ್ಲಿ ಕೆಲವು ಸಲ ಬಿರು ಮಳೆಯಲ್ಲಿ ನಾನೂ ಅವನೂ ಒಂದಿಗೆ ತೇಲುತ್ತಿದ್ದೆವು, ಹರಟು ತ್ತಿದ್ದೆವು, ಹಾಡುತ್ತಿದ್ದೆವು. ನಗುತ್ತಿದ್ದೆವು ಏಕೋ ಏನೋ, ಅವನನ್ನು ಹಗೆಯಾಗಿ ತಿಳಿದು ಅವನಿಗೆ ಕೆಟ್ಟುದನ್ನು ಮಾಡಹೊರಡಲು ನನಗೆ ಕಾರಣವೇ ತೋರಲಿಲ್ಲ; ಪರಿ ಸ್ಥಿತಿ ಅದಕ್ಕೆ ನೇರ ವಿರುದ್ಧವಾಗಿತ್ತು, ತನ್ನ ಕಾವಲಿನ ಸರದಿ ಮುಗಿದ ಮೇಲೂ ನನ್ನನ್ನು ಕರೆಯದೆ ನನ್ನ ನಿದ್ದೆಗೆ ಭಂಗತರದೆ, ನನ್ನ ಸರದಿಯಲ್ಲೂ ತಾನೇ ಕಾವಲು ಕೂರುತ್ತಿದ್ದುದನ್ನು ನಾನು ಕಂಡಿದ್ದೆ; ನಾನು ಇಬ್ಬನಿಯಿಂದ ಪಾರಾಗಿ ಬಂದಾಗಲೂ, ಆ ಎರಡು ಮನೆತನಗಳಿಗೆ ದ್ವಂದ್ವಯುದ್ಧ ನಡೆದ ಆ ಊರಿನಲ್ಲಿ ಕಳ್ಳಬದಿಯ ಬಳಿ

ಅವನ ಸಮೀಪಕ್ಕೆ ನಾನು ಹೋದಾಗಲು, ಮತ್ತು ಹೀಗೆಯೇ ಅನೇಕ ಸಂದರ್ಭಗಳಲ್ಲಿ —ನನ್ನನ್ನು ಕಂಡು ಅವನಿಗೆ ಎಷ್ಟು ಹರ್ಷವಾಯಿತು ಎಂಬುದನ್ನು ನಾನು ಕಂಡಿದ್ದೆ. ಅವನು ನನ್ನನ್ನು ಯಾವಾಗಲೂ ಮುದ್ದು ಮಗು ಎನ್ನುತ್ತಿದ್ದನು. ಮುದ್ದು ಮಾಡುತ್ತಿದ್ದನು. ನನಗಾಗಿ ತನಗೆ ಹೊಳೆಯಬಹುದಾದೆಲ್ಲವನ್ನೂ ಮಾಡುತ್ತಿದ್ದನು. ಅವನು ಯಾವಾಗಲೂ ಬಲು ಒಳ್ಳೆಯವನಾಗಿದ್ದನು. ಇವೆಲ್ಲಾ ನನ್ನ ಮನಸ್ಸಿನಲ್ಲಿ ಸುಳಿದವು. ತೆಪ್ಪದಲ್ಲಿದ್ದ ನಮಗೆ ಸಿಡುಬು ತಗುಲಿತ್ತೆಂದು ನಾನವರಿಗೆ ಹೇಳಿ ಅವನನ್ನು ಉಳಿಸಿದಾಗ, ಅವನು ತುಂಬಾ ಕೃತಜ್ಞತೆಯಿಂದ ಹಳೆಯ ಜಿಮ್ಮನಿಗೆ ನಾನೇ ಈ ಪ್ರಪಂಚದಲ್ಲಿರುವ ಪರಮ ಸ್ನೇಹಿತನೆಂದೂ, ಸದ್ಯದ ಪರಿಸ್ಥಿತಿಯಲ್ಲಿ, ತನ್ನ ಏಕೈಕ ಸ್ನೇಹಿತನೆಂದೂ ಹೇಳಿದುದನ್ನು ಸ್ಮರಿಸಿದೆ. ಬಳಿಕ ಹಾಗೆಯೇ ಸುತ್ತಲೂ ಕಣ್ಣುಹಾಯಿಸಿ ಆ ಕಾಗದವನ್ನು ನೋಡಿದೆ

ಅದೊಂದು ಏಕಾಂತ ಸ್ಥಳ. ನಾನದನ್ನು ಎತ್ತಿಕೊಂಡೆ, ಮೈ ಕೈಯಲ್ಲಿ ಹಿಡಿದೆ. ನನ್ನ ಮೈ ನಡುಗುತ್ತಿತ್ತು; ಏಕೆಂದರೆ ನಾನು ಎರಡರಲ್ಲಿ ಒಂದನ್ನು ಅಂತಿಮವಾಗಿ ನಿರ್ಧರಿಸಬೇಕಾಗಿತ್ತು. ನನಗದು ಗೊತ್ತಿತ್ತು. ಒಂದು ನಿಮಿಷಕಾಲ ನಾನು ಉಸಿರು ತಡೆದು ಆಲೋಚಿಸಿ ಮನಸ್ಸಿನಲ್ಲಿ ಅಂದುಕೊಂಡೆ :

"ಆದದ್ದಾಗಲಿ, ನಾನು ನರಕಕ್ಕೇ ಹೋಗುವೆನು";—ಅದನ್ನು ಹರಿದೆಸೆದೆ. ಅವು ಭಯಂಕರವಾದ ಭಾವಗಳು, ಭಯಂಕರವಾದ ಮಾತುಗಳು; ಆದರೆ ಅದನ್ನು ಆಡಿದ್ದಾಯಿತು. ಅವು ನಿಂತುಬಿಡಲಿ ಎಂದುಕೊಂಡೆ; ನನ್ನ ನಡತೆಯನ್ನು ಮಾರ್ಪಡಿಸುವುದರ ಬಗೆಗೆ ಆ ಮುಂದೆ ಯಾವ ಯೋಚನೆಯನ್ನೂ ಮಾಡಲಿಲ್ಲ. ಇಡೀ ಘಟನೆಯನ್ನು ಮನಸ್ಸಿನಿಂದಾಚೆಗೆ ತೊಡೆದುಹಾಕಿದೆ. ಮತ್ತೆ ದುಷ್ಟತನಕ್ಕೆ ಕೈ ಹಾಕುವುದಾಗಿ ನಿರ್ಧರಿಸಿದೆ. ಅದು ನನ್ನ ಜಾಯಮಾನಕ್ಕೆ ಅನುಗುಣವಾದದ್ದು; ನನ್ನನ್ನು ಬೆಳಸಿದ್ದೇ ಹಾಗೆ; ಇನ್ನೊಂದು ಮಾರ್ಗ ನನಗಲ್ಲದ್ದು. ಅದನ್ನು ನಾನು ಹೀಗೆ ಆರಂಭಿಸುತ್ತೇನೆ : ಕೆಲಸಕ್ಕಿಳಿದುಬಿಡುತ್ತೇನೆ, ಜಿಮ್ಮನನ್ನು ಮತ್ತೆ ದಾಸ್ಯದಿಂದ ಬಿಡಿಸಿ ಅಪಹರಿಸುತ್ತೇನೆ; ಇದಕ್ಕಿಂತ ಕೆಡುಕಾದುದೇನಾದರೂ ನನಗೆ ತೋರಿದರೆ, ನಾನದನ್ನು ಮಾಡುತ್ತೇನೆ, ಏಕೆಂದರೆ ಈ ದಾರಿಗಿಳಿದ ಬಳಿಕ–ಅಂತಿಮವಾಗಿ ಈ ದಾರಿಗಿಳಿದಬಳಿಕ– ಇಲ್ಲಿರುವಷ್ಟು ಕಾಲ ಹಿಡಿದ ಕೆಲಸವನ್ನು ಸಾಂಗವಾಗಿ ಪೂರೈಸಲೂ ಬಹುದು.

ಬಳಿಕ ಅದನ್ನು ಸಾಧಿಸುವ ಮಾರ್ಗ ಯಾವುದೆಂದು ನಾನು ಪರ್ಯಾಲೋಚಿಸುತ ಕುಳಿತೆ, ಅನೇಕ ಸಲ ನಾನು ಅದನ್ನು ಮನಸ್ಸಿನಲ್ಲಿ ತಿರುವಿಹಾಕಿದೆ. ಆಮೇಲೆ ನನಗನುಕೂಲವಾದ ಯೋಜನೆಯೊಂದನ್ನು ಸಿದ್ಧಪಡಿಸಿದೆ. ಅದಕ್ಕಾಗಿ ನದಿಯಲ್ಲಿ ಸ್ವಲ್ಪ ಕೆಳಗಡೆ ಗಿದ್ದ ಅರಣ್ಯಮಯವಾದ ದ್ವೀಪವೊಂದನ್ನು ಹುಡುಕಿ ಅದರ ವಿವರಗಳನ್ನು ತಿಳಿದುಕೊಂಡೆ. ಸುಮಾರು ಕತ್ತಲೆಯಾದಕೂಡಲೇ ನಾನಲ್ಲಿಗೆ ತೆಪ್ಪದಮೇಲೆ ಮೆಲ್ಲಗೆ ಹೋಗಿ, ತೆಪ್ಪವನ್ನು ಬಚ್ಚಿಟ್ಟು, ದ್ವೀಪವನ್ನು ಪ್ರವೇಶಿಸಿದೆನು. ರಾತ್ರಿ ಅಲ್ಲೇ ಮಲಗಿದ್ದೆನು; ಬೆಳಕು ಹರಿಯುವ ಮುನ್ನವೇ ಎದ್ದು, ಉಪಹಾರವನ್ನು ಮುಗಿಸಿ, ಅಂಗಡಿಯಿಂದ ಕೊಂಡು ತಂದಿದ್ದ ಉಡುಪನ್ನು ಹಾಕಿಕೊಂಡು, ಉಳಿದ ಬಟ್ಟೆಬರೆಗಳನ್ನೂ ಇತರ

ಸಾಮಾನುಗಳನ್ನೂ ಗಂಟುಕಟ್ಟಿ ಕಿರುದೋಣಿ ಹತ್ತಿ ದಡಸೇರಿದೆನು. ಫೆಲ್ಪ್ಸ್ ಎಲ್ಲಿದ್ದಾನೆಂದು ನಾನು ತಿಳಿದಿದ್ದೆನೋ ಅಲ್ಲಿಗೆ ಸ್ವಲ್ಪಕೆಳಗೆ ದೋಣಿಯಿಂದಿಳಿದು ನಡೆದು ಹೋದೆನು. ನನ್ನ ಗಂಟನ್ನು ಅಡವಿಯಲ್ಲಿ ಬಚ್ಚಿಟ್ಟು ಕಿರುದೋಣಿಯು ಭರ್ತಿ ನೀರನ್ನೂ ಕಲ್ಲುಗಳನ್ನು ತುಂಬಿ, ಅದು ನನಗೆ ಬೇಕಾದ ಸಮಯಕ್ಕೆ ತಟಕ್ಕನೆ ಸಿಕ್ಕುವಂಥ ಒಂದು ನಿರ್ದಿಷ್ಟ ಸ್ಥಳದಲ್ಲಿ ಅದನ್ನು ಮುಳುಗಿಸಿದೆನು. ದಡನಮೇಲೆ ಹಬೆಯಿಂದ ಚಲಿಸುವ ಯಂತ್ರದಿಂದ ಮರ ಕೊಯ್ಯುವ ಚಿಕ್ಕದೊಂದು ಕಾರ್ಖಾನೆಯಿತ್ತು. ಅಲ್ಲಿಗೂ ನಾನು ದೋಣಿಯನ್ನು ಮುಳುಗಿಸಿದ್ದ ಸ್ಥಳಕ್ಕೂ ಸಮಾರು ಕಾಲು ಮೈಲಿ.

ಬಳಿಕ ನಾನು ಆ ದಾರಿಯನ್ನು ಹಿಡಿದೆ. ಆ ಕಾರ್ಖಾನೆಯ ಬಳಿಗೆ ಹೋದಾಗ ಅದರ ಮೇಲೆ "ಫೆಲ್ಪ್ಸರ ಮರಕೆಲಸದ ಕಾರ್ಖಾನೆ" ಎಂಬ ಹೆಸರಿನ ಹಲಗೆಯನ್ನು ಕಂಡೆ. ಅಲ್ಲಿಗೆ ಇನ್ನೂರು ಮುನ್ನೂರು ಗಜಗಳ ಆಚೆಗಿದ್ದ ಹೊಲ-ಮನೆಗಳವರೆಗೆ ನಾನು ಎವೆಯಿಕ್ಕದೆ ನೋಡುತ್ತ ಹೋದೆ. ಆಗ ಹಾಡಹಗಲಾಗಿದ್ದರೂ ಒಬ್ಬರ ತಲೆಯೂ ಕಾಣಿಸಲಿಲ್ಲ. ನಾನದಕ್ಕೆ ಯೋಚನೆಮಾಡಲಿಲ್ಲ; ಏಕೆಂದರೆ ಆ ಸಮಯದಲ್ಲಿ ಯಾರನ್ನೂ ನೋಡುವುದು ನನಗೆ ಬೇಕಾಗಿರಲಿಲ್ಲ. ಆ ಸ್ಥಳದ ಸನ್ನಿವೇಶವನ್ನು ಅರಿತುಕೊಳ್ಳುವುದು ಮಾತ್ರ ನನ್ನ ಉದ್ದೇಶವಾಗಿತ್ತು. ನನ್ನ ಯೋಜನೆಯಂತೆ, ನಾನು ಅಲ್ಲಿಗೆ ಬಂದಿದ್ದ ಒಬ್ಬ ಹಳ್ಳಿಯವ, ಕೆಳಸೀಮೆಯವನಲ್ಲ. ಆದ್ದರಿಂದ ಹಾಗೆಯೇ ನೋಡುತ್ತ ನೇರ ಊರೊಳಕ್ಕೆ ಹೋದೆ. ಅಲ್ಲಿಗೆ ಹೋದರೆ, ಮೊತ್ತಮೊದಲು ನನ್ನ ಕಣ್ಣಿಗೆ ಬಿದ್ದ ಮನುಷ್ಯನೆಂದರೆ, ಆ ಡ್ಯೂಕ್. ಹಿಂದೆ ಮಾಡಿದಂತೆಯೇ "ರಾಜಯೋಗ್ಯ ಅಪ್ರತಿಮ" ದೃಶ್ಯದ ಮೂರು ರಾತ್ರಿಗಳ ಆಟವನ್ನು ಕುರಿತ ಜಾಹೀರಾತೊಂದನ್ನು ಕೈಲಿ ಹಿಡಿದಿದ್ದನು. ಈ ಮೋಸಗಾರರಿಗೆ ಇನ್ನೆಷ್ಟು ಧೈರ್ಯ! ನನ್ನ ಮನಸ್ಸು ಹಿಂದೆಗೆಯುವ ಮುನ್ನವೇ ನಾನು ಅವನೆದುರಿಗೆ ಹೋಗಿ ನಿಂತೆ. ಅವನಿಗೆ ಆಶ್ಚರ್ಯವಾಯಿತು, ಅವನು ಹೇಳಿದ: "ಎಲವೊ! ನೀನೆಲ್ಲಿಂದ ಬಂದೆ". ಬಳಿಕ ನಗೆಮೊಗದಿಂದ ಕಾತರನಾಗಿ ಕೇಳಿದ "ತೆಪ್ಪವೆಲ್ಲಿ ? ಅದನ್ನು ಸಂರಕ್ಷಿತವಾದ ಸ್ಥಳದಲ್ಲಿ ಇಟ್ಟಿರುವೆಯ ?"

ನಾನು ಹೇಳಿದೆ:

"ನಾನೀಗ ಅದೇ ಪ್ರಶ್ನೆಯನ್ನು ನಿಮಗೆ ಹಾಕುತ್ತಿದ್ದೇನೆ, ಮಹಾಸ್ವಾಮಿ."

ಆಮೇಲೆ ಅವನ ಮುಖದ ಗೆಲವಿಳಿಯಿತು. ಅವನು ಹೇಳಿದ;

"ಆ ಪ್ರಶ್ನೆಯನ್ನು ನನಗೆ ಹಾಕುತ್ತಿರುವುದರ ಉದ್ದೇಶವೇನು ?" ಎಂದನವನು.

"ಹಾಗೋ? ನಿನ್ನೆ ಆ ಹೆಂಡದಂಗಡಿಯಲ್ಲಿ ರಾಜನನ್ನು ಕಂಡಾಗ, ಅವನ ಕುಡಿತದ ಅಮಲು ಇಳಿಯಲು ಇನ್ನೂ ಎಷ್ಟೋ ಗಂಟೆಗಳ ಕಾಲ ಬೇಕಾದೀತು, ಅಲ್ಲಿಯ ತನಕ ನಾವು ಅವನನ್ನು ನಮ್ಮ ನೆಲೆಗೆ ಒಯ್ಯುವುದಾಗದು, ಎಂದುಕೊಂಡೆ ನಾನು. ಊರೊಳಗೆ ಅಡ್ಡಾಡಿ ಕಾಲಕಳೆದು ಬರೋಣ, ಇನ್ನೂ ಹೊತ್ತಿದೆಯಲ್ಲ ಎಂದುಕೊಂಡು ನಾನು ಹೊರಟೆ, ಅಲ್ಲೊಬ್ಬ ಮನುಷ್ಯ ನಮಗೆ ಸಿಕ್ಕಿದ; ತನ್ನ ಚಿಕ್ಕದೋಣಿಯನ್ನು ಹೊಳೆ

ಯಾಚೆಗೆ ಒಯ್ದು ಒಂದು ಕುರಿಯನ್ನು ಸಾಗಿಸಿಕೊಂಡು ಬರಬೇಕಾಗಿದೆಯೆಂದೂ ಅವನ ನೆರವಿಗೆ ನಾನು ಹೋಗುವುದಾದರೆ ನನಗೆ ಹತ್ತು ಸೆಂಟುಗಳನ್ನು ತಾನು ಕೊಡು ವುದಾಗಿಯೂ ಅವನು ನನಗೆ ಹೇಳಿದನು. ಆದ್ದರಿಂದ ನಾನು ಅವನೊಂದಿಗೆ ಹೋದೆ. ನಾವು ಕುರಿಯನ್ನು ದೋಣಿಯೊಳಕ್ಕೆ ಎಳೆದುಕೊಂಡು ಬರುತ್ತಿದ್ದಾಗ, ಹಗ್ಗವನ್ನು ನನ್ನ ಕೈಗೆ ಕೊಟ್ಟು ಅವನು, ಅದನ್ನು ನೂಕುವುದಕ್ಕಾಗಿ, ಅದರ ಹಿಂದುಗಡೆಗೆಹೋದನು; ಕುರಿಯೋ ನನಗಿಂತ ಭಾರಿಯದು, ಅದು ಕಿತ್ತು ಓಡಿತು, ನಾವದನ್ನು ಬೆನ್ನಟ್ಟಿ ಹೋದೆವು. ನಮ್ಮ ಬಳಿ ನಾಯಿಗಳಿರಲಿಲ್ಲ. ಆದ್ದರಿಂದ ನಾವು ಸುಸ್ತಾಗುವತನಕ ಅದರ ಹಿಂದೆಯೇ ಓಡಬೇಕಾಯಿತು, ಕತ್ತಲಾಗುವ ತನಕ ನಮಗದು ಸಿಕ್ಕಲೇ ಇಲ್ಲ, ಆಮೇಲೆ ಸಿಕ್ಕಿತು. ಆಮೇಲೆ ನಾನು ತೆಪ್ಪದ ಬಳಿಗೆ ಹಿಂದಿರುಗಿದೆ. ಅಲ್ಲಿಗೆ ಬಂದಾಗ ಅದು ಇರಲೇ ಇಲ್ಲ, ನಾನು 'ಅವರಿಗೇನೋ ತೊಂದರೆಯಾಗಿರಬೇಕು, ಅವರು ಇಲ್ಲಿಂದ ಹೊರಡಲೇಬೇಕಾಗಿ ಬಂದಿರಬೇಕು. ಅವರು ನನ್ನ ನೀಗ್ರೋವನ್ನು, ಇಡೀ ಪ್ರಪಂಚದಲ್ಲಿ ನನ್ನದಾಗಿದ್ದ ಒಬ್ಬನೇ ಒಬ್ಬ ನೀಗ್ರೋವನ್ನು ಕೊಂಡುಹೋಗಿದ್ದಾರೆ. ಕಾಣದ ಸೀಮೆಗೆ ಬಂದಿದ್ದೇನೆ, ನನಗಿನ್ನಾವ ಆಸ್ತಿಯೂ ಇಲ್ಲ, ನಾನು ಬದುಕಿರುವುದಕ್ಕೆ ಮಾರ್ಗವೇ ಇಲ್ಲದಂತಾಗಿದೆ' ಎಂದುಕೊಂಡೆನು. ನಾನು ನಾನಂತೂ ಸುಮ್ಮನೆ ಕುಳಿತು ಅತ್ತುಬಿಟ್ಟೆ. ರಾತ್ರಿಯೆಲ್ಲಾ ಅಡವಿಯಲ್ಲಿ ಮಲಗಿದ್ದೆ. ತೆಪ್ಪದ ಗತಿ ಏನಾಯಿತು ಹಾಗಾದರೆ ?—ಮತ್ತು ಜಿಮ್ಮನ-ಬಡ ಜಿಮ್ಮನ ಗತಿ ?"

"ತೆಪ್ಪದ ವಿಷಯದಲ್ಲಿ, ನನಗದು ಗೊತ್ತಿದ್ದರೆ ನೀನು ನನಗೆ ಬೇಕಾದ್ದನ್ನು ಮಾಡು. ಆ ಹಂದಿ ಮೂರ್ಖ ಒಂದು ವ್ಯಾಪಾರದಲ್ಲಿ ನಲವತ್ತು ಡಾಲರ್ ಸಂಪಾದನೆ ಮಾಡಿದ್ದ. ನಾವು ಅವನನ್ನು ಹೆಂಡದಂಗಡಿಯಲ್ಲಿ ಕಂಡಾಗ, ಆ ನೀಚರು ಅವನೊಂದಿಗೆ ಅರ್ಧಡಾಲರ್ ಪಣದ ಆಟವಾಡಿ, ಅವನು ವಿಸ್ಕಿಗಾಗಿ ಕೊಟ್ಟಿದ್ದ ಹಣದ ವಿನಾ, ಎಲ್ಲವನ್ನೂ ದೋಚಿಕೊಂಡರು. ಹೋದ ರಾತ್ರಿ ನಾನು ಅವನನ್ನು ತೆಪ್ಪವಿದ್ದ ಬಳಿಗೆ ಕರೆದುಕೊಂಡು ಬಂದೆ. ಅದು ಹೊರಟುಹೋದುದನ್ನು ಕಂಡು ನಾವು, 'ಆ ನೀಚ ಹುಡುಗ ತೆಪ್ಪವನ್ನು ಕದ್ದು ನಮ್ಮನ್ನು ಬಿಟ್ಟು ನದಿಯಮೇಲೆ ಹೊರಟು ಹೋಗಿದ್ದಾನೆ' ಎಂದುಕೊಂಡೆವು.

ನಾನು ನನ್ನ ನೀಗ್ರೋವನ್ನು ಬಿಟ್ಟು ಹೋಗುತ್ತಿರಲಿಲ್ಲ. ಹೋಗುತ್ತಿದ್ದೆನೆ, ಹೇಳು. ಈ ಪ್ರಪಂಚದಲ್ಲಿ ನನಗಿದ್ದ ಒಬ್ಬನೇ ನೀಗ್ರೋ ಅವನು; ನನ್ನ ಏಕಮೇವ ಆಸ್ತಿ ಅವನು."

ನಮಗದು ಹೊಳೆಯಲಿಲ್ಲ. ವಾಸ್ತವವಾಗಿಯೂ, ಆ ನೀಗ್ರೋ ನಮಗೆ ಸೇರಿ ದವನೆಂದೇ ನಾವು ತಿಳಿದೆವು. ಹೌದು ಅವನನ್ನು ಹಾಗೆಯೇ ಎಣಿಸಿದೆವು. ನಾವು ಅವನಿಗಾಗಿ ಪಟ್ಟ ಕಷ್ಟ ದೇವರಿಗೆ ಗೊತ್ತು. ಆದ್ದರಿಂದ ತೆಪ್ಪ ಹೊರಟುಹೋಗಿರು ವುದನ್ನು ಕಂಡಾಗ ಮತ್ತು ನಾವು ಪೂರಾ ನಿರ್ಗತಿಕರಾಗಿದಾಗ, ಇನ್ನೊಮ್ಮೆ "ರಾಜ

ಯೋಗ್ಯ ಅಪ್ರತಿಮ"ದೃಶ್ಯವನ್ನು ಹೂಡದೆ ಬೇರೆ ಮಾರ್ಗವೇ ಇರಲಿಲ್ಲ.ನಾನು ಆಗಿನಿಂದ ಸೊರಗಿ ಹೋಗಿದ್ದೇನೆ, ಒಣಗಿಹೋಗಿದ್ದೇನೆ. ಎಲ್ಲಿ ಆಹತ್ತು ಸೆಂಟುಗಳು ಇಲ್ಲಿ ಕೊಡು" ನನ್ನಲ್ಲಿ ತುಂಬಾ ಹಣವಿತ್ತು. ಆದ್ದರಿಂದ ನಾನ ವನಿಗೆ ಹತ್ತು ಸೆಂಟುಗಳನ್ನು ಕೊಟ್ಟೆ; ಆದರೆ, ತಿನ್ನಲು ಏನನ್ನಾದರೂ ತರುವುದಕ್ಕಾಗಿ ಅದನ್ನು ಬಳಸಿಕೋ, ನನಗೂ ಸ್ವಲ್ಪ ಕೊಡು; ಏಕೆಂದರೆ ನನ್ನ ಹತ್ತಿರ ಇದ್ದದ್ದೇ ಅಷ್ಟು, ಮತ್ತು ನಾನು ನಿನ್ನೆ ಸಂಜೆಯಿಂದ ಬಾಯಿಗೇನನ್ನೂ ಹಾಕಿಕೊಂಡಿಲ್ಲ ಎಂದು ಕೇಳಿಕೊಂಡೆ, ಅವನು ಏನೂ ಹೇಳಲಿಲ್ಲ, ಮರುಕ್ಷಣದಲ್ಲೇ ಸರಕ್ಕನೆ ತಿರುಗಿ ನನ್ನನ್ನು ಕೇಳಿದ:

"ಆ ನೀಗ್ರೋ ನಮ್ಮನ್ನು ಬಯಲಿಗೆಳೆಯುವನೆಂದು ತಿಳಿದಿದ್ದೀಯೇನು ? ಹಾಗೆ ಮಾಡಿದರೆ, ನಾವು ಅವನ ಚರ್ಮ ಸುಲಿಯುತ್ತೇವೆ".

"ಅದನ್ನು ಅವನು ಹೇಗೆ ಮಾಡಬಲ್ಲ ? ಓಡಿಹೋಗಿಲ್ಲವೇ ಅವನು ?"

"ಇಲ್ಲ! ಆ ಮುದಿ ಮೂರ್ಖ ಅವನನ್ನು ಮಾರಿದ, ಬಂದ ಹಣದಲ್ಲಿ ನನಗೆ ಪಾಲು ಕೊಡಲಿಲ್ಲ. ಹಣವೂ ಹೋಯಿತು."

"ಮಾರಿದನೆ ಅವನನ್ನು ?" ಎಂದೆ ನಾನು; ನನಗೆ ಅಳು ಬಂತು; "ಹೇಗೆ, ಅವನು ನನ್ನ ನೀಗ್ರೋ, ಅದು ನನ್ನ ಹಣ. ಅವನೆಲ್ಲಿದ್ದಾನೆ?– ನನ್ನ ನೀಗ್ರೋ ನನಗೆ ಬೇಕು."

"ಹಾಗಾದರೆ, ನಿನ್ನ ನೀಗ್ರೋ ನಿನಗೆ ಸಿಕ್ಕುವುದಿಲ್ಲ, ಅಷ್ಟೆ– ಆದ್ದರಿಂದ ನಿನ್ನ ಗೋಳಾಟವನ್ನು ನಿಲ್ಲಿಸು. ನೋಡಿಲ್ಲಿ – ನಮ್ಮನ್ನು ಬಯಲಿಗೆಳೆಯತೊಡಗಬೇಕೆಂದು ನೀನು ಯೋಚಿಸಿದ್ದೀಯೆ ? ನಿನ್ನನ್ನು ನಂಬಬಹುದೇಬುದು ನಾನು ತಿಳಿದಿದ್ದರೆ, ನನ್ನನ್ನು ಬೇಕಾದನ್ನು. ಒಂದು ವೇಳೆ ನೀನು ನಮ್ಮನ್ನು ಬಯಲಿಗೆಳೆದರೆ—"

ಅಲ್ಲಿಗೇ ನಿಲ್ಲಿಸಿದ. ಆದರೆ ಡ್ಯೂಕ್ ಅಷ್ಟು ವಕ್ರವಾಗಿ ಹಿಂದೆಂದೂ ಕಣ್ಣಾಡಿಸಿರಲಿಲ್ಲ. ನಾನು ಗೊಣಗುತ್ತಲೇ ಹೇಳಿದೆ.

"ನಾನು ಯಾರನ್ನೂ ಬಯಲಿಗೆಳೆಯ ಬಯಸುವುದಿಲ್ಲ. ಏನಾಗಲೀ, ಬಯಲಿ ಗೆಳೆಯುವುದಕ್ಕೆ ನನಗೆ ವೇಳೆಯೂ ಇಲ್ಲ; ನಾನು ನನ್ನ ನೀಗ್ರೋಗಾಗಿ ಹುಡುಕಲೇ ಬೇಕಾಗಿದೆ."

ಅವನಿಗಿದು ಸ್ವಲ್ಪ ತಾಪತ್ರಯಕ್ಕಿಟ್ಟುಕೊಂಡಿತು, ಅವನನ್ನು ನೋಡಿದರೆ ಹಾಗೆಯೇ ಕಾಣಿಸಿತು. ಅವನು ತನ್ನ ತೋಳಮೇಲೆ ತನ್ನ ಜಾಹೀರಾತನ್ನು ಮೆರೆಸುತ್ತಾ, ಯೋಚನೆಮಾಡುತ್ತಾ, ಹುಬ್ಬುಗಂಟಿಕ್ಕುತ್ತಾ ಅಲ್ಲೇ ನಿಂತಿದ್ದ. ಅವನು ಕಡೆಗೆ ಹೇಳಿದ :

"ನಾನು ನಿನಗೆ ಒಂದು ವಿಷಯ ಹೇಳುತ್ತೇನೆ. ನಾವಿಲ್ಲಿ ಮೂರುದಿನಗಳ ಕಾಲ ಇರಲೇಬೇಕಾಗಿದೆ. ನಮ್ಮ ರಹಸ್ಯವನ್ನು ಬಯಲಿಗೆಳೆಯುವುದಿಲ್ಲವೆಂದು ನೀನು ಮಾತು ಕೊಡುವೆಯಾದರೆ, ಆ ನೀಗ್ರೋ ಅದನ್ನು ಬಯಲಿಗೆಳೆಯುವುಕ್ಕೆ ಅವಕಾಶ

ಕೊಡುವುದಿಲ್ಲವೆನ್ನುವೆಯಾದರೆ, ಅವನು ಎಲ್ಲಿ ಸಿಕ್ಕುತ್ತಾನೆಂಬುದನ್ನು ನಿನಗೆ ಹೇಳುತ್ತೇನೆ."

ನಾನು ಹಾಗೇಯೇ ಮಾತುಕೊಟ್ಟೆ; ಅವನು ಹೇಳಿದ:

"ಸೈಲಾಸ್‌ಫೆ–ಎಂಬ ಹೆಸರಿನ ರೈತನೊಬ್ಬನಿದ್ದಾನೆ"; ಅಲ್ಲಿಗೇ ನಿಲ್ಲಿಸಿದ. ನೋಡಿ, ಅವನು ನನಗೆ ಸತ್ಯವನ್ನೇ ಹೇಳಲು ಪ್ರಾರಂಭಿಸಿದ. ಅವನು ಆ ಮಾತನ್ನು ಅಲ್ಲಿಗೇ ಮುರಿದು ಯೋಚನೆ ಮಾಡತೊಡಗಿದಾಗ ಅವನು ತನ್ನ ಮನಸ್ಸನ್ನು ಬದಲಾಯಿಸುತ್ತಿದ್ದಾನೆ ಎಂದುಕೊಂಡೆ. ಅವನು ಮಾಡುತ್ತಿದ್ದುದೂ ಅದನ್ನೇ. ಅವನಿಗೆ ನನ್ನಲ್ಲಿ ನಂಬಿಕೆಯಿಲ್ಲ. ನನ್ನನ್ನು ಪೂರ್ತಿ ಮೂರುದಿನಗಳ ಕಾಲವಾದರೂ ಆಚೆಗೆ ಕಳಿಸುವ ತನ್ನ ಏರ್ಪಾಡನ್ನು ಭದ್ರಗೊಳಿಸಿಕೊಳ್ಳುವುದು ಅವನ ಆಶಯವಾಗಿತ್ತು. ಅಷ್ಟೆ. ಕೂಡಲೇ ಅವನು ಹೇಳಿದ:

"ಅವನನ್ನು ಕೊಂಡವನ ಹೆಸರು ಆಬ್ರಾಂ ಫಾಸ್ಟರ್—ಆಬ್ರಾಂ. ಜಿ. ಫಾಸ್ಟರ್—ಅವನು ಒಳನಾಡಿನಲ್ಲಿ ಇಲ್ಲಿಗೆ ನಲವತ್ತು ಮೈಲಿಗಳ ಹಿಂದೆ. ಲಾಫಾಯೆಟ್ಟಿಗೆ ಹೋಗುವ ಹೆದ್ದಾರಿಯಂಚಿನಲ್ಲಿ ವಾಸಮಾಡುತ್ತಿದ್ದಾನೆ."

"ಸರಿ," ಎಂದೆ ನಾನು, "ನಾನಲ್ಲಿಗೆ ಮೂರುದಿನಗಳಲ್ಲಿ ತಲಪಬಲ್ಲೆನು ನಾನೀದಿನ ಅಪರಾಹ್ನವೇ ಅಲ್ಲಿಗೆ ಹೊರಡುತ್ತೇನೆ."

"ಹಾಗಲ್ಲ, ನೀನು ಈಗಲೇ ಹೊರಡಬೇಕು. ಸ್ವಲ್ಪವೂ ತಡಮಾಡಕೂಡದು, ದಾರಿಯಲ್ಲಿ ಬಾಯಿಬಿಚ್ಚಕೂಡದು. ತಂಟೆ ಎರಡು ಮಾಡದೆ ಸುಮ್ಮನೆ ಹೋದೆಯೋ, ನಿನಗೆ ನಮ್ಮಿಂದ ಯಾವತೊಂದರೆಯೂ ಒದಗುವುದಿಲ್ಲ.—ಕಿವಿಗೆ ಬಿತ್ತೆ?

"ನನಗೆ ಬೇಕಾಗಿದ್ದುದೂ ಅದೇ, ನಾನು ಮಾಡಿಕೊಂಡಿದ್ದ ಏರ್ಪಾಡಿಗೂ ಅದೇ ಬೇಕಾಗಿತ್ತು. ನನ್ನ ಯೋಜನೆಯನ್ನು ಕಾರ್ಯಗತಮಾಡಲು ನನಗೆ ಪೂರ್ತಿ ಬಿಡವು ಬೇಕಿತ್ತು.

"ಸರಿ, ತೊಲಗಾಚೆ," ಎಂದನವನು; "ನೀನು ಮಿ. ಫಾಸ್ಟರಿಗೆ ಬೇಕಾದನ್ನು ಹೇಳಿಕೋ. ಜಿಮ್ ನಿನಗೆ ಸೇರಿದ ನೀಗ್ರೋ ಎಂದು ಅವನು ನಂಬುವಂತೆ ನೀನು ವಾದಿಸಿ ಗೆಲ್ಲಬಹುದು—ಕೆಲವು ಮೂರ್ಖರಿಗೆ ಕಾಗದಪತ್ರಗಳೇ ಅಗತ್ಯವಿಲ್ಲ—ದಕ್ಷಿಣ ಸೀಮೆಯಲ್ಲಿ ಅಂಥವರಿದ್ದಾರೆಂದು ನನಗೆ ತಿಳಿದುಬಂದಿದೆ. ನೀನು ಕೈಚೀಟಿಯು ಮತ್ತು ಬಹುಮಾನದ ಕಟ್ಟುಕಥೆಯನ್ನು ಹೇಳಿದಾಗ, ಮತ್ತು ಅವುಗಳನ್ನು ಹೊರಡಿಸುವುದರ ಉದ್ದೇಶವೇನೆಂದು ತಿಳಿಸಿದಾಗ ಅವನು ನಿನ್ನನ್ನು ನಂಬಲೂ ಬಹುದು. ಹೊರಡು ಈಗ; ಅವನಿಗೆ ನೀನು ಬೇಕಾದ್ದನ್ನು ಹೇಳಿಕೋ; ಇಲ್ಲಿಂದ ಹೊರಟು ಅಲ್ಲಿಗೆ ಸೇರುವುದರೊಳಗೆ ಮಾತ್ರ ನೀನು ಸದ್ದೆತ್ತಕೂಡದು."

ಸರಿ, ನಾನು ಆ ಸ್ಥಳವನ್ನು ಬಿಟ್ಟು ಒಳನಾಡ ಕಡೆಗೆ ಹೊರಟೆ. ನಾನು ಆ ಕಡೆಗೆ ತಿರುಗಿ ನೋಡಲಿಲ್ಲ; ಏಕೆಂದರೆ ಅವನು ನನ್ನನ್ನು ಕಾದುನೋಡುತ್ತಿರಬಹುದೆಂದು

ನನಗೆ ತೋರಿತು. ನಾನು ಅಲ್ಲಿಗೂ ಅವನನ್ನು ಸುಸ್ತು ಮಾಡಬಲ್ಲೆನೆಂದು ನನಗೆ ಗೊತ್ತಿತ್ತು. ನಾನು ನನ್ನ ದಾರಿ ಹಿಡಿದು ಒಂದು ಮೈಲಿಯ ದೂರ ನಡೆದು, ಬಳಿಕ ನಿಂತೆ; ಕಾಡಿನ ಮಾರ್ಗವಾಗಿ ಫ್ಹೆಲ್ಪ್ಸನ ಮನೆಯ ಬಳಿಗೆ ಹಿಂದಿರುಗಿದೆ. ಸುತ್ತಲೂ ಇಲ್ಲಲ್ಲಿ ನುಸುಳದೆ ನನ್ನ ಯೋಜನೆಯನ್ನು ನೇರವಾಗಿ ಪ್ರಾರಂಭಿಸುವುದೇ ಮೇಲು ಎಂದುಕೊಂಡೆ; ಏಕೆಂದರೆ ಈ ಆಸಾಮಿಗಳು ತೊಲಗಿ ಹೋಗುವ ತನಕ ಜಿಮ್ ತನ್ನ ಬಾಯ್ತೆರೆಯದಂತೆ ನೋಡಿಕೊಳ್ಳುವುದು ನನ್ನ ಅಪೇಕ್ಷೆಯಾಗಿತ್ತು. ಅವರೊಂದಿಗೆ ವಿರೋಧಕಟ್ಟಿಕೊಂಡು ತೊಂದರೆಗೆ ಸಿಕ್ಕುವುದು ನನಗೆ ಬೇಕಾಗಿರಲಿಲ್ಲ ಅವರು ಎಂಥವರೆಂಬುದನ್ನು ನಾನು ಚೆನ್ನಾಗಿ ಅರಿತುಕೊಂಡಿದ್ದೆ. ಅವರ ಸಂಬಂಧವನ್ನೇ ಸಂಪೂರ್ಣವಾಗಿ ಕಡಿದು ಹಾಕುವುದು ನನ್ನ ಅಪೇಕ್ಷೆಯಾಗಿತ್ತು.

## ೩೨

ನಾನಲ್ಲಿಗೆ ಹೋದಾಗ ಎಲ್ಲವೂ ಸ್ತಬ್ಧವಾಗಿತ್ತು, ಭಾನುವಾರದ ಶಾಲೆಯಂತಿತ್ತು; ಬಿಸಿಲು ಹೊಳೆಯುತ್ತಿತ್ತು, ಸೆಕೆಯಾಗುತ್ತಿತ್ತು; ದುಡಿಯುವ ಕೈಗಳು ಹೊಲಗೆಯ್ಮೆಗೆ ಹೋಗಿದ್ದವು; ಗಾಳಿಯಲ್ಲಿ ದುಂಬಿಗಳ ಮತ್ತು ನೊಣಗಳ ಅಸ್ಪಷ್ಟ ಝುಂಕಾರ ಕೇಳಿ ಬರುತ್ತಿತ್ತು; ಎಲ್ಲರೂ ಸತ್ತು ಹೋಗಿದ್ದಾರೇನೋ ಎನ್ನುವಷ್ಟು ನಿರ್ಜನವಾಗಿತ್ತು; ತಂಬೆಲರು ಬೀಸಿ ಬಂದು ಎಲೆಗಳನ್ನು ನಡುಗಿಸಿದರೆ ನಿಮಗದು ಗೋಳಾಡುತ್ತಿರುವಂತೆ ತೋರುತ್ತಿತ್ತು; ಏಕೆಂದರೆ ಪ್ರೇತಗಳು—ವರ್ಷಾಂತರಗಳ ಹಿಂದೆ ಗತಿಸಿದವರ ಪ್ರೇತಗಳು—ಪಿಸುಗುಟ್ಟುತ್ತಿರುವಂತೆಯೂ, ನಿಮ್ಮ ವಿಷಯದಲ್ಲೇ ಮಾತಾಡಿಕೊಳ್ಳುತ್ತಿರುವಂತೆಯೂ ನಿಮಗೆ ಭಾಸವಾಗುತ್ತಿತ್ತು. ತಾನು ಸತ್ತುಹೋಗಿದ್ದರಾಗಿತ್ತು, ಇಲ್ಲಿನ ಗೋಳುಕರೆಯಿಂದ ಪಾರಾಗಬಹುದಿತ್ತು ಎಂಬ ಭಾವನೆ ಸಾಮಾನ್ಯವಾಗಿ ಯಾರಿಗಾದರೂ ಬರುವಂತಿತ್ತು.

ಈ ಚಿಕ್ಕ ಚಿಕ್ಕ ಹತ್ತಿಯ ವ್ಯವಸಾಯ-ಕ್ಷೇತ್ರಗಳಲ್ಲಿ ಫ್ಹೆಲ್ಪ್ಸನದೂ ಒಂದು; ಅವೆಲ್ಲ ಹೆಚ್ಚುಕಡಿಮೆ ಒಂದೇ ರೀತಿಯಲ್ಲಿರುತ್ತವೆ. ಎರಡೆಕರೆ ವಿಸ್ತಾರದ ಹಿತ್ತಿಲ ಸುತ್ತಲೂ ಕಬ್ಬಿಣದ ಕಂಬಿಯ ಬೇಲಿ; ಬೇರೆ ಬೇರೆ ಉದ್ದಳತೆಗೆ ಕೊಯ್ದ ದಿಮ್ಮಿಗಳನ್ನು ಮೆಟ್ಟಿಲು ಮೆಟ್ಟಿಲಾಗಿ ಪೇರಿಸಿ ಮಾಡಿದ ಏಣಿ—ಬೇಲಿಯನ್ನು ದಾಟುವುದಕ್ಕೂ, ಹೆಂಗಸರು ಕುದುರೆಯೇರುವುದಕ್ಕೂ ಇದನ್ನು ಬಳಸುತ್ತಿದ್ದರು; ದೊಡ್ಡ

ಕಣದಲ್ಲಿ ಕಂಡುಬರುವ ಒಡಕಲು ಗರಿಕೆ-ತೇಪೆಗಳು-ಅದು ಮಿಕ್ಕ ಕಡೆಗಳಲ್ಲಿ ಚೆನ್ನಾಗಿ ತೀಡಿದ ಹಳೆಯ ಟೋಪಿಯಂತೆ ಬೋಳಾಗಿ ನುಣುಪಾಗಿ ಇತ್ತು; ಬಿಳಿಯರಿಗಾಗಿ ದಿಮ್ಮಿಗಳಿಂದ ಕಟ್ಟಿದ ವಿಶಾಲವಾದ ಜೋಡಿಮನೆ,—ತೊಲೆಗಳ ನಡುವಣ ಸಂದುಗಳಿಗೆ ಮಣ್ಣನ್ನೋ ಗಾರೆಯನ್ನೋ ಮೆತ್ತಿದ್ದರು, ಈ ಮಣ್ಣು-ಪಟ್ಟೆಗಳಿಗೆ ಯಾವ ಕಾಲದಲ್ಲೋ ಸುಣ್ಣ ತೊಡೆದಿದ್ದರು; ದುಂಡು-ತೊಲೆಯಿಂದ ಕಟ್ಟಿದ ಪಾಕಶಾಲೆ—ಅದಕ್ಕೂ ವಾಸದ ಮನೆಗೂ ಸಂಬಂಧವನ್ನು ಕಲ್ಪಿಸುವ ವಿಶಾಲವಾದ, ತೆರೆದ ಓಣಿಯುದ್ದಕ್ಕೂ ಮೇಲ್ಛಾವಣಿಯನ್ನು ಹೊದಿಸಿದ್ದರು; ಪಾಕಶಾಲೆಯ ಹಿಂದೆ ದಿಮ್ಮಿಗಳಿಂದ ಕಟ್ಟಿದ ಕಕ್ಕಸು; ಆ ಕಕ್ಕಸಿನ ಆಚೆಕಡೆಗೆ ನೀಗ್ರೋಗಳಿಗಾಗಿ ಸಾಲಾಗಿ ಕಟ್ಟಿಸಿದ ಮೂರು ಚಿಕ್ಕ ಚಿಕ್ಕ ದಿಮ್ಮಿ-ಮನೆಗಳು; ಕೆಳಗೆ ಹಿಂಬದಿಯ ಬೇಲಿಯಂಚಿಗೆ ಕಟ್ಟಿದ ಚಿಕ್ಕದೊಂದು ಒಂಟಿ ಗುಡಿಸಲು; ಇನ್ನೊಂದು ಕಡೆಗೆ ಸ್ವಲ್ಪ ತಗ್ಗಿನಲ್ಲಿ ಕೆಲವು ಹೊರ-ಮನೆಗಳು; ಆ ಚಿಕ್ಕ ಗುಡಿಸಿಲಿನ ಪಕ್ಕದಲ್ಲಿ ಸಾಬೂನನ್ನು ಕುದಿಸಲು ಬೇಕಾದ ಕುಲುಮೆ, ದೊಡ್ಡದಾದ ಗಿಂಡಿ ಮತ್ತು ನೀರು ತುಂಬಿದ ತೊಟ್ಟಿ, ಸೋರೆ ಬುರುಡೆ; ಬಿಸಿಲಲ್ಲಿ ಮಲಗಿರುವ ಒಂದು ಬೇಟೆನಾಯಿ, ಅದರ ಸುತ್ತಲೂ ಮಲಗಿರುವ ಇನ್ನಷ್ಟು ಬೇಟೆನಾಯಿಗಳು; ದೂರದ ಮೂಲೆಯೊಂದರಲ್ಲಿ ಮೂರು ಛಾಯಾ-ತರುಗಳು; ಬೇಲಿಯಂಚಿನ ಒಂದು ಬಳಿ ದ್ರಾಕ್ಷಿಯ ಮತ್ತು ಹುಳಿ ಗೂಸ್ ಬೆರಿಯ ಪೊದೆಗಳು; ಬೇಲಿಯಾಚೆಗೊಂದು ತೋಟ, ಕಲ್ಲಂಗಡಿಯ ಪಾತಿಗಳು; ಬಳಿಕ ಹತ್ತಿಯ ಹೊಲಗಳು ಪ್ರಾರಂಭವಾಗುತ್ತವೆ: ಆ ಹೊಲದಾಚೆಗೆ ಕಾಡುಗಳು.

ನಾನು ಬಳಸಿಕೊಂಡು ಹೋಗಿ ಕುಲುಮೆಯ ಪಕ್ಕದಲ್ಲಿದ ಏಣಿಯನ್ನು ಹತ್ತಿ ಒಳಗಿಳಿದು ಪಾಕಶಾಲೆಯ ಕಡೆಗೆ ಹೊರಟೆ. ಸ್ವಲ್ಪ ದೂರ ಸಾಗಿದ ಮೇಲೆ ನನಗೆ ತಿರುಗುತ್ತಿರುವ ರಾಟೆಯೊಂದರ ಅಸ್ಪಷ್ಟ ಝುಂಕಾರ ಕೇಳಿ ಬಂತು, ಅದು ಒಮ್ಮೆ ರೋದಿಸುತ್ತಾ ಮೇಲೇರಿ ಮತ್ತೆ ಹಾಗೆಯೇ ಇಳಿಯುತ್ತಲಿತ್ತು; ನನಗೆ ನಾನು ಸತ್ತಿದ್ದರಾಗಿತ್ತು ಎನ್ನಿಸಿತು—ಏಕೆಂದರೆ ಆಗ ನನಗೆ ಇಡೀ ಪ್ರಪಂಚದಲ್ಲಿ ಕೇಳಿಬರುತ್ತಿದ್ದ ಒಂದೇ ಒಂದು ನಾದವಾಗಿತ್ತು.

ಯಾವ ನಿರ್ದಿಷ್ಟ ಗೊತ್ತುಗುರಿಗಳನ್ನೂ ಇಟ್ಟುಕೊಳ್ಳದೆ ನಾನು ಉದ್ದಕ್ಕೂ ಸುಮ್ಮನೆ ಹೋಗುತ್ತಿದ್ದೆ: ಸಮಯ ಬಂದಾಗ ಅದಕ್ಕೆ ಹೊಂದಿಕೊಳ್ಳುವಂತೆ ಮಾತು ಗಳನ್ನೇ ನನ್ನ ಬಾಯಿಂದ ಹೇಳಿಸುವ ಭಾರವನ್ನು ದೇವರ ಮೇಲೆ ಹಾಕಿದೆ. ನಾನು ದೈವೇಚ್ಛೆಗೆ ಅಡ್ಡಬರದಿದ್ದರೆ, ಅವನು ಎಂದೂ ನನ್ನ ಬಾಯಲ್ಲಿ ಸರಿಯಾದ ಮಾತು ಗಳನ್ನೇ ಹಾಕುತ್ತಿದ್ದನೆನ್ನುವುದು ನನ್ನ ಗಮನಕ್ಕೆ ಬಂದಿತ್ತು.

ನಾನು ಅರ್ಧದೂರ ಹೋದಾಗ, ಎರಡು ಬೇಟೆನಾಯಿಗಳು ಒಂದರ ಹಿಂದೆ ಇನ್ನೊಂದು ನನ್ನ ಮೇಲೆ ಎಗರಿ ಬೀಳ ಬಂದವು. ನಾನೇನೋ ಅವುಗಳ ಮುಖಕ್ಕೆ ಮುಖಕೊಟ್ಟು ಸುಮ್ಮನೆ ನಿಂತು ಬಿಟ್ಟೆ. ಅವುಗಳದೆಂಥ ಗದ್ದಲ! ಕಾಲುನಿಮಿಷದಲ್ಲಿ

ನಾನೊಂದು ಚಕ್ರದ ಕೇಂದ್ರವಾಗಿದ್ದೆನೆನ್ನಬಹುದು ನೀವು—ಚಕ್ರಾರಗಳನ್ನು ನಾಯಿಗಳಿಂದ ರಚಿಸಲಾಗಿತ್ತು, ಅಷ್ಟೆ!—ಹದಿನೈದು ನಾಯಿಗಳು ನನ್ನನ್ನು ಸುತ್ತುಗಟ್ಟಿದವು, ಕೊರಳುಮೂತಿಗಳನ್ನು ನನ್ನೆಡೆಗೆ ಚಾಚಿದ್ದವು, ಬಗುಳುತ್ತಾ ಗುರುಗುಟ್ಟುತ್ತಾ ಇದ್ದವು; ಅವು ಅಧಿಕ ಸಂಖ್ಯೆಯಲ್ಲಿ ಇನ್ನೂ ಬರುತ್ತಲೇ ಇದ್ದವು; ಅವು ಎತ್ತೆತ್ತ ಮೂಲೆಗಳಿಂದಲೂ ಬೇಲಿಗಳ ಮೇಲೆ ತೇಲಿ ಬರುತ್ತಿದ್ದುದನ್ನು ನೀವು ನೋಡಬಹುದಾಗಿತ್ತು.

ಅಷ್ಟು ಹೊತ್ತಿಗೆ ಲಟ್ಟಣಿಗೆಯೊಂದನ್ನು ಹಿಡಿದ ನೀಗ್ರೋ ಹೆಂಗಸೊಬ್ಬಳು ಪಾಕಶಾಲೆಯಿಂದ ಅಲ್ಲಿಗೆ ಓಡಿಬಂದು "ಬಿಟ್ಟುಹೋಗಿ ಟೈಜ್! ಸ್ಪಾಟ್! ಬಿಟ್ಟು ಹೋಗಿ!" ಎಂದು ಕಿರಿಚಿದಳು. ಅವಳು ಮೊದಲನೆಯ ನಾಯಿಯನ್ನು ಆಮೇಲೆ ಇನ್ನೊಂದನ್ನೂ ಜಿಗಂಟಿ ಓಡಿಸಿದಳು; ಅವು ಬಗುಳುತ್ತಾ ಓಡಿಹೋದವು, ಉಳಿದವು ಅವುಗಳನ್ನು ಹಿಂಬಾಲಿಸಿದವು. ಮರುಕ್ಷಣದಲ್ಲಿ ಆ ನಾಯಿಗಳ ಸಮೂಹದಲ್ಲಿ ಅರ್ಧಪಾಲು ಹಿಂತಿರುಗಿದವು, ನನ್ನ ಸುತ್ತಲೂ ಬಾಲವಲ್ಲಾಡಿಸುತ್ತ ನನ್ನೊಂದಿಗೆ ಸ್ನೇಹ ಬೆಳೆಸಿದವು ಹೇಗಿರಲಿ, ಬೇಟೆನಾಯಿಗಳಿಂದ ಅಪಾಯವೇನೂ ಇಲ್ಲ.

ಆ ಹೆಂಗಸಿನ ಹಿಂದೆಯೇ ಚಿಕ್ಕ ನೀಗ್ರೋ ಹುಡುಗಿಯೊಬ್ಬಳೂ, ಚಿಕ್ಕ ನೀಗ್ರೋ ಹುಡುಗರಿಬ್ಬರೂ ಬಂದರು; ಅವರ ಮೈಮೇಲೆ ಹತ್ತಿಯ ಒಳ-ಅಂಗಿಯೊಂದನ್ನು ಬಿಟ್ಟರೆ ಇನ್ನೇನೂ ಇರಲಿಲ್ಲ. ಅವರು ತಮ್ಮ ತಾಯಿಯ ಮೇಲುಹೊದಿಕೆಗೆ ಅಂಟಿಕೊಂಡಿದ್ದರು. ಅವರು ಎಂದೂ ಮಾಡುವಹಾಗೆ ಅವಳ ಮರೆಯಿಂದ ನನ್ನ ಕಡೆಗೆ ನೋಡಿ, ನಾಚಿಕೊಳ್ಳುತ್ತಿದ್ದರು. ಬಳಿಕ ಶ್ವೇತವರ್ಣೀಯ ಮಹಿಳೆಯೊಬ್ಬಳು ಮನೆಯೊಳಗಿನಿಂದ ಓಡಿಬಂದಳು; ಅವಳಿಗೆ ನಲವತ್ತೈದು, ಐವತ್ತು ವರುಷಗಳಾಗಿರಬಹುದು; ಬರಿ ತಲೆಯಲ್ಲಿ ಬಂದಳು; ಕೈಯಲ್ಲಿ ತಕಲಿಯನ್ನು ಹಿಡಿದಿದ್ದಳು. ಅವಳ ಹಿಂದೆ ಅವಳ ಬಿಳಿಯ ಚಿಕ್ಕ ಮಕ್ಕಳು ಬಂದವು; ಅವೂ ಚಿಕ್ಕ ನೀಗ್ರೋ ಮಕ್ಕಳಂತೆಯೇ ವರ್ತಿಸುತ್ತಿದ್ದವು. ಅವಳ ಮುಖದ ತುಂಬಾ ಕಿರುನಗೆಯರಳಿತ್ತು, ನೆಟ್ಟಗೆ ನಿಲ್ಲುವುದು ಕೂಡಾ ಅವಳಿಗೆ ಸಾಧ್ಯವಾಗದಷ್ಟು ಸಂತೋಷವಾಗಿತ್ತು ಅವಳು ಹೇಳಿದಳು:

"ಬಂದವನು ನೀನೇ, ಕಡೆಗೂ ಬಂದೆಯಲ್ಲ!"

ನಾನು ಯೋಚಿಸುವ ಮುನ್ನವೇ "ಹೌದು" ಎಂದು ಬಿಟ್ಟೆ, ಅವಳು ನನ್ನನ್ನು ಬರಸೆಳೆದು ಅಪ್ಪಿಕೊಂಡಳು. ಆಮೇಲೆ ನನ್ನ ಎರಡು ಕೈಗಳನ್ನೂ ಹಿಡಿದುಕೊಂಡು ಅಲ್ಲಾಡಿಸಿದ್ದೂ ಅಲ್ಲಾಡಿಸಿದ್ದೇ. ಅವಳ ಕಣ್ಣಲ್ಲಿ ದಡದಡನೆ ನೀರು ಬಂತು, ಮೈಮೇಲೆಲ್ಲಾ ತೊಟ್ಟಿಕ್ಕಿತು, ನನ್ನನ್ನು ಅಪ್ಪಿಕೊಂಡು ಜಗ್ಗಿಸಿದರೂ ಅವಳಿಗೆ ತೃಪ್ತಿಯಾಗಲಿಲ್ಲ, "ನೀನು ನಿಮ್ಮ ತಾಯಿಯನ್ನೇ ಹೋಲುವೆಯೆಂದು ನಾನಂದುಕೊಂಡಿದ್ದೆ! ಆದರೆ ನೀನು ಹಾಗೆ ಕಾಣುವುದಿಲ್ಲ; ಅದೆಲ್ಲಾದರೂ ಹೋಗಲಿ ಬಿಡು, ನಿನ್ನನ್ನು ನೋಡಿದ್ದು ನನಗೆ ಬಲು ಸಂತೋಷವಾಗಿದೆ! ಮುದ್ದು ಮಗುವೆ, ನಿನ್ನನ್ನು ತಿಂದು ಬಿಡಬೇಕೆನ್ನಿಸುತ್ತಿದೆ ನನಗೆ. ಮಕ್ಕಳೇ, ಇವನು ನಿಮ್ಮ ಕಕ್ಕಿಯ ಮಗ ಟಾಮ್!—

ಅವನಿಗೆ ನಮಸ್ತೆ ಅನ್ನಿ!! ಅವರು ಇಣಿಕಿನೋಡಿ, ಬಾಯಲ್ಲಿ ಬೆರಳಿಟ್ಟುಕೊಂಡು ಅವಳ ಹಿಂದೆ ಹುದುಗಿಕೊಂಡರು. ಅವಳು ತನ್ನ ಮಾತನ್ನು ಮುಂಬರಿಸಿದಳು :

"ಲೈಸ್, ಇವನಿಗೆ ಕೂಡಲೇ ಬಿಸಿಬಿಸಿಯಾದ ಉಪಾಹಾರವನ್ನು ಸಿದ್ಧಗೊಳಿಸು —ಅಥವಾ ನೀನು ದೋಣಿಯಲ್ಲಿದ್ದಾಗಲೇ ಉಪಾಹಾರವನ್ನು ಮುಗಿಸಿಕೊಂಡು ಬಂದಿರುವೆಯೋ ?"

ನಾನದನ್ನು ದೋಣಿಯ ಮೇಲಿದ್ದಾಗಲೇ ಮುಗಿಸಿಕೊಂಡು ಬಂದಿರುವೆನೆಂದೆ. ಆಮೇಲೆ ಅವಳು ನನ್ನ ಕೈಯನ್ನು ಹಿಡಿದುಕೊಂಡು ಮನೆಯೊಳಗೆ ಕರೆದುಕೊಂಡು ಹೋದಳು, ಮಕ್ಕಳು ಅವಳ ಹಿಂದೆಯೇ ಬರುತ್ತಿದ್ದವು. ಒಳಗೆ ಹೋದ ಮೇಲೆ ಅವಳು ನನ್ನನ್ನು ಸೀಳು-ತಳದ ಕುರ್ಚಿಯೊಂದರ ಮೇಲೆ ಕೂರಿಸಿದಳು; ತಾನು ನನ್ನೆದುರಿಗೆ ಕುಳ್ಳಾದ ಚಿಕ್ಕ ಪೀಠವೊಂದರ ಮೇಲೆ ಕುಳಿತಳು. ನನ್ನೆರಡು ಕೈಗಳನ್ನೂ ಅವಳು ಹಿಡಿದೇ ಇದ್ದಳು. ಅವಳು ಹೇಳಿದಳು :

"ನಾನೀಗ ನಿನ್ನನ್ನು ಕಣ್ತುಂಬ ನೋಡಬಲ್ಲೆ; ಇಷ್ಟು ವರುಷಗಳವರೆಗೂ ಎಷ್ಟೋ ಸಲ ನಾನಿದಕ್ಕಾಗಿ ಹಂಬಲಿಸುತ್ತಿದ್ದೆ. ಕಡೆಗೂ ಇದು ಕೈಗೂಡಿತಲ್ಲ! ನೀನಿಲ್ಲಿಗೆ ಹಲವು ದಿನಗಳ ಹಿಂದೆಯೇ ಬರುವೆಯೆಂದು ನಿರೀಕ್ಷಿಸಿದ್ದೆವು. ಏಕೆ ತಡವಾಯಿತು ?—ದೋಣಿಯೇನಾದರೂ ಹೂತುಕೊಂಡಿತ್ತೆ ?"

"ಹೌದು ಒಡತಿ,-ಅದು-"

"ನನ್ನನ್ನು ಒಡತಿ ಎನ್ನಬೇಡ—ಚಿಕ್ಕಮ್ಮ ಸಾಲಿ ಎನ್ನಬೇಕು. ಅದು ಹೂತು ಕೊಂಡಿತ್ತು ಎಂದೆಯಲ್ಲ, ಎಲ್ಲಿ ?"

ಅದಕ್ಕೇನು ಹೇಳಬೇಕೆಂಬುದೇ ನನಗೆ ಸರಿಯಾಗಿ ಹೊಳೆಯಲಿಲ್ಲ. ಏಕೆಂದರೆ ದೋಣಿ ಮೇಲುನದಿಯಿಂದ ಬರುವುದಾಗಿತ್ತೋ, ಕೆಳನದಿಯಿಂದ ಬರುವುದಾಗಿತ್ತೋ ನನಗೆ ತಿಳಿದಿರಲಿಲ್ಲ. ನಾನಂತೂ ಬಹುವಾಗಿ ಅಂತಃಸ್ಫೂರ್ತಿಯನ್ನೇ ಅವಲಂಬಿಸುತ್ತೇನೆ ಅದು ಕೆಳನದಿಯಿಂದ ಬರುವುದೆಂದು—ಅರ್ಲಿಯನ್ಸಿನ ಕೆಳಪ್ರದೇಶದಿಂದ ಬರುವುದೆಂದು, ನನ್ನ ಅಂತಃಸ್ಫೂರ್ತಿ ಹೇಳಿತು. ಆದರಿಂದ ನನಗೆ ಹೆಚ್ಚು ಅನುಕೂಲವಾಗಲಿಲ್ಲ; ಏಕೆಂದರೆ, ನನಗೆ ಆ ದಾರಿಯಲ್ಲಿ ಸಿಕ್ಕುವ ಯಾವ ಬಂದರು ಕಟ್ಟೆಯ ಹೆಸರೂ ಗೊತ್ತಿರಲಿಲ್ಲ. ನಾನೊಂದು ಬಂದರುಕಟ್ಟೆಯನ್ನು ಸೃಷ್ಟಿಸಿಕೊಳ್ಳಬೇಕಾಗಿತ್ತು, ಅಥವಾ ನಮ್ಮ ದೋಣಿ ಹೂತುಕೊಂಡ ಕಟ್ಟೆಯ ಹೆಸರನ್ನು ಮರೆಯಬೇಕಾಗಿತ್ತು—ಅಥವಾ— ಆಗ ನನಗೊಂದು ಯೋಚನೆ ಹೊಳೆಯಿತು, ನಾನದನ್ನೇ ಹೂಡಿಕೊಂಡೆ :

"ಹೂತು ಹೋದದ್ದು ಕಾರಣವಲ್ಲ—ಅದರಿಂದ ಕೊಂಚವೇ ತಡವಾಯಿತು ನಾವೊಂದು ಕೊಳವೆಯ ನೆತ್ತಿಯನ್ನು ಹಾರಿಸಿದೆವು"

"ಹಾಂ, ಏನೆಂದೆ! ಯಾರಿಗಾದರೂ ಅಪಾಯವಾಯಿತೆ ?"

"ಇಲ್ಲ ಒಡತಿ; ಅದೊಬ್ಬ ನೀಗ್ರೋವನ್ನು ಕೊಂದಿತು."

ಹಾಗಾದರೆ, ಅದೃಷ್ಟ ಒಳ್ಳೆಯದಾಗಿತ್ತು ; ಏಕೆಂದರೆ ಕೆಲವು ಸಲ ಜನಗಳಿಗೆ ಅದರಿಂದ ತುಂಬಾ ಅಪಾಯವಾಗುತ್ತದೆ. ಎರಡು ವರುಷಗಳ ಹಿಂದೆ ನಿಮ್ಮ ಚಿಕ್ಕಪ್ಪ ಸೈಲಾಸ್ ಕ್ರಿಸ್ತ್‌ಮಸ್ ಸಮಯದಲ್ಲಿ ಹಳೆಯ ಲಾಲಿ ರೂಕ್ ದೋಣಿಯಲ್ಲಿ ನ್ಯೂ ಓರ್ಲಿಯನ್ಸ್ ಕಡೆಯಿಂದ ಬರುತ್ತಿದ್ದಾಗ, ಆ ದೋಣಿ ಕೊಳವೆಯೊಂದರ ನೆತ್ತಿಯನ್ನು ಹಾರಿಸಿತು, ಒಬ್ಬನ ಬದುಕನ್ನೇ ಹಾಳುಮಾಡಿತು—ಅವನಿದ್ದೂ ಸತ್ತಂತೆ ಆಗಿತ್ತು; ಆಮೇಲೆ ಅವನು ಸತ್ತು ಹೋದನೆಂದು ನನಗೆ ತೋರುತ್ತದೆ. ಅವನೊಬ್ಬ ಜ್ಞಾನಸ್ನಾನದ ಪುರೋಹಿತ. ಬೇಟನ್ ರೂಜಿನಲ್ಲಿದ್ದ ಒಂದು ಮನೆಯವರಿಗೂ ನಿಮ್ಮ ಚಿಕ್ಕಪ್ಪ ಸೈಲಾಸನಿಗೂ ತುಂಬಾ ಸ್ನೇಹ ; ಅವರಿಗೆ ಆತನ ಮನೆಯವರ ಪರಿಚಯ ಚೆನ್ನಾಗಿತ್ತು. ಹೌದು, ನನಗೀಗ ನೆನಪಿಗೆ ಬರುತ್ತಿದೆ, ಅವನು ಸತ್ತದ್ದು ನಿಜ. ಅವಯವಗಳು ಒಂದೊಂದಾಗಿ ಕೊಳೆಯ ಹತ್ತಿದವು, ಆ ಭಾಗಗಳನ್ನು ತೆಗೆದುಹಾಕಬೇಕಾಯಿತು. ಆದರೂ ಅದರಿಂದ ಅವನು ಬದುಕಿಕೊಳ್ಳಲಿಲ್ಲ. ಹೌದು—ಅದು ನಿಧಾನವಾದ ಸಾವು—ಅದೇ ಅದು. ಅವನ ಮೈಯೆಲ್ಲಾ ನೀಲಿಗಟ್ಟಿತು, ಭವ್ಯ ಪುನರುತ್ಥಾನ ಆಕಾಂಕ್ಷೆಯಲ್ಲೇ ಅವನು ತೀರಿಕೊಂಡನು, ಆಗ ಅವನನ್ನು ನೋಡಬೇಕಾಗಿತ್ತು !—ಎನ್ನುತ್ತಾರೆ. ನಿಮ್ಮ ಚಿಕ್ಕಪ್ಪ ನಿನ್ನನ್ನು ಕರೆತರುವುದಕ್ಕಾಗಿ ದಿನವೂ ಊರೊಳಗೆ ಹೋಗುತ್ತಿದ್ದನು. ಅವನು ಈಗ ಮತ್ತೆ ಹೋಗಿದ್ದಾನೆ, ಹೋಗಿ ಒಂದು ಗಂಟೆಯ ಕಾಲ ಕೂಡ ಆಗಿಲ್ಲ ; ಅವನು ಇನ್ನೇನು ಬಂದು ಬಿಟ್ಟ ಎಂದುಕೋ. ನೀನವನನ್ನು ದಾರಿಯಲ್ಲೇ ನೋಡಿರಬೇಕು, ಅಲ್ಲವೆ ?—ಸುಮಾರು ಮುದುಕ ಮತ್ತು —"

"ಇಲ್ಲ ನಾನು ಯಾರನ್ನೂ ನೋಡಲಿಲ್ಲ ಸಾಲಿ ಚಿಕ್ಕಮ್ಮ. ದೋಣಿ ದಡಮುಟ್ಟಿದಾಗಲೇ ಸೂರ್ಯೋದಯವಾಗಿತ್ತು. ನಾನು ನನ್ನ ಸಾಮಾನು ಸರಂಜಾಮನ್ನು ಕೂಲಿ-ದೋಣಿಯಲ್ಲಿ ಬಿಟ್ಟು ಊರನ್ನೂ ಊರ ಸುತ್ತು ಮುತ್ತಿನ ಪ್ರದೇಶಗಳನ್ನೂ ನೋಡುತ್ತಾ ಬರುತ್ತಿದ್ದೆ ; ನನ್ನ ಉದ್ದೇಶ ಸಕಾಲದ ತನಕ ಕಾಯುವುದೂ, ಇಲ್ಲಿಗೆ ಬೇಗನೆ ಬಂದುಬಿಡಬಾರದೆನ್ನುವುದೂ ಆಗಿತ್ತು. ಆದ್ದರಿಂದ ನಾನು ಹಿಂದಿನ ದಾರಿಯಿಂದ ಬಂದೆ"

"ನಿನ್ನ ಸಾಮಾನಿನ ಹೊರೆಯನ್ನು ನೀನು ಯಾರ ಕೈಗೆ ಕೊಟ್ಟೆ ?"

"ಯಾರಿಗೂ ಕೊಡಲಿಲ್ಲ"

"ಏನೆಂದೆ, ಮಗು,—ಅದು ಅಪಹೃತವಾಗುವುದು ಖಂಡಿತ !"

"ನಾನದನ್ನು ಬಚ್ಚಿಟ್ಟಿರುವ ಸ್ಥಳದಲ್ಲಿ ಆ ರೀತಿ ಆಗುವುದಿಲ್ಲವೆಂದು ನನ್ನೆಣಿಕೆ" ಎಂದೆ ನಾನು.

"ಇನ್ನೂ ಬೆಳಕು ಹರಿಯುವ ಹೊತ್ತಿಗೆ ನಿನಗೆ ದೋಣಿಯಮೇಲೆ ಉಪಾಹಾರವೆಲ್ಲಿಂದ ಬಂತು ?"

ಇದು ಬಲು ನಾಜೂಕಾದ ಪರಿಸ್ಥಿತಿ; ಆದರೂ ನಾನು ಹೇಳಿದೆ :

"ನಾನು ಎಲ್ಲೋ ನಿಂತಿದ್ದುದನ್ನು ಹಡಗಿನ ಯಜಮಾನ ನೋಡಿದ, ಊರಿಗೆ ತಲಪುವ ಮುನ್ನ ನೀನು ಹೊಟ್ಟೆಗೆ ಏನನ್ನಾದರೂ ತೆಗೆದುಕೊಂಡರೆ ಮೇಲು ಎಂದ; ನನ್ನನ್ನು ಒಳಗೆ ಕರೆದುಕೊಂಡು ಹೋಗಿ ಅಧಿಕಾರಿಗಳ ಉಪಾಹಾರ ಮಂದಿರದಲ್ಲಿ ನನಗೆ ಬೇಕಾದ್ದೆಲ್ಲವನ್ನೂ ಕೊಡಿಸಿದ."

ಇನ್ನು ಸಮಾಧಾನದಿಂದ ಕೇಳಿಕೊಂಡು ಕುಳಿತಿರುವುದು ನನ್ನಿಂದಾಗಲಿಲ್ಲ; ನನಗೆ ತುಂಬಾ ಆಯಾಸವಾಗಿತ್ತು. ಅಷ್ಟು ಕಾಲವೂ ನನ್ನ ಮನಸ್ಸು ಆ ಮಕ್ಕಳ ಮೇಲೆಯೇ ಇತ್ತು. ಅವರನ್ನು ಹೊರಕ್ಕೆ ಕರೆದುಕೊಂಡುಹೋಗಿ ಮರೆಯಲ್ಲಿ ನಿಲ್ಲಿಸಿಕೊಂಡು ನಾನು ಯಾರೆಂದು ಅವರು ತಿಳಿದುಕೊಂಡಿದ್ದಾರೆ ಎಂಬುದನ್ನರಿಯ ಬೇಕಾಗಿತ್ತು ನಾನು. ನನಗದಕ್ಕೆ ಅವಕಾಶವೇ ಸಿಕ್ಕಲಿಲ್ಲ. ಮಿಸೆಸ್ ಫೆಲ್ಪ್ಸ್ ನನ್ನನ್ನು ಹಿಡಿದಿದ್ದವರು ಬಿಡಲೇ ಇಲ್ಲ. ಸ್ವಲ್ಪ ಹೊತ್ತಿನೊಳಗಾಗಿ ಆಕೆ ನನ್ನ ಬೆನ್ನುದ್ದಕ್ಕೂ ಚಳಿ ಛಳುಕು ಹರಿಯುವ ಹಾಗೆ ಮಾಡಿದಳು. ಏಕೆಂದರೆ ಅವಳು ಕೇಳಿದಳು :

"ನಾವಿಲ್ಲಿ ಹೀಗೆಯೇ ಮಾಡುತ್ತಾ ಇದ್ದೇವೆ. ನೀನು ಅಕ್ಕನ ವಿಷಯದಲ್ಲಾಗಲೀ ಉಳಿದವರ ವಿಷಯದಲ್ಲಾಗಲೀ ಒಂದು ಮಾತನ್ನು ಕೂಡ ಆಡಲೇ ಇಲ್ಲ. ಈಗ ನನ್ನ ಸರದಿಯನ್ನು ಮುಗಿಸಿದ್ದೇನೆ, ನಿನ್ನದು ಮೊದಲಾಗಲಿ—ಅವರಲ್ಲಿ ಪ್ರತಿಯೊಬ್ಬರ ವಿಷಯವಾಗಿ ಪ್ರತಿಯೊಂದನ್ನೂ ನನಗೆ ಹೇಳು ನೀನು; ಅವರು ಹೇಗಿದ್ದಾರೆ, ಏನು ಮಾಡುತ್ತಾ ಇದ್ದಾರೆ, ನನಗೆ ತಿಳಿಸೆಂದು ನಿನಗವರು ಹೇಳಿದ್ದೇನು; ನಿನಗೆ ತೋರಿದ ಎಲ್ಲಾ ವಿವರಗಳನ್ನೂ ಹೇಳಿಬಿಡು, ಯಾವುದನ್ನೂ ಇಟ್ಟುಕೊಳ್ಳಬೇಡ."

ಸರಿ ನಾನು ತೊಡಕಿಗೆ ಸಿಕ್ಕಿಬಿದ್ದೆನೆನ್ನುವುದು ಅರ್ಥವಾಯಿತು—ತುಂಬಾ ಜಟಿಲವಾದ ಸಮಸ್ಯೆ ಅದು. ಇಲ್ಲಿಯವರೆಗೆ ನನ್ನ ಯೋಗಕ್ಷೇಮವನ್ನು ದೇವರು ಚೆನ್ನಾಗಿ ನೋಡಿಕೊಂಡ. ಈಗ ನಾನು ನಿಜವಾಗಿ ಮುಳುಗಿಹೋದೆ. ಹಾಗೆಯೇ ಮುಂಬರಿಯುವುದರಿಂದ ಎಷ್ಟೂ ಪ್ರಯೋಜನವಿಲ್ಲವೆಂಬುದು ನನಗೆ ಕಂಡುಬಂತು—ನಾನು ಸೋತು ಕೈಯೆತ್ತಲೇ ಬೇಕಾಯಿತು. ನಾನು ನಿಜಾಂಶವನ್ನೇ "ಹೇಳಿ ಬಂದದ್ದಕ್ಕೆ ತಲೆಯೊಡ್ಡಬೇಕಾಗಿರುವುದು ಇದು ಎರಡನೆಯಸಲ. ಪ್ರಾರಂಭಿಸೋಣ ವೆಂದು ನಾನು ಬಾಯ್ತೆರೆದೆ; ಆದರೆ ಅವಳು ನನ್ನನ್ನು ತಟ್ಟನೆ ಎಳೆದುಕೊಂಡುಹೋಗಿ ಹಾಸುಗೆಯ ಹಿಂದೆ ದಬ್ಬಿ ಹೇಳಿದಳು :

"ಅವನು ಬಂದ! ನಿನ್ನ ತಲೆಯನ್ನು ಇನ್ನಷ್ಟು ತಗ್ಗಿಸು—ಹಾಗೆ, ಅಷ್ಟು ಸಾಕು; ಈಗ ನೀನು ಕಣ್ಣಿಗೆ ಬೀಳುವುದಿಲ್ಲ. ನೀನಿಲ್ಲಿರುವುದು ಯಾರಿಗೂ ಗೊತ್ತಾಗ ದಂತೆ ನೋಡಿಕೋ. ನಾನೀಗ ಒಂದು ತಮಾಷೆ ಮಾಡುತ್ತೇನೆ. ಮಕ್ಕಳೇ, ನೀವು ಒಂದುಮಾತನ್ನೂ ಆಡಕೂಡದು"

ನಾನೀಗ ಪೇಚಿಗೆ ಸಿಕ್ಕಿಕೊಂಡದ್ದು ನನಗೆ ಸ್ಪಷ್ಟವಾಯಿತು. ಅದಕ್ಕಾಗಿ

ಕೊರಗುವುದೂ ನಿಷ್ಫಲವೆನಿಸಿತು ; ಸದ್ದು ಮಾಡದೆ ನಿಲ್ಲುವುದಲ್ಲದೆ, ಮಿಂಚು ಹೊಡೆದಾಗ, ಪ್ರಯತ್ನಪಟ್ಟು ಭದ್ರವಾಗಿ ಬೇರೂರಿನಿಲ್ಲುವುದಲ್ಲದೆ ಬೇರೇನನ್ನೂ ಮಾಡುವಂತಿರಲಿಲ್ಲ.

ಆ ಮುದುಕ ಒಳಗೆ ಬರುತ್ತಿರುವಾಗ ಅವನ ಒಂದೇ ಒಂದು ಇಣಿಕು ನನಗೆ ಸಿಕ್ಕಿತು ; ಆಮೇಲೆ ಹಾಸುಗೆ ಅವನನ್ನು ಮರೆಮಾಡಿತು. ಮಿಸೆಸ್ ಫ಼ೆಲ್ಪ್ಸ ಅವನ ಬಳಿಗೆ ಹಾರಿ ಹೋಗಿ ಹೇಳಿದಳು

"ಅವನು ಬಂದಿದ್ದಾನೆಯೇ ?"

ಅವಳ ಗಂಡ "ಇಲ್ಲ" ಎಂದನು.

"ಅಯ್ಯೋ ದೇವರೆ!" ಎಂದಳವಳು, "ಅವನ ಗತಿ ಏನಾಯಿತೋ ?"

"ನನಗೆ ಗೊತ್ತಾಗುವುದಿಲ್ಲ" ಎಂದನು ಮುದುಕ ; "ನನ್ನ ಮನಸ್ಸಿಗೆ ಅದರಿಂದ ತುಂಬಾ ಕಳವಳವಾಗಿದೆ."

"ಕಳವಳ !" ಎಂದಳವಳು : "ನಾನು ದಿಕ್ಕುಗೆಟ್ಟು ಹೋಗುವುದಕ್ಕೂ ಸಿದ್ಧಳು. ಅವನು ಬಂದೇ ಇರಬೇಕು ; ದಾರಿಯಲ್ಲೆಲ್ಲೋ ಅವನು ನಿನಗೆ ಸಿಕ್ಕದೆ ಹೋಗಿರಬೇಕು. ಬಲ್ಲೆ–ಅದು ಹಾಗೆ ಆಗಿದೆ ಎಂದು ನನಗೆ ಏನೋ ಹೇಳುತ್ತಿದೆ."

"ಇದೇಕೆ ಹೀಗೆನ್ನುವೆ, ಸಾಲಿ, ಅವನು ದಾರಿಯಲ್ಲಿ ಬರುತ್ತಿದ್ದರೆ ನನಗೆ ಸಿಕ್ಕದೆ ಹೋಗುತ್ತಿರಲಿಲ್ಲ ; ನಿನಗಿದು ತಿಳಿದೇ ಇದೆ,"

"ಆದರೆ, ಓ, ಅಕ್ಕ ಏನೆಂದುಕೊಂಡಾಳೋ ! ಅವನು ಬಂದೇ ಇರಬೇಕು ! ನಿಮಗವನು ಸಿಕ್ಕಲಿಲ್ಲ, ಅಷ್ಟೆ. ಅವನು—"

"ಓ, ನನಗೀಗಾಗಲೇ ಮನಸ್ಸು ಇಳಿದುಹೋಗಿದೆ, ನೀನು ನನಗೆ ಇನ್ನಷ್ಟು ವ್ಯಸನವಾಗುವಂತೆ ಮಾಡಬೇಡ. ಇದೇಕೆ ಹೀಗಾಯಿತೆನ್ನುವುದು ನನಗೆ ಅರ್ಥವೇ ಆಗಿಲ್ಲ. ನನ್ನ ಕೈಲಾದ್ದೆಲ್ಲ ಮಾಡಿದ್ದೇನೆ ; ನನಗೇಕೋ ಹೆದರಿಕೆಯಾಗುತ್ತಿದೆ ಎಂದು ನಾನು ಒಪ್ಪಿಕೊಳ್ಳಲೂ ಹಿಂದೆಗೆಯುವುದಿಲ್ಲ. ಆದರೆ ಬಂದಿದ್ದಾನೆ ಎಂದು ನೆಚ್ಚುವಂತೆಯೇ ಇಲ್ಲ. ಅವನು ಬಂದಿದ್ದರೆ ನನಗೆ ಸಿಕ್ಕದೆ ಹೋಗುತ್ತಿರಲಿಲ್ಲ, ಸಾಲಿ ಇದು ಅನಾಹುತ—ಅನಾಹುತವಲ್ಲದೆ ಬೇರೆ ಏನೂ ಅಲ್ಲ—ಖಂಡಿತವಾಗಿಯೂ ದೋಣಿಗೆ ಏನೋ ಆಗಿರಬೇಕು !"

"ಇದೆಂಥ ಮಾತು, ಸೈಲಾಸ್ ! ಅಲ್ಲಿನೋಡು !—ಆ ದಾರಿಯತ್ತ !—ಅಲ್ಲಿ ಯಾರೋ ಬರುತ್ತಾ ಇದ್ದಾರಲ್ಲವೆ ?"

ಅವನು ಮಂಚದ ಮುಂಭಾಗದಲ್ಲಿದ್ದ ಕಿಟಕಿಯ ಬಳಿಗೆ ಫಕ್ಕನೆ ಹಾರಿದ ; ಮಿಸೆಸ್ ಫ಼ೆಲ್ಪ್ಸ ಕಾಯುತ್ತಿದ್ದುದೂ ಆ ಸಮಯಕ್ಕಾಗಿಯೇ. ಅವಳು ಮಂಚದ ಕಾಲ ಕೆಳಗೆ ಬಗ್ಗಿ ನನ್ನನ್ನು ಹಿಡಿದೆಳೆದಳು. ನಾನು ಈಚೆಗೆ ಬಂದೆ. ಅವನು ಕಿಟಕಿಯಿಂದ ಈ ಕಡೆಗೆ ತಿರುಗಿದಾಗ ಅವಳು, ಉರಿಬಿದ್ದ ಮನೆಯಂತೆ, ಸಂತೋಷಗೊಂಡು ಪ್ರಜ್ವಲಿಸು

ತ್ತಿದ್ದಳು; ನಾನವಳ ಪಕ್ಕದಲ್ಲಿ ಮೈಬೆವರಿ ನಮ್ರಭಾವದಿಂದ ನಿಂತಿದ್ದೆ. ಮುದುಕ ದುರುಗುಟ್ಟಿನೋಡಿ ಕೇಳಿದ:

"ಏನು, ಯಾರದು?"

"ಯಾರೂ ಅಂತ ತಿಳಿದಿದ್ದೀಯೆ?"

"ನನಗೆ ತಿಳಿದಿಲ್ಲ. ಯಾರಿವನು?"

"ಇವನು ಟಾಮ್ ಸಾಯರ್!"

ಸದ್ಯ, ನಾನು ನೆಲದಮೇಲೆ ಕುಸಿದು ಉರುಳಿದಂತಾಯಿತು! ಏನು ಮಾಡುವುದಕ್ಕೂ ಅವಕಾಶವೇ ಇರಲಿಲ್ಲ! ಆ ಮುದುಕ ನನ್ನ ಕೈಹಿಡಿದು ಕುಲುಕಿದನು, ಕುಲುಕುತ್ತಲೇ ಇದ್ದನು. ಅಷ್ಟು ಹೊತ್ತು ಆ ಹೆಂಗಸು ಹೇಗೆ ಗಟ್ಟಿಯಾಗಿ ಕೂಗಿ ನಕ್ಕು ಕುಣಿದಾಡುತ್ತಿದ್ದಳು! ಅವರಿಬ್ಬರೂ ಸಿಡ್ಡನ ಬಗೆಗೆ, ಆಮೇಲೆ ಮೇರಿಯ ಬಗೆಗೆ, ಬಳಿಕ ಉಳಿದೆಲ್ಲರ ಬಗೆಗೆ ಹೇಗೆ ಪ್ರಶ್ನೆಗಳನ್ನು ಮಳೆಗರೆದರು!

ಅವರಿಗೇನೋ ಸಂತೋಷವಾಗಿತ್ತು; ನನ್ನ ಪರಿಸ್ಥಿತಿ ಹಾಗಿರಲಿಲ್ಲ, ಏಕೆಂದರೆ ನನಗೆ ಪುನರ್ಜನ್ಮ ಬಂದಂತಾಗಿತ್ತು; ನಾನು ಯಾರೆಂಬುದು ಈಗ ತಿಳಿದು ನನಗೆ ಬಲು ಹರ್ಷವಾಯಿತು. ನನ್ನನ್ನು ಅವರು ಎರಡು ಗಂಟೆಗಳ ಕಾಲ ಹಿಂಡಿಹಾಕಿದರು. ಕಡೆಗೆ ಮಾತಾಡಿ ಆಡಿ ನನ್ನ ಬಾಯಿ ಬಳಲಿ ಹೋಯಿತು; ಇನ್ನು ಮಾತೇ ಹೊರಡದೆ ನಾನವರಿಗೆ ನಮ್ಮ ಮನೆಯವರ—ಅಂದರೆ ಟಾಮ್ ಸಾಯರನ ಮನೆಯವರ—ಬಗೆಗೆ ಬಿಟ್ಟು ಬರುಡೆ ಯಾವುದೇ ಆರು ಸಾಯರ್ ಮನೆತನಗಳಲ್ಲಿ ಎಂದಾದರೂ ನಡೆದಿರಬಹುದಾದಕ್ಕಿಂತಲೂ ಹೆಚ್ಚಾಗಿತ್ತು. ವೈಟ್ ನದಿಯ ಮುಖದಲ್ಲಿ ನಾವು ಕೊಳವೆಯ ನೆತ್ತಿಯನ್ನು ಹೇಗೆ ಹಾರಿಸಿದೆವು ಮುಂತಾದ ಸಮಸ್ತ ವಿಷಯಗಳನ್ನೂ ನಾನವರಿಗೆ ವಿಶದಪಡಿಸಿದೆ. ಅದು ಸಂದರ್ಭೋಚಿತವಾಗಿತ್ತು ಮತ್ತು ಯಶಸ್ವಿಯಾಗಿ ಪರಿಣಮಿಸಿತು. ಏಕೆಂದರೆ ಅವನ್ನು ಸರಿಪಡಿಸುವುದಕ್ಕೆ ಮೂರುದಿನಗಳ ಕಾಲ ಬೇಕಾಗುವರೆಂಬ ವಿಷಯ ಅವರಿಗೆ ತಿಳಿಯಿತು, ನಾನದನ್ನು ತಿರುಪುಮೊಳೆಯೊದರ ನೆತ್ತಿ ಎಂದರೂ ಪರಿಣಾಮ ಅದೇ ಆಗುತ್ತಿತ್ತು.

ನನಗೀಗ ಒಂದು ವಿಧದಲ್ಲಿ ಎಲ್ಲಾ ಬಲು ಅನುಕೂಲವಾಗಿಯೂ, ಇನ್ನೊಂದು ವಿಧದಲ್ಲಿ ಎಲ್ಲಾ ಬಲು ಅಹಿತಕರವಾಗಿಯೂ ಇರುವಂತೆ ತೋರಿತು. ಟಾಮ್ ಸಾಯರ್ ಆಗಿರುವುದು ಬಲ ಸರಾಗವೂ ಅನುಕೂಲವೂ ಆಗಿತ್ತು; ನದಿಯ ಕೆಳ ಭಾಗಕ್ಕೆ ಹಪೆದೋಣಿಯೊಂದು ಸಿಳ್ಳುಹಾಕುತ್ತಾ ಬರುವುದು ನನ್ನ ಕಿವಿಗೆ ಬೀಳುವವರೆಗೂ ಅದೇನೋ ಸರಾಗವೂ ಅನುಕೂಲವೂ ಆಗಿತ್ತು. ನಾನಂದುಕೊಂಡೆ; ಒಂದು ವೇಳೆ ಟಾಮ್ ಸಾಯರ್ ದೋಣಿಯಲ್ಲಿ ಇತ್ತ ಬಂದರೇನು ಗತಿ? ಒಂದುವೇಳೆ ಅವನು ಯಾವಕ್ಷಣದಲ್ಲಾದರೂ ಇಲ್ಲಿಗೆ ಧುಮುಕಿ, ನಾನವನಿಗೆ ಸುಮ್ಮನಿರೆಂದು ಕಣ್ಸನ್ನೆ ಮಾಡುವುದರೊಳಗಾಗಿಯೇ ನನ್ನ ಹೆಸರನ್ನು ಹಿಡಿದು ಕೂಗಿದರೇನು ಗತಿ?

ಸರಿ ನನಗದು ಬೇಕಿರಲಿಲ್ಲ ; ಅದು ಸರಿಹೋಗುತ್ತಲೂ ಇರಲಿಲ್ಲ. ನಾನು ಅದೇ ದಾರಿಯಲ್ಲಿ ಹೋಗಿ ಅವನನ್ನು ಅಡ್ಡ ಹಾಕಬೇಕು. ಆದ್ದರಿಂದ ನಾನು ಊರೊಳಗೆ ಹೋಗಿ ನನ್ನ ಸಾಮಾನುಸರಂಜಾಮನ್ನು ತಂದು ಬಿಡುವುದೇ ಒಳ್ಳೆಯದೆಂದು ನನಗೆ ತೋರುತ್ತದೆಂದು ಅವರಿಗೆ ಹೇಳಿದೆ. ಆ ಮುದುಕನೂ ನನ್ನೊಂದಿಗೆ ಹೊರಡುವ ಇಷ್ಟವುಳ್ಳವನಾಗಿದ್ದ. ನಾನು ಬೇಡ ಎಂದೆ, ಕುದುರೆಯೋಡಿಸುವುದು ನನಗೆ ಬರು ತ್ತದೆ ಎಂದೂ, ಅವನು ನನಗಾಗಿ ಅಷ್ಟು ತೊಂದರೆ ತೆಗೆದುಕೊಳ್ಳಬೇಕಾದ್ದಿಲ್ಲವೆಂದೂ ಹೇಳಿದೆ,

## ೩೩

ಆಮೇಲೆ ನಾನು ಬಂಡಿಯೇರಿ ಊರಕಡೆ ಹೊರಟೆ ; ಅರ್ಧದಾರಿಯಲ್ಲಿ ಇನ್ನೊಂದು ಬಂಡಿ ಎದುರಿಗೆ ಬರುತ್ತಿರುವುದು ಕಾಣಿಸಿತು, ಅದರಲ್ಲಿ ಸಾಕ್ಷಾತ್ ಟಾಮ್ ಸಾಯರನೇ ಬರುತ್ತಿದ್ದ. ನಾನು ನಿಂತೆ. ಅವನು ಬರುವ ತನಕ ಕಾದಿದ್ದೆ, "ನಿಲ್ಲು !" ಎಂದು ಕೂಗಿದೆ ನಾನು ಅದು ಪಕ್ಕದಲ್ಲಿ ನಿಂತಿತು. ಅವನ ಬಾಯಿ ತೆರೆದ ಪೆಟ್ಟಿಗೆಯಂತಾಯಿತು, ಹಾಗೆಯೇ ನಿಂತುಹೋಯಿತು, ಗಂಟಲೊಣಗಿದವರು ಮಾಡುವ ಹಾಗೆ ಅವನು ಎರಡು ಮೂರು ಬಾರಿ ನುಂಗಿಕೊಂಡು ಅವನು ಹೇಳಿದನು :

"ನಾನು ನಿನಗೆ ಎಂದೂ ತೊಂದರೆ ಮಾಡಿದವನಲ್ಲ. ನಿನಗಿದು ತಿಳಿದಿದೆ. ಆದ್ದರಿಂದ ನೀನೇಕೆ ಹಿಂದಿರುಗಿ ಬಂದು ನನಗೆ ಕಾಟಕೊಡುತ್ತಿರುವೆ ?"

ನಾನು ಹೇಳಿದೆ :

"ನಾನು ಹಿಂದಿರುಗಿ ಬರಲೂ ಇಲ್ಲ—ನಾನು ಹೋಗಿ ಬಿಡಲೂ ಇಲ್ಲ."

ನನ್ನ ಧ್ವನಿಯನ್ನು ಅವನು ಕೇಳಿದಾಗ, ಅವನಿಗೆ ಕೊಂಚ ನಿಜಸ್ಥಿತಿಯರಿವಾದರೂ, ಇನ್ನೂ ಪೂರ್ತಿ ನಂಬಿಕೆ ಹುಟ್ಟಿರಲಿಲ್ಲ. ಅವನು ಹೇಳಿದ :

"ನೀನು ನನ್ನ ತಂಟೆಗೆ ಬರಬೇಡ, ನಾನು ನಿನ್ನ ತಂಟೆಗೆ ಬರುವುದಿಲ್ಲ. ಪ್ರಮಾಣ ವಾಗಿಯೂ, ಹೇಳು ನೀನು ದೆವ್ವ ಅಲ್ಲವೆ ?"

"ಪ್ರಮಾಣವಾಗಿಯೂ, ನಾನು ದೆವ್ವ ಅಲ್ಲ," ಎಂದೆ ನಾನು

"ಸರಿ, ಸರಿ,—ನಾನು—ನಾನು ನಂಬುತ್ತೇನೆ. ಅದು ನಿಶ್ಚಯವಾಗಿರಲೇಬೇಕು.

ಆದರೆ ನನಗೇಕೋ ಅದನ್ನು ಬೇರೆಯ ರೀತಿಯಲ್ಲಿ ಭಾವಿಸದೇ ಸಾಧ್ಯವಿಲ್ಲ. ನೋಡಿಲ್ಲಿ ನಿನ್ನನ್ನು ಅವರು ಕೊಲೆ ಮಾಡಲೇ ಇಲ್ಲವೆ ?"

"ಇಲ್ಲ. ಅವರು ನನ್ನನ್ನು ಎಂದೂ ಕೊಲೆಮಾಡಲೇ ಇಲ್ಲ—ನಾನವರ ಕಣ್ಣಿಗೆ ಮಣ್ಣೆರಚಿದೆ. ನಿನಗೆ ಇನ್ನೂ ನಂಬಿಕೆಯಿಲ್ಲದಿದ್ದರೆ ಇಲ್ಲಿಗೆ ಬಂದು ನನ್ನನ್ನು ಮುಟ್ಟಿನೋಡು."

ಅವನು ಹಾಗೆಯೇ ಮಾಡಿದ; ಅವನ ಮನಸ್ಸಿಗೆ ಧೈರ್ಯ ಬಂತು; ನನ್ನನ್ನು ಕಂಡದ್ದಕ್ಕಾಗಿ ಅವನಿಗೆ ಎಷ್ಟು ಸಂತೋಷವಾಯಿತು ಎಂದರೆ, ಅವನಿಗೆ ಏನು ಮಾಡು ವುದಕ್ಕೂ ತೋರಲೇ ಇಲ್ಲ.

ಅಲ್ಲಿಯವರೆಗೆ ನಡೆದದ್ದೆಲ್ಲವನ್ನೂ ಅವನು ತತ್‌ಕ್ಷಣವೇ ಕೇಳಬಯಸಿದ ; ಏಕೆಂದರೆ ಅದೊಂದು ಮಹತ್ವಪೂರ್ಣವೂ ಕಲ್ಪನಾತೀತವೂ ಆದ ಸಾಹಸಯಾತ್ರೆ ಯಾಗಿತ್ತು, ಮತ್ತು ಆದ್ದರಿಂದಲೇ ಅವನ ಕುತೂಹಲವನ್ನು ಕೆರಳಿಸಿತ್ತು, ಸ್ವಲ್ಪಹೊತ್ತು ಆ ವಿಷಯವನ್ನು ಅಲ್ಲಿಗೇ ಬಿಡುವಂತೆ ನಾನು ಕೇಳಿಕೊಂಡೆ. ಅವನ ಸಾರಥಿಗೆ ಇಲ್ಲೇ ಕಾದಿರು ಎಂದೆ. ಸ್ವಲ್ಪದೂರದವರೆಗೆ ನಾವಿಬ್ಬರೇ ಬಂಡಿಯನ್ನು ಹೊಡೆದುಕೊಂಡು ಹೋದೆವು. ಅಲ್ಲಿ ನಾನು ಅವನಿಗೆ ನನ್ನ ವಿಚಿತ್ರ ಪರಿಸ್ಥಿತಿಯನ್ನು ತಿಳಿಸಿದೆ ; ನಾವು ಏನು ಮಾಡಿದರೆ ಒಳ್ಳೆಯದಾದೀತೆಂದು ಅವನಿಗೆ ತೋರುತ್ತದೆ ಎಂದು ಕೇಳಿದೆ. ಒಂದು ನಿಮಿಷಕಾಲ ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು. ನನ್ನ ಗಮನವನ್ನು ಬೇರೆ ಕಡೆಗೆ ಸೆಳೆಯಬೇಡ ಎಂದನವನು. ಅವನು ಹಾಗೆಯೇ ಆಲೋಚಿಸತೊಡಗಿದ, ತತ್‌ಕ್ಷಣವೇ ಹೇಳಿಬಿಟ್ಟ.

"ಅದು ಸರಿಯಾಗಿದೆ ; ನನಗದು ಸಿಕ್ಕಿತು, ಬಿಡು ! ನನ್ನ ಪೆಟ್ಟಿಗೆಯನ್ನು ನಿನ್ನ ಬಂಡಿಯಲ್ಲಿಟ್ಟುಕೋ, ಅದು ನಿನ್ನದೆಂದೇ ನಟಿಸು. ನೀನು ಹಿಂದಿರುಗಿ, ನಿಧಾನವಾಗಿ ನಡೆಯುತ್ತ, ಸರಿಯಾದ ಹೊತ್ತಿಗೆ ಮನೆಗೆ ಹೋಗು ನಾನು ಊರೊಳಗೆ ಸ್ವಲ್ಪದೂರ ಹೋಗಿ ಮನೆಯಕಡೆ ಮತ್ತೆ ತಿರುಗಿ, ನೀನಲ್ಲಿಗೆ ತಲುಪಿದ ಕಾಲುಗಂಟೆ, ಅರ್ಧಗಂಟೆಯ ತರುವಾಯ ಬಂದುಬಿಡುತ್ತೇನೆ. ಮೊದಮೊದಲು ನೀನು ನಾವಿಬ್ಬರೂ ಪೂರ್ವಪರಿಚಿತ ರೆಂಬುದನ್ನು ತೋರ್ಪಡಿಸಬಾರದು"

ನಾನು ಹೇಳಿದೆ :

"ಹಾಗೇ ಆಗಲಿ ; ಆದರೆ ಸ್ವಲ್ಪತಾಳು, ಇನ್ನೊಂದು ವಿಷಯವಿದೆ—ಅದು ನನಗೊಬ್ಬನ ಹೊರತು ಉಳಿದ ಯಾರಿಗೂ ತಿಳಿಯದು. ಅದೇನೆಂದರೆ : ಅವರ ಮನೆಯಲ್ಲೊಬ್ಬ ನೀಗ್ರೋ ಇದ್ದಾನೆ, ನಾನವನನ್ನು ದಾಸ್ಯದಿಂದ ಬಿಡುಗಡೆ ಮಾಡಲು ಪ್ರಯತ್ನಿಸುತ್ತೇನೆ. ಅವನ ಹೆಸರು ಜಿಮ್—ಮುದುಕಿ ಮಿಸ್ ವಾಟನ್ನಳ ಜಿಮ್.

ಅವನು ಹೇಳಿದ :

"ಏನು ! ಹೌದು ಜಿಮ್—"

ಅವನು ನಿಂತುಬಿಟ್ಟನು, ಏನನ್ನೋ ಆಲೋಚಿಸತೊಡಗಿದನು. ನಾನು ಹೇಳಿದೆ ;

"ನೀನು ಹೇಳುವುದು ನನಗೆ ಗೊತ್ತು. ಅದೊಂದು ಹೊಲಸಾದ, ಕೀಳಾದ ವ್ಯವಹಾರವೆಂದೀಯೋ ನೀನು ; ಹಾಗಿದ್ದರೆ ತಾನೆ ಏನು ? ನಾನತ ಕೀಳೆಣಿಕೆಯುವನೇ ಸರಿ ; ನಾನವನನ್ನು ಅಪಹರಿಸಿಕೊಂಡೇ ಹೋಗುತ್ತೇನೆ ನೀನು ಸುಮ್ಮನಿದ್ದು ಬಿಡುವುದೂ, ಯಾರಿಗೂ ಇದನ್ನು ಹೇಳದಿರುವುದೂ ಎರಡೇ ನನಗೆ ಬೇಕಾಗಿರುವುದು. ಹಾಗೆ ಮಾಡುವೆಯು ?"

ಅವನ ಕಣ್ಣು ಕಳೆಗೊಂಡಿತು ; ಅವನು ಹೇಳಿದ :

"ನೀನು ಅವನನ್ನು ಹಾರಿಸಿಕೊಂಡು ಹೋಗುವುದಕ್ಕೆ ನೆರವಾಗುತ್ತೇನೆ ನಾನು ?"

ನನಗೆ ಗುಂಡು ಹೊಡೆದಂತಾಗಿ ಕೈಲಿದ್ದ ಲಗಾಮುಗಳೆಲ್ಲವನ್ನೂ ಕೆಳಗೆ ಹಾಕಿದ್ದೆ, ಅದು ನಾನೆಂದೂ ಕೇಳಿರದಂಥ ಅತ್ಯಾಶ್ಚರ್ಯಕವಾದ ಹೇಳಿಕೆಯಾಗಿತ್ತು. ನನ್ನ ಅಂದಾಜಿನಲ್ಲಿ ಟಾಮ್ ಸಾಯರ್ ಬಲು ಅಧೋಗತಿಗಿಳಿದುಹೋದನೆಂದು ನಾನು ಹೇಳಲೇಬೇಕು. ಆದರೆ ನಾನದನ್ನು ನಂಬಲಾರದೆ ಹೋದೆ. ಟಾಮ್ ಸಾಯರ್ ನೀಗ್ರೋ-ಚೋರನೆ !

"ಓ ಸುಳ್ಳು !" ಎಂದೆ ನಾನು ; "ನೀನೆಲ್ಲೋ ತಮಾಷೆ ಮಾಡುತ್ತಿದ್ದಿಯೆ"

"ನಾನು ತಮಾಷೆ ಮಾಡುತ್ತಿಲ್ಲ."

"ಸರಿ ಹಾಗಾದರೆ, ಅದು ಹೇಗೆ ಇರಲಿ, ತಪ್ಪಿಸಿಕೊಂಡು ಹೋದ ನೀಗ್ರೋವಿನ ಬಗೆಗೆ ಯಾವ ಮಾತಾದರೂ ನಿನ್ನ ಕಿವಿಗೆ ಬಿದ್ದರೆ, ನಿನಗವನ ವಿಷಯವೇ ತಿಳಿಯದು ಎಂಬುದನ್ನೂ, ನನಗೂ ಅವನ ವಿಷಯವೇ ತಿಳಿಯದೆಂಬುದನ್ನೂ ನೆನಪಿನಲ್ಲಿಟ್ಟುಕೊಳ್ಳುವುದನ್ನು ನೀನು ಮರೆಯದಿರು."

ಬಳಿಕ ಅವನು ತನ್ನ ಪೆಟ್ಟಿಗೆಯನ್ನು ತಂದು ನನ್ನ ಬಂಡಿಯಲ್ಲಿಟ್ಟು ಅವನ ದಾರಿಯನ್ನು ಅವನು ಹಿಡಿದ ; ನನ್ನ ದಾರಿ ನನಗೆ. ನನಗೆ ಬಲು ಸಂತೋಷವಾಗಿದ್ದುದರಿಂದಲೂ, ನನ್ನ ತಲೆಯೊಳಗೆ ಅದೇ ವಿಷಯ ತುಂಬಿ ಹೋಗಿದುದರಿಂದಲೂ, ನಿಧಾನವಾಗಿ ಬಂಡಿಹೊಡೆಯಬೇಕೆಂಬುದು ನನಗೆ ಮರತೇಹೋಯಿತು. ಆದ್ದರಿಂದ ಮನೆ ಅಷ್ಟೇನೂ ಹತ್ತಿರದಲ್ಲಿರದಿದ್ದರೂ, ನಾನಲ್ಲಿಗೆ ಅತಿ ಶೀಘ್ರವಾಗಿಯೇ ತಲುಪಿದ್ದೆ. ಮುದುಕ ಬಾಗಿಲಲ್ಲೇ ನಿಂತಿದ್ದ. ಅವನು ಹೇಳಿದ :

"ಇದೆಂಥಾ ಅದ್ಭುತ ! ಈ ಕುದುರೆ ಇಷ್ಟು ಬೇಗ ದಾರಿಸವೆಸುವುದೆಂದು ಯಾರು ತಿಳಿದಿದ್ದರು ! ನಾವು ಅದು ತೆಗೆದುಕೊಂಡ ಕಾಲವನ್ನು ಅಳೆಯಬೇಕಾಗಿತ್ತು. ಅದರ ಒಂದು ಕೂದಲೂ ಸಹ ಬೆವರಿಲ್ಲ—ಒಂದು ಕೂದಲೂ ಬೆವರಿಲ್ಲ. ಅದಕ್ಕೆ ನೂರು ಡಾಲರುಗಳನ್ನು ಕೊಡುತ್ತೇನೆಂದು ಬಂದರೂ ನಾನೀಗ ಮಾರುವುದಿಲ್ಲ—ಮಾರುವುದಿಲ್ಲ, ಇದು ಸತ್ಯ ; ಈ ಹಿಂದೆ ಅದನ್ನು ನಾನು ಹದಿನೈದೆ ಡಾಲರುಗಳಿಗೆ ಮಾರಿಬಿಡುತ್ತಿದ್ದೆ, ಅದರ ಯೋಗ್ಯತೆ ಇಷ್ಟೇ ಎಂದು ತಿಳಿಯುತ್ತಿದ್ದೆ."

ಅವನು ಹೇಳಿದ್ದೇ ಅಷ್ಟು. ನಾನು ಕಂಡಂತೆ ಅವನೊಬ್ಬ ಅತ್ಯಂತ ನಿಷ್ಕಪಟಿಯೂ ಉತ್ತಮನೂ ಆದ ವೃದ್ಧ. ಅದಕ್ಕೆ ಆಶ್ಚರ್ಯಪಡಬೇಕಾಗಿಲ್ಲ, ಏಕೆಂದರೆ ಅವನು ಕೇವಲ ರೈತನಷ್ಟೇ ಆಗಿರಲಿಲ್ಲ; ಧರ್ಮೋಪದೇಶಕನೂ ಆಗಿದ್ದನು. ವ್ಯವಸಾಯಕ್ಷೇತ್ರದ ಹಿಂಭಾಗದಲ್ಲಿ ಅವನದೊಂದು ಬಲು ಸಣ್ಣ ಚರ್ಚ್ ಇತ್ತು, ಅದನ್ನು ತೊಲೆಗಳಿಂದಕಟ್ಟಲಾಗಿತ್ತು. ಚರ್ಚ್ ಮತ್ತು ಪಾಠಶಾಲೆ ಎರಡಕ್ಕೂ ಆಗುವಂತೆ ಅವನು ಅದನ್ನು ತನ್ನ ಸ್ವಂತ ಹಣದಿಂದ ಕಟ್ಟಿಸಿದ್ದನು. ಅವನು ಪುಕ್ಕಟೆಯಾಗಿ ಧರ್ಮೋಪದೇಶ ಮಾಡುತ್ತಿದ್ದನು, ಅದು ಸಾರ್ಥಕವೂ ಆಗಿತ್ತು. ದಕ್ಷಿಣಸೀಮೆಯಲ್ಲಿ ಅಂಥವರೇ ಇನ್ನೂ ಅನೇಕ ರೈತಬೋಧಕರಿದ್ದರು, ಅವರು ಮಾಡುತ್ತಿದ್ದುದೂ ಹಾಗೆಯೇ.

ಸುಮಾರು ಅರ್ಧಗಂಟೆಯೊಳಗಾಗಿ ಟಾಮನು ಬಂಡಿ ಮುಂಭಾಗದ ಮೆಟ್ಟಿಲ ಬಳಿಗೆ ಬಂದು ನಿಂತಿತು. ಸಾಲಿ ಚಿಕ್ಕಮ್ಮ ಅದನ್ನು ಕಿಟಕಿಯಿಂದಲೇ ಕಂಡಿದ್ದಳು; ಏಕೆಂದರೆ ಇಲ್ಲಿಗೂ ಅಲ್ಲಿಗೂ ಐವತ್ತೇ ಗಜಗಳ ದೂರವಿತ್ತು, ಅಷ್ಟೆ. ಅವಳು ಹೇಳಿದಳು :

"ಅಗೋ, ಅಲ್ಲಿ ಯಾರೊ ಬಂದರು! ಯಾರಿರಬಹುದು? ಅಪರಿಚಿತನೆಂದು ನನಗೆ ತೋರುತ್ತಿದೆ ಜಿಮ್ಮಿ" (ಅವಳ ಮಕ್ಕಳಲ್ಲಿ ಒಬ್ಬನ ಹೆಸರು 'ಜಿಮ್ಮಿ') "ಓಡಿ ಹೋಗಿ ಊಟಕ್ಕೆ ಇನ್ನೊಂದು ತಟ್ಟೆ ಹಾಕೆಂದು ಲೈಸ್ಗೆ ಹೇಳು."

ಎಲ್ಲರೂ ಮುಂಬಾಗಿಲ ಬಳಿಗೆ ನುಗ್ಗಿದರು. ಏಕೆಂದರೆ ಪರಿಚಯವಿಲ್ಲದವನು ಅಲ್ಲಿಗೆ ವರುಷವರುಷವೂ ಬರುವುದಿಲ್ಲ; ಅವನು ಬಂದರಂತೂ, ಎಲ್ಲರ ಗಮನವನ್ನೂ ಅವನು ಕಾಮಾಲೆರೋಗಕ್ಕಿಂತ ಹೆಚ್ಚಾಗಿ ಆಕರ್ಷಿಸುತ್ತಾನೆ. ಟಾಮ್ ಮೆಟ್ಟಿಲನ್ನು ಹತ್ತಿದ, ಒಳಗೆ ಬರುತ್ತಿದ್ದ. ಬಾಡಿಗೆ ಬಂಡಿ ತನ್ನ ದಾರಿ ಹಿಡಿದು ಹಳ್ಳಿಯ ಕಡೆಗೆ ಸಾಗುತ್ತಿತ್ತು. ನಾವೆಲ್ಲರೂ ಮುಂಬಾಗಿಲಲ್ಲಿ ಗೊಂಚಲಾಗಿ ನಿಂತೆವು. ಟಾಮ್ ಹೊಲಿದು ಸಿದ್ಧಪಡಿಸಿದ್ದ ಉಡುಪನ್ನು ಧರಿಸಿದ್ದ. ಇಲ್ಲಿ ಅವನಿಗಾಗಿ ಒಂದು ಸಭೆಯೇ ನೆರೆದಿತ್ತು; ಹಾಗಿದ್ದರೆ ಅವನಿಗೆ ಪರಮಾನಂದ. ಆಯಾ ಸಂದರ್ಭಕ್ಕೆ ಸರಿಹೋಗುವ ರೀತಿಯಲ್ಲಿ ನಡೆದುಕೊಳ್ಳುವುದು ಅವನಿಗೆ ಕಷ್ಟದ ವಿಷಯವೇ ಅಲ್ಲ, ಅವನೇನು ಅಂಗಳದಲ್ಲಿ ತಲೆ ತಗ್ಗಿಸಿ ಬರುವ ಕುರಿಯಂಥ ಹುಡುಗನಲ್ಲ. ಅವನು ಗಂಭೀರನಾಗಿ ತನ್ನ ಪ್ರಾಮುಖ್ಯವನ್ನು ಮೆರೆಯುತ್ತ ಟಗರಿನಂತೆ ಬಂದನು. ನಮ್ಮ ಮುಂದೆ ಬಂದು ನಿಂತ ಕೂಡಲೇ, ತಾನು ನಿದ್ರಿಸುತ್ತಿರುವ ಬಣ್ಣದ ಚಿಟ್ಟೆಗಳಗಡಗಿರುವ ಪೆಟ್ಟಿಗೆಯ ಮುಚ್ಚಳವನ್ನು ತೆಗೆಯುತ್ತಿರುವಂತೆ ಅವುಗಳನ್ನು ಕದಲಿಸುವ ಇಷ್ಟವೇ ತನಗಿರದಂತೆ ನಟಿಸುತ್ತಾ ತನ್ನ ಟೋಪಿಯನ್ನು ಬಲುಗತ್ತಿನಿಂದಲೂ ನಾಜೂಕಿನಿಂದಲೂ ಮೇಲೆತ್ತಿದನು. ಆಮೇಲೆ ಹೇಳಿದ:

"ಮಿ, ಆರ್ಕಿಬಾಲ್ಡ್ ನಿಕಲ್ಸ್ ಅವರಲ್ಲವೆ?"

"ಅಲ್ಲ, ಮಗು" ಎಂದನು ಮುದುಕ." ನಿನ್ನ ಬಂಡಿಯುವನು ನಿನಗೆಲ್ಲೊ ಮೋಸಮಾಡಿರಬೇಕು ಎನ್ನಲು ನನಗೆ ವಿಷಾದವಾಗುತ್ತಿದೆ. ನಿಕಲ್ಸನಮನೆ ಇಲ್ಲಿಗಿನ್ನೂ ಮೂರು ಮೈಲಿಗಳಾಚೆಗಿರುವಂಥಾದ್ದು. ಬಾಪ್ಪ ಒಳಗೆ, ಬಾ ಒಳಗೆ."

ಟಾಮ್ ಹಿಂಗಣ್ಣು ಹಾಯಿಸುತ್ತ ಹೇಳಿದ:

"ವೇಳೆ ಮೀರಿಹೋಯಿತು—ಅವನು ಕಣ್ಣಿಗೆ ಬೀಳುತ್ತಿಲ್ಲ."

"ಹೌದು, ಮಗು, ಅವನು ಹೊರಟುಹೋದ. ನೀನು ಒಳಗೆ ಬಾ, ನಮ್ಮೊಂದಿಗೆ ಊಟಮಾಡು ಬಾ; ಆಮೇಲೆ ನಿನ್ನನ್ನು ನಿಕಲ್ಸನ ಮನೆಗೆ ಕಳಿಸಿಕೊಡುವುದಾಗುತ್ತದೆ."

"ಓ ನಿಮಗೆ ನಾನು ಅಷ್ಟು ತೊಂದರೆ ಕೊಡಲಾರೆ. ನಾನದನ್ನು ಯೋಚಿಸಲೂ ಅರಿಯೆ. ನಾನು ನಡೆದುಕೊಂಡು ಹೋಗುತ್ತೇನೆ-ಎಷ್ಟುದೂರವಾದರೂ ಪರವಾ ಇಲ್ಲ."

"ಹಾಗೆ ನೀನು ನಡೆದುಬಿಡುವುದಕ್ಕೆ ನಾನೂ ನಮ್ಮವರೂ ಅವಕಾಶ ಕೊಡುವುದಿಲ್ಲ—ಹಾಗೆ ಮಾಡುವುದು ತೆಂಕಣನಾಡಿಗೆ ಒಪ್ಪುವ ಅತಿಥಿಸತ್ಕಾರದ ಲಕ್ಷಣವಲ್ಲ, ಸುಮ್ಮನೆ ಬಾಪ್ಪ ಒಳಗೆ."

"ಇರಲಿ ಬಾಪ್ಪ" ಎಂದಳು ಸಾಲಿ ಚಿಕ್ಕಮ್ಮ; "ಅದೇಥಾ ಕಷ್ಟವಪ್ಪ ನಮಗೆ? ನಮಗದು ಕಷ್ಟವೇ ಅಲ್ಲ. ನೀನಿಲ್ಲಿ ಉಳಿದುಕೊಳ್ಳಲೇಬೇಕು. ಅದು ಬಲುದೂರದ ಮೂರುಮೈಲಿಗಳುದ್ದದ ದೂಳಿದ್ದ ದಾರಿಯು ಪಯಣ. ನೀನಲ್ಲಿಗೆ ನಡೆದುಹೋಗುವುದಕ್ಕೆ ನಾನು ಒಪ್ಪುವುದಿಲ್ಲ, ನೀನು ಬರುತ್ತಿರುವುದನ್ನು ಕಂಡಾಗಲೇ ನಾನು ಊಟಕ್ಕೆ ಇನ್ನೊಂದು ತಟ್ಟೆಯನ್ನು ಅಣಿಮಾಡಿ ಎಂದು ಒಳಕ್ಕೆ ಹೇಳಿಕಳಿಸಿದೆ, ಆದ್ದರಿಂದ ನೀನು ನಮ್ಮನ್ನು ನಿರಾಶೆಗೊಳಿಸಬಾರದು. ನೇರ ಬಾ ಒಳಗೆ, ಇದು ನಿನ್ನ ಮನೆ ಎಂದು ತಿಳಿ."

ಟಾಮ್ ಅವರನ್ನು ಎದೆತುಂಬಿ ಮುಂದ್ದಾಗಿ ಅಭಿವಂದಿಸಿ, ಅವರ ಆಹ್ವಾನಕ್ಕೆ ತಡೆಯೊಡ್ಡದವನಂತೆ ಒಳಗೆ ಬಂದನು. ಒಳಗೆ ಬಂದಮೇಲೆ ಅವನು ತಾನು ಓಹಿಯೋದಲ್ಲಿನ ಹಿಕ್ಸ್‌ವಿಲ್ಲಿನಿಂದ ಇಲ್ಲಿಗೆ ಬಂದಿರುವ ಹೊಸಬನೆಂದೂ ತನ್ನ ಹೆಸರು ವಿಲಿಯಂ ಥಾಂಪ್ಸನ್ ಎಂದೂ ಹೇಳಿಕೊಂಡು ಅವರಮುಂದೆ ಮತ್ತೊಮ್ಮೆ ತಲೆಬಾಗಿದನು.

ಹಾಗೆಯೇ ಹಕ್ಸ್‌ವಿಲ್ಲಿನ ಮತ್ತು ಅಲ್ಲಿನವರೆಂದು ತಾನು ಸೃಷ್ಟಿಸಿಕೊಳ್ಳಬಹುದಾದ ಎಲ್ಲರ ವಿಷಯವನೂ ಎತ್ತಿ ಕಗ್ಗ ಹೊಸೆಯುತ್ತಹೋದನು ನನಗೆ ಏಕೋ ಏನೋ ಸ್ವಲ್ಪ ಭಯವಾಯಿತು, ಇದೆಲ್ಲ ಹೇಗೆ ನನ್ನನ್ನು ಪಾರುಮಾಡೀತು ಎಂದು ಆಚ್ಚರಿಪಡುತ್ತಿದ್ದನು. ಕಟ್ಟಕಡೆಗೆ ಅವನು ಈ ಮಾತು ಆಮಾತು ಆಡುತ್ತಹೋಗಿ ತಟಕ್ಕನೆ ಸಾಲಿ ಚಿಕ್ಕಮ್ಮನ ಬಾಯಿಗೆ ಮುತ್ತಿಟ್ಟನು. ಆಮೇಲೆ ಸ್ವಸ್ಥವಾಗಿ ತನ್ನ ಕುರ್ಚಿಯಲ್ಲಿ ಕುಳಿತು ಮಾತು ಬೆಳೆಸಿದನು. ಅವಳು ದಿಗ್ಗನೆದ್ದು ಹಿಂಗೈಯಿಂದ ತುಟಿಯೊರಸಿಕೊಳ್ಳುತ್ತ ಹೇಳಿದಳು.

"ಎಲಾ, ನಾಯಿಮರಿಯೆ, ನಿನಗಿಷ್ಟು ಧೈರ್ಯಬಂತೆ ?" ಅವನ ಮನಸ್ಸಿಗೆ ನೋವಾದಂತೆ ತೋರಿತು, ಅದಕ್ಕೆ ಹೇಳಿದ:

"ನಿಮ್ಮ ಮಾತು ಬಲು ಆಶ್ಚರ್ಯಕರವಾಗಿದೆ, ಅಮ್ಮಾವರೆ"

"ನೀನು ತುಂಬಾ ಸುಟಿಯಲ್ಲವೆ? ನನ್ನನ್ನು ಏನೆಂದುಕೊಂಡಿದ್ದೀಯೆ? ಕೈಗೆ ಸಿಕ್ಕಿದ್ದನ್ನೆತ್ತಿಕೊಂಡು ಬಲವಾಗಿ—ಲೆ ಎನಿಸಿದೆ ನನಗೆ. ನೀನು ನನಗೆ ಮುತ್ತು ಕೊಟ್ಟಿದ್ದರ ಉದ್ದೇಶವೇನು?"

ಅವನು ಒಂದು ವಿಧವಾಗಿ ನಮ್ರತೆಯಿಂದ ನುಡಿದ,

"ನನಗೆ ಯಾವ ಉದ್ದೇಶವೂ ಇಲ್ಲ, ಅಮ್ಮಾವರೆ, ಯಾರನ್ನು ನೋಯಿಸಬೇಕೆಂದೂ ನಾನು ಹಾಗೆ ಮಾಡಲಿಲ್ಲಿ. ಅದು ನಿಮಗೆ ಇಷ್ಟವಾದದ್ದೆಂದು ನಾನು ಹಾಗೆ ಮಾಡಿದೆ."

"ಏ, ಹುಚ್ಚಾ ತಿಳಿಗೇಡಿ ನೀನು!" ಎಂದವಳೇ ತಕಲಿಯನ್ನು ಕೈಗೆತ್ತಿಕೊಂಡಳು. ಅವನನ್ನು ಹೊಡೆದುಬಿಡುವ ತನ್ನ ಸಿಟ್ಟನ್ನು ತಡೆಯಲು ಅವಳ ಕೈಯಲ್ಲಿ ಆದದ್ದೇ ಅಷ್ಟು, ಎಂದು ತೋರಿತು. "ನನಗದು ಇಷ್ಟವೆಂದು ನೀನು ಭಾವಿಸಲು ಕಾರಣವೇನು ?"

"ನನಗೇನೂ ತಿಳಿಯದು. ಆದರೆ ಅವರು–ಅವರು–ನಿನಗದು ಇಷ್ಟವೆಂದು ನನಗೆ ಹೇಳಿದರು."

"ನಾನು ಹಾಗೆ ಎಂದು ಅವರು ನಿನಗೆ ಹೇಳಿದರು ಅಲ್ಲವೆ! ನಿನಗೆ ಹಾಗೆ ಹೇಳಿದವನು ಇನ್ನೊಬ್ಬ ಹುಚ್ಚ. ಇದನ್ನು ಮೀರಿಸುವ ಪ್ರಸಂಗವನ್ನು ನಾನೆಂದೂ ಕೇಳಿಯೇ ಇಲ್ಲ. ಅವರು ಎಂದರೆ ಯಾರು ?" "ಹಾಗಲ್ಲ. ಎಲ್ಲರೂ, ಅವರೆಲ್ಲರೂ ಹಾಗೆ ಹೇಳಿದರು, ಅಮ್ಮಾವರೆ." ತನ್ನ ಸಿಟ್ಟನ್ನು ತಡೆದುಕೊಳ್ಳಲು ಅವಳು ಮಾಡಬಹುದಾಗಿದ್ದುದೆಲ್ಲ ಅಷ್ಟೇ, ಅವಳ ಕಣ್ಣು ಹಾರಿತು; ಅವಳ ಕೈಗಳನ್ನು ನೋಡಿದರೆ ಇವನನ್ನು ಪರಚಿಬಿಡುವಳೋ ಎಂಬಂತಿತ್ತು. ಅವಳು ಹೇಳಿದಳು ;

"ಎಲ್ಲರೂ ಅಂದರೆ ಯಾರು? ಅವರ ಹೆಸರುಗಳನ್ನು ಹೇಳುವೆಯೋ ಇಲ್ಲ, ಆ ಮೂರ್ಖರ ಸಂಖ್ಯೆಯಲ್ಲಿ ಒಂದನ್ನಿಳಿಸಿಬಿಡಲೋ ?

ಅವನು ಎದ್ದು ನಿಂತ; ತುಂಬಾ ವ್ಯಸನಪಡುತ್ತಿರುವಂತೆ ತೋರಿತು. ತನ್ನ ಟೋಪಿಯನ್ನು ತಡವರಿಸುತ್ತಾ ಹೇಳಿದ :

"ನನಗೆ ದುಃಖವಾಗುತ್ತಿದೆ ನಾನಿದನ್ನು ನಿರೀಕ್ಷಿಸಿರಲಿಲ್ಲ. ಅವರು ಹೀಗೆಮಾಡು ಎಂದರು. ಅವರೆಲ್ಲರೂ ನನಗೆ ಹೀಗೆ ಮಾಡು ಎಂದರು, ಅವಳಿಗೆ ಮುತ್ತು ಕೊಡು ! ಅದು ಅವಳಿಗೆ ಇಷ್ಟ ಎಂದು ಎಲ್ಲರೂ ಹೇಳಿದರು. ಅವರೆಲ್ಲರೂ—ಅವರಲ್ಲಿ ಪ್ರತಿಯೊಬ್ಬನೂ ಹೇಳಿದ್ದು ಹಾಗೆಯೇ ನನಗೆ ವ್ಯಸನವಾಗುತ್ತಿದೆ ಅಮ್ಮಾವರೆ ನಾನು ಮತ್ತೆ ಮಾಡೆನು, ಸನ್ಮಾಣೆಗೂ ಮಾಡೆನು "

"ನೀನು ಮಾಡುವುದಿಲ್ಲ, ಅಲ್ಲವೆ? ಹೌದು; ನೀನು ಮಾಡುವುದಿಲ್ಲವೆಂದು ನನಗೂ ಚೆನ್ನಾಗಿ ಗೊತ್ತು."

"ಇಲ್ಲ ಅಮ್ಮಾವರೆ, ನಾನು ಆತ್ಮಸಾಕ್ಷಿಯಾಗಿ ಹೇಳುತ್ತೇನೆ ನಾನು ಇನ್ನೆಂದೂ ಅದನ್ನು ಮಾಡುವುದಿಲ್ಲ—ಹಾಗೆ ಮಾಡು ಎಂದು ನೀವು ನನ್ನನ್ನು ಕೇಳುವ ತನಕ."

"ನಾನು ನಿನ್ನನ್ನು ಕೇಳುವ ತನಕ! ಸರಿ ನಾನು ಹುಟ್ಟಿದಂದಿನಿಂದ ಇದನ್ನು ಮೀರಿಸಬಲ್ಲ ಏನೊಂದನ್ನೂ ಕಂಡಿಲ್ಲ. ನಿನ್ನನ್ನು—ಇಲ್ಲವೇ ನಿನ್ನಂಥವರನ್ನು—ಹಾಗೆ ನಾನು ಮತ್ತೆ ಕೇಳುವುದರೊಳಗಾಗಿ ನೀನು ಇಡೀ ಸೃಷ್ಟಿಯಲ್ಲೇ ಮೆಥುಸಲೆಮ್ಮನಂತೆ ಅತಿ ದೀರ್ಘಾಯುವಾದ ಅವಿವೇಕಿಯಾಗಿರುತ್ತೀಯೆ, ಎಂಬುದನ್ನು ನಾನು ನಂಬುತ್ತೇನೆ."

"ಹೌದು, ಇದು ನನಗೆ ಅನಿರೀಕ್ಷಿತವೇ" ಎಂದವನು "ನನಗದು ಅರ್ಥವಾಗುತ್ತಿಲ್ಲ. ನಿನಗದು ಇಷ್ಟವೆಂದು ಅವರು ನನಗೆ ಹೇಳಿದರು, ನಿನಗದು ಇಷ್ಟವೆಂದು ನಾನೂ ತಿಳಿದೆ, ಆದರೆ—" ಎಂದು ಮಾತನ್ನು ಅಲ್ಲಿಗೇ ನಿಲ್ಲಿಸಿ ತನ್ನ ಕಡೆಗೆ ಬರುವವರು ಯಾರಾದರೂ ಅಲ್ಲಿದ್ದಾರೆಯೇ ಎಂದು ಸುತ್ತಲೂ ಕಣ್ಣು ಹೊರಳಿಸಿದನು. ಆಮೇಲೆ ಆ ಮುದುಕನನ್ನು ಕಂಡು ಕೇಳಿದ:"ಸ್ವಾಮಿ ಅವಳಿಗೆ ನಾನು ಮುತ್ತು ಕೊಟ್ಟದ್ದು ಇಷ್ಟವಾದದ್ದೇ ಎಂದು ನಿಮಗಾದರೂ ತೋರಲಿಲ್ಲವೆ?"

"ಇಲ್ಲ; ನನಗೆ—ನನಗೆ—ಹಾಗೆ ತೋರಲೇ ಇಲ್ಲವಲ್ಲ!"

ಅವನು ಮತ್ತೆ ಅದೇ ರೀತಿಯಲ್ಲಿ ತಿರುಗಿ ನನ್ನ ಕಡೆ ನೋಡಿದನು; ಹಾಗೆಯೇ ಹೇಳಿದನು:

"ಟಾಮ್, ಸಾಲಿ ಚಿಕ್ಕಮ್ಮ ತನ್ನ ತೋಳುಗಳನ್ನು ಬೀಸಿ ತೆರೆದು 'ಸಿಡ್ ಸಾಯರ್—' ಎನ್ನುತ್ತಿದ್ದಳಂತೆ ನಿನಗೆ ತೋರಲಿಲ್ಲವೆ?"

"ಅಯ್ಯೋ ದೇವರೆ!" ಎಂದವಳು. ಅವನ ಬಳಿಗೆ ಹಾರಿ ಬಂದು "ಎಲಾ ಪಟಿಂಗ ಹುಡುಗ, ನೀನು ಯಾರಿಗಾದರೂ ಇಂಥಾ ಮೋಸಮಾಡುವುದೇ—" ಎಂದು ಹೇಳಿ ಅವನನ್ನು ಬಾಚಿ ತಬ್ಬಲು ಹೊರಟರು. ಅವನು ಅವಳಿಂದ ತಪ್ಪಿಸಿಕೊಂಡು ಹೇಳಿದ:

"ಇಲ್ಲ, ನೀನಾಗಿಯೇ ನನ್ನನ್ನು ಕೇಳುವ ತನಕ ಕೂಡದು."

ಹಾಗೆಂದದ್ದೇ ಸಾಕು, ಅವಳು ಕೇಳಿಕೊಂಡಳು, ಅಪ್ಪಿಕೊಂಡಳು ಮೇಲಿಂದ ಮೇಲೆ ಅವನಿಗೆ ಮುತ್ತುಕೊಟ್ಟಳು; ಆ ಮೇಲೆ ಮುದುಕ ಕಡೆಗೆ ತಿರುಗಿದಳು; ಅವನಿಗೂ ಉಳಿದದ್ದು ಸಿಕ್ಕಿತು. ಆ ಮೇಲೆ ಎಲ್ಲರೂ ಸ್ವಲ್ಪ ಸಮಾಧಾನ ಸ್ಥಿತಿಗೆ ಬಂದ ಮೇಲೆ, ಅವಳು ಹೇಳಿದಳು:

"ಅಯ್ಯೋ ನನ್ನ ಪುಣ್ಯವೇ, ಇಂಥಾ ಆಶ್ಚರ್ಯವನ್ನು ನಾನು ಕಂಡೇ ಇಲ್ಲ. ನೀನು ಬರುತ್ತೀಯೆಂದು ನಾವು ನಿರೀಕ್ಷಿಸಿಯೇ ಇರಲಿಲ್ಲ; ಟಾಮ್ ಬರುವುದೇನೋ ನಮಗೆ

ಗೊತ್ತಿತ್ತು. ಅವನ ಜೊತೆಗೆ ಇನ್ನೂ ಬರುವವರಿದ್ದಾರೆಂದು ಅಕ್ಕ ನಮಗೆ ಬರದೇ ಇಲ್ಲ."

"ಅದೇಕೆಂದರೆ ಟಾಮ್ ವಿನಾ ನಮ್ಮಲ್ಲಿ ಯಾರೂ ಇಲ್ಲಿಗೆ ಬರುವ ಉದ್ದೇಶವೇ ಇರಲಿಲ್ಲ, ಎಂದವನು; "ಆದರೆ ನಾನು ಮತ್ತೆ ಮತ್ತೆ ಕೇಳಿಕೊಂಡೆ, ಕಡೆಯ ಗಳಿಗೆಯಲ್ಲಿ ನಾನೂ ಹೋಗಬಹುದೆಂದು ಒಪ್ಪಿಗೆ ಕೊಟ್ಟಳು. ನದಿಯ ಮೇಲೆ ಬರುವಾಗಲೇ ನಾನೂ ಟಾಮನೂ ಯೋಚನೆ ಮಾಡಿಕೊಂಡಿದ್ದೆವು: ಇಲ್ಲಿಗೆ ತಲುಪಿದ ಮೇಲೆ ಮೊದಲು ಅವನು ಮನೆಗೆ ಹೋಗಬೇಕೆಂದೂ, ನಾನು ಆಮೇಲಾಮೇಲೆ ಎಳೆದಾಡಿಕೊಂಡು ಬರಬೇಕೆಂದೂ ನಾನು ಅಪರಿಚಿತನಂತೆ ನಟಿಸಬೇಕೆಂದೂ ಮೊದಲು ಏರ್ಪಾಟು ಮಾಡಿಕೊಂಡಿದ್ದೆವು. ಆದರೆ ಅದು ತಪ್ಪಾಯಿತು ಸಾಲಿ ಚಿಕ್ಕಮ್ಮ. ಅಪರಿಚಿತರು ಬರುವುದಕ್ಕೆ ಇದು ಹಿತವಾದ ಸ್ಥಳವಲ್ಲ,"

"ಇಲ್ಲ—ತುಂಟನಾಯಿಮರಿಗಳಲ್ಲ, ಸಿಡ್. ನೀನು ಬಾಯಿ ಮುಚ್ಚಿಕೊಂಡಿರ ನನಗೆ ಯಾವಕಾಲದಿಂದಲೂ ಇಷ್ಟು ಸಿಟ್ಟು ಬಂದಿರಲಿಲ್ಲ. ಅದೆಲ್ಲಾದರೂ ಹೋಗಲಿ, ಏನಾದರೂ ಆಗಲಿ, ನಾನಿಂಥಾ ಸಾವಿರ ತಮಾಷೆಗಳನ್ನು ಸಹಿಸಬಲ್ಲೆನು, ನಿನ್ನನ್ನಿಲ್ಲಿಗೆ ಕರೆಸಿಕೊಳ್ಳುವುದಕ್ಕಾಗಿ, ಆದರೂ ಈ ನಾಟಕ ಹೇಗಿತ್ತು ನೋಡಿದೆಯಾ ! ನಾನದನ್ನು ಅಲ್ಲಗಳೆಯುವುದಿಲ್ಲ ; ನೀನು ನನಗೆ ಆ ಮುತ್ತು ಕೊಟ್ಟಾಗ ನಾನು ಪರಮಾಶ್ಚರ್ಯದಿಂದ ಶತಚ್ಛಿದ್ರವಾಗಿ ಹೋಗಿದ್ದೆನು."

ವಾಸದ ಮನೆಯನ್ನೂ ಪಾಕಶಾಲೆಯನ್ನೂ ಕೂಡಿಸಿದ್ದ ಆ ವಿಸ್ತಾರವಾದ ಓಣಿಯಲ್ಲಿ ಕುಳಿತು ನಾವೆಲ್ಲರೂ ಊಟ ಮಾಡಿದೆವು. ಮೇಜಿನ ಮೇಲೆ ಏಳು ಸಂಸಾರಗಳಿಗೆ ಸಾಕಾಗುವಷ್ಟು ಉಣಿಸು ಸಿದ್ಧವಾಗಿತ್ತು—ಮತ್ತು ಬಲು ಬಿಸಿ ಬಿಸಿಯಾಗಿತ್ತು ; ನೀವು ತಿನ್ನುವಂಥ, ರಾತ್ರಿಯೆಲ್ಲಾ ಶೀತದ ಕೋಣೆಯಲ್ಲಿ ಕಪಾಟಿನಲ್ಲಿದ್ದ ನಿಸ್ಸಾರವಾದ ಹಲ್ಲಿಗೆ ಹರಿಯದ ಮಾಂಸವಲ್ಲ ಅದು—ಅದು ಬೆಳಗಾಗುವ ಹೊತ್ತಿಗೇ ಪುರಾತನಕಾಲದ ನರಮಾಂಸ ಭಕ್ಷಕನ ತಣ್ಣನೆಯ ಮಾಂಸದ ಚೂರಾಗಿ ಬಿಡುತ್ತದೆ. ಸೈಲಾಸ್ ಚಿಕ್ಕಪ್ಪ ಬಡಿಸಿದಡುಗೆಯ ಮೇಲೆ ಬಾಗಿ ಆಶೀರ್ವಾದಕ್ಕಾಗಿ ದೀರ್ಘವಾಗಿ ಬೇಡಿಕೊಂಡನು. ಅದು ಅಷ್ಟಕ್ಕೆ ಅರ್ಹವಾಗಿಯೂ ಇತ್ತು. ಬಡಿಸಿದಡುಗೆಗೂ ಬಾಯಿಗೂ ನಡುವೆ ತಡೆಹಾಕಿ ಹರಡುವುದರಿಂದ ಉಣಿಸಿನ ಬಿಸಿಯುಳಿಯುವುದನ್ನು ನಾನು ಅನೇಕ ಸಲ ನೋಡಿದ್ದೇನೆ. ಇವನು ಮಾಡಿದ ಕೆಲಸದಿಂದ ಹಾಗೇನೂ ಆಗಲಿಲ್ಲ.

ಅಪರಾಹ್ನದುದ್ದಕ್ಕೂ ಮಾತುಕತೆ ಅಸಾಧ್ಯವಾಗಿ ನಡೆಯುತ್ತಿತ್ತು. ನಾನೂ ಟಾಮನೂ ಎಚ್ಚರವಾಗಿ ಕಾದುಕೊಂಡಿದೆವು ; ಆದರ ಅದರಿಂದ ಪ್ರಯೋಜನವೇನೂ ಆಗಲಿಲ್ಲ, ಅವರು ತಪ್ಪಿಸಿಕೊಂಡು ಬಂದಿದ್ದ ನೀಗ್ರೋವಿನ ವಿಚಾರದಲ್ಲಿ ಮಾತಾಡಲೇ ಇಲ್ಲ. ಅದಕ್ಕಾಗಿ ನಾವು ತಕ್ಕ ಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ ಎನ್ನಿಸಿತು. ಆದರೆ ರಾತ್ರಿಯೂಟದ ಕಾಲದಲ್ಲಿ ಅವರ ಮಕ್ಕಳಲ್ಲಿ ಒಬ್ಬ ಕೇಳಿದ :

"ಅಪ್ಪಾ, ಟಾಮ್, ಸಿಡ್ ಮತ್ತು ನಾನು ನಾಟಕಕ್ಕೆ ಹೋಗಬಾರದೆ ?" "ಇಲ್ಲ," ಎಂದನು ಮುದುಕ, "ಅದೇನೂ ನಡೆಯುವುದಿಲ್ಲವೆಂದು ನನಗೆ ತೋರುತ್ತದೆ. ಅದು ನಡೆಯುವುದಾದರೂ ನೀವಲ್ಲಿಗೆ ಹೋಗುವುದು ಬೇಡ ; ಏಕೆಂದರೆ ಆ ಅಯೋಗ್ಯ ಪ್ರದರ್ಶನದ ವಿಚಾರವಾಗಿ ಸಮಸ್ತವನ್ನೂ ಬರ್ಟನ್ನನಿಗೂ, ನನಗೂ ಈ ತಪ್ಪಿಸಿಕೊಂಡು ಬಂದಿರುವ ನೀಗ್ರೋ ತಿಳಿಸಿದನು. ಅದನ್ನು ಜನರಿಗೆಲ್ಲ ತಿಳಿಸುವುದಾಗಿ ಬರ್ಟನ್ ಹೇಳಿದ. ಇಷ್ಟರೊಳಗಾಗಿ ಅವರು ಆ ಕೆಟ್ಟ ಜಾತಿಯ ಅಲೆಮಾರಿಗಳನು ಊರಾಚೆಗೆ ತೊಲಗಿಸಿ ಬಿಟ್ಟಿರುತ್ತಾರೆಂದೇ ನನ್ನ ಭಾವನೆ."

ಹೀಗೋ ವಿಷಯ !—ನಾನೇನನ್ನೂ ಮಾಡುವಂತಿರಲಿಲ್ಲ. ಟಾಮನೂ ನಾನೂ ಒಂದೇ ಕೊಠಡಿಯಲ್ಲಿ ಒಂದೇ ಹಾಸಿನಲ್ಲಿ ಮಲಗಬೇಕಾಗಿತ್ತು ; ಆದ್ದರಿಂದ ಬಲು ದಣಿದಿದ್ದ ನಾವು ಎಲ್ಲರಿಗೂ ಶುಭರಾತ್ರಿಯನ್ನು ಕೋರಿ, ಊಟ ಮುಗಿದ ಕೂಡಲೇ ಹಾಸುಗೆಯನ್ನು ಸೇರಿಕೊಂಡೆವು ; ಕಿಟಿಕಿಯಾಚೆಗೆ ಇಳಿದು, ಮಿಂಚನ್ನು ಸೆಳೆಯುವ ಕಂಬಿಯುದ್ದಕ್ಕೂ ಜಾರಿ, ನೆಲಕ್ಕೆ ಧುಮುಕಿ ಊರಕಡೆಗೆ ಓಡಿದೆವು; ಏಕೆಂದರೆ, ಜನರಿಗೆ ಇವರ ಪ್ರದರ್ಶನದ ರಹಸ್ಯ ತಿಳಿದು ಹೋಗಿದೆ ಎಂಬುದರ ಸುಳಿವನ್ನು ಡ್ಯೂಕನಿಗೂ ರಾಜನಿಗೂ ಕೊಡುವವರು ಯಾರೂ ಇರಲಿಲ್ಲ. ಆದ್ದರಿಂದ ನಾನು ಬೇಗನೆ ಹೋಗಿ ಅವರಿಗೆ ಮುನ್-ಸೂಚನೆ ಕೊಡದೆ ಹೋದರೆ ಅವರು ತೊಂದರೆಗೆ ಸಿಕ್ಕಿ ಬೀಳುವುದು ಖಚಿತವಾಗಿತ್ತು.

ದಾರಿಯಲ್ಲಿ ಹೋಗುತ್ತಾ ಟಾಮ್ ನಾನು ಕೊಲೆಯಾದೆನೆಂದು ಪರಿಗಣಿಸಿದ್ದು ಹೇಗೆ, ಅಪ್ಪ ತತ್‌ಕ್ಷಣವೇ ಅದೃಶ್ಯನಾದದ್ದೂ, ಹಿಂತಿರುಗಿದ್ದುದೂ ಹೇಗೆ, ಜಿಮ್ ಓಡಿಹೋದದ್ದರಿಂದ ಊರಲ್ಲಿ ಎಂಥಾ ಗುಲ್ಲೆದ್ದಿತು ಎಂಬೆಲ್ಲ ವಿಷಯಗಳನ್ನೂ ನನಗೆ ಹೇಳಿದ ; ನಾನೂ ಟಾಮನಿಗೆ ನಮ್ಮ "ರಾಜಯೋಗ್ಯ ಅಪ್ರತಿಮ" ಪ್ರದರ್ಶನದ ಕೇಡಿಗರ ಸಮಸ್ತ ವಿವರಗಳನ್ನೂ, ಸಿಕ್ಕಿದಷ್ಟು ವೇಳೆಯಲ್ಲಿ ಎಷ್ಟನ್ನು ಹೇಳಬಹುದಿತ್ತೋ ಅಷ್ಟರಮಟ್ಟಿಗೆ ತೆಪ್ಪದ ಪಯಣದ ಕಥೆಯನ್ನೂ ಹೇಳಿದೆ. ನಾವು ಊರನ್ನು ತಲುಪಿ ಅದರ ಮುಖ್ಯಮಾರ್ಗದಲ್ಲಿ ಹೋಗುತ್ತಿದ್ದಾಗ—ಅಷ್ಟು ಹೊತ್ತಿಗಾಗಲೇ ಎಂಟುವರೆ ಗಂಟೆಯಾಗಿತ್ತು—ಕೊಂಬುಕಹಳೆಯೂದುತ್ತಾ ತಗಡಿನ ಹಲ್ಲೆಗಳನ್ನು ಬಡಿಯುತ್ತಾ ಭಯಂಕರವಾಗಿ ಬೊಬ್ಬೆಹಾಕುತ್ತಾ ಕಿರುಚುತ್ತಾ ಪಂಜು ಹಿಡಿದು ರೇಗಿಬರುತ್ತಿರುವ ಜನಸಂದಣಿಯೊಂದನ್ನು ಕಂಡೆವು. ನಾವು ಒಂದು ಪಕ್ಕಕ್ಕೆ ಸರಿದು ಅವರಿಗೆ ದಾರಿಬಿಟ್ಟೆವು. ಅವರು ಪಕ್ಕದಲ್ಲಿ ಹೋಗುತ್ತಿದ್ದಾಗ ನಾನು ನೋಡಿದೆ : ಅವರು ರಾಜನನ್ನೂ ಡ್ಯೂಕನನ್ನೂ ಕಂಬಿಯೊಂದರ ಮೇಲೆ ಕಾಲುಹಿಗ್ಗಲಿಸಿ ಕಟ್ಟಿದ್ದರು-ಎಂದರೆ, ಟಾರಿನಿಂದಲೂ ರೆಕ್ಕೆಪುಕ್ಕಗಳಿಂದಲೂ ಇಬ್ಬರ ಮೈಯೂ ಮುಚ್ಚಿಹೋಗಿ ಈಮನುಷ್ಯಲೋಕಕ್ಕೇ ಇವರು ಸೇರಿದವರಲ್ಲವೆಂದು ಕಂಡುಬರುತ್ತಿದ್ದ ಒಂದು ಜೋಡಿ ಸೈನಿಕರ ಟೋಪಿಗೆ ಸಿಕ್ಕಿಕೊಳ್ಳುವ ದೊಡ್ಡ ತುರಾಯಿಗಳಂತಿದ್ದರೂ, ಅವರು ರಾಜ ಮತ್ತು ಡ್ಯೂಕ್ ಎನ್ನುವುದು

ನನಗೆ ತಿಳಿಯಿತು. ಅದನ್ನು ಕಂಡು ನನಗೆ ವ್ಯಸನವಾಯಿತು. ಆ ನಿರ್ಭಾಗ್ಯರಾದ ತುಚ್ಛ ಕೇಡಿಗರನ್ನು ಕಂಡೊಡನೆಯೇ ನನಗೆ ಮರುಕಹುಟ್ಟಿತು. ಈ ಲೋಕದಲ್ಲಿ ನನಗೆ ಅವರ ಮೇಲೆ ಇನ್ನೆಷ್ಟು ದ್ವೇಷಕ್ಕೂ ಕಾರಣವಿಲ್ಲವೆಂದು ತೋರಿತು. ಅದೊಂದು ಭಯಂಕರ ದೃಶ್ಯವಾಗಿತ್ತು. ಮಾನವ ಲೋಕಕ್ಕೆ ಸೇರಿದವರು ಪರಸ್ಪರ ಅತಿಕ್ರೌರ್ಯದಿಂದ ನಡೆದು ಕೊಳ್ಳುವುದೂ ಸಾಧ್ಯ.

ನಾವು ಬಲಂತಡವಾಗಿ ಬಂದೆವು—ಬಂದದ್ದು ನಿಷ್ಫಲವಾಯಿತು. ಅದರ ವಿಷಯುವಾಗಿ ನಾವು ಕೆಲವರು ದಾರಿಹೋಕರನ್ನು ವಿಚಾರಿಸಿದೆವು; ಪ್ರದರ್ಶನಕ್ಕೆ ಹೋದ ವರೆಲ್ಲರೂ ಬಲು ನಿಷ್ಕಪಟಿಗಳಂತೆ ಕಂಡುಬರುತ್ತಿದ್ದರೆಂದೂ, ಬಡ ಮುಂದಿರಾಜ ವೇದಿಕೆಯಮೇಲೆ ಬಂದು ತನ್ನ ಎಗರಾಟಗಳಲ್ಲಿ ಮುಳುಗುವ ತನಕ ಕತ್ತಲೆಯಲ್ಲಿ ತಲೆ ಮರೆಸಿಕೊಂಡಿದ್ದರೆಂದೂ, ಆಮೇಲೊಬ್ಬ ಸೂಚನೆಕೊಟ್ಟ ತತ್-ಕ್ಷಣವೇ ಪ್ರೇಕ್ಷಕರು ಗದ್ದಲವೆಬ್ಬಿಸಿ ಅವರನ್ನು ಬಂದು ಹಿಡಿದುಕೊಂಡರೆಂದೂ ನಮಗೆ ತಿಳಿದುಬಂತು.

ಬಳಿಕ ನಾವು ಮನೆಗೆ ಬಂದುಬಿಟ್ಟೆವು. ನಾನು ಮೊದಲಿನಷ್ಟು ಸ್ವಸ್ಥಚಿತ್ತನಾಗಿರ ಲಿಲ್ಲ; ನಾನು ಅಂಥಾದ್ದೇನನ್ನೂ ಮಾಡಿರಲಿಲ್ಲವಾದರೂ ನನ್ನ ಮನಸ್ಸಿನೊಳಗೇ ನಾನೊಬ್ಬ ನೀಚ, ಪತಿತ, ತಪ್ಪಿತಸ್ಥನೆಂದು ತೋರಿತು. ಆದರಿದು ಎಂದೂ ಹೀಗೆಯೇ ಆಗುತ್ತದೆ. ನೀವು ಒಳ್ಳೆಯದನ್ನು ಮಾಡಲಿ ಕೆಟ್ಟದ್ದನ್ನು ಮಾಡಲಿ ಅದರಿಂದ ವ್ಯತ್ಯಾಸ ವೇನೂ ಆಗುವುದಿಲ್ಲ. ವ್ಯಕ್ತಿಯ ಅಂತಸ್ಸಾಕ್ಷಿಗೆ ತಿಳಿವಳಿಕೆಯೆಂಬುದೇ ಇಲ್ಲ; ಎಂತಾ ದರೂ ಅವನನ್ನು ತನ್ನ ವಶವರ್ತಿಯನ್ನಾಗಿ ಮಾಡಿಕೊಂಡಿರುತ್ತದೆ. ಅದಕ್ಕೆ ಇರುವ ತಿಳಿವಳಿಕೆಗಿಂತಲೂ ಹೆಚ್ಚಿನದು ಒಬ್ಬ ಮೂರ್ಖನೆನಿಸಿಕೊಂಡವನಿಗೆ ಕೂಡ ಇರದಿದ್ದರೆ ನಾನವನನ್ನು ವಿಷಹಾಕಿ ಕೊಲ್ಲುತ್ತೇನೆ. ಅದು ವ್ಯಕ್ತಿಯ ಮೈಯೊಳಗಿರುವ ಉಳಿದೆಲ್ಲ ಕ್ಕಿಂತಲೂ ಹೆಚ್ಚು ಸ್ಥಳವನ್ನು ಆಕ್ರಮಿಸುವುದಾದರೂ ಅದರಿಂದ ಹೇಗೂ ಪ್ರಯೋಜನ ವಿಲ್ಲ. ಟಾಮ್ ಸಾಯರ್ ಹೇಳುವುದೂ ಅದನ್ನೇ.

## ೩೪

ನಾವು ಮಾತು ನಿಲ್ಲಿಸಿ ಯೋಚಿಸ ತೊಡಗಿದೆವು. ಆಮೇಲಾಮೇಲೆ ಟಾಮ್ ಹೇಳಿದ:

"ಇಲ್ಲಿ ನೋಡು, ಹಕ್, ನಾವೆಂಥ ದಡ್ಡರು. ನಮಗಿದು ಮೊದಲೇ ಹೊಳೆಯು ಲಿಲ್ಲವೇಕೆ ? ಜಿಮ್ ಎಲ್ಲಿದ್ದಾನೆಂಬುದು ನನಗೆ ಖಂಡಿತ ಗೊತ್ತು."

"ಇಲ್ಲ ! ಎಲ್ಲಿ ?"

ಕುಲುಮೆಯ ಪಕ್ಕದಲ್ಲಿ ಆ ಕೆಳಗಿರುವ ಗುಡಿಸಿಲಿನಲ್ಲಿ. ಇದೇಕೆ, ಇಲ್ಲಿನೋಡು, ನಾವು ಮಧ್ಯಾಹ್ನದಲ್ಲಿ ಊಟಮಾಡುತ್ತಿದ್ದಾಗ ನೀಗ್ರೋ ಒಬ್ಬನು ಅಲ್ಲಿಗೆ ಕೆಲವು ಉಣಿಸನ್ನು ತೆಗೆದುಕೊಂಡು ಹೋದುದನ್ನು ನೀನು ನೋಡಲಿಲ್ಲವೆ ?"

"ಹೌದು."

"ಯಾವ ಉದ್ದೇಶಕ್ಕಾಗಿ ಆ ಉಣಿಸನ್ನು ತೆಗೆದುಕೊಂಡು ಹೋದದ್ದು, ನಿನಗೆ ತಿಳಿಯಿತೆ ?"

"ನಾಯಿಗಿರಬೇಕು."

"ನಾನೂ ಹಾಗೇ ತಿಳಿದಿದ್ದೆ. ಅದು ನಾಯಿಗಾಗಿ ಅಲ್ಲ."

"ಏಕೆ ?"

"ಏಕೆಂದರೆ ಅದರಲ್ಲಿ ಒಂದಿಷ್ಟು ಕಲ್ಲಂಗಡಿಹಣ್ಣೂ ಸೇರಿತ್ತು."

"ಹೌದು, ಅದಿತ್ತು,—ನಾನದನ್ನು ಗಮನಿಸಿದೆ, ನಾಯಿ ಕಲ್ಲಂಗಡಿಯನ್ನು ತಿನ್ನು ವುದಿಲ್ಲ ಎನ್ನುವುದು ನನಗೆ ಹೊಳೆಯದೆ ಹೋದದ್ದು ಪರಮಾಶ್ಚರ್ಯ. ಮನುಷ್ಯನಾದ ವನು ನೋಡುವುದೂ ನೋಡದಿರುವುದೂ ಏಕಕಾಲದಲ್ಲಿ ಸಾಧ್ಯವೆಂದು ಇದು ತೋರಿಸು ತ್ತದೆ."

"ಸರಿ ಆ ನೀಗ್ರೋ ಬೀಗವನ್ನು ಬಿಚ್ಚಿ ಒಳಗೆ ಹೋದನು; ಮತ್ತೆ ಬೀಗವನ್ನು ಹಾಕಿಕೊಂಡು ಹೊರಗೆ ಬಂದನು. ನಾವು ಊಟದ ಮೇಜಿನ ಬಳಿಯಿಂದ ಎದ್ದ ಸಮಯದಲ್ಲಿ ಅವನು ಚಿಕ್ಕಪ್ಪನಿಗೆ ಬೀಗದೆಸಳೊಂದನ್ನು ಕೊಟ್ಟನು—ಅದೇ ಬೀಗದೆಸ ಳೆಂದು ನಾನು ಪಂಥಕಟ್ಟುತ್ತೇನೆ. ಕಲ್ಲಂಗಡಿಹಣ್ಣಿನಿಂದ ಅಲ್ಲಿ ಮನುಷ್ಯನಿರುವುದನ್ನೂ, ಬೀಗದಿಂದ ಅವನು ಬಂದಿಯೆಂಬುದನ್ನೂ ತಿಳಿದಿದ್ದಾಯಿತು. ಅಂಥ ಚಿಕ್ಕ ವ್ಯವಸಾಯ ಕ್ಷೇತ್ರದಲ್ಲಿ ಇಬ್ಬರು ಬಂದಿಗಳಿರುವುದು ಸಂಭವನೀಯವಲ್ಲ, ಅಲ್ಲದೆ ಇವರು ದಯಾ ಪರರೂ ಒಳ್ಳೆಯವರೂ ಆಗಿದ್ದಾರೆ. ಆದ್ದರಿಂದ ಜಿಮ್ಮನೇ ಆ ಬಂದಿ. ಸಂತೋಷ- ನಾವಿದನ್ನು ಪತ್ತೆದಾರಿ ರೀತಿಯಲ್ಲಿ ಕಂಡುಹಿಡಿದೆವು ; ಇನ್ನು ಯಾವರೀತಿಗೂ ನಾನು ಬೆಲೆಗೊಡುವುದಿಲ್ಲ. ಆದ್ದರಿಂದ ಈಗ ನೀನು ನಿನ್ನ ಬುದ್ಧಿಯನ್ನು ಉಪಯೋಗಿಸಿ ಜಿಮ್ಮನನ್ನು ಕದಿಯುವುದಕ್ಕಾಗಿ ಒಂದು ಮಾರ್ಗವನ್ನು ಹುಡುಕು; ನಾನೂ ಒಂದನ್ನು ಒಂದನ್ನು ಹುಡುಕುತ್ತೇನೆ. ಎರಡರಲ್ಲಿ ಯಾವುದು ಉತ್ತಮವೆಂದು ನಮಗೆ ಕಂಡು ತ್ತದೆಯೋ ಅದನ್ನು ಹಿಡಿಯೋಣ."

ಎಷ್ಟು ಚಿಕ್ಕ ಹುಡುಗ, ಎಂಥಾ ಬುದ್ಧಿ ! ನನಗೇನಾದರೂ ಟಾಮ್ ಸಾಯರನ ತಲೆಯಿದ್ದು ಬಿಟ್ಟಿದ್ದರೆ; ನಾನದನ್ನು ಡ್ಯೂಕ್, ಇಲ್ಲವೇ ಹಬೆದೋಣಿಯ ಅಧಿಕಾರಿ,

ಇಲ್ಲವೇ ಸರ್ಕಸ್ಸಿನ ವಿದೂಷಕ—ಇವರಲ್ಲಿ ಯಾರೊಬ್ಬರ ಪದವಿಗಾಗಲೀ ನಾನು ಯೋಚಿಸಬಲ್ಲ ಇನ್ನು ಯಾವುದಕ್ಕಾಗಲೀ ಅದನ್ನು ಅದಲುಬದಲು ಮಾಡಿಕೊಳ್ಳಲು ಒಪ್ಪುತ್ತಿರಲಿಲ್ಲ. ಒಂದು ಯೋಜನೆಯನ್ನು ಸಿದ್ಧಗೊಳಿಸಲು ನಾನು ಯೋಚಿಸತೊಡಗಿದೆ; ಅದು ಏನಾದರೊಂದನ್ನು ಮಾಡುವುದಕ್ಕಾಗಿಯೇ ಹೊರತು ಬೇರೆಯ ಉದ್ದೇಶದಿಂದಲ್ಲ. ಸರಿಯಾದ ಯೋಜನೆ ಎಲ್ಲಿಂದ ಬರುತ್ತದೆ ಎನ್ನುವುದು ನನಗೆ ಚೆನ್ನಾಗಿ ತಿಳಿದಿತ್ತು. ಸ್ವಲ್ಪಹೊತ್ತಿನೊಳಗಾಗಿ, ಟಾಮ್ ಹೇಳಿದ :

"ಸಿದ್ಧವಾಗಿರುವೆಯೋ ?"

"ಹೌದು," ಎಂದೆ ನಾನು.

"ಸರಿ ಹಾಗಾದರೆ—ಅದನ್ನು ಪ್ರಕಟಿಸು."

"ನನ್ನ ಯೋಜನೆ ಹೀಗಿದೆ," ಎಂದೆ ನಾನು. "ಅಲ್ಲಿರುವವನು ಜಿಮ್ಮನೋ ಅಲ್ಲವೋ ಎಂಬುದನ್ನು ನಾವು ಸುಲಭವಾಗಿ ಪತ್ತೆಮಾಡಬಹುದು. ಆಮೇಲೆ ನಾನು ನನ್ನ ಕಿರುದೋಣಿಯನ್ನು, ದ್ವೀಪದ ಬಳಿ ಇರುವ ನನ್ನ ತೆಪ್ಪವನ್ನೂ ನಾಳೆಯ ರಾತ್ರಿಗೆ ಇಲ್ಲಿಗೆ ತರುತ್ತೇನೆ. ಮೊಟ್ಟಮೊದಲ ಕಗ್ಗತ್ತಲೆಯ ರಾತ್ರಿಯಲ್ಲಿ ನಾನು ಮುದುಕ ಮಲಗಿರುವಾಗ ಅವನ ಷರಾಯಿ ಜೇಬಿನಿಂದ ಬೀಗಡೆಸಳನ್ನು ಕದ್ದು ಜಿಮ್ಮನೊಂದಿಗೆ ನದಿಯನ್ನು ತಲುಪಿ, ತೆಪ್ಪಹತ್ತಿ ಇಬ್ಬರೂ ಹೊರಟುಹೋಗುತ್ತೇವೆ. ಹಗಲುಹೊತ್ತಿನಲ್ಲಿ ಬಚ್ಚಿಟ್ಟುಕೊಂಡಿರುತ್ತೇವೆ; ರಾತ್ರಿಯಹೊತ್ತು ಪ್ರಯಾಣ ಬೆಳೆಸುತ್ತೇವೆ. ನಾನೂ ಜಿಮ್ಮನೂ ಹಿಂದೆ ಹಾಗೆಯೇ ಮಾಡುತ್ತಿದ್ದೆವು. ಈ ಯೋಜನೆ ಯಶಸ್ವಿಯಾಗದೆ ?"

"ಆಗುವುದಿಲ್ಲವೆ? ಖಂಡಿತವಾಗಿ ಆಗುತ್ತದೆ, ಇಲಿಗಳ ಜಗಳದಂತೆ. ಆದರೆ ಇದು ತೀರಾ ಸರಳ ಮಾರ್ಗವಾಯಿತು. ಅದರಲ್ಲಿ ಮಹತ್ವವೇನೂ ಇರದು ಅಷ್ಟಕ್ಕಿಂತ ಹೆಚ್ಚು ಅಪಾಯಕರವಲ್ಲದ ಯೋಜನೆಯಿಂದ ಪ್ರಯೋಜನವೇನು ? ಅದು ಬಾತುಕೋಳಿಯ ಹಾಲಿನಷ್ಟೇ ಚುರುಕಿಲ್ಲದುದು. ಅಷ್ಟೇಕೆ, ಹಕ್, ಅದು ಸಾಬೂನಿನ ಕಾರ್ಖಾನೆಯೊಂದಕ್ಕೆ ಕದ್ದಿಳಿಯುವುದಕ್ಕಿಂತ ಹೆಚ್ಚಿನ ಗದ್ದಲವನ್ನೆಬ್ಬಿಸಲಾರದು."

ನಾನೇನನ್ನೂ ಹೇಳಲಿಲ್ಲ; ಏಕೆಂದರೆ ಇದಕ್ಕಿಂತ ಬೇರೆಯಾದ ಪ್ರತಿಕ್ರಿಯೆಯನ್ನು ನಾನು ನಿರೀಕ್ಷಿಸುತ್ತಿರಲಿಲ್ಲ. ತನ್ನ ಯೋಜನೆಯನ್ನು ಅವನು ಸಿದ್ಧಗೊಳಿಸಿದಾಗೆಲ್ಲ ಅದಕ್ಕೆ ಯಾವ ಆಕ್ಷೇಪಣೆಗಳೂ ಇರುತ್ತಿರಲಿಲ್ಲವೆಂಬುದನ್ನು ನಾನು ಚೆನ್ನಾಗಿ ತಿಳಿದಿದ್ದೆ.

ಅವನು ಸಿದ್ಧಪಡಿಸಿದ್ದ ಯೋಜನೆಗೆ ಆಕ್ಷೇಪಣೆಯೇ ಇರಲಿಲ್ಲ. ಅದೇನೆಂಬುದನ್ನು ನನಗೆ ತಿಳಿಸಿದನು. ಶೈಲಿಯ ದೃಷ್ಟಿಯಿಂದ ನೋಡಿದರೆ ಅದು ನನ್ನದಕ್ಕಿಂತ ಹದಿನೈದುಪಾಲು ಹೆಚ್ಚು ಬೆಲೆಯಾದದ್ದೆಂದು ನನಗೆ ಒಂದು ಕ್ಷಣದಲ್ಲಿ ತೋರಿತು; ಮತ್ತು ನನ್ನ ಯೋಜನೆ ಮಾಡುತ್ತಿದ್ದಂತೆಯೇ ಅದೂ ಜಿಮ್ಮನನ್ನು ಅಷ್ಟೇ ಸ್ವತಂತ್ರನನ್ನಾಗಿ ಮಾಡುತ್ತಿತ್ತು; ಜತೆಯಲ್ಲಿ, ನಮ್ಮೆಲ್ಲರ ಕೊಲೆಯೂ ನಡೆಯುವುದು ಸಂಭವ

ನೀಯುವಿತ್ತು. ಆದ್ದರಿಂದ ನನಗೆ ತೃಪ್ತಿಯಾಯಿತು ; ನಾನದಕ್ಕೆ ಧುಮುಕುವುದಾಗಿ ನಿರ್ಧರಿಸಿದೆವು. ಅದೇನೆಂಬುದನ್ನು ನಾನಿಲ್ಲಿ ಹೇಳುವುದನಗತ್ಯ, ಏಕೆಂದರೆ ಈಗಿದ್ದ ಹಾಗೆಯೇ ಇರುವುದಿಲ್ಲವೆಂಬುದು ನನಗೆ ಗೊತ್ತಿತ್ತು. ನಾವು ಅತ್ತಿತ್ತ ಚಲಿಸುವಷ್ಟರಲ್ಲಿ ಅವನು ಅದನ್ನು ಬದಲಾಯಿಸುತ್ತಿದ್ದನೆಂಬುದೂ, ಅವಕಾಶ ಸಿಕ್ಕಿದಾಗಲೆಲ್ಲ ನೂತನ ಧಾಷ್ಟ್ರ್ಯವನ್ನು ಅದಕ್ಕೆ ಸೇರಿಸುತ್ತಿದ್ದನೆಂಬುದೂ ನನಗೆ ತಿಳಿದಿತ್ತು. ಈಗ ಅವನು ಮಾಡಿದ್ದೇ ಹಾಗೆ.

ಒಂದಂತೂ ಬಲು ಖಚಿತವಾಗಿತ್ತು ; ಟಾಮ್ ಸಾಯರ್ ಈ ಕಾರ್ಯದಲ್ಲಿ ಶ್ರದ್ಧಾಶಕ್ತನಾಗಿರುವನೆಂಬುದು, ಮತ್ತು ನೀಗ್ರೋ ಒಬ್ಬನನ್ನು ದಾಸ್ಯದಿಂದ ಬಿಡಿಸುವುದಕ್ಕಾಗಿ ವಾಸ್ತವವಾಗಿ ನೆರವಾಗುತ್ತಿರುವನೆಂಬುದು, ಇದು ನನಗೆ ಅತಿಶಯದ ಘಟನೆಯಾಗಿತ್ತು. ಮರ್ಯಾದಸ್ಥನೂ ಯೋಗ್ಯ ರೀತಿಯಲ್ಲಿ ಬೆಳೆದಿರುವವನೂ ಆಗಿರುವ ಹುಡುಗ ಇವನು ; ಗುಣಾಢ್ಯ ; ಮನೆಯುವರೂ ಗುಣವಂತರು ; ದಡ್ಡನಲ್ಲ, ಬುದ್ಧಿಶಾಲಿ ; ತಿಳಿದವನು, ಅಜ್ಞಾನಿಯಲ್ಲ ; ನೀಚನಲ್ಲ, ದಯಾಪರ ; ಆದರೂ ಇವನು ಈ ಕೆಲಸಕ್ಕಿಳಿಯುವುದಕ್ಕಿಂತ ಹೆಚ್ಚಿನ ಹೆಮ್ಮೆಯಾಗಲೀ, ವಿವೇಕವಾಗಲೀ, ಭಾವನೆಯಾಗಲೀ ಇಲ್ಲದವನಾಗಿದ್ದಾನೆ, ತನಗೆ ಮತ್ತು ತನ್ನ ಮನೆಯುವರಿಗೆ ಎಲ್ಲರ ಮುಂದೆ ಅವಮಾನವಾಗುವಂತೆ ತಾನೇ ಮಾಡಿಕೊಳ್ಳುತ್ತಿದ್ದಾನೆ, ಬೇರೆ ರೀತಿಯಲ್ಲಿ ಇದಕ್ಕೆ ಅರ್ಥ ಕಲ್ಪಿಸುವುದೇ ನನಗೆ ಸಾಧ್ಯವಾಗಲಿಲ್ಲ. ಅದು ಘೋರವಾದದ್ದೇ ; ನಾನು ಸುಮ್ಮನೆ ಎದ್ದು ಹೋಗಿ ಅವನಿಗೆ ಇದನ್ನು ಹೇಳಬೇಕೆನಿಸಿತು. ಹಾಗೆ ಮಾಡಿ ಅವನ ನಿಜವಾದ ಸ್ನೇಹಿತನಾಗಿರುವುದೇ ಮೇಲು ; ಈ ಕೆಲಸವನ್ನು ಅವನು ಇಲ್ಲಿಗೇ ಬಿಟ್ಟು ಅಪಾಯದಿಂದ ಪಾರಾಗಲಿ ಎಂದುಕೊಂಡೆ. ನಾನವನಿಗೆ ಹೇಳುವುದಕ್ಕೇನೋ ಹೊರಟೆ, ಆದರೆ ಅವನು ನನ್ನನ್ನು ಬಾಯಿಬಡಿದು ಕೂರಿಸಿ ಹೇಳಿದ :

"ನಾನು ಏನು ಮಾಡಲಿರುವೆನೆಂಬುದು ನನಗೆ ತಿಳಿದಿದೆ ಎಂದು ನೀನು ಪರಿಗಣಿಸುವುಲ್ಲವೆ ? ನಾನು ಏನು ಮಾಡಲಿರುವನೆಂಬುದು ನನಗೆ ಸಾಧಾರಣವಾಗಿ ತಿಳಿದಿರುವುದಿಲ್ಲವೆ ?"

"ಹೌದು."

"ನೀಗ್ರೋವನ್ನು ಕದಿಯಲು ಸಹಾಯ ಮಾಡಲಿರುವೆನೆಂದು ನಾನು ಹೇಳಿಲ್ಲವೆ ?"

"ಹೌದು"

"ಸರಿ, ಹಾಗಾದರೆ."

ಅಷ್ಟೇ ಅವನು ಹೇಳಿದ್ದು ; ಅಷ್ಟೇ ನಾನು ಹೇಳಿದ್ದು. ಇನ್ನು ಹೆಚ್ಚು ಮಾತಿನಿಂದ ಪ್ರಯೋಜನವಿರಲಿಲ್ಲ ; ಏಕೆಂದರೆ ಯಾವ ಕೆಲಸವನ್ನಾಗಲೀ ಅವನು ಮಾಡುವುದಾಗಿ ಹೇಳಿದೆನೆಂದರೆ, ಅವನದನ್ನು ಮಾಡಿಯೇ ಬಿಡುತ್ತಿದ್ದ. ಆದರೂ ಈ ಕೆಲಸವನ್ನು ಮಾಡಲು ಅವನ ಮನಸ್ಸು ಹೇಗೆ ಒಪ್ಪಿತೋ ನನಗೆ ಅರ್ಥವಾಗಲಿಲ್ಲ, ಆದ್ದರಿಂದ

ನಾನು ಆ ವಿಷಯುವನ್ನು ಅಲ್ಲಿಗೇ ಬಿಟ್ಟೆ, ಅದನ್ನು ಆಮೇಲೆ ತಲೆಗೇ ಹಚ್ಚಿಕೊಳ್ಳಲಿಲ್ಲ. ಅವನದನ್ನು ಹಾಗೆಯೇ ತಿಳಿಯುವುದು ಕಡ್ಡಾಯವಾಗಿದ್ದಲ್ಲಿ, ನಾನೇನೂ ಮಾಡುವಂತಿರಲಿಲ್ಲ.

ರಾತ್ರಿ ನಾವು ಮನೆಗೆ ಬಂದಾಗ ಎಲ್ಲವೂ ಅಂಧಕಾರಮಯವಾಗಿತ್ತು, ಎಲ್ಲವೂ ಸ್ತಬ್ಧವಾಗಿತ್ತು. ಆದ್ದರಿಂದ ನಾವು ಕುಲುಮೆಯ ಪಕ್ಕದಲ್ಲಿದ್ದ ಗುಡಿಸಿಲನ್ನು ಪರೀಕ್ಷಿಸಲು ಅಲ್ಲಿಗೆ ಹೋದೆವು. ಬೇಟೆನಾಯಿಗಳು ಏನು ಮಾಡುತ್ತಿವೆ ಎಂಬುದನ್ನು ನೋಡಿಕೊಳ್ಳಲು ನಾವು ಅಂಗಳವನ್ನು ಹಾದು ಹೋದೆವು. ಅವು ನಮ್ಮನ್ನು ಬಲ್ಲವು, ಹಳ್ಳಿಯ ನಾಯಿಗಳು ರಾತ್ರಿಯ ಹೊತ್ತಿನಲ್ಲಿ ಬರುವ ಏನನ್ನಾದರೂ ಕಂಡು ಯಾವಾಗಲೂ ಮಾಡುವ ಸದ್ದಿಗಿಂತ ಹೆಚ್ಚಿನ ಗದ್ದಲವನ್ನೇನೂ ಅವು ಎಬ್ಬಿಸಲಿಲ್ಲ, ನಾವು ಕುಟೀರದ ಬಳಿಗೆ ಹೋದಾಗ ಅದರ ಮುಂಭಾಗವನ್ನೂ ಎರಡು ಪಕ್ಕಗಳನ್ನೂ ವೀಕ್ಷಿಸಿದೆವು; ನನಗೆ ಪರಿಚಿತವಲ್ಲದ ಕಡೆಗೆ-ಉತ್ತರ ಭಾಗಕ್ಕೆ-ಚೌಕನಾದ ರಂಧ್ರದಂಥ ಕಿಟಕಿಯಿತ್ತು; ನಾವದನ್ನು ನೋಡಿದೆವು. ಅದು ಸುಮಾರು ಎತ್ತರದಲ್ಲಿತ್ತು ; ಅದನ್ನು ದಪ್ಪನೆಯ ಹಲಗೆಯಿಂದ ಮುಚ್ಚಿ ಮೊಳೆ ಹೊಡೆದಿದ್ದರು, ನಾನು ಹೇಳಿದೆ:

"ಇಲ್ಲಿದೆ ಪ್ರವೇಶಾನುಮತಿ. ನಾವು ಆ ಹಲಗೆಯನ್ನು ಕಿತ್ತು ಹಾಕಿದರೆ ಜಿಮ್ ಆ ರಂದ್ರದಿಂದ ಈಚೆಗೆ ಬರುವುದಕ್ಕೆ ತೊಂದರೆಯೇನಿಲ್ಲ; ಅದು ಸಾಕಷ್ಟು ದೊಡ್ಡದಾಗಿದೆ."

ಟಾಮ್ ಹೇಳಿದ :

"ಅದು ಮಕ್ಕಳ ಪದ್ಯದಷ್ಟು, ಮತ್ತು ತರಗತಿಗೆ ತಪ್ಪಿಸಿಕೊಳ್ಳುವಷ್ಟು ಸುಲಭ. ಅದಕ್ಕಿಂತ ಹೆಚ್ಚು ಜಟಿಲವಾದ ಉಪಾಯವನ್ನು ಹುಡುಕಬಲ್ಲೆವೆಂಬ ಭರವಸೆ ನನಗಿದೆ, ಹಕ್‌ಫಿನ್,"

"ಸರಿ, ಹಾಗಾದರೆ; ಗರಗಸದಿಂದ ಅದನ್ನು ಕೊಯ್ದು ಹಾಕಿ ಆವನನ್ನು ಈಚೆಗೆ ತರಬಹುದಲ್ಲವೆ ? ಆ ಸಲ ನನ್ನ ಕೊಲೆ ನಡೆಯುವುದಕ್ಕೆ ಮುನ್ನ ನಾನು ಹಾಗೆಯೇ ಮಾಡಿದ್ದೆ" ಎಂದೆ ನಾನು

"ಅದು ಹೆಚ್ಚು ಪ್ರಿಯವಾದದ್ದು, ಅದು ನಿಜವಾಗಿ ಗಹನವೂ ಅಪಾಯಕರವೂ, ಆದರೆ ಯುಕ್ತವೂ, ಆದಮಾರ್ಗ. ಆದರೆ ನಾವು ಅದಕ್ಕೆ ಎರಡರಷ್ಟು ದೀರ್ಘವಾದ ಇನ್ನು ಯಾವುದಾದರೂ ವಿಧಾನವನ್ನು ಹುಡುಕಬಲ್ಲೆವೆಂದು ನಾನು ಖಂಡಿತವಾಗಿ ಹೇಳಬಲ್ಲೆ," ಎಂದವನು. ಅದಕ್ಕೆ ಅಷ್ಟು ಅವಸರವೇನಿಲ್ಲ; ಸುತ್ತಲೂ ನೋಡುತ್ತಾ ಹೋಗೋಣ.

ಬೇಲಿಗೂ ಗುಡಿಸಿಲಿಗೂ ನಡುವೆ, ಹಿಂಭಾಗದಲ್ಲಿ ಬೇಲಿಯಿಂದ ಗುಡಿಸಿಲಿನ ಸೂರಿಗೆ ಇಳಿದ ಒಂದು ಒರಗು-ಛಾವಣಿಯಿತ್ತು ; ಅದನ್ನು ಹಲಗೆಗಳಿಂದ ರಚಿಸಲಾಗಿತ್ತು. ಅದು ಗುಡಿಸಿಲಿನಷ್ಟೇ ಉದ್ದವಿತ್ತು ಆದರೆ—ಕೇವಲ ಆರಡಿಗಳಗಲ

ಮಾತ್ರವಿದ್ದು—ಇಕ್ಕಟ್ಟಾಗಿತ್ತು. ಅದಕ್ಕೆ ಬಾಗಿಲು ದಕ್ಷಿಣದ ಕಡೆಗಿತ್ತು; ಆ ಬಾಗಿಲಿಗೆ ಭದ್ರವಾದ ಕೊಂಡಿ-ಬೀಗ ಹಾಕಿತ್ತು. ಟಾಮ್ ಸೋಪಿನ ಕಪಾಯಿಯ ಬಳಿಗೆ ಹೋಗಿ ಸುತ್ತ ನೋಡಿದನು; ಅದರ ಮಂಚ್ಚಳವನ್ನು ಎತ್ತುವುದಕ್ಕಾಗಿ ಉಪಯೋಗಿಸುವ ಕಬ್ಬಿಣದ ಸಲಾಕೆಗಳನ್ನು ತಂದನು. ಅದನ್ನು ತೆಗೆದುಕೊಂಡು ಬಂದು ಚಿಲಕದ ಕೊಂಡಿಗಳಲ್ಲಿ ಒಂದನ್ನು ಕಿತ್ತು ಹಾಕಿದನು, ಸರಪಳಿ ಕಳಚಿ ಬಿತ್ತು. ನಾವಿಬ್ಬರೂ ಒಳಗೆ ಹೋಗಿ ಬಾಗಿಲು ಮುಚ್ಚಿದೆವು. ಬೆಂಕಿಕಡ್ಡಿಯನ್ನು ಗೀಚಿದೆವು; ಆ ಗುಡಿಸಿಲನ್ನು ಕುಟೀರವೊಂದರ ಗೋಡೆಯನೊಳಕೊಳ್ಳುವಂತೆ ಕಟ್ಟಿದ್ದರು, ಇದಕ್ಕೂ ಅದಕ್ಕೂ ನಡುವೆ ಒಳಬಾಗಿಲೇನೂ ಇರಲಿಲ್ಲ. ಗುಡಿಸಿಲಿನ ನೆಲಕ್ಕೆ ಗಾರೆ ಹಾಕಿರಲಿಲ್ಲಿ, ಕೆಲವು ಹಳೆಯ ತುಕ್ಕು ಹಿಡಿದ, ಕೆಲಸಕ್ಕೆ ಬಾರದ ಸಲಿಕೆಗಳು, ಗುದ್ದಲಿಗಳು, ಪಿಕಾಸಿಗಳು, ಮತ್ತು ಒಂದು ಕಾಲು ಮುರುಕ ನೇಗಿಲು ಇಷ್ಟರ ವಿನಾ ಇನ್ನೇನೂ ಇರಲಿಲ್ಲ. ಉರಿಯುತ್ತಿದ ಬೆಂಕಿಕಡ್ಡಿ ಆರಿಹೋಯಿತು, ನಾವೂ ಹೊರಗೆ ಬಂದೆವು, ಕಿತ್ತುಹಾಕಿದ್ದ ಕೊಂಡಿಯನು ಮತ್ತೆ ಅಲ್ಲಿಗೇ ಹೊಡೆದೆವು. ಬಾಗಿಲಿಗೆ, ಅದು ಹೇಗಿತ್ತೋ ಹಾಗೆಯೇ ಬೀಗ ಹಾಕಲಾಯಿತು. ಟಾಮನಿಗೆ ಸಂತೋಷವಾಯಿತು, ಅವನು ಹೇಳಿದ :

“ಈಗ ನಾವು ಸರಿಯಾದ ದಾರಿಯಲ್ಲಿ ಹೋಗುತ್ತಿದ್ದೇವೆ. ಸುರಂಗ ಹೊಡೆದು ನಾವು ಅವನನ್ನು ಈಚೆಗೆ ಎಳೆದು ಹಾಕೋಣ. ಅದಕ್ಕೆ ಸುಮಾರು ಒಂದು ವಾರ ಕಾಲ ಹಿಡಿಯುತ್ತದೆ!”

ಆಮೇಲೆ ನಾವು ಮನೆಯ ಕಡೆ ಹೊರಟೆವು; ನಾನು ಹಿಂಬಾಗಿಲಿನಿಂದ ಪ್ರವೇಶಿಸಿದೆ,—ಅವರು ಬಾಗಿಲುಗಳನ್ನು ಭದ್ರವಾಗಿ ಹಾಕಿರುವುದಿಲ್ಲ, ಜಿಂಕೆಯ ತೊಗಲ ಕುಣಿಕೆಯೊಂದನ್ನು ಎಳೆದರೆ ಸಾಕು ಅವು ತೆರೆಯುತ್ತವೆ—ಆದರೆ ಟಾಮ್‌ಸಾಯರನಿಗೆ ಆ ವಿಧಾನ ಸಾಕಷ್ಟು ಸಾಹಸ ಪೂರ್ಣವೆನಿಸಲಿಲ್ಲ. ಮಿಂಚನ್ನಾಕರ್ಷಿಸುವುದಕ್ಕಾಗಿ ಹೊರಗೋಡೆಗೆ ಹೊಡದಿರುವ ಸಲಾಕಿಯನ್ನು ಹಿಡಿದುಕೊಂಡು ಮೇಲಕ್ಕೆ ಹತ್ತುವ ವಿಧಾನವಲ್ಲದೆ ಇನ್ನು ಯಾವುದೂ ಅವನಿಗೆ ಸರಿಹೋಗುತ್ತಿರಲಿಲ್ಲ. ಆದರೆ ಅವನು ಮೂರುಸಲ ಅರ್ಧದೂರ ಹಾಗೆ ಹತ್ತಿದಾಗಲೂ, ಗುರಿತಪ್ಪಿ ಕೆಳಗೆ ಬಿದ್ದ. ಕಡೆಯ ಸಲ ಇನ್ನೇನು ಬರುಡೆ ಒಡೆದು ಹೋಗುವುದರಲ್ಲಿತ್ತು, ಅವನು ಈ ಪ್ರಯತ್ನವನ್ನು ಕೈಬಿಡೋಣ ಎಂದುಕೊಂಡ; ಸ್ವಲ್ಪ ಸುಧಾರಿಸಿಕೊಂಡ ಮೇಲೆ ಇನ್ನೊಂದೇ ಸಲ ಅದೃಷ್ಟಪರೀಕ್ಷೆ ಮಾಡಿಬಿಡೋಣ ಎಂದುಕೊಂಡ, ಈ ಸಲ ಗೆದ್ದು ಮೇಲಕ್ಕೆ ಬಂದ,

ಬೆಳಗಾಗ ಸೂರ್ಯೋದಯದ ಹೊತ್ತಿಗೆ ಎದ್ದೆವು; ನಾಯಿಗಳಿಗೆ ಮದ್ದು ಮಾಡಲು ಜಿಮ್ಮನಿಗೆ ಊಟವನ್ನೊಯ್ಯುತ್ತಿದ್ದ ನೀಗ್ರೋವಿನೊಂದಿಗೆ ಊಟ ಹೋಗುತ್ತಿದ್ದುದು ಜಿಮ್ಮನಿಗೇ ಆಗಿದ್ದಲ್ಲಿ ಸ್ನೇಹಬೆಳೆಸಲೂ ನೀಗ್ರೋ ಕುಟೀರಗಳತ್ತ ನಡೆದವು. ನೀಗ್ರೋಗಳು ಆಗತಾನೇ ಬೆಳಗಿನ ಉಪಾಹಾರವನ್ನು ಮುಗಿಸಿದ್ದರು, ಹೊಲಗಳ ಕಡೆ ಕಡೆ ಹೊರಡುತ್ತಿದ್ದರು. ಜಿಮ್ಮನ ನೀಗ್ರೊ ತಗಡಿನ ತಟ್ಟೆಯೊಂದರಲ್ಲಿ ರೊಟ್ಟಿಯನ್ನೂ

ಮಾಂಸವನ್ನೂ ಇಟ್ಟುಕೊಳ್ಳುತ್ತಿದ್ದನು. ಉಳಿದವರೆಲ್ಲರೂ ಅಲ್ಲಿಂದ ಕದಲುತ್ತಿರುವ ಸಮಯದಲ್ಲಿ ಬೀಗದೆಸಳು ಮನೆಯಿಂದ ಬಂತು.

ಈ ನೀಗ್ರೋವಿನ ಮುಖದಲ್ಲಿ ಒಳ್ಳೆಯ ಸ್ವಭಾವವವೂ, ದಡ್ಡತನವೂ ಎದ್ದು ಕಾಣುತ್ತಿದ್ದವು. ಅವನು ತನ್ನ ಕೂದಲುಗಳನ್ನು ಚಿಕ್ಕ ಚಿಕ್ಕ ಗೊಂಚಲುಗಳಾಗಿ ದಾರದಿಂದ ಕಟ್ಟಿದ್ದನು. ಮಂತ್ರಗಾರ್ತಿಯರು ತುಂಬಾ ಪೀಡಿಸುತ್ತಿರುವುದಾಗಿಯೂ, ನಾನಾ ಬಗೆಯ ವಿಚಿತ್ರ ವಸ್ತುಗಳು ತನ್ನ ಕಣ್ಣಿಗೆ ಬೀಳುವಂತೆ ನಾನಾಬಗೆಯ ವಿಚಿತ್ರವಾದ ಮಾತುಗಳೂ ಧ್ವನಿಗಳು ತನ್ನ ಕಿವಿಗೆ ಬೀಳುವಂತೆ ಮಾಡುತ್ತಿರುವುದಾಗಿಯೂ, ತನ್ನ ಜೀವಮಾನದಲ್ಲೇ ಎಂದೂ ಇಷ್ಟು ದೀರ್ಘಕಾಲ ತಾನು ಮಂತ್ರವಶನಾಗಿದ್ದುದು ತನಗೆ ತಿಳಿಯದೆಂದೂ ಅವನು ಹೇಳಿದನು, ಅವನು ಮನಸ್ಸು ತಲ್ಲಣಗೊಂಡಿತು; ಅವನು ತನ್ನ ತೊಂದರೆಗಳನ್ನು ವರ್ಣಿಸುತ್ತಲೇ ಇದ್ದನು. ತನ್ನ ಕರ್ತವ್ಯ ಪ್ರಜ್ಞೆಯನ್ನೇ ಕಳೆದುಕೊಂಡನು. ಆಗ ಟಾಮ್ ಕೇಳಿದ:

"ಈ ತಿಂಡಿತೀರ್ಥ ಯಾರಿಗೆ ? ನಾಯಿಗಳಿಗೆ ಇಡುವೆಯಾ ?"

ಒಂದು ಬಗೆಯಾದ ಕಿರುನಗೆ ಆವನ ಮುಖಮಂಡಲದ ಮೇಲೆಲ್ಲಾ ಕ್ರಮಕ್ರಮವಾಗಿ ಹಬ್ಬತು, ಕೆಸರ ಹೊಂಡಕ್ಕೆ ಇಟ್ಟಿಗೆಯ ಚೂರೊಂದನ್ನು ನೀವೆಸೆದಾಗ ಆಗುವುದಲ್ಲಿ, ಹಾಗೆ, ಅವನು ಹೇಳಿದ :

"ಹೌದು, ಮಿ. ಸಿಡ್, ಅದೂ ನಾಯಿಯೇ, ಕುತೂಹಲಕರವಾದ ನಾಯಿ. ಅದು, ಅಲ್ಲಿಗೆ ಹೋಗಿ ಅದನ್ನು ನೋಡಬಯಸುವಿರೇನು ?"

"ಹೌದು"

ನಾನು ಟಾಮನನ್ನು ಬಳಿಗೆಳೆದು ಅವನ ಕಿವಿಯಲ್ಲಿ ಹೇಳಿದೆ :

"ಈ ಹಾಡ ಹಗಲಲ್ಲಿ ನೀನಲ್ಲಿಗೆ ಹೋಗುವೆಯ ? ನಮ್ಮ ಯೋಜನೆ ಅದಾಗಿರಲಿಲ್ಲವಲ್ಲ."

"ಇಲ್ಲ, ಆಗಿರಲಿಲ್ಲ ; ಆದರೆ ಅನುಸರಿಸಬೇಕಾದ ಯೋಜನೆ ಅದೆ."

ಅವನನ್ನು ಶಪಿಸಿದೆ. ಇಬ್ಬರೂ ಮುಂದೆ ಹೋದೆವು ಆದರೇಕೋ ನನಗದು ಇಷ್ಟವಾಗಲಿಲ್ಲ; ನಾನು ಒಳಗೆ ಹೋದಾಗ ನಮಗಲ್ಲಿ ಯಾವುದೂ ಕಣ್ಣಿಗೆ ಬೀಳಲೇ ಇಲ್ಲ, ಕಗ್ಗತ್ತಲು ಸುರಿದಿತ್ತು. ಆದರೆ ಜಿಮ್ ಅಲ್ಲಿದ್ದ ; ಅದರಲ್ಲಿ ಅನುಮಾನವೇ ಇರಲಿಲ್ಲ, ನಾವು ಅವನ ಕಣ್ಣಿಗೆ ಬಿದ್ದೆವು. ಅವನು ಕೂಗಿದ :

ಏನಿದು ಹಕ್ ! ನನ್ನ ಪುಣ್ಯವೆ ! ಅದು ಮಿ, ಟಾಮ್ ಅಲ್ಲವೆ ?"

ಅದು ಹಾಗೆ ಆಗುವುದೆಂದು ನನಗೆ ಗೊತ್ತಿತ್ತು ; ನಾನದನ್ನು ನಿರೀಕ್ಷಿಸಿದ್ದೆ ; ಏನು ಮಾಡಬೇಕೆಂದು ನನಗೆ ತಿಳಿದಿರಲಿಲ್ಲ ; ತಿಳಿದದ್ದರೆ ನಾನದನ್ನು ಮಾಡುತ್ತಿರಲಿಲ್ಲ ; ಏಕೆಂದರೆ ಆ ನೀಗ್ರೋ ನಡುವೆ ಬಾಯಿಹಾಕಿ ಹೇಳಿದ :

"ಆಶ್ಚರ್ಯ ! ಆಶ್ಚರ್ಯ ! ಮಹನೀಯರೆ, ಇವನು ನಿಮ್ಮನ್ನು ಬಲ್ಲನೆ ?"

ನಮಗೆ ಈಗ ಎಲ್ಲವೂ ಹೆಚ್ಚು ಸ್ಪಷ್ಟವಾಗಿ ಕಂಡುಬರುತ್ತಿತ್ತು. ಟಾಮ್ ಆ ನೀಗ್ರೋವಿನ ಕಡೆಗೆ ಧೃತಿಗೆಡದೆ, ಅಚ್ಚರಿಗೊಂಡಂತೆ ನೋಡುತ್ತಾ ಕೇಳಿದನು :

"ನಮ್ಮನ್ನು ಬಲ್ಲವನು ಯಾರು ಎಂದೆ ?"

"ಇವನು, ಈ ಇಲ್ಲಿರುವ ತಪ್ಪಿಸಿಕೊಂಡು ಬಂದ ನೀಗ್ರೋ."

"ಅವನಿಗೆ ತಿಳಿಯದೆಂದು ನನಗೆ ತೋರುತ್ತದೆ ; ಆ ಭಾವನೆ ನಿನಗೆ ಬಂದುದಕ್ಕೆ ಕಾರಣವೇನು ?"

"ಅದಕ್ಕೆ ಕಾರಣವೆ ? ಅವನು ಈಗ ತಾನೆ, ನಿಮ್ಮ ಪರಿಚಯವಿದ್ದವನಂತೆ ಕೂಗಿಕೊಳ್ಳಲಿಲ್ಲವೆ ?"

ಒಂದು ರೀತಿಯ ಪೇಚಿಗೆ ಸಿಕ್ಕಿಬಿದ್ದವನಂತೆ ಟಾಮ್ ಹೇಳಿದ,

"ಅದೀಗ ಪರಮಾಶ್ಚರ್ಯಕರವಾಗಿದೆ. ಕೂಗಿದವ ಯಾರು ? ಅವನು ಕೂಗಿಕೊಂಡದ್ದು ಯಾವಾಗ ? ಅವನು ಏನೆಂದು ಕೂಗಿದ ?" ಬಳಿಕ ನನ್ನ ಕಡೆಗೆ ತಿರುಗಿ ಸ್ವಲ್ಪವಾದರೂ ಎದೆಗೆಡದೆ ಕೇಳಿದ ; "ಯಾರಾದರೂ ಕೂಗಿದ್ದನ್ನು ನೀನು ಕೇಳಿದೆಯ ?"

ಅದಕ್ಕೆ ಬೇಕಾಗಿದ್ದುದು ಒಂದೇ ಉತ್ತರ. ನಾನು ಹೇಳಿದೆ :

"ಇಲ್ಲ ; ಯಾರೂ ಯಾವ ಮಾತನ್ನೂ ಆಡಿದ್ದು ನನ್ನ ಕಿವಿಗೆ ಬೀಳಲಿಲ್ಲ."

ಆಮೇಲೆ ಅವನು ಜಿಮ್ಮನ ಕಡೆಗೆ ತಿರುಗಿದ ; ಎಂದೂ ಅವನನ್ನು ಕಂಡಿರದವನಂತೆ ನೋಡುತ್ತಾ ಕೇಳಿದ ;

"ನೀನು ಕೂಗಿದೆಯ ?"

"ಇಲ್ಲ, ಸ್ವಾಮಿ" ಎಂದ ಜಿಮ್ ; "ನಾನು ಯಾವ ಮಾತನ್ನು ಆಡಲಿಲ್ಲ, ಸ್ವಾಮಿ,"

"ಒಂದು ಮಾತನ್ನೂ ?"

"ಇಲ್ಲ ಸ್ವಾಮಿ, ನಾನು ಒಂದು ಮಾತನ್ನೂ ಆಡಲಿಲ್ಲ."

"ನೀನೂ ಹಿಂದೇದಾದರೂ ನಮ್ಮನ್ನು ಕಂಡಿದ್ದೆಯ ?"

"ಇಲ್ಲ, ಸ್ವಾಮಿ : ನನಗೆ ತಿಳಿದ ಮಟ್ಟಿಗೆ ಇಲ್ಲ.

ಹುಚ್ಚನಂತೆಯೂ, ನೊಂದುಕೊಂಡಂತೆಯೂ ತೋರುತ್ತಿದ್ದ ಆ ನೀಗ್ರೋವಿನ ಕಡೆಗೆ ತಿರುಗಿ, ಕಟುವಾಗಿ ಕೇಳಿದ :

"ನಿನಗೇನಾಗಿದೆ ಎಂದು ನಿನಗೆ ತೋರುತ್ತಿದೆ ? ಯಾರೋ ಕೂಗಿದರೆಂದೆಯಲ್ಲ ನೀನು, ಆ ಭಾವನೆ ನಿನಗೆ ಬಂದದ್ದಾದರೂ ಹೇಗೆ ?"

"ಓ ಅದೇ ಅವರು ಆ ಹಾಳು ಮಂತ್ರಗಾರ್ತಿಯರು, ಸ್ವಾಮಿ. ನಾನು ನೆಗೆದು ಬಿದ್ದು ಹೋಗಿದ್ದರೇ ಖಂಡಿತವಾಗಿ ಚೆನ್ನಾಗಿತ್ತು. ಅವರು ಯಾವಾಗಲೂ ಬೆನ್ನು ಹತ್ತಿಯೇ ಇರುತ್ತಾರೆ, ನನ್ನ ಜೀವ ತೆಗೆಯುತ್ತಾರೆ. ಎಷ್ಟೋವ ಮಟ್ಟಿಗೆ ಹೆದರಿಸು

ತ್ತಾರೆ. ದಯವಿಟ್ಟು ಈ ವಿಷಯವನ್ನು ಮಾತ್ರ ಯಾರಿಗೂ ತಿಳಿಸಬೇಡಿ, ನನ್ನೊಡೆಯ; ತಿಳಿಸಿದಿರೋ, ಮಿ. ಸೈಲಾಸ್ ನನ್ನನ್ನು ಚೆನ್ನಾಗಿ ಬಯ್ಯುತ್ತಾರೆ ; ಏಕೆಂದರೆ ಮಂತ್ರಗಾರ್ತಿಯರೇ ಇಲ್ಲದೆಂದು ಅವರು ಹೇಳುತ್ತಾರೆ. ದೈವವಶಾತ್ ಅವನು ಈಗ ಇಲ್ಲಿಯೇ ಇದ್ದರೆ—ಆಗ ಏನೆನ್ನುತ್ತಿದ್ದನೋ ! ಈ ಸಲ ಇದನ್ನು ನಂಬದಿರುವುದಕ್ಕೆ ಅವಕಾಶವೇ ಇರಲಿಲ್ಲ. ಯಾವಾಗಲೂ ಆಗುವುದೇ ಹೀಗೆ : ಆ ರೀತಿಯ ಜನ. ಹಾಗೆಯೇ ಇದ್ದು ಬಿಡುತ್ತಾರೆ ; ಅವರು ಯಾವುದನ್ನೂ ಪರಿಶೀಲಿಸಿ ತಮ್ಮಷ್ಟಕ್ಕೆ ತಾನೇ ಕಂಡುಹಿಡಿಯುವುದಿಲ್ಲ ; ನೀವದನ್ನು ಪತ್ತೆ ಹಚ್ಚಿ ಅವರಿಗೆ ಹೇಳಿದರೆ ಅವರು ನಿಮ್ಮನ್ನು ನಂಬುವುದಿಲ್ಲ."

ಟಾಮ್ ಅವನ ಕೈಗೊಂದು ದಮಡಿಯನ್ನು ಹಾಕಿದ ; ನಾವು ಯಾರಿಗೂ ಹೇಳುವುದಿಲ್ಲವೆಂದು ಅಭಯ ನೀಡಿದ ; ತನ್ನ ಕೂದಲುಗಳನ್ನು ಕಂಚಟ್ಟು ಕಟ್ಟುವುದಕ್ಕಾಗಿ ಇನ್ನಷ್ಟು ದಾರವನ್ನು ಕೊಂಡುಕೋ ಹೋಗು, ಎಂದ, ಬಳಿಕ ಜಿಮ್ಮನ ಕಡೆಗೆ ತಿರುಗಿ ಗಟ್ಟಿಯಾಗಿ ಹೇಳಿದ :

"ಸೈಲಾಸ್ ಚಿಕ್ಕಪ್ಪ ಈ ನೀಗ್ರೋವನ್ನು ಶೂಲಕ್ಕೇರಿಸುವನೋ ಇಲ್ಲವೋ ನನಗೆ ತಿಳಿಯದು. ಓಡಿ ಹೋಗುವಷ್ಟು ಕೃತಘ್ನನಾದ ನೀಗ್ರೋ ಯಾರಾದರೂ ನನ್ನ ಕೈಗೆ ಸಿಕ್ಕಿಬಿದ್ದಿದ್ದರೆ, ನಾನವನನ್ನು ಬಿಟ್ಟುಕೊಡುತ್ತಿರಲಿಲ್ಲ, ಶೂಲಕ್ಕೇರಿಸುತ್ತಿದ್ದೆ." ಬಳಿಕ ಆ ನೀಗ್ರೋ ಆ ಬೆಳ್ಳಿಯ ನಾಣ್ಯವನ್ನು ಕಚ್ಚಿ ಅದು ಹೋಗುತ್ತದೆಯೋ ಎಂದು ನೋಡಿ ಕೊಳ್ಳುವುದಕ್ಕಾಗಿ ಬಾಗಿಲ ಬಳಿಗೆ ಹೆಜ್ಜೆ ಹಾಕುತ್ತಿದ್ದಾಗ, ಮತ್ತೆ ಜಿಮ್ಮನಿಗೆ ಪಿಸು ಮಾತಿನಲ್ಲಿ ಹೇಳಿದ :

"ನಮ್ಮನ್ನು ಬಲ್ಲಂತೆ ಎಂದೆಂದೂ ತೋರಿಸಿಕೊಳ್ಳಬೇಡ. ನೀನು ರಾತ್ರಿಯ ಹೊತ್ತಿನಲ್ಲಿ ಅಗೆತ ನಡೆಯುತ್ತಿರುವುದನ್ನು ಕೇಳಿದರೆ, ಆ ಕೆಲಸ ಮಾಡುತ್ತಿರುವವರು ನಾವೇ ಎಂದು ತಿಳಿ. ನಾವು ನಿನ್ನನ್ನು ಸೆರೆಯಿಂದ ಬಿಡಿಸುತ್ತೇವೆ."

"ಜಿಮ್ಮನಿಗೆ ನಮ್ಮ ಕೈಗಳನ್ನು ಸೆಳೆದುಕೊಂಡು ಹಿಸುಕುವಷ್ಟೇ ಅವಕಾಶ ಸಿಕ್ಕಿತ್ತು. ಅಷ್ಟರಲ್ಲೇ ಆ ನೀಗ್ರೋ ಹಿಂತಿರುಗಿದನು ; ಅವನು ಅಪೇಕ್ಷಿಸಿದಲ್ಲಿ ನಾವು ಮತ್ತೆ ಕೊಂಚ ಕಾಲಬಿಟ್ಟು ಬರುವುದಾಗಿ ಹೇಳಿದೆವು. ನಾವು ಮತ್ತೆ ಬರಬೇಕೆನ್ನುವುದೇ ತನ್ನ ಅಪೇಕ್ಷೆಯೆಂದೂ, ಅದರಲ್ಲಿಯೂ ಕತ್ತಲೆಯಾದ ಮೇಲೆ ಬರಬೇಕೆಂದು ತಾನು ವಿಶೇಷವಾಗಿ ಅಪೇಕ್ಷಿಸುವುದಾಗಿಯೂ, ಏಕೆಂದರೆ ಮಂತ್ರಗಾರ್ತಿಯರು ತನ್ನನ್ನು ಮುಟ್ಟಿಕೊಳ್ಳುವುದು ಹೆಚ್ಚಾಗಿ ರಾತ್ರಿಯ ಹೊತ್ತಿನಲ್ಲೇ ಎಂದೂ, ಆಗ ಜತೆಗೆ ಯಾರಾದರೂ ಇದ್ದರೆ ಒಳ್ಳೆಯದೆಂದೂ ಅವನು ಉತ್ತರ ಕೊಟ್ಟನು.

೩೫

ಬೆಳಗಿನ ಉಪಹಾರಕ್ಕೆ ಮುನ್ನ ಒಂದು ಗಂಟೆಯು ಕಾಲಾವಕಾಶ ಸಿಕ್ಕಿತು. ಆಗ ನಾವು ಮನೆಯನ್ನು ಬಿಟ್ಟು ಕಾಡಿಗೆ ನಡೆದೆವು. ಏಕೆಂದರೆ ಸುರಂಗವನ್ನು ಕೊರೆಯು ವುದು ಹೇಗೆ ಎಂಬುದನ್ನು ಕಂಡುಕೊಳ್ಳಲು ನಮಗೆ ಸ್ವಲ್ಪವೇ ಬೆಳಕು ಬೇಕಾಗು ತ್ತದೆ ಎಂದೂ, ಲಾಂದ್ರವಾದರೆ ಅತಿಯಾಗುವುದೆಂದೂ ನಾವು ಅದರಿಂದ ಅಪಾಯ ಕ್ಕೊಳಗಾಗುವೆವೆಂದೂ ಟಾಮ್ ಹೇಳಿದ. ನಮಗೆ ಅತ್ಯಗತ್ಯವಾಗಿದ್ದುದೆಂದರೆ 'ನರಿ-ಬೆಂಕಿ'ಎನ್ನುತ್ತಾರಲ್ಲ ಅದು; ಕೊಳೆಯುತ್ತಿರುವ ತುಕಡಿಗಳನ್ನು ಒಂದು ಕತ್ತಲೆಯ ಮೂಲೆಯಲ್ಲಿ ತಂದು ಅಡಕಿದರೆ ಹುಟ್ಟುವ ಒಂದು ಬಗೆಯಾದ ಮಂದಕಾಂತಿ. ನಾವು ಅವುಗಳನ್ನು ತೋಳಲ್ಲಿ ಹೊತ್ತು ತಂದು ಜೊಂಡುಗಳ ನಡುವೆ ಬಚ್ಚಿಟ್ಟು ಸ್ವಸ್ಥವಾಗಿ ಕುಳಿತೆವು. ಟಾಮ್ ಅದೇಕೋ ಅತೃಪ್ತಿಯಿಂದ ನುಡಿದ ;

"ಥೂ ಇದಕ್ಕೆ ! ಇಡೀ ಯೋಜನೆಯೇ ಅತ್ಯಂತ ಸುಲಭವಾಗಿ ಅಸಹ್ಯವಾಗಿದೆ. ಕಷ್ಟಮಯವಾದ ಯೋಜನೆಯೊಂದನ್ನು ಸಿದ್ಧಪಡಿಸುವುದೇ ಇದರಿಂದ ಬಲು ಕಷ್ಟ ವಾಗಿದೆ, ಮತ್ತು ಬರಿಸಿ ಕೆಡವಿ ಬಿಡೋಣವೆಂದರೆ ಇಲ್ಲಿ ಒಬ್ಬ ಕಾವಲುಗಾರನಿಗೂ ಗತಿಯಿಲ್ಲ—ಒಬ್ಬ ಕಾವಲುಗಾರನಾದರೂ ಇರಬೇಕಲ್ಲ. ನಿದ್ದೆ ಬರಿಸುವ ಮದ್ದು ಹಾಕೋಣ ವೆಂದರೆ ಒಂದು ನಾಯಿಕೂಡ ಇಲ್ಲಿಲ್ಲ, ಅಲ್ಲಿ ಹತ್ತಡಿಯುದ್ದದ ಸರಪಳಿಯಿಂದ ಒಂದು ಕಡೆ ಜಿಮ್ಮನ ಒಂದು ಕಾಲನ್ನೂ ಇನ್ನೊಂದುಕಡೆ ಮಂಚದ ಒಂದು ಕಾಲನ್ನು ಕಟ್ಟಿಹಾಕಿದ್ದಾರೆ. ಇಲ್ಲಿ ನೀವು ಮಾಡಬೇಕಾಗಿರುವುದಿಷ್ಟೇ ಕೆಲಸ; ಮಂಚದ ಒಂದು ಮೂಲೆಯನ್ನು ಮೇಲೆತ್ತಿ ಸರಪಳಿಯನ್ನು ಕಳಚುವುದು. ಸೈಲಾಸ್ ಚಿಕ್ಕಪ್ಪ ಎಲ್ಲರನ್ನೂ ನಂಬು ತ್ತಿದ್ದಾನೆ. ಆ ಪೆದ್ದ ನೀಗ್ರೋವಿಗೆ ಬೀಗದೆಸಳನ್ನು ಕಳಿಸಿಕೊಡುತ್ತಾನೆ. ಅವನು ಏನು ಮಾಡುತ್ತಾನೆ ಎಂಬುದನ್ನು ನೋಡಿಕೊಳ್ಳುವುದಕ್ಕೆ ಯಾರನ್ನೂ ಕಳಿಸುವುದಿಲ್ಲ. ಜಿಮ್ ಇಷ್ಟರೊಳಗಾಗಿಯೇ ಆ ಕಿಟಕಿಯ ರಂಧ್ರದಲ್ಲಿ ತೂರಿ ಹೋಗಬಹುದಿತ್ತು; ಆದರೆ ತನ್ನ ಕಾಲಿಗೆ ಹತ್ತಡಿಯುದ್ದದ ಸರಪಳಿಯೊಂದನ್ನು ಕಟ್ಟಿಕೊಂಡು ಪ್ರಯಾಣಮಾಡುವುದು ಮಾತ್ರ ನಿಷ್ಪ್ರಯೋಜಕವಾಗುತ್ತಿತ್ತು. ಹೋಗಲಿ ಅದು! ಹಕ್, ಆದರಂಥ ಅವಿವೇಕದ ಏರ್ಪಾಡನ್ನೇ ನಾನು ನೋಡಿಲ್ಲ. ನೀನು ಎಲ್ಲಾ ಕಷ್ಟಗಳನ್ನೂ ಸೃಷ್ಟಿಸಿಕೊಳ್ಳಬೇಕು. ನಾವೇನೂ ಮಾಡಲಾರೆವು ; ನಮ್ಮ ಕೈಗೆ ಸಿಕ್ಕಿದುದರಿಂದಲೇ ನಾವು ಕೈಲಾದಮಟ್ಟಿಗೂ ಉತ್ತಮವಾದುದನ್ನು ಮಾಡಬೇಕು. ಅದೇಂತಿರಲಿ.ಒಂದಂತೂ ಸ್ಪಷ್ಟವೇ :—ಕಷ್ಟ ಪರಂಪರೆಗಳ ಮತ್ತು ಅಪಾಯ ಪರಂಪರೆಗಳ ಮೂಲಕವಾಗಿಯೇ ನಾವು ಅವನನ್ನು ಬಿಡಿಸಿಕೊಳ್ಳುವುದರಲ್ಲಿ ಹೆಚ್ಚು ಗೌರವವುಂಟು; ನಿನ್ನ ಯೋಜನೆಯಲ್ಲಿ ಅಂಥಾದ್ದೊಂದೂ

ಇರಲಿಲ್ಲ ; ಅಂಥಾದ್ದನ್ನು ನಿನಗೆ ಒದಗಿಸಬೇಕಾದುದು ಯಾರ ಕರ್ತವ್ಯವಾಗಿತ್ತೋ ಅವರು ಅದನ್ನು ನಿನಗೆ ಒದಗಿಸಲೇ ಇಲ್ಲ; ಆದ್ದರಿಂದ ಎಲ್ಲವನ್ನೂ ನೀನು ಸ್ವಬುದ್ಧಿಯಿಂದಲೇ ರಚಿಸಿಕೊಳ್ಳಬೇಕಾಯಿತು. ಈಗ ಈ ಲಾಂದ್ರದ ವಿಷಯವನ್ನೇ ನೋಡು. ಸಂಶಯಾಸ್ಪದವಲ್ಲದ ವಾಸ್ತವಾಂಶಗಳಿಗೆ ಬದಲ್ಲಿ, ಲಾಂದ್ರವನ್ನಿಟ್ಟುಕೊಂಡರೆ ಅಪಾಯ ವೊದಗುವುದೆಂದು ನೀನು ಸುಮ್ಮನೆ ಒಪ್ಪಿಕೊಳ್ಳಲೇ ಬೇಕು, ಹಾಗೇನಲ್ಲ. ಒಂದು ವೇಳೆ ನಮಗೆ ಇಷ್ಟವಿದ್ದಲ್ಲಿ, ನಾವದನ್ನು ಇಡೀ ಪಂಜಿನ ಮೆರವಣಿಗೆಯೊಳಗೂ ಅದನ್ನು ಸಾಧಿಸಬಲ್ಲೆವು. ಈಗ ನಾವಿದನ್ನು ಯೋಚಿಸುತ್ತಿರುವಾಗಲೇ ನಮಗೆ ಸಿಕ್ಕುವ ಪ್ರಥಮಾವಕಾಶದಲ್ಲೇ ಗರಗಸವೊಂದನ್ನು ಸಂಪಾದಿಸಬೇಕು "

"ನಮಗೆ ಗರಗಸವೇಕೆ ಬೇಕು ?"

"ನಮಗೆ ಗರಗಸವೇಕೆ ಬೇಕೆ? ನಾವು ಜಿಮ್ಮನ ಮಂಚದ ಕಾಲನ್ನು ಕೊಯ್ದು ಹಾಕಬೇಡವೆ. ಸರಪಳಿಯನ್ನು ತೆಗೆದುಹಾಕುವುದಕ್ಕಾಗಿ ?"

"ಇದೇನು, ನೀನೀಗ ತಾನೆ ಹೇಳಿದೆ ಯಾರೂ ಕೂಡ ಮಂಚದಅಂಚನ್ನೆತ್ತಿ ಸರಪಣಿಯನ್ನು ಕಳಚಬಹುದು ಎಂದು."

"ಈ ಮಾತು ನಿನಗೆ ತಕ್ಕಂತೆಯೇ ಇಲ್ಲದಿದ್ದರೆ ಕೇಳು, ಹಕ್‌ಫಿನ್. ಯಾವ ಕೆಲಸವನ್ನು ಮಾಡಬೇಕಾದರೂ ನೀನು ಮಕ್ಕಳಶಾಲೆಯ ಅತಿಸರಳ ವಿಧಾನವನ್ನೇ ನೀನು ಸೂಚಿಸಬಲ್ಲೆ, ಇದೇಕೆ, ನೀನು ಯಾವ ಪುಸ್ತಕಗಳನ್ನೂ ಓದಿಯೇ ಇಲ್ಲವೇ— ಬಾರೆನ್‌ಟ್ರೆಂಕ್; ಇಲ್ಲವೇ, ಕ್ಯಾಸನೋವಾ; ಇಲ್ಲವೇ, ಬೆನ್‌ವೆನ್ಯುಟೊ ಚೆಲೀನಿ ಇಲ್ಲವೆ. ನಾಲ್ಕನೆಯ ಹೆನ್ರಿ; ಅಥವಾ ಈವರ್ಗದ ವೀರರ ಪುಸ್ತಕವೊಂದನ್ನಾದರೂ ಮುಂದುಕಿಯರಿಗೊಪ್ಪುವ ಆ ಮಾರ್ಗವನ್ನನುಸರಿಸಿ ಸೆರೆಯಾಳನ್ನು ಸ್ವತಂತ್ರಗೊಳಿಸಿರುವುದನ್ನು ಯಾರು ತಾನೆ ಕೇಳಿದ್ದಾರೆ? ಇಲ್ಲ; ಶ್ರೇಷ್ಠ ಪ್ರಮಾಣಪುರುಷರೆಲ್ಲರೂ ಅನುಸರಿಸಿದ ಮಾರ್ಗವೆಂದರೆ: ಮಂಚದ ಕಾಲನ್ನು ಎರಡಾಗಿ ಕೊಯ್ದುಹಾಕುವುದು, ಅದನ್ನು ಹಾಗೆಯೇ ಬಿಡುವುದು. ಮರದ ಹುಡಿಯನ್ನು —ಅದು ಯಾರಕೈಗೂ ಸಿಕ್ಕದಂತೆ ಮಾಡಲು ನುಂಗಿಬಿಡುವುದು, ಕೊಯ್ದುಬಳಿ ಕೊಂಚ ದೂಳನ್ನೂ ಕೊಬ್ಬನ್ನೂ ಸವರಿ ಎಂಥ ಚಾಣಾಕ್ಷನಾದ ಮನೆವಾರ್ತೆಯ ಅಧಿಕಾರಿಗೂ ಅದನ್ನು ಕೊಯ್ದಿರುವ ಗುರುತು ಸಿಕ್ಕದಂತೆ, ಮಂಚದ ಕಾಲು ಸರಿಯಾಗಿಯೇ ಇದೆ ಎಂದು ತೋರುವಂತೆ ಮಾಡಿಬಿಡುವುದು. ನೀವು ಹೊರಡಲು ಸಿದ್ಧವಾಗಿರುವ ರಾತ್ರಿಯೊದಗಿತೆಂದ ಕೂಡಲೇ ಮಂಚದ ಕಾಲಿಗೆ ಒಂದು ಒಡೆತವನ್ನು ಕೊಡುವುದು, ಅದು ಬಿದ್ದುಹೋಗುತ್ತದೆ ನಿಮ್ಮ ಸರಪಳಿಯನ್ನು ಕಳಚಿ ಹಾಕಿ; ನಿಮ್ಮ ಕೆಲಸ ಆಗಿ ಹೋಯಿತು. ಆಮೇಲೆ ಮಾಡಬೇಕಾದುದಿಷ್ಟೇ : ಕೋಟೆಯ ಗೋಡೆಗೆ ನಿಮ್ಮ ಹಗ್ಗದೇಣಿಯನ್ನು ಕಟ್ಟುವುದು, ಕದ್ದಿಳಿಯುವುದು ಕಂದುಕದಲ್ಲಿ ಬಿದ್ದು ಕಾಲುಮುರಿದುಕೊಳ್ಳುವುದು—ಏಕೆಂದರೆ, ನಿಮ್ಮ ಹಗ್ಗದೇಣಿ ಕಂದುಕದ ಎತ್ತರಕ್ಕಿಂತ ಹತ್ತೊಂಬತ್ತು ಅಡಿಯಷ್ಟು ಮೋಟಾಗಿರುತ್ತದೆ. ನೋಡಿ—

ಮತ್ತು ಅಲ್ಲಿ ನಿಮ್ಮ ಕಂದುರೆಗಳೂ ನಿಮ್ಮ ವಿಶ್ವಾಸಾರ್ಹರಾದ ಸಾಮಂತರೂ ಇರುತ್ತಾರೆ. ಅವರು ನಿಮ್ಮನ್ನು ಮೇಲೆತ್ತಿ ಕುದುರೆಯಮೇಲೆ ಕೂರಿಸುತ್ತಾರೆ, ಅಲ್ಲಿಂದ ನೀವು ಹಾರುತ್ತೀರಿ ನಿಮ್ಮೂರಾದ ಲಾಂಗ್ವ್ಯೂಡಾಕಿಗೋ, ಇಲ್ಲ, ನವಾರೆಗೋ, ಇಲ್ಲವೇ, ಇನ್ನೆಲ್ಲಿಗೋ, ಇದು ಬೆಡಗಿನ ಮಾರ್ಗ, ಹಕ್. ಆ ಕುಟೀರದ ಪಕ್ಕದಲ್ಲೊಂದು ಕಂದುಕವಿದ್ದರಾಗಿತ್ತು ; ಎನಿಸುತ್ತದೆ. ನಮ್ಮ 'ವಿಮೋಚನೆಯ ರಾತ್ರಿ'ಯಲ್ಲಿ ನಮಗೆ ಅವಕಾಶ ಸಿಕ್ಕಿದರೆ ನಾವು ಒಂದನ್ನು ಅಗೆದರಾಯಿತು."

ನಾನು ಹೇಳಿದೆ :

"ನಾವು ಕುಟೀರದ ಬುಡದಲ್ಲಿ ಸುರಂಗ ಹೊಡೆದು ಅವನನ್ನು ಎಳೆದುಕೊಳ್ಳುವಾಗ ನಮಗೆ ಕಂದುಕವೇಕೆ ?"

ನನ್ನ ಮಾತು ಅವನ ಕಿವಿಗೆ ಬೀಳಲಿಲ್ಲ. ಅವನು ನನ್ನನ್ನೂ, ಉಳಿದ ಪ್ರಪಂಚ ವನ್ನೂ ಮರೆತು ಬಿಟ್ಟಿದ್ದ. ತನ್ನ ಕೈಯಲ್ಲಿ ಗಲ್ಲವನ್ನಿಟ್ಟುಕೊಂಡು ಆಲೋಚಿಸುತ್ತಿದ. ಸ್ವಲ್ಪ ಹೊತ್ತಿಗೆ ನಿಟ್ಟುಸಿರು ಬಿಟ್ಟು ತಲೆಯಾಡಿಸಿದ : ಮತ್ತೆ ನಿಟ್ಟುಸಿರು, ಅವನು ಹೇಳಿದ :

"ಇಲ್ಲ, ಅದು ಅಗತ್ಯವಲ್ಲ—ಅದಕ್ಕೆ ಸಾಕಷ್ಟು ಅವಶ್ಯಕತೆಯಿಲ್ಲ."

"ಯಾವುದಕ್ಕೆ ?" ಎಂದೆ ನಾನು.

"ಜಿಮ್ಮನ ಕಾಲನ್ನು ಗರಗಸದಿಂದ ಕೊಯ್ದು ಹಾಕುವುದಕ್ಕೆ," ಎಂದನವನು.

"ಅಯ್ಯೋ ದೇವರೆ !" ಎಂದೆ ನಾನು : "ಇಲ್ಲ ; ಅದು ಬೇಕಾಗಿಯೇ ಇಲ್ಲ. ಏನಾಗಲಿ, ಜಿಮ್ಮನ ಕಾಲನ್ನು ನೀನು ಕೊಯ್ಯಲಪೇಕ್ಷಿಸುವುದಾದರೂ ಏಕೆ ?"

"ಶ್ರೇಷ್ಠ ಪ್ರಮಾಣ ಪುರುಷರಲ್ಲಿ ಕೆಲವರು ಅದನ್ನು ಮಾಡಿದ್ದಾರೆ. ಸರಪಳಿ ಯನ್ನು ಕಿತ್ತೆಸೆಯುವುದು ಅವರಿಗೆ ಸಾಧ್ಯವಾಗಲಿಲ್ಲ : ಆದ್ದರಿಂದ ಅವರ ಕೈಯನ್ನೇ ಕತ್ತರಿಸಿಕೊಂಡು ದಾಟಿಹೋದರು. ಅದಕ್ಕಿಂತ ಕಾಲಾಗಿದ್ದರೆ ಎಷ್ಟೋ ವಾಸಿಯಾಗಿತ್ತು. ಅದು ಹೋಗಲಿ ಬಿಡು. ಈ ಪ್ರಕರಣದಲ್ಲಂತೂ ಅದರ ಅಗತ್ಯತೆಯೇ ಇಲ್ಲ. ಮತ್ತು ಈ ಜಿಮ್ ನೀಗ್ರೊ ; ಅದಕ್ಕಿರುವ ಕಾರಣಗಳನ್ನಾಗಲೀ, ಯೂರೋಪಿನಲ್ಲಿ ಅದು ಹೇಗೆ ಪದ್ಧತಿಯಾಗಿದೆ ಎಂಬುದನ್ನಾಗಲೀ ಅವನು ತಿಳಿಯಲಾರ. ಆದ್ದರಿಂದ ಅದನ್ನಲ್ಲಿಗೇ ಬಿಡೋಣ. ಆದರೆ ಇನ್ನೊಂದು—ಅವನಿಗೆ ನೂಲೇಣಿ ಸಿಕ್ಕಬಹುದು : ನಮ್ಮ ಮಗ್ಗಲು–ಹಾಸುಗೆಗಳನ್ನೇ ಹರಿದು ನಾವು ಅವನಿಗೊಂದು ನೂಲೇಣಿಯನ್ನು ಒದಗಿಸಿದರಾಯಿತು, ಅದು ಅತಿ ಸುಲಭ.

"ಇದು ಯಾವ ಸೀಮೆಯ ಮಾತು, ಟಾಮ್ ಸಾಯರ್, ಜಿಮ್ ನೂಲೇಣಿ ಯನ್ನು ಕಟ್ಟಿಕೊಂಡು ಏನು ಮಾಡಬೇಕು ?"

"ಅವನಿಗೆ ಅದು ಕೆಲಸಕ್ಕೆ ಬರುತ್ತದೆ. ಏನು ಮಾತಯ್ಯ ನಿನ್ನದು : ಬದಲಾಗಿ

ನಿನಗೆ ಅದರ ವಿಷಯವೇ ತಿಳಿಯದು ಎಂದು ಬಿಡು, ಅವನಿಗೊಂದು ನೂಲೇಣಿ ಬೇಕೇ ಬೇಕು. ಅವರೆಲ್ಲರೂ ಅದನ್ನು ಇಟ್ಟುಕೊಂಡಿದ್ದರು."

"ಈ ಭೂಮಿಯ ಮೇಲೆ ಅದನ್ನಿಟ್ಟುಕೊಂಡು ಅವನು ಏನು ಮಾಡಬಲ್ಲ ?"

"ಅದನ್ನಿಟ್ಟುಕೊಂಡು ಏನು ಮಾಡುವುದೆ ? ಅವನು ಅದನ್ನು ತನ್ನ ಹಾಸಿಗೆಯಲ್ಲಿ ಬಚ್ಚಿಟ್ಟುಕೊಳ್ಳಬೇಕು. ಅವರೆಲ್ಲರೂ ಹಾಗೆಯೇ ಮಾಡಿದರು ; ಅವನೂ ಹಾಗೆಯೇ ಮಾಡಬೇಕು. ಹಕ್, ಕ್ರಮಬದ್ಧವಾದ ಏನನ್ನು ಮಾಡುವ ಅಪೇಕ್ಷೆಯೂ ನಿನಗಿಲ್ಲವೆಂದು ತೋರುತ್ತದೆ ; ಪ್ರತಿಸಲವೂ ನೀನು ಹೊಸ ಹೊಸತೇನನ್ನೊ ಪ್ರಾರಂಭಿಸಲಪೇಕ್ಷಿಸುತ್ತಿದ್ದಿಯೆ, ಒಂದು ವೇಳೆ ಅವನು ಅದನ್ನು ಹೇಗೂ ಉಪಯೋಗಿಸಲಿಲ್ಲ. ಎನ್ನು; ಆಗಲೂ ಅದು ಅವನ ಹಾಸುಗೆಯಲ್ಲೇ ಇರುವುದಿಲ್ಲವೆ,—ಅವನು ಹೊರಟು ಹೋದ ಮೇಲೆಯೂ ಒಂದು ಸುಳುಹಾಗಿ ? ಅವರೆಲ್ಲರೂ ಸುಳುಹುಗಳನ್ನಪೇಕ್ಷಿಸುತಾ,ರೆನ್ನುವುದು ನಿನಗೆ ಹೊಳೆದಿಲ್ಲವೆ ? ಅವರಿಗೆ ಅವು ಬೇಕೇ ಬೇಕು. ನೀನು ಅವರಿಗೆ ಏನನ್ನೂ ಬಿಟ್ಟುಹೋಗುವುದಿಲ್ಲವೆ ? ಅದು ತೀರಾ ಸಾಮಾನ್ಯ ಘಟನೆಯಾಗುತ್ತದೆ, ಅಲ್ಲವೆ ! ನಾನಂಥಾದ್ದನ್ನು ಕೇಳಿಯೇ ಇಲ್ಲ."

"ಸರಿ," ಎಂದೆ ನಾನು, "ನಿಯಮಾವಳಿಗಳಲ್ಲಿ ಅದು ಸೇರಿದ್ದರೆ, ಮತ್ತು ಅವನು ಅದನ್ನು ಇಟ್ಟುಕೊಂಡಿರುವುದು ಅನಿವಾರ್ಯವಾಗಿದ್ದರೆ, ಹಾಗೆಯೇ ಆಗಲಿ ; ಏಕೆಂದರೆ ಯಾವ ನಿಯಮಗಳನ್ನೂ ಮುರಿಯುವ ಇಷ್ಟ ನನಗಿಲ್ಲ ಆದರೆ ಒಂದು ಮಾತು ಟಾಮ್ ಸಾಯರ್—ಜಿಮ್ಮನಿಗೊಂದು ನೂಲೇಣಿಯನ್ನು ಮಾಡಿಕೊಡುವುದಾಗಿ ನಾವು ನಮ್ಮ ಮಗ್ಗಲು-ಹಾಸುಗೆಗಳನ್ನೇ ಹರಿದು ಹಾಕಿದರೆ ಸ್ಯಾಲಿ ಚಿಕ್ಕಮ್ಮ ನಮ್ಮನ್ನು ತರಾಟೆಗೆ ತೆಗೆದುಕೊಳ್ಳುವುದು ನೀನು ಈ ಭೂಮಿಯಲ್ಲಿ ಹುಟ್ಟಿದಷ್ಟೇ ನಿಶ್ಚಯ. ಮರದ ತೊಗಟೆಯಿಂದ ಮಾಡಿದ ಏಣಿಯಾದರೆ ಅದನ್ನೂ, ನೀನು ಹೇಳುವ ಬಟ್ಟೆಯ ಏಣಿಯಂತೆಯೇ, ಕರಿಗಡುಬಿನೊಳು ತುರುಕುವುದೂ, ಹಾಸುಗೆಯಲ್ಲಿ ಬಚ್ಚಿಡುವುದೂ ಸಾಧ್ಯವಲ್ಲದೆ, ಅದಕ್ಕೆ ಹಣ ವೆಚ್ಚವಾಗುವುದಿಲ್ಲ, ಪದಾರ್ಥ ನಷ್ಟವಾಗುವುದಿಲ್ಲ. ಏಣಿ ಯಾತರದ್ದಾದರೂ ಅವನಿಗೊಂದೇ."

"ಓಹ್, ವ್ಯರ್ಥ, ಹಕ್ ಫಿನ್, ನಾನು ನಿನ್ನಷ್ಟು ಅಜ್ಞಾನಿಯಾಗಿದ್ದರೆ ಸುಮ್ಮನಿರುತ್ತಿದ್ದೆ—ನಾನು ಮಾಡುತ್ತಿದ್ದುದೇ ಹಾಗೆ. ರಾಷ್ಟ್ರದ ಸೆರೆಯಾಳೊಬ್ಬನು ಮರದ ತೊಗಟೆಯ ಏಣಿಯ ನೆರವಿನಿಂದ ತಪ್ಪಿಸಿಕೊಂಡು ಹೋದದ್ದನ್ನು ಯಾರಾದರೂ ಕೇಳಿದ್ದಾರೆಯೇ ! ಅಷ್ಟೇ ಅಲ್ಲ, ಅದು ಶುದ್ಧಾಂಗವಾಗಿ ಹಾಸ್ಯಾಸ್ಪದವಾದದ್ದು."

"ಇನ್ನು, ಸರಿ ಹಾಗಾದರೆ, ಟಾಮ್ ನಿನ್ನ ದಾರಿಯನ್ನೇ ಅದು ಹಿಡಿಯಲಿ; ಆದರೆ ನನ್ನ ಮಾತಿಗೆ ನೀನು ಕಿವಿಗೊಡುವುದಾದರೆ, ಮನೆಯೊಳಗಿನ ಬಟ್ಟೆಗಳ ನಿಲುವಿನಿಂದ ನಾನು ಮಗ್ಗಲು-ಹಾಸುಗೆಯೊಂದನ್ನು ಎರವಲು ತರುವುದಕ್ಕೆ ನೀನು ಅನುಮತಿ ಕೊಡುತ್ತಿಯೆ."

ಅಷ್ಟು ಸಾಕು ಎಂದವನು. ಅವನಿಗೆ ಆದರಿಂದ ಇನ್ನೊಂದು ಸಂಚು ಹೊಳೆ ಯಿತು. ಅವನು ಹೇಳಿದ :

"ಜತೆಗೆ, ಒಂದು ಷರಟನ್ನೂ ಎರವಲು ತಂದು ಬಿಡು."

"ಷರಟಿನಿಂದ ನಮಗೆ ಏನಾಗಬೇಕಾಗಿದೆ ?"

"ಜಿಮ್ ಅದರ ಮೇಲೆ ತನ್ನ ದಿನಚರಿಯನ್ನು ಬರೆದಿಡಲು."

"ದಿನಚರಿ ನಿಮ್ಮಜ್ಜಿಯ ತಲೆ—ಜಿಮ್ಮನಿಗೆ ಬರವಣಿಗೆ ಬಾರದು."

"ಒಂದು ವೇಳೆ ಅವನಿಗೆ ಬರೆಯುವುದಕ್ಕೆ ಬರುವುದಿಲ್ಲ, ಎನ್ನು—ನಾವು ಅವನಿಗೆ ಒಂದು ಹಳೆಯ ಅಗ್ಗದ ಚಮಚವನ್ನೊ, ಹಳೆಯ ಕಬ್ಬಿಣದ ತಿರುಪು ಮೊಳೆಯನ್ನೋ ಲೇಖನಿಯಂತೆ ಮಾಡಿ ಕೊಟ್ಟರೆ ಅವನು ಆ ಷರಟಿನ ಮೇಲೆ ಕೆಲವು ಗುರುತು ಗಳನ್ನಾದರೂ ಮಾಡಬಲ್ಲ ಅಲ್ಲವೆ ?

"ಅಷ್ಟು ಕಷ್ಟವೇಕೆ ಟಾಮ್, ನಾವು ಬಾತುಕೋಳಿಯ ಗರಿಯೊಂದನ್ನು ಕಿತ್ತು ಅದಕ್ಕಿಂತ ಒಳ್ಳೆಯ ಲೇಖನಿಯನ್ನು, ಅದಕ್ಕಿಂತಲೂ ಬೇಗ ಅವನಿಗೆ ಒದಗಿಸಬಹುದು."

"ಅಯ್ಯೋ ದಡ್ಡ ! ಸೆರೆಯಾಳುಗಳು ಬಂದು ತಮ್ಮ ಗರಿಯನ್ನು ಕಿತ್ತುಕೊಳ್ಳಲೆಂದು ಕತ್ತಲೆ-ಕೋಣೆಯ ಸುತ್ತಲೂ ಬಾತುಕೋಳಿಗಳು ಓಡಾಡುತ್ತಿರುವುದಿಲ್ಲ. ಅವರು ತಮ್ಮ ಲೇಖನಿಗಳನ್ನು ಎಂದೂ ಮಾಡಿಕೊಳ್ಳುವುದು ಬಲು ಗಟ್ಟಿಯಾದ, ಬಲು ಒರಟಾದ, ಬಲು ಕಷ್ಟಸಾಧ್ಯವಾದ ಹಳೆಯ ಹಿತ್ತಾಳೆಯ ಮೋಂಬತ್ತಿ ಹಿಡಿಯಿಂದ, ಇಲ್ಲವೇ, ತಮ್ಮ ಕೈಗೆ ಸಿಕ್ಕಿದ ಅಂಥದೇ ಯಾವುದಾದರೂ ವಸ್ತುವಿನಿಂದ. ಅದನ್ನು ಒಂದು ಲೇಖನಿಯ ರೂಪಕ್ಕೆ ತಿರುಗಿಸಿಕೊಳ್ಳಬೇಕಾದರೆ ಅವರಿಗೆ–ಉಜ್ಜುವುದಕ್ಕೆ ಗೋಡೆಯೊಂದೇ ಉಪಕಾರಣವಾದುದರಿಂದ ವಾರಗಟ್ಟಲೆ ತಿಂಗಳು ಗಟ್ಟಲೆ ಹಿಡಿಯುತ್ತದೆ. ಬಾತು-ಕೋಳಿಯ ಗರಿಯನ್ನೂ, ಅದು ಸಿಕ್ಕಿದರೂ, ಅವರು ಉಪಯೋಗಿಸುವುದಿಲ್ಲ. ಅದು ಕ್ರಮಬದ್ಧವಾದುದಲ್ಲ."

"ಹಾಗಾದರೆ ನಾವು ಅವನಿಗೆ ಮಸಿಯನ್ನು ಮಾಡಿಕೊಡುವುದು ಏತರಿಂದ ?"

"ಹಲವರು ಅದನ್ನು ಕಬ್ಬಿಣದ ತುಕ್ಕಿಗೆ ಕಣ್ಣೀರು ಬೆರೆಸಿಮಾಡಿಕೊಳ್ಳುತ್ತಾರೆ ; ಹಾಗೆ ಮಾಡುವವರು ಸಾಮಾನ್ಯ ಜನರು ಮತ್ತು ಹೆಂಗಸರು ; ಆದರೆ ಶ್ರೇಷ್ಠ ಪ್ರಮಾಣ ಪುರುಷರು ತಮ್ಮ ರಕ್ತವನ್ನೇ ಉಪಯೋಗಿಸುತ್ತಾರೆ. ಜಿಮ್ ಅದನ್ನು ಮಾಡಬಲ್ಲ ; ತನ್ನನ್ನಿಲ್ಲಿ ಸೆರೆಯಿಟ್ಟಿದ್ದಾರೆಂಬುದನ್ನು ಪ್ರಪಂಚಕ್ಕೆ ತಿಳಿಸುವುದಕ್ಕಾಗಿ ಯಾವುದಾದರೂ ಸಣ್ಣ ಪುಟ್ಟ ಸಾಮಾನ್ಯ ಸಾಧಾರಣ ನಿಗೂಢ ಸಂದೇಶವನ್ನವನು ಕಳಿಸಬೇಕೆನಿಸಿದಾಗ, ಅವನು ಅದನ್ನು ತಗಡಿನ ತಟ್ಟೆಯ ಅಡಿಯಲ್ಲಿ ಮುಳ್ಳು ಚಮಚದಿಂದ ಬರೆದು ಕಿಟಿಕಿಯಾಚೆಗೆ ಎಸೆಯಬಲ್ಲನು. 'ಕಬ್ಬಿಣದ ಮೊಗವಾಡದವನು' ಯಾವಾಗಲೂ ಹಾಗೆಯೇ ಮಾಡುತ್ತಿದ್ದ ; ಅದು ಒಳ್ಳೆಯ ವಿಧಾನವೂ ಹೌದು."

"ಜಿಮ್ಮನ ಬಳಿ ತಗಡಿನ ತಟ್ಟೆಗಳಿಲ್ಲ. ಅವನಿಗೆ ಊಟಕ್ಕಿಡುವುದು ತಾಟಿನಲ್ಲಿ."

"ಅದೇನು ದೊಡ್ಡ ವಿಷಯವಲ್ಲ! ಅವನಿಗೆ ಕೆಲವನ್ನು ಒದಗಿಸಬಲ್ಲೆವು."

"ಅವನು ಬರೆದ ಎಸೆದ ತಟ್ಟೆಗಳನ್ನು ಯಾರೂ ಓದಲಾರರು."

"ಅದಕ್ಕೂ ಇದಕ್ಕೂ ಸಂಬಂಧವಿಲ್ಲ, ಹಕ್‌ಫಿನ್. ತಟ್ಟೆಯ ಮೇಲೆ ಬರೆಯುವುದು, ಆಚೆಗೆ ಎಸೆಯುವುದೂ-ಅಷ್ಟೇ ಅವನು ಮಾಡಬೇಕಾದದ್ದು. ಅದನ್ನು ನೀನು ಓದು ವುದು ಸಾಧ್ಯವಾಗಬೇಕಾಗಿಲ್ಲ. ಹತ್ತಕ್ಕೆ ಐದು ಸಲ, ನೀನು ಯಾವ ಸೆರೆಯಾಳು ಯಾವ ತಗಡಿನ ತಟ್ಟೆಯ ಮೇಲಾಗಲೀ ಇನ್ನು ಯಾವುದರ ಮೇಲಾಗಲೀ ಬರೆದಿರುವ ಯಾವುದನ್ನೂ ನೀನು ಓದಲಾಗುವುದಿಲ್ಲ.

"ಹಾಗಾದರೆ ತಟ್ಟೆಗಳನ್ನು ವ್ಯರ್ಥ ಮಾಡುವುದರ ಉದ್ದೇಶವಾದರೂ ಏನು?"

"ಅದು ಹಾಳಾಗಿ ಹೋಗಲಿ; ಅವು ಸೆರೆಯಾಳಿನ ತಟ್ಟೆಗಳೇ ಅಲ್ಲ."

"ಮತ್ತೆ ಯಾರದ್ದಾದರೂ ಆಗಿರುತ್ತವೆ, ಅಲ್ಲವೆ?"

"ಸರಿ, ಆಗಿವೆ ಎಂದಿಟ್ಟುಕೋ. ಅವು ಯಾರದ್ದಾದರೆ ಸೆರೆಯಾಳಿಗೇನು?"

ಅವನು ಅಲ್ಲಿಗೇ ಮಾತು ಮುರಿದನು, ಏಕೆಂದರೆ 'ಉಪಹಾರಕ್ಕೆ ಬನ್ನಿ' ಎನ್ನುವ ಕರೆ ನಮಗೆ ಕೇಳಿಬಂತು. ಆದ್ದರಿಂದ ನಾವು ಮನೆಗೆ ಓಡಿದೆವು.

ಬೆಳಗಿನ ಹೊತ್ತಿನಲ್ಲಿ ನಾನು ಯಾವಾಗಲೋ ಬಟ್ಟೆಗಳ-ನಿಲುವಿನಿಂದ ಒಂದು ದುಪ್ಪಟಿಯನ್ನೂ ಷರಟನ್ನೂ ಎರವಲು ತಂದೆನು. ನನಗೊಂದು ಹಳೆಯ ಚೀಲ ಕೈಗೆ ಸಿಕ್ಕಿತು; ಅವುಗಳನ್ನು ಅದರಲ್ಲಿ ತುರುಕಿದೆ. ನಾವು ಹೊರಗೆ ಹೋಗಿ 'ನರಿ-ಬೆಂಕಿ' ಯನ್ನು ತಂದೆವು, ಅದನ್ನೂ ಒಳಗೆ ಸೇರಿಸಿದೆವು, ನಾನು ಅದನ್ನು 'ಎರವಲು ತರುವುದು' ಎಂದಿದ್ದೇನೆ, ಏಕೆಂದರೆ ಅಪ್ಪ ಅದಕ್ಕೆ ಆ ಹೆಸರನ್ನೇ ಇಟ್ಟಿದ್ದನು. ಆದರೆ ಅದು 'ಎರವಲು ತರುವುದು' ಅಲ್ಲವೆಂದೂ, ಚೌರ್ಯವೆಂದೂ ಟಾಮ್ ಹೇಳಿದನು. ನಾವು ಸೆರೆಯಾಳುಗಳನ್ನು ಪ್ರತಿನಿಧಿಸುತ್ತಿದ್ದೇವೆಂದನು ಟಾಮ್, ಸೆರೆಯಾಳುಗಳು ತಮಗೆ ಲಭಿಸುವ ಯಾವ ವಸ್ತುವಾಗಲೀ, ಅದು ಲಭಿಸುತ್ತಿರುವ ತನಕ, ಎಲ್ಲಿಂದ ಬಂತೆ ಬುವನ್ನು ಗಮನಕ್ಕೆ ತರು ಕೊಳ್ಳುವುದಿಲ್ಲ; ಅದಕ್ಕಾಗಿ ಯಾರೂ ಅವರನ್ನು ದೂರುವುದಿಲ್ಲ ಬಂಧನದಿಂದ ಪಾರಾಗಲು ತಾನು ಅಪೇಕ್ಷಿಸುವ ಯಾವ ವಸ್ತುವನ್ನಾಗಲೀ ಸೆರೆಯಾಳಾದ ವನು ಕದಿಯುವುದು ಅಪರಾಧವಾಗುವುದಿಲ್ಲ, ಎಂದನು ಟಾಮ್: ಅದು ಅವನ ಹಕ್ಕು ಆದ್ದರಿಂದ ನಾವು ಸೆರೆಯಾಳೊಬ್ಬನನ್ನು ಪ್ರತಿನಿಧಿಸುತ್ತಿರುವ ತನಕ, ನಾವು ಸೆರೆಯಿಂದ ವಿಮುಕ್ತರಾಗುವ ಉದ್ದೇಶ ಸಾಧನೆಗಾಗಿ ನಮಗೆ ಎಷ್ಟಾದರೂ ಉಪಯೋಗಕ್ಕೆ ಬರುವ ಯಾವ ಪದಾರ್ಥವನ್ನಾದರೂ ಈ ಮನೆಯಿಂದ ಕದಿಯಲು ನಮಗೆ ಪೂರ್ಣಾಧಿಕಾರವಿತ್ತು. ನಾವು ಸೆರೆಯಾಳಾಗದಿದ್ದರೆ, ಅದು ಬೇರೆ ಎಂದೂ; ಸೆರೆಯಾಳಾದವನು ಕದಿಯುವು ದಾದರೆ ಅವನನ್ನು ಪರಮನೀಚನೂ ದುಷ್ಟನೂ ಆಗುತ್ತಾನೆಂದೂ ಟಾಮ್ ಹೇಳಿದ. ಆದ್ದರಿಂದ ಕೈಗೆ ಸಿಕ್ಕಿದ್ದೆಲ್ಲವನ್ನೂ ನಾವು ಕದಿಯಬಹುದೆಂದು ತೀರ್ಮಾನಿಸಿದೆವು.

ಆದರೂ ಅದಾದ ಒಂದು ದಿವಸದ ತರುವಾಯ ನಾನು ನೀಗ್ರೋಗಳ ವಿಭಾಗದಲ್ಲಿದ್ದ ಕಲ್ಲಂಗಡಿ ಹಣ್ಣೊಂದನ್ನು ಕದ್ದು ತಿಂದಾಗ ಅವನು ನನ್ನ ಮೇಲೆ ಅಸಾಧ್ಯವಾಗಿ ಗುಡುಗಾಡಿದನು. ನಾನು ಆ ನೀಗ್ರೋಗಳ ಬಳಿಗೆ ಹೋಗಿ, ಕಾರಣ ಹೇಳದೆಯೆ, ಅವರ ಕೈಗೊಂದು ಬೆಳ್ಳಿಯ ನಾಣ್ಯವನ್ನು ಕೊಟ್ಟು ಬರುವಂತೆ ಮಾಡಿದನು. ನಮಗೆ ನಮ್ಮ ಕೆಲಸಕ್ಕೆ ಅಗತ್ಯವಾದದ್ದನ್ನು ಮಾತ್ರ ಕದಿಯಬಹುದೆಂದು ತಾನು ಹೇಳಿದ ಮಾತಿನ ಅರ್ಥವೆಂದನು ಟಾಮ್. ಹಾಗಾದರೆ ನನಗೆ ಕಲ್ಲಂಗಡಿ ಹಣ್ಣು ಬೇಕಾಗಿತ್ತು, ಎಂದೆ ನಾನು. ಆದರೆ ಅದು ನಮ್ಮ ಬಂಧವಿಮೋಚನೆಗೆ ಬೇಕಾಗಿರಲಿಲ್ಲವಲ್ಲ, ಎಂದನವನು, ವ್ಯತ್ಯಾಸವದ್ದುದು ಅಲ್ಲೇ. ಆದರಲ್ಲಿ ಚೂರಿಯೊಂದನ್ನು ಬಚ್ಚಿಟ್ಟು, ಮನೆವಾರ್ತೆಯ ಅಧಿಕಾರಿಯನ್ನು ಕೊಲ್ಲುವುದಕ್ಕಾಗಿ, ಅದನ್ನು ಜಿಮ್ಮನಿಗೆ ಕದ್ದು ಸಾಗಿಸುವುದು ನನ್ನ ಅಪೇಕ್ಷೆಯಾಗಿದ್ದಿದ್ದರೆ ಆಗ ಮಾತ್ರ ಕಲ್ಲಂಗಡಿಹಣ್ಣಿನ ಕಳುವು ಸಮರ್ಥನೀಯವಾಗಿತೆಂದು ಅವನು ಹೇಳಿದನು. ನಾನು ಈ ಮಾತನ್ನು ಅಲ್ಲಿಗೇ ಮುಗಿಸಿದೆ; ಆದರೂ ನನಗೆ ಕಲ್ಲಂಗಡಿ-ಹಣ್ಣೊಂದನ್ನು ಕದಿಯುವ ಅವಕಾಶ ಸಿಕ್ಕಿದಾಗಲೆಲ್ಲ ನಾನು ಈ ಅತಿ ಸೂಕ್ಷ್ಮ ವ್ಯತ್ಯಾಸಗಳನ್ನು ಆಲೋಚಿಸುತ್ತ ಕುಳಿತುಕೊಳ್ಳಬೇಕಾಗಿ ಬಂದರೆ ನಾನು ಸೆರೆಯಾಳೊಬ್ಬನನ್ನು ಪ್ರತಿನಿಧಿಸುವುದರಲ್ಲಿ ನನಗೆ ಯಾವ ಪುರುಷಾರ್ಥವೂ ಕಂಡುಬರಲಿಲ್ಲ.

ಸರಿ, ನಾನು ಹೇಳುತ್ತಿದ್ದ ಹಾಗೆ, ಆ ದಿನ ಬೆಳಗಾಗ ಎಲ್ಲರೂ ತಮ್ಮ ತಮ್ಮ ಕೆಲಸ ಕಾರ್ಯಗಳಿಗೆ ತೊಡಗುವತನಕ ಮತ್ತು ಅಂಗಳ ಸುತ್ತಮುತ್ತಲೂ ಯಾರೂ ಕಣ್ಣಿಗೆ ಬೀಳದಿರುವಂತೆ ಆಗುವತನಕ ನಾವು ಸಮಯ ಕಾಯುತ್ತಿದ್ದೆವು, ಟಾಮ್ ಬೇಲಿಯ ಪಕ್ಕದ ವಸಾರೆಗೆ ಚೀಲ ಹಿಡಿದುಕೊಂಡು ಹೋದನು. ನಾನು ಸ್ವಲ್ಪ ಹಿಂದೆ ಕಾವಲು ನಿಂತಿದ್ದೆ. ಆಮೇಲೆ ಅವನು ಈಚೆಗೆ ಬಂದ: ನಾವಿಬ್ಬರೂ ದಿಮ್ಮಿರಾಶಿಯ ಬಳಿಗೆ ಹೋಗಿ ಕುಳಿತು ಮಾತಾಡಿಕೊಳ್ಳತೊಡಗಿದವು. ಅವನು ಹೇಳಿದ:

"ಎಲ್ಲವೂ ಈಗ ಸರಿಹೋಯಿತು. ಹತಾರುಗಳ ವಿನಾ ; ಅದು ಸುಲಭ."

"ಹತಾರುಗಳು ?" ಎಂದೆ ನಾನು.

"ಹೌದು"

"ಹತಾರುಗಳು ಏಕೆ ?"

"ಏಕೆ ? ಅಗೆಯುವುದಕ್ಕೆ. ನಾವು ಅವನನ್ನು ತುಂಡುಮಾಡಿ ಈಚೆಗೆ ಎಳೆದು ಹಾಕಲು" ಹೊರಟಿವೆ, ಹಾಗೇನು ?

"ಆ ನೀಗ್ರೋವನ್ನು ಈಚೆಗೆ ಎಳೆದು ಹಾಕುವುದಕ್ಕೆ ಅಲ್ಲಿರುವ ಹಳೆಯ ಮುರಿದ ಪಿಕಾಸಿಗಳೂ ಇತರ ಸಾಮಾನುಗಳೂ ಸಾಕಾಗುವುದಿಲ್ಲವೆ ?"

ಎಂದೆ ನಾನು.

ಯಾರಿಗಾದರೂ ಅಳುಬರಿಸುವ ಕನಿಕರದ ನೋಟವನ್ನು ಬೀರುತ್ತಾ ಅವನು ನನ್ನ ಕಡೆಗೆ ತಿರುಗಿ ಹೇಳಿದ :

"ಹಕ್‌ಫಿನ್ ಸೆರೆಯಾಳಾಗಿರುವವನು ತನ್ನ ಬಂಧವಿಮೋಚನೆಗಾಗಿ ತನ್ನ ಕತ್ತಲೆಯ ಕೋಣೆಯ ಒಡಲಿನ ಮೇಲೆ ಪಿಕಾಸಿಗಳನ್ನೂ, ಗುದ್ದಲಿಗಳನ್ನೂ, ಇತರ ಆಧುನಿಕ ಉಪಕರಣಗಳನ್ನೂ ಇಟ್ಟುಕೊಂಡಿರುವುದನ್ನು ನೀನು ಎಂದಾದರೂ ಕೇಳಿದ್ದೀಯಾ ? ನಿನ್ನಲ್ಲಿ ಎಷ್ಟಾದರೂ ಯುಕ್ತಾಯುಕ್ತ ಪರಿಜ್ಞಾನವಿದ್ದಲ್ಲಿ—ನಾನೀಗ ನಿನ್ನನ್ನು ಕೇಳ ಬೇಕಾಗಿದೆ : ವೀರಪಟ್ಟಕ್ಕೆ ಕೂರಬೇಕಾಗಿರುವ ಅವನಿಗೆ ಆ ಉಪಕರಣಗಳು ಒದಗಿಸುವ ದೃಶ್ಯವೆಂಥಾದ್ದು ? ಹಾಗಾದರೆ ಬೀಗದೆಸಳನ್ನೂ ಅವನ ಕೈಗೆ ಹಾಕಿ, ಅವರು ಕೈತೊಳೆದುಕೊಳ್ಳಬಹುದಲ್ಲ, ಅವನೊಂದು ವೇಳೆ ರಾಜನಾಗಿದ್ದರೆ ಕೂಡ ಅವರು ಪಿಕಾಸಿಗಳನ್ನೂ ಗುದ್ದಲಿಗಳನ್ನೂ ಅವನಿಗೆ ಒದಗಿಸುತ್ತಿರಲಿಲ್ಲ."

"ಬಳಿಕ ಗುದ್ದಲಿಗಳೂ ಪಿಕಾಸಿಗಳೂ ನಮಗೆ ಬೇಡವಾದಲ್ಲಿ ಬೇಕಾದದ್ದೇನು ?" ಎಂದೆ ನಾನು.

"ಒಂದೆರಡು ಚೂರಿಗಳು"

"ಆ ಕುಟೀರದ ತಳದಿಂದ ಅಡಿಪಾಯಗಳನ್ನು ತೋಡುವುದಕ್ಕೆ ?"

"ಹೌದು"

"ಹಾಳಾಯ್ತು ! ಅದು ಅರ್ಥಹೀನವಾದದು, ಟಾಮ್"

"ಎಷ್ಟೇ ಅರ್ಥಹೀನವಾದರೂ ಅದೊಂದು ಸರಿಯಾದ ಮಾರ್ಗ—ಅದೊಂದೇ ಶಾಸ್ತ್ರೋಕ್ತ ಮಾರ್ಗ. ನಾನು ಕೇಳಿದ ಮಟ್ಟಿಗೆ ಬೇರೆ ಮಾರ್ಗವೇ ಇಲ್ಲ. ಈ ವಿಷಯದಲ್ಲಿ ವಿವರವೊದಗಿಸುವ ಅನೇಕಾನೇಕ ಗ್ರಂಥಗಳನ್ನು ನಾನು ಓದಿದ್ದೇನೆ. ಚೂರಿಯಿಂದ ಅಗೆಯುವುದೇ ಪದ್ಧತಿ. ಅಗೆಯುವುದು ಮಣ್ಣನ್ನಲ್ಲ, ಗೊತ್ತಾಯಿತೆ ; ಸಾಮಾನ್ಯವಾಗಿ ಇಡೀ ಬಂಡೆಯನ್ನು. ಈ ಕೆಲಸಕ್ಕೆ ಅವರು ಲೆಕ್ಕವಿಲ್ಲದಷ್ಟು ವಾರಗಳ ಕಾಲ ನಿರಂತರವಾಗಿ ದುಡಿಯಬೇಕಾಗುತ್ತದೆ. ಮಾರ್ಸೆಲಿಸ್ ಬಂದರಿನಲ್ಲಿರುವ ಡೀಫ್ ಕೋಟೆಯ ತಳದ ಸುರಂಗದಲ್ಲಿದ್ದ ಸೆರೆಯಾಳುಗಳಲ್ಲಿ ಒಬ್ಬನಾಗಿದ್ದ ಆತನ ವಿಷಯವನ್ನೇ ನೋಡು, ಸುರಂಗ ಕೊರೆದು ಅವನು ಹೊರಗೆ ಬಂದದ್ದು ಅದೇ ರೀತಿಯಲ್ಲಿ ಎಂದು ಹೇಳುತ್ತೇನೆ. ಅವನು ಅದಕ್ಕಾಗಿ ಎಷ್ಟು ಕಾಲ ದುಡಿದಿರಬೇಕು ಗೊತ್ತೆ ?"

"ನನಗೆ ತಿಳಿಯದು,"

"ಸ್ವಲ್ಪ ಯೋಚನೆಮಾಡು,"

"ನನಗೆ ತಿಳಿಯದು, ಒಂದೂವರೆ ತಿಂಗಳು."

"ಮೂವತ್ತೇಳು ವರುಷ—ಅವನು ಚೀಣದಲ್ಲಿ ಕಾಣಿಸಿಕೊಂಡ ಆ ಜಾತಿ ಅದು ಈ ಕೋಟೆಯ ಬುಡವೂ ಇಡೀ ಬಂಡೆಯಾಗಿದ್ದರೆ ಎಷ್ಟು ಚೆನ್ನಾಗಿತ್ತು !"

"ಜಿಮ್ಮನಿಗೆ ಚೀಣದಲ್ಲಿ ಯಾರ ಪರಿಚಯವೂ ಇಲ್ಲ."

"ಅದಕ್ಕೂ ಇದಕ್ಕೂ ಸಂಬಂಧವೇನು? ಆ ಮನುಷ್ಯನಿಗೂ ಅದಿರಲಿಲ್ಲ, ನಿನ್ನ

...ಮನಸ್ಸು ಯಾವಾಗಲೂ ಚಿಲ್ಲರೆ ವಿಷಯದ ಕಡೆಗೇ ಹೊರಳುತ್ತದೆ; ನೀನು ಮೂಲ ವಿಷಯವನ್ನೇಕೆ ಭದ್ರವಾಗಿ ಹಿಡಿಯುವುದಿಲ್ಲ ?"

"ಹಾಗೆಯೇ ಆಗಲಿ—ಅವನು ಎಲ್ಲಿ ಈಚೆಗೆ ಬಂದರೂ ನನಗೆ ಒಂದೇ, ಅಂತೂ ಅವನು ಈಚೆಗೆ ಬಂದ, ಜಿಮ್ಮನ ಭಾವನೆಯೂ ಹೀಗೆಯೇ ಎಂದು ನನ್ನೆಣಿಕೆ. ಆದರೂ ಒಂದು ಮಾತು—ಚೂರಿಯೊಂದರ ನೆರವಿನಿಂದ ಸುರಂಗವನ್ನು ತೋಡಿಕೊಳ್ಳುವುದಕ್ಕೆ-ಜಿಮ್ ತುಂಬಾ ಮುದುಕನಾಗಿದ್ದಾನೆ. ಅವನು ಬದುಕುವುದಿಲ್ಲ ಅಲ್ಲಿಯತನಕ."

"ಅವನೂ ಬದುಕಿರುತ್ತಾನೆ, ಅದೂ ಆಗುತ್ತದೆ. ಮಣ್ಣಿನ ತಳಹದಿಯಲ್ಲಿ ಸುರಂಗವನ್ನು ತೋಡಲು ಮೂವತ್ತೇಳು ವರುಷಗಳಕಾಲ ಹಿಡಿಯುವುದೆಂದು ನೀನು ಎಣಿಸಿಲ್ಲ, ಅಲ್ಲವೆ ?"

"ಅದಕ್ಕೆ ಎಷ್ಟು ಕಾಲ ಹಿಡಿಯುತ್ತದೆ, ಟಾಮ್"

"ನಮಗೆ ಅಗತ್ಯವಾಗಿ ಬೇಕಾದಷ್ಟು ಕಾಲವನ್ನು ಕೂಡ ನಾವು ತೆಗೆದುಕೊಳ್ಳುವುದು ಅಪಾಯಕರವಾದೀತು; ಏಕೆಂದರೆ ಸೈಲಾಸ್ ಚಿಕ್ಕಪ್ಪನಿಗೆ ನ್ಯೂ ಆರ್ಲಿಯನ್ಸಿಂದ ಇಲ್ಲಿಗೆ ವರ್ತಮಾನ ಬರುವುದಕ್ಕೆ ಹೆಚ್ಚು ಕಾಲ ಹಿಡಿಸುವುದಿಲ್ಲವೆಂದು ತೋರುತ್ತದೆ. ಆಮೇಲೆ ಅವನಿಡುವ ಮುಂದಿನ ಹೆಜ್ಜೆಯೆಂದರೆ: ಜಿಮ್ಮನ ಬಗೆಗೆ ಪ್ರಕಟನೆ ಹೊರಡಿಸುವುದು, ಇಲ್ಲವೇ, ಆ ಬಗೆಯ ಏನಾದರೊಂದನ್ನು ಮಾಡುವುದು. ಆದ್ದರಿಂದ ಜಿಮ್ಮನನ್ನು ಬಂಧನದಿಂದ ಬಿಡಿಸಲು ನಮಗೆ ಅಗತ್ಯವಾಗಿ ಬೇಕಾದಷ್ಟು ಕಾಲವನ್ನು ಕೂಡ ನಾವು ತೆಗೆದುಕೊಳ್ಳುವುದು ಅಪಾಯಕರವಾದೀತು, ನ್ಯಾಯವಾಗಿ, ನಮಗೆ ಇದಕ್ಕೆ ಒಂದೆರಡುವರ್ಷಗಳಾದರೂ ಬೇಕೆಂದು ನನಗೆ ತೋರುತ್ತದೆ. ಆದರೆ ನಾವು ಅಲ್ಲಿಯ ತನಕ ಎಳೆಯುವಂತಿಲ್ಲ. ಎಲ್ಲವೂ ಇಷ್ಟು ಅನಿಶ್ಚಿತವಾಗಿರುವಾಗ ನನ್ನ ಸಲಹೆ ಏನೆಂದರೆ, ಆದಷ್ಟುಬೇಗ ನಾವು ಸುರಂಗವನ್ನು ತೋಡಿಯೇಬಿಡಬೇಕೆಂಬುದು : ಆಮೇಲೆ ಬೇಕಾದರೆ ನಾವು ಅಂದುಕೊಳ್ಳಬಹುದು, ನಾವಿದಕ್ಕಾಗಿ ಮೂವತ್ತೇಳು ವರ್ಷಗಳಕಾಲ ದುಡಿದೆವೆಂದು. ಬಳಿಕ ಮೊಟ್ಟಮೊದಲ ಅಪಾಯ ಸೂಚನೆ ಕಂಡುಬಂದಕೂಡಲೇ ನಾವು ಅವನನ್ನು ಅಪಹರಿಸಿಕೊಂಡು ದೌಡಾಯಿಸಬಲ್ಲೆವು. ಹೌದು ಅದೀಗ ಉತ್ತಮ ಮಾರ್ಗವೆಂದು ನನ್ನೆಣಿಕೆ."

"ಈಗ, ಅದು ವಿವೇಕಯುತವಾದ ಸಲಹೆ ಎನ್ನಬಹುದು" ಎಂದೆ ನಾನು. "ನಾವು ಹಾಗೆ ಅಂದುಕೊಳ್ಳುವುದರಿಂದ ನಮಗೇನೂ ನಷ್ಟವಿಲ್ಲ; ಅಂದುಕೊಂಡರೆ ನಷ್ಟವೂ ಇಲ್ಲ; ಅದರಿಂದ ಯಾವ ಉದ್ದೇಶವಾದರೂ ಕೈಗೂಡುವುದಾದರೆ, ನಾವಿದಕ್ಕಾಗಿ ನೂರೈವತ್ತು ವರ್ಷಗಳಕಾಲ ದುಡಿದೆವು ಅಂದುಕೊಳ್ಳುವುದಕ್ಕೆ ಕೂಡ ನಾನು ಹಿಂದೆಗೆಯುವುದಿಲ್ಲ. ಕೈಹಾಕಿದಮೇಲೆ, ನನಗೆ ಅದು ಎಷ್ಟೂ ಶ್ರಮದಾಯಕವಾಗುವುದಿಲ್ಲ. ಆದ್ದರಿಂದ ನಾನು ಮೆಲ್ಲಗೆ ಹೋಗಿ ಒಂದೆರಡು ಚೂರಿಗಳನ್ನು ಕದ್ದು ತರುತ್ತೇನೆ."

“ಕದ್ದು ತಾ ಮೂರನ್ನು” ಎಂದವನು; “ಗರಗಸವನ್ನು ತಯಾರಿಸುವುದಕ್ಕೆ ನಮ ಗೊಂದು ಬೇಕು.”

“ಟಾಮ್, ಅದು ಕ್ರಮಹೀನವು ಧರ್ಮ ಬಾಹಿರವೂ ಆಗುವುದಿಲ್ಲವೆಂದರೆ ಒಂದ ಸಲಹೆಯನ್ನು ಕೊಡುತ್ತೇನೆ; ಆ ಶಕ್ಕಸಿನ ಹಿಂದೆ ಮರದ ತಡಿಕೆಯ ಕೆಳಗೆ ಎಲ್ಲೋ ಒಂದು ಹಳೆಯ ತುಕ್ಕು ಹಿಡಿದ ಗರಗಸದ ಅಲಗು ಬಿದ್ದಿದೆ.”

ಅವನಿಗೆ ಒಂದಿಷ್ಟೂ ಆಯಾಸವೂ ಉತ್ಸಾಹಭಂಗವೂ ಆಗದಂತೆ ಕಂಡುಬಂತು ಅವನು ಹೇಳಿದ :

“ಹಕ್, ನಿನಗೆ ಈಗ ಏನನ್ನಾದರೂ ಕಲಿಸತೊಡಗುವುದು ನಿಷ್ಫಲವಾಗುತ್ತದೆ. ಓಡಿಹೋಗು, ಕದ್ದು ತಾ ಚೂರಿಗಳನ್ನು–ಮೂರನ್ನು.” ನಾನು ಹಾಗೆಯೇ ಮಾಡಿದೆ.

## ೩೬

ಆ ರಾತ್ರಿ ಎಲ್ಲರೂ ನಿದ್ದೆ ಮಾಡುತ್ತಿದ್ದಾರೆಂಬುದು ನಮಗೆ ಗೊತ್ತಾದ ಕೂಡಲೇ ನಾವು ‘ಮಿಂಚುಕಂಬಿ’ಯನ್ನನುಸರಿಸಿ ಕೆಳಗಿಳಿದೆವು. ಪಡಸಾಲೆಗೆ ಹೋಗಿ ಸೇರಿಕೊಂಡು ಕದಹಾಕಿಕೊಂಡೆವು; ನಮ್ಮ ‘ನರಿ-ಬೆಂಕಿ’ಯ ಹೊರೆಯನ್ನು ಈಚೆಗೆ ಹಾಕಿ ನಮ್ಮ ಕೆಲಸಕ್ಕೆ ತೊಡಗಿದೆವು. ಅದಕ್ಕೂ ಕುಟೀರದ ಅಡಿ-ದಿಮ್ಮಿಯ ನಡು-ಭಾಗಕ್ಕೂ ನಡುವೆ ಇದ್ದ ಐದಾರು ಅಡಿಗಳ ಅಂತರದಲ್ಲಿ ನಮಗಿದ್ದ ಅಡ್ಡಿ-ಅಡಚಣೆಗಳೆಲ್ಲವನ್ನೂ ತೊಡೆದು ಹಾಕಿದೆವು. ನಾವೀಗ ನೇರ ಜಿಮ್ಮನ ಮಂಚದ ಹಿಂದೆಯೇ ಇರುವುದಾಗಿಯೂ, ನಮ್ಮ ಕಾರ್ಯ ಯಶಸ್ವಿಯಾದಮೇಲೆ ಕುಟೀರದೊಳಗೆ ನಿಂತು ನೋಡುವ ಯಾರಿಗೂ ಅಲ್ಲೊಂದು ಸುರಂಗವಿರುವುದು ಗೊತ್ತಾಗುವುದಿಲ್ಲವೆಂದೂ—ಇದಕ್ಕೆ ಕಾರಣ ಜಿಮ್ಮನ ಹೊದಿಕೆ ನೆಲ ತನಕ ಇಳಿಯಬಿದ್ದಿದ್ದು ಸುರಂಗವನ್ನು ನೋಡಬೇಕಾದಲ್ಲಿ ಅದನ್ನು ಮೇಲಕ್ಕೆತ್ತಬೇಕಾಗ ವುದೆಂದೂ ಟಾಮ್ ಹೇಳಿದನು. ಸರಿ, ನಾವು ನಡು-ರಾತ್ರಿಯವರೆಗೂ ಚೂರಿಯಿಂದ ನೆಲವನ್ನು ಅಗೆದದ್ದೂ ಅಗೆದದ್ದೇ ಆಮೇಲೆ ನಮಗೆ ಪೂರಾ ಸುಸ್ತಾಯಿತು; ನಮ ಕೈಗಳಲ್ಲಿ ಬೊಬ್ಬೆಗಳೆದ್ದವು; ಆದರೂ ನಮ್ಮನ್ನು ನೋಡಿದ್ದರೆ ನಾವು ಯಾವ ಕೆಲಸ ನ್ನಾಗಲೀ ಮಾಡಿದಂತೆ ನಿಮಗೆ ಕಾಣುತ್ತಿರಲಿಲ್ಲ ಕಡೆಗೆ ನಾನು ಹೇಳಿದೆ.

“ಇದು ಮೂವತ್ತೇಳೆ ವರುಷದ ಕೆಲಸವಲ್ಲ ಟಾಮ್ ಸಾಯರ್; ಮೂವತ್ತೆಂಟ ವರುಷದ ಕೆಲಸ.”

ಅವನು ಸದ್ದೆತ್ತಲಿಲ್ಲ. ನಿಟ್ಟುಸಿರೆಳೆದ, ಅಗೆತನವನ್ನು ನಿಲ್ಲಿಸಿದ; ಆಮೇಲೆ ಅವನು ಕ್ಷಣಕಾಲ ಯೋಚನೆಮಾಡುತ್ತಿದ್ದಂತೆ ನನಗೆ ತೋರಿತು. ಬಳಿಕ ನುಡಿದ :

"ಇದು ಪ್ರಯೋಜನವಿಲ್ಲ, ಹಕ್, ಇದು ವೃಥಾ ಶ್ರಮ. ನಾವೇ ಸೆರೆಯಾಳಾಗಿದ್ದರೇನೋ ಇದು ಫಲಿಸಬಹುದಿತ್ತು; ಏಕೆಂದರೆ ಆಗ ನಮಗೆ ಬಯಸಿದಷ್ಟು ವರುಷಗಳ ಅವಧಿ ಸಿಕ್ಕುತ್ತಿತ್ತು; ಅವಸರವೇ ಇರುತ್ತಿರಲಿಲ್ಲ; ಪ್ರತಿದಿನವೂ ಕಾವಲಿನವರು ಸರದಿ ಬದಲಾಯಿಸುವ ವೇಳೆಯಲ್ಲಿ ಮಾತ್ರ ನಮಗೆ ಅಗೆಯುವ ಅವಕಾಶ ಸಿಕ್ಕುತ್ತಿತ್ತು, ಆದ್ದರಿಂದ ನಮ್ಮ ಕೈಗಳಲ್ಲಿ ಬೊಬ್ಬೆ ಏಳುತ್ತಿರಲಿಲ್ಲ; ನಾವು ಆ ಕೆಲಸವನ್ನು ಅನೇಕ ವರ್ಷಗಳವರೆಗೆ ಮುಂಬರಿಸಬಹುದಿತ್ತು, ಅದನ್ನು ಕ್ರಮವಾಗಿ ವಿಧ್ಯುಕ್ತವಾಗಿ ಪೂರೈಸಬಹುದಿತ್ತು. ಆದರೆ ನಾವು ಈಗ ನಿಧಾನಿಸುವಂತಿಲ್ಲ; ತ್ವರೆಮಾಡಬೇಕು; ಒಂದು ಕ್ಷಣವನ್ನೂ ಪೋಲುಮಾಡುವಂತಿಲ್ಲ. ಹೀಗೆಯೇ ನಾವು ಇನ್ನೊಂದು ರಾತ್ರಿ ಕಳೆಯುವುದಾದರೆ, ನಮ್ಮ ಕೈಗಳನ್ನು ಸರಿಪಡಿಸಿಕೊಳ್ಳುವುದಕ್ಕೆ ಇನ್ನೊಂದು ವಾರದ ತನಕ ಹೆಣಗಬೇಕಾದೀತು—ಅದಕ್ಕೆ ಮುಂಚೆ ಚೂರಿಯನ್ನು ಮುಟ್ಟುವುದಕ್ಕೇ ಆಗುವುದಿಲ್ಲ."

"ಹಾಗಾದರೆ, ಈಗ ನಾವೇನು ಮಾಡಬೇಕು ಟಾಮ್ ?"

"ನಾನು ನಿನಗೆ ಹೇಳಬಹುದು. ಅದು ನ್ಯಾಯವೂ ಅಲ್ಲ, ನೀತಿಯೂ ಅಲ್ಲ; ನಾನದನ್ನು ಹೇಳುವುದಕ್ಕೇ ಇಷ್ಟಪಡುವುದಿಲ್ಲ. ಆದರೂ ಇರುವುದೊಂದೇ ದಾರಿ. ಪಿಕಾಸಿಗಳನ್ನು ಪಯೋಗಿಸಿ ಸುರಂಗಕೊರೆದು ಅವನನ್ನು ಈಚೆಗೆ ಎಳೆದುಹಾಕಬೇಕು; ಬಳಿಕ ಅದನ್ನು ಕೊರೆದದ್ದು ಚೂರಿಗಳಿಂದ ಎಂದು ತೋರ್ಪಡಿಸಿಕೊಳ್ಳಬೇಕು."

"ಈಗ ನೀನು ಬಾಯಿಬಿಚ್ಚುತ್ತಾ ಇದ್ದಿಯೆ!" ಎಂದೆ ನಾನು ; "ಮೆಲ್ಲಮೆಲ್ಲಗೆ ನಿನ್ನ ತಲೆ ನೆಟ್ಟಗಾಗುತ್ತ ಬಂದಿದೆ, ಟಾಮ್ ಸಾಯರ್," ಎಂದೆ ನಾನು. ಬೇಕಾಗಿರುವುದು ಪಿಕಾಸಿ—ನೀತಿಯೋ, ಅನೀತಿಯೋ; ನನ್ನ ಮಟ್ಟಿಗೆ. ನೀತಿಯಪ್ರಶ್ನೆಯನ್ನೇ ಲಕ್ಷ್ಯಮಾಡುವುದಿಲ್ಲ. ಒಬ್ಬ ನೀಗ್ರೋವನ್ನಾಗಲೀ ಒಂದು ಕಲ್ಲಂಗಡಿ ಹಣ್ಣನ್ನಾಗಲೀ ಒಂದು ಭಾನುವಾರದ ಶಾಲೆಯ ಪುಸ್ತಕವನ್ನಾಗಲೀ ಕದಿಯುವಾಗ, ನನಗೆ ಕೆಲಸ ಸರಾಗಿ ನಡೆಯುವುದು ಮುಖ್ಯವೇ ಹೊರತು; ಕಾರ್ಯವಿಧಾನವಲ್ಲ. ನನಗೆ ಬೇಕಾದದ್ದು, ನನ್ನ ನೀಗ್ರೋ! ಇಲ್ಲವೇ, ನನಗೆ ಬೇಕಾದದ್ದು, ನನ್ನ ಕಲ್ಲಂಗಡಿ ಹಣ್ಣು; ಇಲ್ಲವೇ ನನಗೆ ಬೇಕಾದದ್ದು, ನನ್ನ ಭಾನುವಾರದ ಶಾಲೆಯ ಪುಸ್ತಕ; ಮತ್ತು ಪಿಕಾಸಿಯೇ ನನ್ನ ಕೈಗೆ ಹದವಾಗಿ ಸಿಕ್ಕಿದರೆ ನಾನದನ್ನೇ ಉಪಯೋಗಿಸಿ ಆ ನೀಗ್ರೋವನ್ನಾಗಲೀ, ಆ ಕಲ್ಲಂಗಡಿ ಹಣ್ಣನ್ನಾಗಲೀ, ಆ ಭಾನುವಾರದ ಶಾಲೆಯ ಪುಸ್ತಕವನ್ನಾಗಲೀ ಅಪಹರಿಸುತ್ತೇನೆ. ಪ್ರಮಾಣಪುರುಷರು ಆ ವಿಷಯದಲ್ಲಿ ಯಾವಭಾವನೆಯುಳ್ಳವರಾಗಿದ್ದರೆ ನನಗೇನು!

"ಸರಿ," ಎಂದನವನು, "ಇಂಥಾ ಒಂದು ಪ್ರಸಂಗದಲ್ಲಿ ಮಾತ್ರ ಪಿಕಾಸಿಗಳನ್ನು ಬಳಸುವುದಕ್ಕೂ, ಹಾಗೆಯೇ ತೋರ್ಪಡಿಸಿಕೊಳ್ಳುವುದಕ್ಕೂ ಸಾಕಷ್ಟು ಸಮಾಧಾನ

ಕೊಡಬಹುದು; ಹಾಗಿರದಿದ್ದರೆ, ನಾನದಕ್ಕೆ ಒಪ್ಪಿಗೆ ಕೊಡುತ್ತಿರಲಿಲ್ಲ, ನಾನಿಲ್ಲಿ ನಿಂತು ನಿಯಮೋಲ್ಲಂಘನೆಯನ್ನು ನೋಡಿಯೂ ಸುಮ್ಮನಿರುತ್ತಿರಲಿಲ್ಲ—ಏಕೆಂದರೆ ನ್ಯಾಯವಾದದ್ದು ನ್ಯಾಯವೇ, ಅನ್ಯಾಯವಾದದ್ದು ಅನ್ಯಾಯವೇ; ತಾನು ಅಜ್ಞಾನಿಯಲ್ಲದಿರುವಾಗ ಹೆಚ್ಚು ತಿಳಿದವನಾಗಿರುವಾಗ ಯಾವ ಮನುಷ್ಯನೂ ಅನ್ಯಾಯದ ಕೆಲಸವನ್ನು ಮಾಡಬಾರದು. ನಿನಗೆ ಹೆಚ್ಚಿನ ತಿಳಿವಳಿಕೆ ಇಲ್ಲದಿರುವುದರಿಂದ, ಯಾವ ತೋರಿಕೆಯೂ ಇಲ್ಲದೆ, ನೀನು ಪಿಕಾಸಿಯನ್ನು ಪಯೋಗಿಸಿ ಜಿಮ್ಮನನ್ನು ಬಿಡುಗಡೆ ಮಾಡುವುದು ನಿನಗೆ ಸರಿಹೋದೀತು; ಆದರೆ ಅದು ನನಗೆ ಧರ್ಮವಲ್ಲ, ಏಕೆಂದರೆ ನನಗೆ ಹೆಚ್ಚಿನ ತಿಳಿವಳಿಕೆಯುಂಟು. ಎಲ್ಲಿ, ಒಂದು ಚೂರಿಯನ್ನು ಕೊಡು."

ಅವನ ಚೂರಿ ಅವನ ಕೈಯಲ್ಲೇ ಇತ್ತು; ಆದರೆ ನನ್ನದನ್ನೂ ಅವನಿಗೆ ಕೊಟ್ಟೆನು,

ಅವನು ಅದನ್ನು ಬೀಸಿ ಎಸೆದು ಹೇಳಿದ.

"ನನಗೆ ಒಂದು ಚೂರಿಯನ್ನು ಕೊಡು."

ಏನುಮಾಡಬೇಕೆಂಬುದೇ ನನಗೆ ತೋರಲಿಲ್ಲ—ಆದರೂ ಯೋಚನೆಮಾಡಿದೆ, ನಾನು ಅಲ್ಲಿದ್ದ ಹಳೆಯ ಉಪಕರಣಗಳ ರಾಶಿಯಲ್ಲಿ ಕೆದಕಿನೋಡಿದೆ, ಒಂದು ಪಿಕಾಸಿಯನ್ನೆತ್ತಿ ತಂದು ಅವನಿಗೆ ಕೊಟ್ಟೆ. ಅದನ್ನು ಹಿಡಿದುಕೊಂಡು ಅವನು ಕೆಲಸಕ್ಕೆ ತೊಡಗಿದ, ಒಂದು ಮಾತನ್ನಾಗಲೀ ಆಡಿರಬೇಕಲ್ಲ !

ಅವನು ಯಾವಾಗಲೂ ಅಷ್ಟು ನಿಷ್ಠಾವಂತ. ತತ್ತ್ವಪೂರ್ಣ. ಹಾಗೆಯೇ ನನಗೊಂದು ಸಲಿಕೆ ಸಿಕ್ಕಿತು. ಆಮೇಲೆ ನಾವಿಬ್ಬರೂ ಸೇರಿ ಸುತ್ತಲೂ ಅಗೆದೆವು, ಎತ್ತಿಹಾಕಿದೆವು, ರಾದ್ಧಾಂತ ಮಾಡಿದೆವು. ನಾವು ಅರ್ಧಗಂಟೆಯ ತನಕ ಹಾಗೆಯೇ ಮಾಡಿದೆವು; ಅಲ್ಲಿಗೆ ನಮ್ಮ ಮಿತಿಮೀರಿಹೋಗಿತ್ತು: ಆದರೂ ಅಷ್ಟರಲ್ಲಿಯೇ ನಾವು, ನಮ್ಮ ಕೆಲಸಕ್ಕೆ ಸಾಕ್ಷಿಯಾಗಿ, ದೊಡ್ಡ ರಂಧ್ರವೊಂದನ್ನು ಕೊರೆದಿದ್ದೆವು. ನಾನು ಮೆಟ್ಟಿಲು ಹತ್ತಿ ಮುಪಡಿಯನ್ನು ಸೇರಿಕೊಂಡಮೇಲೆ ಕಿಟಕಿಯಲ್ಲಿ ತಲೆಹಾಕಿ ನೋಡಿದೆ, ಟಾಮ್ ಮಿಂಚು-ಕಂಬಿಯನ್ನು ಹಿಡಿದು ಮೇಲಕ್ಕೆ ಹತ್ತಿಬರಲು ಅಸಾಧ್ಯವಾಗಿ ಹೆಣಗಾಡುತ್ತಿದ್ದ: ಆದರೂ ಅವನಿಗೆ ಹಾಗೆ ಬರುವುದು ಸಾಧ್ಯವಾಗಲಿಲ್ಲ. ಅವನ ಕೈತುಂಬ ಗಾಯವಾಗಿತ್ತು. ಕಡೆಗೆ ಅವನು ಹೇಳಿದ:

"ಇದು ಪ್ರಯೋಜನವಿಲ್ಲ, ಸಾಧ್ಯವೂ ಅಲ್ಲ. ನಾನು ಏನು ಮಾಡಬೇಕೋ, ಹೇಳು. ನಿನಗೆ ಯಾವ ಉಪಾಯವೂ ಹೊಳೆಯುವುದಿಲ್ಲವೆ?"

"ಆಗಲಿ," ಎಂದೆ ನಾನು, "ಆದರೂ ಇದು ಕ್ರಮಬದ್ಧವಲ್ಲವೆಂದು ನನಗೆ ತೋರುತ್ತದೆ. ಮೆಟ್ಟಿಲನ್ನೇ ಹತ್ತಿ ಬಾ. ಅದನ್ನೇ ಮಿಂಚುಕಂಬಿ ಎಂದು ಭಾವಿಸಿದರಾಯಿತು!"

ಅವನು ಹಾಗೆಯೇ ಮಾಡಿದ.

ಮರುದಿವಸ ಟಾಮ್, ಜಿಮ್ಮನಿಗಾಗಿ ಕೆಲವು ಲೇಖನಿಗಳನ್ನು ತಯಾರಿಸುವುದ ಕ್ಕಾಗಿ ಒಂದು ಹಳೆಯ ಹಗ್ಗದ ಚಮಚವನ್ನೂ, ಒಂದು ಹಿತ್ತಾಳೆಯ ಮೋಂಬತ್ತಿ-ಹಿಡಿ ಯನ್ನೂ, ಆರು ಚರ್ಬಿಯ ಮೊಂಬತ್ತಿಗಳನ್ನೂ ಮನೆಯಿಂದ ಕದ್ದು ತಂದನು: ನಾನು ನೀಗ್ರೋ ಗುಡಿಸಲುಗಳ ಹತ್ತಿರದಲ್ಲೇ ಸುಳಿದಾಡುತ್ತಾ ಸಮಯಕಾದು ಮೂರಂತಗಡಿನ ತಟ್ಟೆಗಳನ್ನು ಎಗರಿಸಿದೆ, ಅಷ್ಟೇ ಸಾಲದೆಂದನು ಟಾಮ್; ಜಿಮ್ ಹೊರಗೆಸೆದ ತಟ್ಟೆ ಗಳನ್ನು ಯಾರೂ ನೋಡುವುದಿಲ್ಲವೆಂದೂ, ಏಕೆಂದರೆ ಅವು ಕಿಟಕಿ-ರಂಧ್ರದ ಕೆಳಗೇ ಇರುವ ವಿಷಲತೆಗಳ ಮತ್ತು ಹಳದಿ ಹೂಗಿಡಗಳ ನಡುವೆ ಬೀಳುವುದೆಂದೂ-ಆದ್ದರಿಂದ ಆಮೇಲೆ ನಾವು ಅವುಗಳನ್ನೆತ್ತಿಕೊಂಡು ಬಂದು ಮತ್ತೆ ಅವನಿಗೆ ಕೊಡಬಹುದೆಂದೂ, ಅವನು ಅವುಗಳನ್ನು ಮತ್ತೆ ಮತ್ತೆ ಉಪಯೋಗಿಸಬಹುದೆಂದೂ ನಾನು ಹೇಳಿದೆ. ಆಗ ಟಾಮನಿಗೆ ಸಮಾಧಾನವಾಯಿತು, ಅವನು ಹೇಳಿದ :

"ಈಗ ಜಿಮ್ಮನಿಗೆ ಈ ಪದಾರ್ಥಗಳನ್ನು ಹೇಗೆ ತಲಪಿಸುವುದೆಂಬುದೇ ನಾವು ಯೋಚನೆ ಮಾಡಬೇಕಾದ ವಿಷಯ."

"ನಾವು ಸುರಂಗವನ್ನು ಹೊಡೆದಾದ ಮೇಲೆ, ನೀನು ಅದರ ಮೂಲಕವೇ ಹೋಗಿ ಕೊಡು." ಎಂದೆ ನಾನು.

ಅವನು ಸುಮ್ಮನೆ ತಿರಸ್ಕಾರ ಭಾವದಿಂದ ನೋಡಿದ ಮತ್ತು ಇಂಥಾ ಹುಚ್ಚು ಕಲ್ಪನೆಯನ್ನು ಯಾರೂ ಕೇಳಿಲ್ಲವೆಂದೋ ಏನೋ ಗೊಣಗಿದ; ಆಮೇಲೆ ಆಲೋಚನೆ ಮಾಡತೊಡಗಿದ. ಆಮೇಲಾಮೇಲೆ ತನಗೆ ಎರಡೋ ಮೂರೋ ಮಾರ್ಗಗಳು ಹೊಳೆದಿರುವುದಾಗಿಯೂ, ಆದರೂ ಅವುಗಳಲ್ಲಿ ಯಾವುದನ್ನು ಸ್ವೀಕರಿಸಬೇಕೆಂಬುದನ್ನು ಈಗಲೇ ನಿರ್ಧರಿಸುವ ಅಗತ್ಯವಿಲ್ಲವೆಂದೂ ಅವನು ಹೇಳಿದ. ಆದರೆ ನಾವು ಮೊದಲು ಜಿಮ್ಮನಿಗೆ ವಿಷಯಗಳನ್ನು ತಿಳಿಸಬೇಕೆಂದ.

ಆ ರಾತ್ರಿ ಹತ್ತುಗಂಟೆಯಾದ ಮೇಲೆ ನಾವು ಮಿಂಚು-ಕಂಬಿಯನ್ನು ಅನುಸರಿಸಿ ಇಳಿದು ಹೋದೆವು; ನಮ್ಮೊಂದಿಗೆ ಒಂದು ಮೊಂಬತ್ತಿಯನ್ನು ತಂದಿದ್ದೆವು. ಕುಟೀರದ ಕಿಟಕಿ ರಂಧ್ರದ ಕೆಳಗೆ ಕಿವಿಗೊಟ್ಟು ಕೇಳಿದೆವು, ಜಿಮ್ ಗೊರಕೆ ಹೊಡೆಯುತ್ತಿದ್ದ. ಮೋಂಬತ್ತಿಯ ಬೆಳಕು ಒಳಗೆ ಬೀಳುವಂತೆ ಮಾಡಿದೆವು, ಅದರಿಂದಲೂ ಅವನಿಗೆ ಎಚ್ಚರ ವಾಗಲಿಲ್ಲ, ಆದ್ದರಿಂದ ನಾವು ಒಳಗೆ ನುಗ್ಗಿದೆವು, ಪಿಕಾಸಿ ಸಲಿಗೆಗಳನ್ನು ಹಿಡಿದು ಸುಮಾರು ಎರಡುವರೆ ಗಂಟೆಗಳಲ್ಲಿ ನಾವು ಮಾಡಬೇಕೆಂದಿದ್ದ ಕೆಲಸ ಮುಗಿಯಿತು. ಜಿಮ್ಮನ ಮಂಚದ ಕೆಳಗೆ ತೂರಿ ಕುಟೀರವನ್ನು ಹೊಕ್ಕೆವು. ಮೋಂಬತ್ತಿಯನ್ನು ಹುಡುಕಿ ಹಚ್ಚಿದೆವು, ಜಿಮ್ಮನ ಒಳಿ ನಿಂತು ನೋಡಿದೆವು. ಅವನು ಸ್ವಸ್ಥಚಿತ್ತನಾಗಿಯೂ ಆರೋಗ್ಯವಾಗಿಯೂ ಇರುವುದನ್ನು ಕಂಡೆವು. ಅವನನ್ನು ಮೆಲ್ಲಗೆ ಮೆತ್ತಗೆ ಎಬ್ಬಿಸಿದೆವು. ನಮ್ಮನ್ನು ಕಂಡ ಸಂತೋಷಕ್ಕೆ ಅವನಿಗೆ ಅಳುವೇ ಬಂದಿತು. ನಮ್ಮನ್ನು ತನಗೆ ತೋರಿತೋರಿದ ಮುದ್ದು ಹೆಸರುಗಳನ್ನಿಟ್ಟು ಕರೆದನು. ನಾವು ಅವನಿ ಗೊಂದು ಉಳಿಯನ್ನು ಹುಡುಕಿ ತಂದು ಕೊಡಬೇಕೆಂದೂ, ತಾನು ಅದರಿಂದ ತನ್ನ

ಕಾಲಿನ ಸರಪಳಿಯನ್ನು ಕೂಡಲೇ ಕಡಿದುಹಾಕಿ ಸ್ವಲ್ಪವೂ ತಡಮಾಡದೆ ಓಡಿಹೋಗು ವಂತೆ ಮಾಡಬೇಕೆಂದೂ ಅವನು ಅಭಿಪ್ರಾಯಪಟ್ಟನು. ಆದರೆ ಟಾಮ್ ಅದು ಕ್ರಮಬದ್ಧವಲ್ಲವೆಂದು ವಿವರಿಸಿ, ಅವನ ಪಕ್ಕದಲ್ಲೇ ಕುಳಿತು ನಮ್ಮ ಹಂಚಿಕೆಗಳೆಲ್ಲವನ್ನೂ ಮತ್ತು ಅಪಾಯಸೂಚನೆ ಕಂಡುಬಂದು ಕೂಡಲೇ ಹೇಗೆ ನಾವು ಅವುಗಳನ್ನು ಯಾವ ಕ್ಷಣದಲ್ಲಾದರೂ ಮಾರ್ಪಡಿಸಿಕೊಳ್ಳಬಹುದೆಂಬುದನ್ನೂ ಅವನಿಗೆ ತಿಳಿಸಿದನು. ನಾವು ಅವನನ್ನು ಸೆರೆಬಿಡಿಸುವುದು ಖಂಡಿತವಾದ್ದರಿಂದ ಅವನು ಯಾವುದಕ್ಕೂ ಹೆದರಬೇಕಾಗಿಲ್ಲವೆಂದು ಭರವಸೆ ನೀಡಿದನು. ಆಗ ಜಿಮ್ ಹಾಗೇ ಆಗಲಿ ಎಂದನು. ನಾವು ಅಲ್ಲೇ ಕುಳಿತು ಹಿಂದೆ ನಡೆದುದೆಲ್ಲವನ್ನೂ ನೆನೆಯುತ್ತ ಮಾತಾಡುತ್ತಿದ್ದೆವು. ಟಾಮ್ ಹಲವಾರು ಪ್ರಶ್ನೆಗಳನ್ನು ಕೇಳಿದ. ಸೈಲಾಸ್ ಚಿಕ್ಕಪ್ಪ ದಿನಕ್ಕೋ ಎರಡು ದಿನಗಳಿಗೋ ಒಮ್ಮೆ ಅಲ್ಲಿಗೆ ಬಂದು ತನ್ನೊಂದಿಗೆ ಪ್ರಾರ್ಥನೆ ಸಲ್ಲಿಸುತ್ತಿರುವುದಾಗಿಯೂ, ಸಾಲಿ ಚಿಕ್ಕಮ್ಮನೂ ಆಗಾಗ ಬಂದು ತನ್ನ ಯೋಗಕ್ಷೇಮವನ್ನೂ ಊಟಉಪಹಾರಗಳ ವಿಷಯವನ್ನೂ ತಿಳಿದುಕೊಳ್ಳುತ್ತಿದ್ದಾಳೆಂದೂ, ಅವರಿಬ್ಬರೂ ತಮ್ಮ ಕೈಲಾದ ಮಟ್ಟಿಗೆ ದಯಾಪರರಾಗಿರುವರೆಂದೂ ಜಿಮ್ ಹೇಳಿದಾಗ, ಟಾಮ್ ಅವನ ಕಡೆಗೆ ತಿರುಗಿ, ನುಡಿದ :

"ಈಗ ನನಗೆ ಅದನ್ನು ಹೇಗೆ ಮಾಡಬೇಕೆನ್ನುವುದು ತಿಳಿಯಿತು. ನಾನು ನಿನಗೆ ಕೆಲವು ಸಾಮಾನನ್ನು ಅವರ ಕೈಲಿ ಕಳಿಸುತ್ತೇನೆ."

ನಾನು ಹೇಳಿದೆ, : "ಅಂಥಾದ್ದೇನನ್ನೂ ಮಾಡಬೇಡ; ಅದು ಅವಿವೇಕದ ಪರಮಾವಧಿ" : ಅವನು ನನ್ನ ಕಡೆಗೆ ಗಮನವನ್ನೇ ಕೊಡಲಿಲ್ಲ; ತನ್ನ ಮಾತನ್ನೇ ಬೆಳಸಿದನು. ತನ್ನ ಯೋಜನೆಗಳನ್ನು ಸಿದ್ಧಪಡಿಸಿಕೊಂಡ ಮೇಲೆ ಅವನು ಮಾಡುತ್ತಿದ್ದುದೇ ಹಾಗೆ.

ಅವನಿಗೆ ಊಟವನ್ನು ತಂದುಕೊಡುತ್ತಿದ್ದ ನೀಗ್ರೋ ನಾಟನ ಕೈಯಲ್ಲಿ ನೂಲೇಣಿಯ ಹೂರಣ ಗಡುಬನ್ನೂ, ಇತರ ದೊಡ್ಡಳತೆಯ ಉಪಕರಣಗಳನ್ನೂ ನಾವು ಗುಟ್ಟಾಗಿ ಕಳಿಸಿಕೊಡಬೇಕಾಗುವುದೆಂದೂ, ಅವುಗಳಿಗಾಗಿ ಅವನು ಕಾಯುತ್ತಿರಬೇಕೆಂದೂ ಅವು ತಲುಪಿದರೆ ದಂಗಾಗಬಾರದೆಂದೂ, ನಾಟನ ಎದುರಿಗೆ ಅವುಗಳನ್ನು ಬಿಚ್ಚಬಾರದೆಂದೂ ಟಾಮ್ ಹೇಳಿದ. ಇಷ್ಟಲ್ಲದೆ ಸಣ್ಣಪುಟ್ಟವುಗಳನ್ನು ಚಿಕ್ಕಪ್ಪನ ಅಂಗಿಯ ಜೇಬುಗಳಲ್ಲಿ ನಾವು ಹಾಕಿರುವೆವೆಂದೂ, ಅವುಗಳನ್ನು ಅವನು ಕದಿಯಬೇಕೆಂದೂ ; ಮತ್ತು ಇನ್ನು ಕೆಲವನ್ನು ಚಿಕ್ಕಮ್ಮನ ಮುಂಕವಚದ ದಾರಗಳಿಗೆ ಕಟ್ಟಿಯೋ ಇಲ್ಲವೇ ಸಮಯ ಸಿಕ್ಕಿದರೆ ಆದರ ಜೇಬುಗಳಲ್ಲಿ ಹಾಕಿಯೋ ಕಳಿಸುತ್ತೇವೆಂದೂ ಹೇಳಿ, ಅವು ಯಾವ ಯಾವ ಸಾಮಾನುಗಳೆಂಬುದನ್ನೂ ಅವುಗಳನ್ನು ಏಕೆ ಕಳಿಸುವೆವೆಂಬುದನ್ನೂ ತಿಳಿಸಿದನು. ಕಡೆಯಲ್ಲಿ ತನ್ನ ರಕ್ತದಿಂದಲೇ ತನ್ನ ಪರಟಿನ ಮೇಲೆ ದಿನಚರಿಯನ್ನು ಬರೆಯಬೇಕು ಇತ್ಯಾದಿ ಸಲಹೆಗಳನ್ನು ಕೊಟ್ಟನು. ಒಂದು ಮಾತಿನಲ್ಲಿ ಟಾಮ್ ಅವನಿಗೆ ಸಮಸ್ತವನ್ನೂ ತಿಳಿಸಿದನು. ಜಿಮ್ಮನಿಗಂತೂ ಅವುಗಳಲ್ಲಿ ಹೆಚ್ಚುಪಾಲು ಅರ್ಥವೇ

ಆಗಲಿಲ್ಲ; ಆದರೆ ನಾವು ಬಿಳಿಯರೆಂದೂ, ತನಗಿಂತ ಬುದ್ಧಿವಂತರೆಂದೂ ಒಪ್ಪಿಕೊಂಡನು. ಟಾಮ್ ಹೇಳಿದ ಹಾಗೆಯೇ ತಾನು ಎಲ್ಲವನ್ನೂ ಮಾಡುವುದಾಗಿ ತಿಳಿಸಿದನು, ಸಮಾಧಾನಗೊಂಡನು.

ಜಿಮ್ಮನ ಬಳಿ ಬೇಕಾದಷ್ಟು ಪಯಿರಿನ ಕಡ್ಡಿಯ ಕೊಳವೆಗಳೂ ತಂಬಾಕೂ ಇದ್ದವು; ಆದ್ದರಿಂದ ನಾವು ಬಲು ಮೋಜಿನಿಂದ ಕಾಲಕಳೆದೆವು. ಬಳಿಕ ಸುಂಗದ ಮಾರ್ಗವಾಗಿ ತೆವಳಿಕೊಂಡು ಈಚೆಗೆ ಬಂದೆವು; ಮನೆಗೆ ಬಂದು ಮಲಗಿದೆವು. ನಮ್ಮ ಕೈಗಳು ನಿಸ್ಸತ್ತ್ವವಾದಂತೆ ಕಂಡು ಬರುತ್ತಿದ್ದವು. ಟಾಮ್ ಹಿಗ್ಗಿಹೋಗಿದ್ದ. ತನ್ನ ಜೀವಮಾನದಲ್ಲೇ ತಾನು ಇದರಂಥಾ ಸಂತೋಷಪ್ರದವೂ, ಬುದ್ಧಿಗಮ್ಯವೂ ಆದ ವಿನೋದವನ್ನೇ ಕಂಡವನಲ್ಲ ಎಂದನು. ಒಂದು ವೇಳೆ ತನ್ನಿಂದ ಅದು ಸಾಧ್ಯವಾದರೆ, ನಾವು ನಮ್ಮ ಜೀವಮಾನ ಪರ್ಯಂತ ಹೀಗೆಯೇ ಇದ್ದುಬಿಟ್ಟು ಜಿಮ್ಮನ ಬಿಡುಗಡೆಯ ಹೊಣೆಗಾರಿಕೆಯನ್ನೇ ನಮ್ಮ ಮಕ್ಕಳ ಪಾಲಿಗೆ ಬಿಡಬಹುದು ಎಂದನು. ಜಿಮ್ ಈ ಪರಿಸ್ಥಿತಿಗೆ ಒಗ್ಗಿದಂತೆಲ್ಲ ಅವನು ಹೀಗಿರುವುದಕ್ಕೇ ಹೆಚ್ಚು ಹೆಚ್ಚಾಗಿ ಇಷ್ಟ ಇಷ್ಟಪಡುತ್ತಾನೆಂದು ತನ್ನೆಣಿಕೆ ಎಂದನು ಹಾಗೆಯೇ ಅದನ್ನು ಎಂಬತ್ತು ವರುಷಗಳವರೆಗೂ ಎಳೆಯಬಹುದೆಂದೂ, ಅದು ಇತಿಹಾಸದಲ್ಲೇ ಬಲು ಒಳ್ಳೆಯ ಕಾಲವೆನಿಸಿಕೊಳ್ಳುವುದೆಂದೂ ಹೇಳಿದ. ಇಷ್ಟರ ಜತೆಗೆ, ಅದಕ್ಕೆ ಕಾರಣರಾದ ನಮ್ಮೆಲ್ಲರಿಗೂ ಅದು ಲೋಕಪ್ರಸಿದ್ಧಿಯನ್ನು ತಂದುಕೊಡುತ್ತದೆ.

ಬೆಳಗಾಗ ನಾವು ದಿಮ್ಮಿರಾಶಿಯ ಬಳಿಗೆ ಹೋದೆವು; ಹಿತ್ತಾಳೆಯ ಮೋಂಬತ್ತಿಯ ಹಿಡಿಯನ್ನು ಅನುಕೂಲವಾದ ಅಳತೆಗಳಿಗೆ ಕೊಯ್ದೆವು; ಟಾಮ್ ಅವುಗಳನ್ನೂ, ಅಗ್ಗದ ಚಮಚವನ್ನೂ ತನ್ನ ಜೇಬಿನಲ್ಲಿ ಹಾಕಿಕೊಂಡ. ಬಳಿಕ ನೀಗ್ರೋ ವಠಾರದ ಬಳಿಗೆ ಹೋದೆವು. ನಾನು ನ್ಯಾಟನ ಗಮನವನ್ನು ಬೇರೆ ಕಡೆಗೆ ಸೆಳೆದು, ಅವನೊಂದಿಗೆ ಮಾತನಾಡುತ್ತಿದ್ದಾಗ ಟಾಮ್ ಜಿಮ್ಮನಿಗಾಗಿ ಹೋಗುತ್ತಿದ್ದ ತಾಟಿನ ರೊಟ್ಟಿಯೊಳಕ್ಕೆ ಮೋಂಬತ್ತಿಯನ್ನು ತುರುಕಿದನು; ಮುಂದಾಗುವುದನ್ನು ನೋಡುವ ಉದ್ದೇಶದಿಂದ ನಾವು ನ್ಯಾಟನೊಂದಿಗೆ ಹೋದೆವು; ಅದು ಭೇಷಾಗಿಯೇ ನಡೆಯಿತು. ಜಿಮ್ ರೊಟ್ಟಿಯನ್ನು ಕಡಿದಾಗ ಅವನ ಹಲ್ಲಷ್ಟೂ ಪುಡಿಪುಡಿಯಾಗುವುದರಲ್ಲಿತ್ತು; ಇನ್ನಿದಕಿಂತ ಯಶಸ್ವಿಯಾದ ಕಾರ್ಯ ಸಾಧನೆಯೇ ಇರಲಾರದು. ಟಾಮ್ ತಾನೇ ಹಾಗೇ ಹೇಳಿಕೊಂಡ, ಕಲ್ಲಿನ ಅಥವಾ ಅಂಥಾದ್ದೇ ಇನ್ನು ಯಾವುದಾದರೂ ಪದಾರ್ಥದ ಒಂದು ಹಳಕು ಬಾಯಿಗೆ ಸಿಕ್ಕಿರಬಹುದು ಎಂಬಂತೆ ಮಾತ್ರ ಅವನು ತೋರ್ಪಡಿಸಿಕೊಂಡನು. ರೊಟ್ಟಿಯಲ್ಲಿ ಅಂಥಾದ್ದು ಬೆರೆಯುವುದುಂಟೆಂಬುದನ್ನು ನೀವು ಬಲ್ಲಿರಿತಾನೆ? ಇನ್ನು ಯಾವ ಅನುಮಾನಕ್ಕೂ ಅವನು ಆಸ್ಪದಗೊಡಲಿಲ್ಲ ಆದಾದ ಮೇಲೆ ಅವನು ಇನ್ನೆಂದೂ ಯಾವುದನ್ನೂ ಮೊದಲೇ ತನ್ನ ಮುಳ್ಳುಚಮಚದಿಂದ ಮೂರು, ನಾಲ್ಕು ಕಡೆಗಳಲ್ಲಿ ಚುಚ್ಚದೆ, ಬಾಯಿಗಿಟ್ಟುಕೊಳ್ಳುತ್ತಿರಲಿಲ್ಲ.

ಸ್ವಲ್ಪ ಮಬ್ಬಾದ ಬೆಳಕಿನಲ್ಲಿ ನಾವು ಅಲ್ಲಿ ನಿಂತಿರುವಾಗಲೇ ಜಿಮ್ಮನ ಮಂಚದ ಕೆಳಗಡೆಯಿಂದ ಎರಡು ಬೇಟೆನಾಯಿಗಳು ನೂಕಿಕೊಂಡು ಬಂದವು ; ಅವುಗಳ ಸಂಖ್ಯೆ ಹನ್ನೊಂದಾಗುವ ತನಕ ಅವು ಏರುತ್ತಲೇ ಇದ್ದವು ; ನಿಮಗುಸಿರಾಡಲು ಅಲ್ಲಿ ಸ್ಥಳವಿರಲಿಲ್ಲ. ಹಾಳು ! ನಾವು ಪಡಸಾಲೆಯ ಬಾಗಿಲನ್ನು ಭದ್ರವಾಗಿ ಹಾಕಿ ಬರುವುದನ್ನೇ ಮರೆತಿದ್ದೆವು. ನೀಗ್ರೋ ನಾಟ್ ಒಂದು ಸಲ "ಮಂತ್ರಗಾತ್ರಿಯರು" ಎಂದಿಷ್ಟೇ ಕೂಗಿಕೊಂಡನು, ನೆಲದ ಮೇಲೆ ನಾಯಿಗಳ ನಡುವೆ ಬಿದ್ದು ಮರಣೋನ್ಮುಖನಾದಂತೆ ನರಳತೊಡಗಿದನು. ಟಾಮ್ ಬಾಗಿಲನ್ನು ಒದೆದು ತೆರೆದು, ಜಿಮ್ಮನ ತಾಟಿನಿಂದ ಒಂದು ಹಲ್ಲೆ ಮಾಂಸವನ್ನು ಎತ್ತಿ ಆಚೆಗೆಸೆದನು ; ನಾಯಿಗಳು ಅದಕ್ಕೆ ಮುತ್ತಿಕೊಂಡವು ; ಮತ್ತು ಎರಡು ಸೆಕೆಂಡುಗಳ ಮಟ್ಟಿಗೆ ಅವನು ಹೊರಗೆ ಹೋಗಿದ್ದು ಮತ್ತೆ ಒಳಗೆ ಬಂದನು, ಬಾಗಿಲನ್ನು ಹಾಕಿಕೊಂಡನು. ಅವನುಇನ್ನೊಂದು ಬಾಗಿಲನು ಹಾಕಿಕೊಂಡು ಬಂದನೆಂಬುದು ನನಗೆ ತಿಳಿದಿತ್ತು, ಬಳಿಕ ಅವನು ಆ ನೀಗ್ರೋವನ್ನು ವಿಚಾರಿಸಿಕೊಳ್ಳಲು ಹೋದನು ; ರೇಗಿಸಿದನು, ಹಿತವಾಗಿ ನಡೆದುಕೊಂಡನು, ಮತ್ತು ಇನ್ನೊಮ್ಮೆ ಇನ್ನು ಯಾವುದನ್ನಾದರೂ ಕಂಡ ಹಾಗೆ ಅವನಿಗಾಗಿತ್ತೆ ಎಂದು ಕೇಳಿದನು· ಅವನು ಎದ್ದು, ಕಣ್-ಕಣ್-ಹೊಡೆಯುತ್ತಾ ಹೇಳಿದ :

"ಮಿ. ಸಿಡ್, ನೀವು ನನ್ನನ್ನು ಮೂಢ ಎನ್ನುವಿರಿ ; ಆದರೂ ನಾನು ಇಲ್ಲಿ ಒಂದು ದಶಲಕ್ಷ ನಾಯಿಗಳನ್ನೂ, ದೆವ್ವಗಳನ್ನೊ, ಇಲ್ಲವೇ ಇನ್ನೆಂಥಾದ್ದನ್ನೋ ಕಂಡದ್ದನ್ನು ನಂಬದಿದ್ದರೆ, ನಾನು ಈ ಸ್ಥಳದಲ್ಲೇ ನೇರ ಇಲ್ಲೇ ಸತ್ತಿದ್ದರಾಗಿತ್ತು ಎನ್ನಿಸುತ್ತದೆ." ನಾನು ಕಂಡೆ, ಖಂಡಿತವಾಗಿ ಕಂಡೆ, ಮಿ. ಸಿಡ್, ನಾನು ಅವುಗಳನ್ನು ಮುಟ್ಟಿದೆ ನಾನು ಅವುಗಳನ್ನು ಮುಟ್ಟಿದೆ, ಸ್ವಾಮಿ; ಅವು ನನ್ನ ಮೇಲೆಲ್ಲಾ ಬಿದ್ದಿದ್ದವು. ಹಾಳಾಗಲಿದು! ಆ ಮಂತ್ರಗಾತ್ರಿಯರಲ್ಲಿ ಒಬ್ಬಳು ಒಂದೇಸಲ—ಒಂದೇ ಸಲ ಸಾಕು— ನನ್ನ ಕೈಗೆ ಸಿಕ್ಕಬಾರದೆ!—ನಾನು ಕೇಳುವುದು ಅಷ್ಟನ್ನೇ. ಅದಕ್ಕಿಂತ ಹೆಚ್ಚಾಗಿ, ಅವರು ನನ್ನ ತಂಟೆಗೆ ಬಾರದೆ ಹೋದರೆ ಸಾಕು, ಅಷ್ಟೇ ಸಾಕು ಎನ್ನುತ್ತೇನೆ."

ಟಾಮ್ ಹೇಳಿದ :

"ನನಗೆ ತೋರುವುದನ್ನು ಹೇಳುತ್ತೇನೆ, ಕೇಳು. ಓಡಿಬಂದ ನೀಗ್ರೋವಿನ ಬೆಳಗಿನ ಉಪಹಾರದ ವೇಳೆಗೆ ಸರಿಯಾಗಿ ಅವರು ಇಲ್ಲಿಗೆ ಬಂದದೇಕೆ ? ಏಕೆಂದರೆ ಅವರಿಗೆ ಹಸಿವು ; ಅದೇ ಕಾರಣ. ನೀನವರಿಗೆ 'ಮಂತ್ರಗಾತಿಯರ ಹೂರಣಗಡುಬ'ನ್ನು ಮಾಡಿಕೊಡು. ನೀನು ಮಾಡಬೇಕಾಗಿರುವ ಕೆಲಸವೇ ಅದು"

"ಅಯ್ಯೋ ನನ್ನ ಹಣೆ-ಬರಹವೆ! ಮಿ, ಸಿಡ್, ಮಂತ್ರಗಾರ್ತಿಯರ ಹೂರಣ-ಗಡುಬನ್ನು ಮಾಡುವುದು ನನ್ನಿಂದಾಗುವುದೆ ? ಅದನ್ನು ಮಾಡುವುದು ಹೇಗೆನ್ನುವುದೇ ನನಗೆ ತಿಳಿಯದು, ಅಂಥಾದನ್ನು ನಾನು ಹಿಂದೆ ಎಂದೂ ಕೇಳಿಯೇ ಇಲ್ಲ."

"ಸರಿ ಹಾಗಾದರೆ ನಾನೇ ಅದನ್ನು ಮಾಡಿಕೊಡಬೇಕಾಯಿತು."

"ನೀವು ಮಾಡಿಕೊಡುವಿರಾ, ಅದನ್ನು ?—ನೀವು" ನಾನು ನಿಮಗೆ ನಡೆ-ಮುಂಡಿ ಹಾಸುತ್ತೇನೆ. ಅದು ಖಂಡಿತ!"

"ಆಗಬಹುದು, ನಿಮಗೋಸ್ಕರ ನಾನದನ್ನು ಮಾಡಿಕೊಡುತ್ತೇನೆ. ನೀನು ನಮಗೆ ಒಳ್ಳೆಯವನಾಗಿದ್ದೀಯೆ. ತಪ್ಪಿಸಿಕೊಂಡು ಬಂದಿರುವ ನೀಗ್ರೋವನ್ನು ನಮಗೆ ತೋರಿಸಿದ್ದೀಯೆ, ಆದರೆ ನೀನು ಬಲು ಎಚ್ಚರಿಕೆಯಿಂದಿರಬೇಕು. ನಾವು ನಿನ್ನ ಬಳಿಗೆ ಬಂದಾದ, ನೀನು ನಮ್ಮ ಕಡೆಗೆ ಬೆನ್ನು ಮಾಡಬೇಕು ; ಮತ್ತು ಆಮೇಲೆ ನಾವು ತಾಟಿನಲ್ಲಿ ಏನೇನನ್ನು ಹಾಕಿಗಲಿ, ನೀನು ಆಕಡೆಗೆ ಕಣ್ಣೆತ್ತಿ ನೋಡಲೇ ಕೂಡದು. ಜಿಮ್ ಆ ತಾಟನ್ನು ಬರಿದುಮಾಡಿದಾಗ ನೀನದನ್ನು ನೋಡಕೂಡದು–ಆಗ ಏನಾದೀತೆನ್ನುವುದನ್ನು ನಾನು ಹೇಳಲಾರೆ. ಎಲ್ಲಕ್ಕೂ ಮಿಗಿಲಾಗಿ, ಮಂತ್ರಗಾತಿಯರು ಮುಟ್ಟಿದ ವಸ್ತುಗಳನು ನೀನು ಮುಟ್ಟಕೂಡದು."

"ಅವುಗಳನ್ನು ಮುಟ್ಟುವುದೆ, ಮಿ. ಸಿಡ್ ? ನೀವು ಏನು ಮಾತಾಡುತ್ತಿದ್ದೀ ? ನಾನು ನನ್ನ ಬೆರಳೊಂದರ ಭಾರವನ್ನೂ ಅದರ ಮೇಲೆ ಹಾಕುವುದಿಲ್ಲ, ಸಾವಿರ ಸಾವಿರ ಲಕ್ಷಕೋಟಿ ಡಾಲರುಗಳನ್ನು ಕೊಟ್ಟರೂ ನಾನು ಆ ಕೆಲಸವನ್ನು ಮಾಡುವುದಿಲ್ಲ."

## ೩೭

ಎಲ್ಲ ಏರ್ಪಾಡುಗಳನ್ನೂ ಮಾಡಿದ್ದಾಯಿತು. ಆಮೇಲೆ ನಾವು ಹೊರಟು ಹೋದೆವು, ಹಿತ್ತಲಿನಲ್ಲಿದ್ದ ಮರದ ಚಕ್ಕೆಯ ರಾಶಿಯ ಬಳಿಗೆ ಹೋದೆವು. ಹಳೆಯ ಪಾದರಕ್ಷೆಗಳು, ಹರಕಲು ಬಟ್ಟೆಗಳು, ಸೀಸೆಯ ಚೂರುಗಳು, ಕೆಲಸಕ್ಕೆ ಇನ್ನು ಬಾರದ ತಗಡಿನ ಸಾಮಾನುಗಳು, ಮತ್ತು ಇಂಥವೇ ಎಲ್ಲಾ ಬೇಡದ ವಸ್ತುಗಳು ಬರುವುದಲ್ಲಿಗೇ. ಅಲ್ಲಿ ಹುಡುಕಾಡಿದೆವು ! ನಮಗೊಂದು ಹಳೆಯ ತಗಡಿನ ಕೈತೊಳೆಯುವ-ತಣಿಗೆ ಸಿಕ್ಕಿತು; ಹೂರಣಗಡುಬನ್ನು ಬೇಯಿಸುವುದಕ್ಕೆಂದು ಅದನ್ನಿಟ್ಟುಕೊಂಡು, ನಮ್ಮ ಕೈಲಾದಮಟ್ಟಿಗೂ ಅದರಲ್ಲಿದ್ದ ತೂತುಗಳನ್ನು ಮುಚ್ಚಿದೆವು ; ಅದನ್ನು ಕೆಳ-ಕೋಣೆಗೆ ಒಯ್ದು ಅದರ ತುಂಬ ಹಿಟ್ಟನ್ನು ಕದ್ದಿರಿಸಿಕೊಂಡೆವು. ಬಳಿಕ ಬೆಳಗಿನ ಉಪಾಹಾರಕ್ಕಾಗಿ ನಡೆದೆವು. ಅಲ್ಲಿ ನಮಗೆ ಒಂದೆರಡು ತೆಳುವಾದ ಮೊಳೆಗಳು ಸಿಕ್ಕಿದವು ; ಕತ್ತಲೆ-ಕೋಣೆಯ ಗೋಡೆಗಳಮೇಲೆ ತನ್ನ ಹೆಸರನ್ನೂ ತನ್ನ ಕಷ್ಟಕಾರ್ಪಣ್ಯಗಳನ್ನೂ ಬರೆದಿಡಲು ಜಿಮ್ಮನಿಗೆ ಅವು ಅನುಕೂಲವಾಗಿವೆ ಎಂದನು ಟಾಮ್! ಅವುಗಳಲ್ಲಿ ಒಂದನ್ನು ಕುರ್ಚಿಗೆ ತಗಲಿಹಾಕಿದ

ಸಾಲಿ ಚಿಕ್ಕಮ್ಮನ ಮುಂ-ಕವಚದ ಜೇಬಿಗೆ ಹಾಕಿದನು, ಇನ್ನೊಂದನ್ನು ಬೀರುವಿನ ಮೇಲಿದ್ದ ಸೈಲಾಸ್‌ಚಿಕ್ಕಪ್ಪನ ಟೋಪಿಯು ಪಟ್ಟಿಯೊಳಕ್ಕೆ ಸೇರಿಸಿದೆವು; ಏಕೆಂದರೆ ಆ ಮನೆಯು ಮಕ್ಕಳು ತಮ್ಮ ಅಪ್ಪ ಅಮ್ಮ ಈಗ ಆ ಓಡುಕುಳಿ ನಿಗ್ರೋವಿನ ವಸತಿಗೆ ಹೋಗ ಲಿರುವುದಾಗಿ ಹೇಳುತ್ತಿದ್ದುದು ನಮ್ಮ ಕಿವಿಗೆ ಬಿದ್ದಿತ್ತು, ನಾವು ಉಪಾಹಾರಕ್ಕೆ ಕುಳಿತಾಗ ಟಾಮ್ ಸೈಲಾಸ್ ಚಿಕ್ಕಪ್ಪನ ಜೇಬಿಗೆ ತವರದ ಚಮಚವನ್ನು ಮತ್ತಗೆ ಸೇರಿಸಿದನು. ಸಾಲಿ ಚಿಕ್ಕಮ್ಮ ಇನ್ನೂ ಬಂದಿರಲಿಲ್ಲ; ನಾವು ಸ್ವಲ್ಪಹೊತ್ತು ಕಾಯಬೇಕಾಗಿ ಬಂತು.

ಬರುತ್ತಿರುವಾಗಲೇ ಅವಳ ಮುಖ ಕೆಂಪಾಗಿ ಕುದಿದು ಕರ್ಕಶವಾಗಿತ್ತು; ಹರಕೆ ಮುಗಿಯುವ ತನಕ ಕಾಯುವಷ್ಟು ತಾಳ್ಮೆ ಅವಳಿಗಿರಲಿಲ್ಲ, ಒಂದು ಕೈಯಿಂದ ಕಾಫಿಯ ನ್ನೆತ್ತಿ ಸುರಿದುಕೊಳ್ಳುತ್ತಾ, ಇನ್ನೊಂದರ ಬೆರಳಿಗೆ ಹಾಕಿಕೊಂಡಿದ್ದ ತನ್ನ ಸೂಜಿತೊತ್ತಿ ನಿಂದ ತನ್ನ ಕೈಗೆ ಬಲುಹತ್ತಿರದಲ್ಲಿದ್ದ ಮಗುವಿನ ತಲೆಯಮೇಲೆ ಒಂದೇಟು ಹಾಕಿ ಕೇಳಿದಳು :

"ನಾನು ಮನೆಯೊಳಗೆಲ್ಲಾ ಮೇಲೂ ಕೆಳಗೂ ಶೋಧಿಸಿ ನೋಡಿದ್ದಾಯಿತು ನಿನ್ನ ಇನ್ನೊಂದು ಷರಟು ಎಲ್ಲಿಗೆ ಹೋಯಿತೆನ್ನುವುದು ಯಾರಿಗೂ ತಿಳಿಯುವಂತಿಲ್ಲ"

ನನ್ನ ಹೃದಯವೇ ನನ್ನ ಶ್ವಾಸಕೋಶಗಳ ಮತ್ತು ಇತರ ಅಂಗಾಂಗಗಳ ನಡುವೆ ಕುಸಿದುಬಿತ್ತು. ಅದರ ಹಿಂದೆಯೇ ರೊಟ್ಟಿಯಂಚಿನ ಕಟಕಲು ಚೂರೊಂದು ನನ್ನ ಗಂಟಲಲ್ಲಿ ಇಳಿಯುತ್ತಿತ್ತು: ಅದರ ನಡುದಾರಿಯಲ್ಲಿ ಒಂದು ಕೆಮ್ಮು ಬಂದು ತಗುಲಿ ಅದು ಮೇಜಿನಮೇಲೆ ಸಿಡಿದುರುಳುವಂತೆ ಮಾಡಿತು ; ಹಾಗೆ ಬಂದದ್ದು ಮಗುವೊಂದರ ಕಣ್ಣಿಗೆ ಹೊಡೆಯಿತು. ಆ ಮಗು ಮೀನಿನ ಗಾಳದ ತುದಿಯ ಹುಳುವಿನಂತೆ ಮುದುರಿ ಕೊಂಡು ಯುದ್ಧಘೋಷಕ್ಕೆ ನೂ ಕಡಮೆಯಿಲ್ಲದ ಹಾಗೆ ಒಂದುಬಾರಿ ಕಿಟಾರನೆ ಕಿರಿಚಿತು, ಇವೆಲ್ಲಾ ಸೇರಿದ್ದರಿಂದ ಕಾಲುನಿಮಿಷದಲ್ಲಿ ಒಂದು ಪ್ರಮಾದವೇ ನಡೆದುಹೋಗಿತ್ತು. ಯಾರಾದರೂ ಕೊಂಡುಕೊಳ್ಳುವವರಿದರೆ ನನ್ನನ್ನು ಅರ್ಧಬೆಲೆಗೇ ಮಾರುತ್ತಿದ್ದರೇನೋ! ಆದಾದಮೇಲೆ ಎಲ್ಲವೂ ಮತ್ತೆ ಪ್ರಶಾಂತವಾಯಿತು—ಅದು ಅಷ್ಟು ಅನಿರೀಕ್ಷಿತ ಘಟನೆ ಯಾಗಿದ್ದುದರಿಂದ ನಾವೆಲ್ಲರೂ ತಲ್ಲಣಗೊಂಡಿದ್ದೆವು, ಅಷ್ಟೆ, ಸೈಲಾಸ್ ಚಿಕ್ಕಪ್ಪ ಹೇಳಿದ :

"ಇದೊಂದು ಅಸಾಧಾರಣ ವಿಚಿತ್ರ ಪರಿಸ್ಥಿತಿ, ನನಗಿದು ಅರ್ಥವೇ ಆಗುತ್ತಿಲ್ಲ. ನಾನು ಆ ಷರಟನ್ನು ಬಿಚ್ಚಿಹಾಕಿದ್ದೇನೆಂಬುದರಲ್ಲಿ ನನಗೆ ಸಂದೇಹವೇ ಇಲ್ಲ, ಏಕೆಂದರೆ-"

"ಏಕೆಂದರೆ ಈಗ ನಿನ್ನ ಮೈಮೇಲಿರುವುದು ಒಂದೇ ಷರಟು. ಇವನು ಕೇಳು ವುದನ್ನು ಕೇಳಿ ! ನೀನು ಅದನ್ನು ಬಿಚ್ಚಿಹಾಕಿದ್ದುದು ನನಗೆ ಗೊತ್ತು, ವೃಥಾ ಶ್ರಮ ಪಡುತ್ತಿರುವ ನಿನ್ನ ಜ್ಞಾಪಕಶಕ್ತಿಗಿಂತ ಉತ್ತಮವಾದ ವಿಧಾನದಿಂದ ನಾನದನ್ನು ತಿಳಿದು ಕೊಂಡಿದ್ದೇನೆ : ಏಕೆಂದರೆ, ಅದು ನಿನ್ನೆಯ ದಿನ ಬಟ್ಟೆಗಳನ್ನು ತೂಗಿಹಾಕುವಹಗ್ಗದ ಮೇಲೆಯೇ ಇತ್ತು ನಾನೇ ಅಲ್ಲಿದ್ದುದನ್ನು ಕಂಡಿದ್ದೆ. ಆದರೆ ಅದು ಮಾಯವಾಗಿದೆ;

ಇಷ್ಟೇ ಅದರ ಕಥೆ! ಆದ್ದರಿಂದ ನಿನಗೆ ಇನ್ನೊಂದು ಹೊಸಷರಟನ್ನು ಹೊಲಿದುಕೊಡಲು ನನಗೆ ಪುರಸತ್ತು ಸಿಗುವತನಕ ನೀನು ಈ ಷರಟನ್ನು ಬಿಚ್ಚಿದರೆ ಇನ್ನೊಂದು ಕೆಂಪು ಫ್ಲಾನೆಲ್‌ಷರಟನ್ನೇ ತೊಟ್ಟುಕೊಳ್ಳಬೇಕು. ಅಲ್ಲಿಗೆ ಈ ಎರಡು ವರುಷಗಳಲ್ಲಿ ನಿನಗೆ ನಾನು ಮೂರು ಷರಟುಗಳನ್ನು ಹೊಲಿದುಕೊಟ್ಟ ಹಾಗೆ ಆಗುತ್ತದೆ. ನಿನಗೆ ಷರಟು ಗಳನ್ನು ಒದಗಿಸುವ ಕೆಲಸವಿದೆಯಲ್ಲ, ಇದು ಎಂಥವರಿಗೂ ದುಸ್ಸಾಧ್ಯವೇ ; ನೀನು ಅವು ಗಳನ್ನು ಏನುಮಾಡಿಕೊಳ್ಳುತ್ತೀಯೋ ಅದನ್ನು ಊಹಿಸುವುದೂ ನನ್ನಿಂದ ಸಾಧ್ಯವಿಲ್ಲ. ಅವುಗಳನ್ನು ಒಪ್ಪವಾಗಿಟ್ಟುಕೊಳ್ಳುವುದು ನಿನಗೆ ನಿನ್ನ ಜೀವಮಾನದೊಳಗಾಗಿ ಬರು ತ್ತದೆಯೋ ಇಲ್ಲವೊ ಎಂದು ಯಾರಿಗಾದರೂ ಅನಿಸೀತು,

"ನನಗೆ ಅದು ಗೊತ್ತಿದೆ, ಸಾಲಿ ; ನನ್ನ ಕೈಲಾದ್ದೆಲ್ಲವನ್ನೂ ನಾನು ಮಾಡಲು ಯತ್ನಿಸುತ್ತಿದ್ದೇನೆ. ಆದರೆ ಇದು ಪೂರ್ತಿ ನನ್ನ ತಪ್ಪಿನಿಂದಲೇ ಎನ್ನಬಾರದು. ಏಕೆಂದರೆ ನಾನು ಅವುಗಳನ್ನು ನೋಡುವುದೇ ಇಲ್ಲವೆನ್ನುವುದೂ, ಅವು ನನ್ನ ಮೈಮೇಲೆ ಇರುವಾಗ ವಿನಾ ಉಳಿದ ಕಾಲಗಳಲ್ಲಿ ನನಗೂಅವುಗಳಿಗೂ ಸಂಬಂಧವೇ ಇಲ್ಲವೆನ್ನುವುದನ್ನೂ ನೀನು ಬಲ್ಲೆ; ಆದ್ದರಿಂದ ನಾನು ತೆಗೆದುಹಾಕಿದ ಷರಟೊಂದನ್ನು ನಾನು ಎಂದಾದರೂ ಕಳೆದು ಕೊಂಡೆನೆಂದರೆ ನಾನು ನಂಬುವುದೇ ಇಲ್ಲ."

"ಸರಿ, ಹಾಗೆ ಮಾಡದೇ ಹೋಗಿದ್ದರೆ, ಅದು ನಿನ್ನ ತಪ್ಪಲ್ಲ, ಸೈಲಾಸ್; ನೀನು ನಿನಗೆ ಸಾಧ್ಯವಿದ್ದರೆ, ಅದನ್ನೂ ಮಾಡುತ್ತಿದ್ದೆ ಎಂದು ನನ್ನೆಣಿಕೆ, ಆದರೆ ಕಳೆದು ಹೋಗಿರುವುದು ಷರಟೊಂದೇ ಅಲ್ಲ. ಒಂದು ಚಮಚವೂ ಮಾಯವಾಗಿದೆ. ಹತ್ತು ಇದ್ದವು, ಈಗ ಒಂಬತ್ತೇ ಇವೆ. ಷರಟನ್ನು ಕರು ತಿಂದುಹಾಕಿತೆಂದು ನನ್ನೆಣಿಕೆ, ಆದರೆ ಕರು ಚಮಚವನ್ನೆಂದೂ ಒಯ್ಯುವುದಿಲ್ಲ, ಅದು ಖಂಡಿತ."

"ಸರಿಯೆ,। ಇನ್ನೇನೇನು ಹೋಗಿದೆ, ಸಾಲಿ ?"

"ಆರು ಮೋಂಬತ್ತಿಗಳು ಹೋಗಿವೆ—ಇನ್ನೇನೆಂದರೆ ಅವೇ. ಮೋಂಬತ್ತಿಗಳು ಇಲಿಗಳ ಪಾಲಾಗಿರಬಹುದು, ಆಗಿವೆ, ಎಂದು ನಾನು ಭಾವಿಸುತ್ತೇನೆ, ನೀನು ಅವು ಗಳ ಬಿಲಗಳನ್ನು ಮುಚ್ಚುವುದಾಗಿ ಎಂದಿನಿಂದಲೂ ಹೇಳುತ್ತ ಬಂದು ಹಾಗೆ ಮಾತ್ರ ಮಾಡದಿರುವುದನ್ನು ನೋಡಿದರೆ. ಅವು ಇಡಿ ಮನೆಯನ್ನೇ ಹೊತ್ತುಕೊಂಡು ಹೋಗ ದಿದ್ದರೆ ಕೇಳು ! ಅವುಗಳಿಗೆ ಸರಿಯಾದ ತಿಳಿವಳಿಕೆಯಿದ್ದಿದ್ದರೆ ಅವು ಬಂದು ನಿನ್ನ ಕೂದಲ ಕಂತೆಯೊಳಗೇ ಮಲಗಿ ನಿದ್ದೆಮಾಡುತ್ತಿದ್ದವು, ಸೈಲಾಸ್—ನಿನಗದು ಗೊತ್ತೇ ಆಗುತ್ತಿರಲಿಲ್ಲ; ಆದರೆ ನೀನು ಚಮಚದ ಕಳುವನ್ನು ಇಲಿಗಳ ಮೇಲೆ ಹೊರಿಸುವ ಹಾಗಿಲ್ಲ : ಅದು ನನಗೆ ಗೊತ್ತು."

"ಆಗಲಿ, ಸಾಲಿ, ತಪ್ಪು ನನ್ನದು, ಒಪ್ಪಿಕೊಳ್ಳುತ್ತೇನೆ ; ನಾನು ಉದಾಸೀನ ಮಾಡಿದೆ ; ನಾಳೆಯೊಳಗಾಗಿ ನಾನೀ ಇಲಿಬಿಲಗಳನ್ನು ಮುಚ್ಚಿಹಾಕದಿದ್ದರೆ ನನಗೆ ಬೇರೆಯು ಹೆಸರಿಡು."

"ಓ ನನಗೇನಂಥಾ ಅವಸರವಿಲ್ಲ ; ಮುಂದಿನ ವರುಷದೊಳಗಾದರೂ ಸಾಕು. ಮಾಟಿಲ್ಡಾ ಏಂಜಲೀನಾ ಆರಮಿಂಟಾ ಫೈಲ್ಪ್ಸ್ !"

ಥಟ್ಟನೊಂದು ಸೂಜಿಚೊತ್ತಿನೇಟು ಬಿತ್ತು ; ಮಗು ಅತ್ತಿತ್ತ ನೋಡದೆ, ಸಕ್ಕರೆಯ ಬೋಗುಣಿಯೊಳಗಿದ್ದ ತನ್ನ ಕೈಬೆರಳುಗಳನ್ನು ಈಚೆಗೆ ಎಳೆದುಕೊಂಡಿತು. ಅದೇ ಸಮಯಕ್ಕೆ ನೀಗ್ರೋ ಹೆಂಗಸೊಬ್ಬಳು ಒಳಕ್ಕೆ ಬಂದು ಹೇಳಿದಳು :

"ಅಮ್ಮಾವರೆ, ಒಂದು ಹಾಸುವ ಬಟ್ಟೆ ಕಳೆದುಹೋಗಿದೆ."

"ಒಂದು ಹಚ್ಚಡ ಕಳೆದು ಹೋಗಿದೆ ! ಸರಿ, ದೇವರೇಗತಿ !"

"ನಾನು ಈಹೊತ್ತೇ ಆ ಬಿಲಗಳನ್ನು ಮುಚ್ಚಿಬಿಡುತ್ತೇನೆ" ಎಂದನು ಸೈಲಾಸ್ ಚಿಕ್ಕಪ್ಪ, ಖಿನ್ನನಾಗಿ.

"ಓ, ಸುಮ್ಮನಿರುವೆಯೋ ಇಲ್ಲವೊ ! ಆ ಹಚ್ಚಡವನ್ನು ಇಲಿಗಳು ಕೊಂಡು ಹೋದವೆಂದಲ್ಲವೇ ? ಎಲ್ಲಿ ಹೋಯಿತದು ಲೈಜ್ಹಿ ?"

"ನನ್ನಾಣೆಗೂ ಅದು ನನಗೆ ತಿಳಿದೇ ತಿಳಿಯದು ಸ್ಯಾಲಿ ಅಮ್ಮಾವರೆ. ಅದು ಬಟ್ಟೆಗಳನ್ನು ತೂಗಿಹಾಕುವ ತಂತಿಯ ಮೇಲೆ ನಿನ್ನೆ ಇತ್ತು. ಅದು ಮಾಯವಾಗಿದೆ ; ಈಗ ಅಲ್ಲಿ ಇಲ್ಲವೇ ಇಲ್ಲ "

"ಈ ಪ್ರಪಂಚಕ್ಕೇನೋ ಕೇಡುಗಾಲ ಬರುತ್ತಿದೆ. ಎಂದೆಣಿಸುತ್ತೇನೆ. ನಾನು ಹುಟ್ಟಿದಂದಿನಿಂದ ಇಂಥಾದ್ದನ್ನು ಕಂಡವಳಲ್ಲ. ಒಂದು ಷರಟು, ಒಂದು ಹಚ್ಚಡ, ಒಂದು ಚಮಚ ಮತ್ತು ಆರು ಮೋಂ—"

"ಅಮ್ಮಾವರೆ," ಎನ್ನುತ್ತ ಒಬ್ಬ ಚಿಕ್ಕ ನೀಗ್ರೋ ಹುಡುಗ ಓಡಿಬಂದ,

"ಒಂದು ಹಿತ್ತಾಳೆಯ ಮೋಂಬತ್ತಿ-ಹಿಡಿ ಕಳೆದುಹೋಗಿದೆ."

"ತೊಲಗಾಚೆಗೆ, ತುಂಟಹುಡುಗಿ, ಇಲ್ಲದಿದ್ದರೆ, ನಾನು ಬಾಣಲೆಯನ್ನು ತೆಗೆದು ಕೊಳ್ಳುತ್ತೇನೆ ನಿನಗೆ—"

ಸರಿ, ಅವಳಿನ್ನೂ ಕಂದಿ-ಕಂದಿಯುತ್ತಲೇ ಇದ್ದಳು. ನಾನು ಸಮಯಕಾಯು ತ್ತಲೇ ಇದ್ದೆ ; ಈ ಕೋಪವಿಳಿಯುವ ತನಕ, ನಾನಿಲ್ಲಿಂದ ಕಾಡಿಗೆ ಜಾರಿಕೊಂಡು ಹೋಗಿರಲೆ ಎಂದುಕೊಂಡೆ. ಅವಳು ರೇಗಿ ರೇಗಿ ಬೀಳುತ್ತಲೇ ಇದ್ದಳು ; ತನ್ನ ದಂಗೆಯನ್ನು ತಾನೇ; ಒಬ್ಬಳೇ ನಡಸುತ್ತಿದ್ದಳು ; ಉಳಿದವರೆಲ್ಲರೂ ತುಂಬಾ ಕುಗ್ಗಿ ಹೋಗಿ ಸುಮ್ಮನೆ ಇದ್ದುಬಿಟ್ಟರು ; ಇಷ್ಟೆಲ್ಲಾ ಆದಮೇಲೆ ಸೈಲಾಸ್ ಚಿಕ್ಕಪ್ಪ, ತನ್ನ ತಿಳಿಗೇಡಿತನವನ್ನು ಪ್ರದರ್ಶಿಸುತ್ತಾ, ಆ ಚಮಚವನ್ನು ತನ್ನ ಜೇಬಿನಿಂದ ಈಚೆಗೆ ತೆಗೆದ. ಅವಳು ತನ್ನ ಕೈಗಳನ್ನೆತ್ತಿ, ದೊಡ್ಡದಾಗಿ ಬಾಯಿಕಳೆದು ಅಲ್ಲೆ ನಿಂತಳು ; ನನಗೋ ನಾನಾಗ ಜೆರುಸಲೆಮ್ಮಿನಲ್ಲೋ ಅಥವಾ ಇನ್ನೆಲ್ಲೋ ಇದ್ದಿದ್ದರಾಗಿತ್ತು ಎನ್ನಿಸಿತು. ಹೆಚ್ಚು ಹೊತ್ತು ಹಾಗೆಯೇ ಇರುವುದಕ್ಕೂ ಆಗಲಿಲ್ಲ, ಏಕೆಂದರೆ ಅವಳು ಹೇಳಿದಳು :

"ನಾನು ಅಂದುಕೊಂಡ ಹಾಗೆಯೇ ಇದಾಗಿದೆ, ಹೀಗೆ ನೀನು ಅದನ್ನು ಇಷ್ಟು ಹೊತ್ತೂ ನಿನ್ನ ಜೇಬಿನಲ್ಲೇ ಇಟ್ಟುಕೊಂಡಿದ್ದೆ. ಅದೇ ರೀತಿಯಲ್ಲಿ ಉಳಿದ ಪದಾರ್ಥಗಳೂ ನಿನ್ನಲ್ಲೇ ಇರಬೇಕು. ಅದು ಅಲ್ಲಿಗೆ ಹೇಗೆ ಹೋಯಿತು? "ನಿಜವಾಗಿಯೂ ನನಗೆ ತಿಳಿಯದು, ಸ್ಯಾಲಿ" ಎಂದು ಕ್ಷಮೆಯಾಚಿಸುತ್ತಾ ಅವನು ಹೇಳಿಕೊಂಡನು,–" ಇಲ್ಲದಿದ್ದರೆ ನಾನು ನಿನಗೆ ಹೇಳಿಬಿಡುತ್ತಿದ್ದೆನೆಂಬುದು ನಿನಗೆ ಗೊತ್ತು. ಬೆಳಗಿನ ಉಪಾಹಾರಕ್ಕೆ ಮುನ್ನ ನಾನು ಹದಿನೇಳನೆಯ ಪರಿಚ್ಛೇದವನ್ನು ಮನನ ಮಾಡುತ್ತಿದ್ದೆ; ಆಗ ನಾನು ಬೈಬಲಿನ ಪ್ರತಿಯನ್ನು ಜೇಬಿನಲ್ಲಿ ಹಾಕಿಕೊಳ್ಳುವುದಕ್ಕೆ ಹೋಗಿ, ಮರೆತು, ಅದನ್ನು ಹಾಕಿಕೊಂಡಿರಬೇಕೆಂದು ನನ್ನೆಣಿಕೆ, ಅದು ಹಾಗೆಯೇ ಆಗಿರಬೇಕು: ಏಕೆಂದರೆ ನನ್ನ ಬೈಬಲ್ ಪ್ರತಿ ಜೇಬಿನಲ್ಲಿಲ್ಲ. ಆದರೂ ಹೋಗಿ ನೋಡುತ್ತೇನೆ; ನನ್ನ ಬೈಬಲ್ ಪ್ರತಿ ನಾನೆಲ್ಲಿಟ್ಟುಕೊಂಡಿದ್ದೆನೋ ಅಲ್ಲೇ ಇತ್ತೆ, ನಾನದನ್ನು ಜೇಬಿಗೆ ಹಾಕಿಕೊಳ್ಳಲಿಲ್ಲ ಎನ್ನುವುದು ನನಗೆ ಸ್ಪಷ್ಟವಾಗುತ್ತದೆ, ಮತ್ತು ನಾನು ಬೈಬಲ್ ಪ್ರತಿಯನ್ನು ಕೆಳಗಿಟ್ಟೆ, ಚಮಚವನ್ನು ಎತ್ತಿಕೊಂಡೆ ಎಂಬುದನ್ನು ಅದೇ ತೋರಿಸುತ್ತದೆ. ಮತ್ತು—"

"ಓಹ್, ಸಾಕು ನಿಲ್ಲಿಸು ಮಹರಾಯ! ನಮಗೊಂದಿಷ್ಟು ಬಿಡುವಿರಲಿ ಎಲ್ಲರೂ ಒಟ್ಟಿಗೆ ತೊಲಗಿ ಹೋಗಿ ಆಚೆಗೆ, ನನ್ನ ಮನಸ್ಸು ಶಾಂತವಾಗುವರೆಗೂ ಯಾರೂ ನನ್ನ ಹತ್ತಿರ ಬರಬೇಡಿ."

ಇದನ್ನವಳು ಬಾಯಿ ಬಿಟ್ಟು ಹೇಳುವುದಿರಲಿ, ಮನಸ್ಸಿನಲ್ಲೇ ಅಂದುಕೊಂಡಿದ್ದರೂ ನನಗೆ ಕೇಳಿಸುತ್ತಿತ್ತು; ನಾನು ಪೂರಾ ಸತ್ತು ಹೋಗಿದ್ದರೂ, ಮೇಲೆದ್ದು ಅವಳು ಹೇಳಿದ ಹಾಗೆ ಮಾಡುತ್ತಿದ್ದೆ. ನಾವು ದಿವಾನಖಾನೆಯನ್ನು ಹಾದು ಹೋಗುತ್ತಿದ್ದಾಗ ಆ ಮುದುಕ ತನ್ನ ಟೋಪಿಯನ್ನು ಕೈಗೆತ್ತಿಕೊಂಡ; ಅದರಲ್ಲಿದ್ದ ಸಣ್ಣಮೊಳೆ ಕೆಳಗೆ ಬಿತ್ತು; ಅದನ್ನು ಹಾಗೆಯೇ ಹಿಡಿದೆತ್ತಿ ಬಟ್ಟೆ–ಗೂಡಿನ ಮೇಲೆ ಹಾಕಿ, ಹೇಳದೆ ಕೇಳದೆ, ಹೊರಟುಹೋದ. ಅವನು ಹಾಗೆ ಮಾಡುತ್ತಿದ್ದುದನ್ನು ಟಾಮ್ ನೋಡಿದ. ಆಗ ಚಮಚದ ವಿಷಯ ಜ್ಞಾಪಕಕ್ಕೆ ಬಂತು, ಅವನು ಹೇಳಿದ:

"ಇನ್ನು ಮುಂದೆ ಅವನ ಕೈಯಲ್ಲಿ ಪದಾರ್ಥಗಳನ್ನು ಕಳಿಸಿದರೆ ಕೆಲಸ ಕೆಡುತ್ತದೆ, ಅವನು ವಿಶ್ವಾಸಾರ್ಹನಲ್ಲ" ಒಡನೆಯೇ ಹೇಳಿದ:

"ಅವನು ನಮಗೆ ಈ ಚಮಚದ ಪ್ರಕರಣದಲ್ಲಿ, ಅರಿಯದೆಯೆ, ಉಪಕಾರ ಮಾಡಿದ್ದಾನೆ. ಆದ್ದರಿಂದ ನಾವೂ ಅವನಿಗೆ, ಸುಳಿವು ಕೊಡದೆ, ಪ್ರತ್ಯುಪಕಾರ ಮಾಡಬೇಕು—ಅವನ ಇಲಿ-ಬಿಲಗಳನ್ನು ಮುಚ್ಚಿ ಕೊಡಬೇಕು."

ಕೆಳಗೆ–ಮಾಳಿಗೆಯಲ್ಲಿ ಎಲ್ಲೆಲ್ಲೂ ಇಲಿ-ಬಿಲಗಳೇ; ನಮಗೆ ಇಡೀ ಒಂದು ಗಂಟೆಯ ಕಾಲ ಹಿಡಿಯಿತು. ಕೈಕೊಂಡ ಕೆಲಸವನ್ನೇನೋ ನಾವು ಭದ್ರವಾಗಿ, ಚೆನ್ನಾಗಿ, ಅಚ್ಚುಕಟ್ಟಾಗಿ ಮಾಡಿದ್ದೆವು. ಆಮೇಲೆ ಮೆಟ್ಟಿಲ ಮೇಲೆ ಹೆಜ್ಜೆ ಸದ್ದಾಯಿತು; ನಾವು ದೀಪ ಆರಿಸಿ ಹುದುಗಿಕೊಂಡೆವು. ಒಂದು ಕೈಯಲ್ಲಿ ಮೋಂಬತ್ತಿಯನ್ನೂ ಇನ್ನೊಂದರಲ್ಲಿ

ಇತರ ಸಲಕರಣೆಗಳನ್ನೂ ಹಿಡಿದುಕೊಂಡು ಆ ಮುದುಕ ಬರುತ್ತಿದ್ದ ; ಕಳೆದ ಎರಡನೆಯ ವರ್ಷದಂತೆಯೇ ಅವನಿಗೆ ಈಗಲೂ ಮರೆವು ಎನ್ನುವುದು ಎದ್ದು ಕಾಣುತ್ತಿತ್ತು. ಅವನು ಸುತ್ತಲೂ ತೂರಾಡುತ್ತಾ ಹೋದನು. ಮೊದಲು ಒಂದು ಬಿಲದ ಬಳಿಗೆ ಆಮೇಲೆ ಇನ್ನೊಂದರ ಬಳಿಗೆ, ಹೀಗೆ ಎಲ್ಲಾ ಬಿಲಗಳೂ ಮುಗಿಯುವವರೆಗೆ. ತನ್ನ ಮೋಂಬತ್ತಿಯಿಂದ ಸೋರುತ್ತಿದ್ದ ಚರ್ಬಿಯ ಹನಿಗಳನ್ನು ಹೆಕ್ಕುತ್ತಾ, ಯೋಚನೆ ಮಾಡುತ್ತಾ ಐದು ನಿಮಿಷಗಳ ಕಾಲ ಸುಮ್ಮನೆ ನಿಂತು ಬಿಟ್ಟನು.

"ಅಯ್ಯೋ ಬಡಜೀವವೇ! ನಾನು ಈ ಕೆಲಸವನ್ನು ಯಾವಾಗ ಮಾಡಿದ್ದೆನೆನ್ನುವುದು ನನಗೇ ಜ್ಞಾಪಕವಿಲ್ಲ, ಈಗ ನಾನು ಅವಳನ್ನಿಲ್ಲಿಗೆ ಕರೆದುಕೊಂಡು ಬಂದು ಇಲಿಗಳ ಕಾರಣದಿಂದ ನನ್ನನ್ನು ಬಯ್ಯುವಂತೆಯೇ ಇಲ್ಲ ಎಂದು ತೋರಿಸಬಲ್ಲೆನು. ಅದೇನಾದರೇನು – ಅದು ಹೋಗಲಿ ಬಿಡು. ಹಾಗೆ ಮಾಡುವುದರಿಂದ ಒಳ್ಳೆಯದಾಗುವುದಿಲ್ಲವೆಂದು ನನ್ನೆಣಿಕೆ."

ಹೀಗೆ ಗೊಣಗುತ್ತಾ ಅವನು ಮಹಡಿಗೆ ಹತ್ತಿಹೋದನು ; ನಾವೂ ಆ ಸ್ಥಳವನ್ನು ಬಿಟ್ಟೆವು, ಅವನು ಬಲು ಒಳ್ಳೆಯ ಮುದುಕ ಯಾವಾಗಲೂ.

ಒಂದು ಚಮಚ ಬೇಕಲ್ಲ, ಅದಕ್ಕೇನು ಮಾಡೋಣ, ಎಂದು ಟಾಂ ತುಂಬಾ ಕೊರಗುತ್ತಿದ್ದ ; ನಮಗದು ಬೇಕೇ ಬೇಕು ಎಂದ ; ಹಾಗೆಯೇ ಯೋಚನೆಮಾಡಿದ. ಅದನ್ನು ಕಂಡುಕೊಂಡ ಮೇಲೆ, ಅದರ ವಿಧಾನವನ್ನು ನನಗೆ ತಿಳಿಸಿದ, ಆಮೇಲೆ ನಾವು ಚಮಚದ ಬುಟ್ಟಿಯ ಬಳಿಗೆ ಹೋದೆವು. ಸಾಲಿ ಚಿಕ್ಕಮ್ಮ ಬರುತ್ತಾಳೆಂದು ಕಾದು ಕುಳಿತಿದ್ದೆವು, ಅವಳು ಬಂದ ಮೇಲೆ ಟಾಂ ಚಮಚಗಳನ್ನೆಣಿಸುವುದಕ್ಕೂ ಒಂದು ಕಡೆಗೆ ಜೋಡಿಸಿ ಇಡುವುದಕ್ಕೂ ಕೈಹಚ್ಚಿದ. ನಾನು ಒಂದನ್ನು ನನ್ನ ಷರಟಿನ ತೋಳಿನೊಳಗೆ ತೂರಿಸಿಕೊಂಡೆ

ಟಾಂ ಹೇಳಿದ :

"ಇದೇನು ಸ್ಯಾಲಿ ಚಿಕ್ಕಮ್ಮ ಇಲ್ಲಿ ಇನ್ನೂ ಒಂಬತ್ತೇ ಚಮಚಗಳಿವೆ,"

ಅವಳು ಹೇಳಿದಳು :

"ನಿನ್ನ ಪಾಡಿಗೆ ನೀನು ಆಟವಾಡು ಹೋಗು, ನನ್ನನ್ನು ಗೋಳಾಡಿಸಬೇಡ. ನನಗೆ ಚೆನ್ನಾಗಿ ಗೊತ್ತು, ನಾನೇ ಅವುಗಳನ್ನು ಎಣಿಸಿದ್ದೇನೆ."

"ನಾನೇ ಅವುಗಳನ್ನು ಎರಡುಸಲ ಎಣಿಸಿದೆ, ಚಿಕ್ಕಿ, ಎಷ್ಟು ಎಣಿಸಿದರೂ ಒಂಬತ್ತೇ."

ಅವಳು ತನ್ನ ಸಹನೆಯುಷ್ಟನ್ನೂ ಕಳೆದುಕೊಂಡಳೆಂದು, ನೋಡಿದರೇ ತಿಳಿಯುತ್ತಿತ್ತು. ಆದರೂ ಎಣಿಸಿಬಿಡೋಣವೆಂದು ಹೊರಗೆ ಬಂದಳು—ಯಾರಾದರೂ ಹಾಗೆಯೇ ಮಾಡುತ್ತಿದ್ದರು,

"ಅಲ್ಲಿರುವುದು ಒಂಬತ್ತು ಮಾತ್ರವಲ್ಲ ಎಂದು ನಾನು ಘಂಟಾಘೋಷವಾಗಿ ಹೇಳುತ್ತೇನೆ !" ಎಂದಳವಳು "ಇದೇನು — ಏನು ಬಂತು–ಇವು ಹಾಳಾಗಿಹೋಗ–ನಾನು ಮತ್ತೆ ಎಣಿಸುತ್ತೇನೆ."

ಅವಳಿಗೆ ತಿಳಿಯದಂತೆ ನಾನು ನನ್ನ ತೋಳಿನಲ್ಲಿದ್ದ ಚಮಚವನ್ನು ಅವುಗಳ ಜತೆಗೇ ಸೇರಿಸಿದೆ. ಎಣಿಕೆ ಮುಗಿದ ಮೇಲೆ ಅವಳು ಹೇಳಿದಳು :

"ಇದರ ಮನೆ ಕಾಯುವಾಗ, ಇಲ್ಲಿ ಹತ್ತು ಚಮಚಗಳಿವೆ ಈಗ !"

ಅವಳಿಗೆ ಏಕಕಾಲದಲ್ಲಿ ಅನುಮಾನವೂ ದುಃಖವೂ ಆಗಿರುವಂತೆ ಕಂಡುಬಂತು; ಆದರೆ ಟಾಮ್ ಹೇಳಿದ :

"ಅಲ್ಲ, ಚಿಕ್ಕಿ, ಅಲ್ಲಿ ಹತ್ತು ಚಮಚಗಳಿರುವಂತೆ ನನಗೆ ತೋರುವುದಿಲ್ಲ."

"ಅಯ್ಯೋ ದಡ್ಡ. ನಾನೇ ಅವುಗಳನ್ನು ಎಣಿಸಿದ್ದನ್ನು ನೀನು ನೋಡಲಿಲ್ಲವೇ ?"

"ನನಗೆ ಗೊತ್ತು ಆದರೆ—"

"ಸರಿ ಹಾಗಾದರೆ ಅವುಗಳನ್ನು ನಾನು ಮತ್ತೊಮ್ಮೆ ಎಣಿಸುತ್ತೇನೆ,"

ಆಗ ನಾನು ಒಂದನ್ನು ಎಗರಿಸಿದೆ ; ಆ ಸಲ ಆದ ಹಾಗೆ ಈಗಲೂ ಅವು ಒಂಬತ್ತೇ ಆದವು. ಅವಳು ಕೈಗೆ ಸಿಕ್ಕದ್ದನ್ನು ಹರಿದೆಸೆಯುವಳೇನೋ ಎನಿಸಿತ್ತು—ಅವಳ ಮೈಕೈ ಎಲ್ಲಾ ಅದುರುತ್ತಿತ್ತು, ಅವಳಿಗೆ ಅಷ್ಟು ಸಿಟ್ಟು ಬಂದಿತ್ತು. ಆದರೂ ಅವಳು ಎಣಿಸಿದಳು, ಎಣಿಸಿದಳು, ಎಣಿಸಿದಳು—ಎಣಿಸಿ, ಎಣಿಸಿ, ಅವಳಿಗೆ ಎಷ್ಟರಮಟ್ಟಿಗೆ ಮಂಕು ಹಿಡಿದಿತ್ತೆಂದರೆ ; ಒಂದೇ ಚಮಚಕ್ಕಾಗಿ ಅವಳು ಇಡೀ ಬುಟ್ಟಿಯನ್ನೇ ಕೆಲವುಸಲ ಎಣಿಸುವಳು,—ಆಗ ಎಣಿಕೆ ಮೂರುಸಲ ಸರಿ, ಮೂರು ಸಲ ತಪ್ಪು, ಆಮೇಲೆ ಅವಳು ಆ ಬುಟ್ಟಿಯನ್ನೇ ಎತ್ತಿ ರೊಯ್ಯನೆ ಮನೆಯಾಗೆಸೆದು ದುರ್ದೈವಿ ಬೆಕ್ಕೊಂದನ್ನು ಹೊಡೆದು ಕೆಡಹಿದಳು, ನಾವು ತೊಲಗಿ ಹೋಗಿ ತನ್ನ ಮನಶ್ಶಾಂತಿಗೆ ಎಡೆಗೊಡಬೇಕೆಂದೂ, ಆ ಹೊತ್ತಿಗೂ ಮಧ್ಯಾಹ್ನದ ಊಟದ ವೇಳೆಗೂ ನಡುವೆ ನಾವೇನಾದರೂ ಅವಳಿಗೆ ತೊಂದರೆ ಕೊಡುವುದಾದರೆ, ನಮ್ಮ ಚರ್ಮವನ್ನು ಸುಲಿಯುವುದಾಗಿ ಎಚ್ಚರಿಸಿದಳು. ನಮಗೊಂದು ವಿಲಕ್ಷಣವಾದ ಚಮಚ ಸಿಕ್ಕಿತ್ತು ; ನಾವು ಅದನ್ನು, ಅವಳು ನಮಗೆ ಕಟ್ಟಪ್ಪಣೆಯನ್ನು ಅನುಗ್ರಹಿಸಿದ್ದಾಗ, ಅವಳ ಮುಂ-ಕವಚದ ಜೇಬಿಗೆ ಸೇರಿಸಿದೆವು, ಮತ್ತು ಅದು ಸುಲಲಿತವಾಗಿ ಮಧ್ಯಾಹ್ನದೊಳಗಾಗಿ ಜಿಮ್ಮನ ಕೈಗೆ ಸೇರಿತು; ಅದೊಂದೇ ಅಲ್ಲ, ಜತೆಗೆ ಆ ಸಣ್ಣ ಮೊಳೆಯೂ ತಲುಪಿತು. ಈ ವ್ಯವಹಾರದಿಂದ ನಮಗೆ ತುಂಬಾ ಸಮಾಧಾನವಾಯಿತು ; ನಾವು ಇದಕ್ಕಾಗಿ ಪಟ್ಟ ಶ್ರಮದ ಎರಡರಷ್ಟನ್ನು ಬಾಳುವ ಯೋಗ್ಯತೆ ಈ ಕೆಲಸಕ್ಕೆ ಇರುವುದೆಂದು ಟಾಮನ ನಂಬಿಕೆ : ಏಕೆಂದರೆ, ಅವನು ಹೇಳಿದಂತೆ, ಈಗ ಅವಳು ಇನ್ನೊಂದೂಸ, ತನ್ನ ಜೀವ ಹೋದರೂ, ಎರಡು ಸಲ ಸರಿಯಾಗಿ ಎಣಿಸಲಾರಳ; ಸರಿಯಾಗಿ ಎಣಿಸಿದಾಗ ಕೂಡ ತಾನು ಹಾಗೆ ಮಾಡಿದ್ದನ್ನು ಅವಳೇ ನಂಬುವುದಿಲ್ಲ ; ಮುಂದಿನ ಮೂರು ವರುಷಗಳಲ್ಲಿ ಅವಳು ಎಣಿಸಿ ಎಣಿಸಿ ತಲೆಕೆಡಿಸಿಕೊಂಡು ಎಣಿಕೆ

ಯನ್ನೇ ಬಿಟ್ಟು ಬಿಡುವಳು ; ಮತ್ತು ಆಮೇಲೆ ಯಾರಾದರೂ ಅವಳನ್ನು ಎಣಿಸು ಎಂದು ಕೇಳಿದರೆ ಅವಳು ಅಂಥವರನ್ನು ಕೊಂದುಬಿಡಲು ತಂದುಕೆಂವಳು.

ಆ ರಾತ್ರಿ ನಾವು ಕದ್ದಿದ್ದ ಹಚ್ಚಡವನ್ನು ತಂದು ಮತ್ತೆ ಅದರ ತಂತಿಯ ಮೇಲೆ ಹಾಕಿದೆವು, ಮತ್ತು ಅವಳ ಕಿರು-ಕೋಣೆಯೊಳಗಿದ್ದ ಇನ್ನೊಂದು ಹಚ್ಚಡವನ್ನು ಅಪ ಹರಿಸಿದೆವು. ತನ್ನ ಬಳಿ ಎಷ್ಟು ಹಚ್ಚಡಗಳಿವೆ ಎನ್ನುವುದು ಅವಳಿಗೇ ತಿಳಿಯದೆ ಹೋಗುವವರೆಗೂ, ಅವಳು ಅದನ್ನು ಗಮನಕ್ಕೆ ತಂದುಕೊಳ್ಳದಂತಾಗುವವರೆಗೂ, ಮತ್ತು ಆ ಕೊರಗಿನಿಂದ ಅವಳು ತನ್ನ ಜೀವಮಾನವೆಲ್ಲ ಸಿಡಿಮಿಡಿಗೊಳ್ಳುವುದಿಲ್ಲ ಎನ್ನು ವುದೂ, ಅವಳು ಮತ್ತೆ—ತನ್ನ ಜೀವ ಹೋದರೂ—ಎಣಿಸುವ ತಂಟೆಗೇ ಹೋಗುವು ದಿಲ್ಲ—ಅದಕ್ಕೆ ಮುನ್ನ ತನ್ನ ಪ್ರಾಣಬಿಡಲೂ ಹಿಂದೆಗೆಯುವುದಿಲ್ಲ ಎನ್ನುವುದೂ ನಮಗೆ ಖಚಿತವಾಗುವವರೆಗೂ, ನಾವು ಹೀಗೆಯೇ ಒಂದೆರಡು ದಿನಗಳವರೆಗೆ ಆ ಹಚ್ಚಡವನ್ನು ತಂದಿಡುವುದು—ಕದ್ದು ಬಿಡುವುದು, ತಂದಿಡುವುದು—ಕದ್ದು ಬಿಡುವುದು ಇದನ್ನೇ ಮಾಡುತ್ತಿದ್ದೆವು.

ಕರುವಿನ, ಇಲಿಗಳ ಮತ್ತು ಕುಲಗೆಟ್ಟುಹೋದ ಎಣಿಕೆಯ ಕೃಪೆಯಿಂದ ಆ ಷರಟು ಚಮಚ ಮತ್ತು ಮೋಂಬತ್ತಿಗಳ ಮಟ್ಟಿಗೆ ನಮ್ಮ ಯೋಜನೆ ಅಣಿಗೊಂಡಿತು; ಮೋಂ ಬತ್ತಿ-ಹಿಡಿಯ ವಿಷಯ ತೀರಾ ಅಮುಖ್ಯವಾದದ್ದು, ಕ್ರಮೇಣ ಮರೆತು ಹೋಗುತ್ತದೆ.

ಆ ಹೂರಣಗಡುಬು ಮಾತ್ರ ಬಲುಕಷ್ಟದ ಕೆಲಸವಾಗಿತ್ತು. ಅದರ ಸಂಬಂಧದಲ್ಲಿ ನಮಗೊದಗಿದ ಕಷ್ಟಗಳಿಗೆ ಕೊನೆಯೇ ಇರಲಿಲ್ಲ. ನಾವು ಅದಕ್ಕಾಗಿ ದೂರದಲ್ಲಿದ್ದ ಕಾಡಿಗೆ ನಡೆದೆವು; ಅಲ್ಲಿ ಅದನ್ನು ಬೇಯಿಸಿದೆವು, ಕಡೆಗೂ ನಾವದನ್ನು ಬಲು ತೃಪ್ತಿಕರ ವಾಗಿ ಸಾಧಿಸಿಯೇ ಬಿಟ್ಟೆವು; ಆದರೆ ಎಲ್ಲಾ ಕೆಲಸಗಳನ್ನೂ ನಾವು ಒಂದೇ ದಿನದಲ್ಲಿ ಮಾಡಲಿಲ್ಲ. ಅದಕ್ಕೆ ಮೊದಲು ಮೂರು ತೊಳೆಯುವ ತಣಿಗೆ ಭರ್ತಿ ಹಿಟ್ಟನ್ನು ನಾವು ಉಪಯೋಗಿಸಬೇಕಾಗಿ ಬಂತು ; ನಮ್ಮ ಮೈಕೈ ಮೇಲೆ ಇಲ್ಲಲ್ಲಿ ಸುಮಾರಾಗಿಯೇ ಸುಟ್ಟ ಗಾಯಗಳಾಗಿದ್ದವು ; ಹೊಗೆಯಿಂದ ಕಣ್ಣು ಇಂಗಿ ಹೋಗಿತ್ತು; ಏಕೆಂದರೆ ನಮಗೆ ಬೇಕಾಗಿದ್ದುದು ಒಂದು ಬಿರುಸುಹೊದಿಕೆಯ ರೊಟ್ಟಿಯೇ ಹೊರತು ಬೇರೆ ಯಾವುದೂ ಅಲ್ಲ, ನೋಡಿ. ನಮಗದನ್ನು ಸರಿಯಾಗಿ ಉಬ್ಬಿಸುವುದಕ್ಕೇ ಆಗಲಿಲ್ಲ ; ಅದ ಉದ್ದಕ್ಕೂ ಕುಳಿಬೀಳುತ್ತಲೇ ಇತ್ತು. ಆದರೆ ಕಟ್ಟಕಡೆಗೆ ನಮಗೆ ಸರಿಯಾದ ದಾರಿ ಯೇನೋ ಹೊಳೆಯಿತು. ಅದೇನೆಂದರೆ : ನೂಲೇಣಿಯನ್ನೂ ಕಡುಬಿನೊಳಗಿಟ್ಟು ಬೇಯಿಸುವುದು, ಸರಿ, ಅಲ್ಲಿಂದ ಎರಡನೆಯ ರಾತ್ರಿ ನಾವು ಜಿಮ್ಮನೊಂದಿಗೆ ಸೇರಿ ಕೊಂಡೆವು, ಇಡೀ ಹಚ್ಚಡವನ್ನು ಉದ್ದನೆಯ ಸಣ್ಣಸಣ್ಣ ದಾರಗಳ ರೂಪಕ್ಕೆ ತಂದು ಅವುಗಳನ್ನು ಕೂಡಿಸಿ ಹೊಸೆದೆವು; ಬೆಳಗಾಗುವುದರೊಳಗಾಗಿ ಹಗ್ಗವೊಂದನ್ನು ತಯಾರಿ ಸಿದೆವು; ನೀವು ಅದನ್ನು ಯಾರನ್ನಾದರೂ ನೇಣುಹಾಕುವುದಕ್ಕೆ ಕೂಡ ಬಳಸಬಹುದಾ

ದಷ್ಟು ಮುದ್ದಾಗಿತ್ತು. ಅದನ್ನು ಮಾಡುವುದಕ್ಕೆ ಒಂಬತ್ತು ತಿಂಗಳ ಕಾಲ ಹಿಡಿಯಿತೆಂದು ನಟಿಸಿದೆವು.

ಮಧ್ಯಾಹ್ನಕ್ಕೆ ಮುಂಚೆಯೇ ನಾವು ಅದನ್ನು ಕಾಡಿಗೆ ಒಯ್ದೆವು; ಅದು ಕಣಕದ ಚೀಲದೊಳಕ್ಕೆ ಹೋಗಲೇ ಬಲ್ಲದು, ಇಡೀ ಹಚ್ಚಡದಿಂದ ತಯಾರಿಸಿದ್ದಾಗಿದ್ದರಿಂದ, ನಮಗೆ ನಲವತ್ತು ಕಡುಬುಗಳು ಬೇಕಾಗಿದ್ದರೆ ಅಷ್ಟಕ್ಕೂ ಒದಗುವಷ್ಟು ಹಗ್ಗವಿದ್ದುದಲ್ಲದೆ ಕೂಟಿಗೂ ಪಲ್ಯಕ್ಕೂ ಮತ್ತು ನಿಮಗೆ ಇಷ್ಟವಾದ ಇನ್ನು ಯಾವುದಾದರೂ ಖಾದ್ಯಕ್ಕೂ ತುಂಬುಲು ಬೇಕಾದಷ್ಟು ಹಗ್ಗ ಉಳಿದಿತ್ತು, ಇಡೀ ಊಟವನ್ನೇ ನಾವು ಅದರಿಂದ ಸಿದ್ದಗೊಳಿಸಬಹುದಿತ್ತು.

ಆದರೆ ನಮಗದು ಅನಗತ್ಯವಾಗಿತ್ತು. ಆ ಹೂರಣಗಡುಬಿಗೆ ಎಷ್ಟು ಹಗ್ಗವನ್ನು ತುಂಬಲಾದೀತೋ ಅಷ್ಟುಮಾತ್ರ ನಮಗೆ ಬೇಕಾಗಿತ್ತು; ಆದ್ದರಿಂದ ಉಳಿದದ್ದನ್ನು ನಾವು ಆಚೆಗೆ ಬಿಸಾಡಿದೆವು ನಾವು ಯಾವ ಹೂರಣಗಡುಬನ್ನೂ ಕೈತೊಳೆಯುವ ತಣಿಗೆಯ ಮೇಲೆ ಬೇಯಿಸಲಿಲ್ಲ–ಏಕೆಂದರೆ ಬೆಸುಗೆ ಕರಗಿಹೋಗುವುದೆಂಬ ಭಯವಿತ್ತು. ಆದರೆ ಸೈಲಾಸ್ ಚಿಕ್ಕಪ್ಪನ ಬಳಿ ಒಂದು ಬಲು ಶ್ರೇಷ್ಠವಾದ ಹಿತ್ತಾಳೆಯ ತಾಟಿತ್ತು; ಅವನು ಅವರ ಬಗೆಗೆ ತುಂಬಾ ಸದ್ಭಾವನೆಯಿಂದಿದ್ದನು; ಅದಕ್ಕೆ ಕಾರಣವಿಷ್ಟೇ! ಆದಿಯಲ್ಲಿ ಅದಕ್ಕೆ ಒಂದು ಉದ್ದನೆಯ ಮರದ ಹಿಡಿ ಇದ್ದು. ಅದು ಅವನ ಪೂರ್ವೀರಲ್ಲೊಬ್ಬನಿಗೆ ಸೇರಿತ್ತಂತೆ. ಅದು ಇಂಗ್ಲೆಂಡಿನಿಂದ ವಿಲಿಯಮ್ ದಿ ಕಾನ್ಕರರ್ ಎಂಬುವನೊಂದಿಗೆ ಮೇಫ್ಲವರ್ ಹಡಗಿನಲ್ಲೋ ಅಥವಾ ಆರಂಭಕಾಲದ ಹಡಗುಗಳಲ್ಲೊಂದರಲ್ಲೋ ಇಲ್ಲಿಗೆ ಬಂತಂತೆ, ಅದನ್ನೊಂದು ಉಪ್ಪರಿಗೆಯ ಕೋಣೆಯಲ್ಲಿ ಅನೇಕಾನೇಕ ಹಳೆಯ ಗಡಿಗೆಗಳು ಮುಂತಾದ ಬೆಲೆಯಾದ ವಸ್ತುಗಳೊಂದಿಗೆ ಬಚ್ಚಿಡಲಾಗಿತ್ತಂತೆ–ಅವು ಬೆಲೆಯಾದ ವಸ್ತುಗಳು ಎಂದರೆ ಅವು ಕೆಲಸಕ್ಕೆ ಬರುತ್ತವೆ ಎಂದಲ್ಲ, ಅವು ನಿಷ್ಪ್ರಯೋಜಕವೇ ಸರಿ; ಆದರೆ ಅವು ಪ್ರಾಚೀನ ಅವಶೇಷಗಳಾಗಿರುವುದರಿಂದ, ನೋಡಿ. ಅದನ್ನು ನಾವು ರಹಸ್ಯವಾಗಿ ಎಳೆದುಕೊಂಡೆವು, ಅಲ್ಲಿಗೆ ಒಯ್ದೆವು. ಆದರೆ ನಮಗೆ ವಿಧಾನವೇ ತಿಳಿಯದಿದ್ದುದರಿಂದ, ಅದರಮೇಲೆ ಬೇಯಿಸಿದ ಕಡುಬುಗಳು ವ್ಯರ್ಥವಾದವು. ಕಡೆಯ ಕಡುಬಿನ ಹೊತ್ತಿಗೆ ಸಮ್ಮನ್ನು ಅನುಗ್ರಹಿಸಿತು. ನಾವು ಹಿಟ್ಟನ್ನು ತಟ್ಟಿ ಅದನ್ನು ಕೆಂಡದ ಮೇಲಿಟ್ಟು, ಹಗ್ಗವನ್ನು ಆ ಹಿಟ್ಟಿನ ಹಾಳೆಯಮೇಲೆ ಸರಿಯಾಗಿ ಕೂರಿಸಿ ಆಮೇಲೆ ಮೇಲುಹಾಳೆಯಿಂದ ಮುಚ್ಚಿ ಸುತ್ತಲೂ ಬಿಗಿಮಾಡಿದೆವು. ಅದರಮೇಲೆ ಶೊಳಗುವ ಕೆಂಡಗಳನ್ನು ಹಾಸಿ, ಐದಡಿಗಳಷ್ಟು ದೂರದಲ್ಲಿ ನಿಂತು, ಹದವಾಗಿದ್ದ, ತಣ್ಣಗಿದ್ದ ಅದರ ಉದ್ದನೆಯ ಕಾವನ್ನು ಹಿಡಿದಿದ್ದೆವು. ಹದಿನೈದು ನಿಮಿಷಗಳಲ್ಲಿ ಅದೊಂದು ಹೂರಣಗಡುಬಾಯಿತು; ಅದರ ನೋಟವೇ ನಮಗೆ ತೃಪ್ತಿಯನ್ನು ತಂದಿತ್ತು. ಅದನ್ನು ತಿನ್ನುವ ಮನುಷ್ಯನಿದ್ದಾನಲ್ಲ. ಅವನು ಒಂದೆರಡು ಪೊರೆಯಷ್ಟು ಹಲ್ಲುಚುಚ್ಚುವ ಕಡ್ಡಿಗಳನ್ನಿಟ್ಟುಕೊಂಡಿರಲೇಬೇಕಾಗುತ್ತದೆ. ಈಹಗ್ಗದೇಣಿ ಅವನಿಗೆ ಸರಿಯಾದ ಕೆಲಸ ಕೊಡದೇ

ಹೋದಲ್ಲಿ ಮತ್ತು ಅವನ ಮುಂದಿನ ಜನ್ಮಕ್ಕೂ ಸಾಕೆನಿಸುವಷ್ಟು ಹೊಟ್ಟೆನೋವು ಅವನಿಗೆ ಬಾರದೆ ಹೋದಲ್ಲಿ ನಾನು ಮಾತಾಡುತ್ತಿರುವ ವಿಷಯವೇ ನನಗೆ ತಿಳಿಯದು ಎನ್ನಬೇಕಾಗುತ್ತದೆ.

ನಾವು ಆ ಮಂತ್ರಗಾತಿಯ ಹೂರಣಗಡುಬನ್ನು ಜಿಮ್ಮನ ತಾಟಿನಲ್ಲಿ ಹಾಕಿದಾಗ ನಾಟ್ ಆಕಡೆಗೇ ಕಣ್ಣೆತ್ತಲಿಲ್ಲ ಆ ತಾಟಿನ ಒಳಗೆ ಉಣಿಸಿನ ಕೆಳಗೆ ನಾವು ಮೂರು ತಗಡಿನ ತಟ್ಟೆಗಳನ್ನು ಹಾಕಿದ್ದೆವು, ಜಿಮ್ಮನಿಗೆ ಬೇಕಾಗಿದ್ದ ಪದಾರ್ಥಗಳೆಲ್ಲವೂ ಅವನಿಗೆ ಹೋಗಿಮುಟ್ಟಿದ್ದವು. ಸುತ್ತಲೂ ಯಾರೂ ಇಲ್ಲದಿದ್ದಾಗ ಅವನು ಹೂರಣಗಡುಬನ್ನು ಒಡೆದು ನೂಲೇಣಿಯನ್ನು ತೆಗೆದುಕೊಂಡು ಹುಲ್ಲಿನ ಹಾಸಿಗೆಯೊಳಗೆ ಮುಚ್ಚಿಟ್ಟನು. ತಗಡಿನ ತಟ್ಟೆಗಳಮೇಲೆ ಕೆಲವು ಸಂಜ್ಞೆಗಳನ್ನು ಗೀಚಿ ಕಿಟಕಿಯ ರಂಧ್ರದಾಚೆಗೆ ಬಿಸಾಡಿದನು.

## ೩೮

ಲೇಖನಿಗಳನ್ನು ತಯಾರಿಸುವುದಂತೂ ದುಸ್ಸಹ ಜಟಿಲಕಾರ್ಯವಾಗಿತ್ತು ; ಗರಗಸವೂ ಹಾಗೆಯೇ ; ಆದರೆ ಸಂದೇಶಗಳನ್ನು ಕೊರೆಯುವುದೇ ಅತಿಜಟಿಲವಾದ್ದೆಂಬುದು ಜಿಮ್ಮನ ಅಭಿಪ್ರಾಯವಾಗಿತ್ತು ಹಾಗೆಂದರೆ ಸೆರೆಯಾಳು ಗೋಡೆಯ ಮೇಲೆ ಏನನ್ನಾದರೂ ಗೀಚುವುದು ಎಂದರ್ಥ. ಅವನು ಅದನ್ನು ಮಾಡಬೇಕಾಗಿತ್ತು ; ಮಾಡಿಯೇ ತೀರಬೇಕೆಂದು ಟಾಮ್ ಹೇಳಿದ. ಗಣ್ಯನಾದ ಸೆರೆಯಾಳು ತಾನು ಗೀಚಿದ ಸಂದೇಶವೊಂದನ್ನು ತನ್ನ ಬಿರುದು-ಬಾವಲಿಗಳನ್ನೂ ಬಿಡದೆ ಹೋದದ್ದೇ ಇಲ್ಲ.

"ಲೇಡಿ ಜೇನ್ ಗ್ರೇಯನ್ನು ನೋಡು ; ಗಿಲ್ಫರ್ಡ್ ಡಡ್ಲೆಯನ್ನು ನೋಡು ; ಪ್ರಾಚೀನನಾದ ನಾರ್ತಂಬರಲೆಂಡನ್ನು ನೋಡು ! ಹಕ್, ಒಂದು ವೇಳೆ ಅದು ತುಂಬಾ ತಾಪತ್ರಯದ ಕೆಲಸವೆಂದರೂ—ನೀನು ಮಾಡುವುದೇನಿದೆ ? ನೀನದನ್ನು ಸಾಧಿಸುವುದಾದರೂ ಹೇಗೆ ? ಜಿಮ್ ತನ್ನ ಸಂದೇಶವನ್ನೂ ಬಿರುದು ಬಾವಲಿಗಳನ್ನೂ ಉಳಿಸಿ ಹೋಗಲೇಬೇಕು. ಎಲ್ಲರೂ ಮಾಡುವುದು ಹಾಗೆಯೇ"

ಜಿಮ್ ಹೇಳಿದ :

"ಇದೇನು ಮಿ. ಟಾಮ್ ! ನನ್ನಲ್ಲಿ ಯಾವ ಬಿರುದು-ಬಾವಲಿ ಇದೆ ? ನೀನು

ಕೊಟ್ಟಿರುವ ಈ ಹಳೆಯ ಷರಟನ್ನು ಬಿಟ್ಟರೆ ನನ್ನಲ್ಲಿ ಏನೂ ಇಲ್ಲ; ಅದರ ಮೇಲೆ ನಾನು ನನ್ನ ದಿನಚರಿಯನ್ನು ಇಡಬೇಕೆಂದು ನಿನಗೂ ಗೊತ್ತಿದೆ."

"ಓ, ನಿನಗದು ತಿಳಿಯುವುದಿಲ್ಲ ಜಿಮ್; ಅದೇ ಬೇರೆ, ಬಿರುದು-ಬಾವಲಿಯೇ ಬೇರೆ."

"ಹೌದು; ಏನಾಗಲಿ ಜಿಮ್ಮನ ಬಳಿ ಯಾವ ಬಿರುದು-ಬಾವಲಿಗಳೂ ಇಲ್ಲದಿರುವುದರಿಂದ, ಅವನು ಹಾಗೆನ್ನುವುದು ಸರಿಯಾಗಿಯೇ ಇದೆ," ಎಂದೆ ನಾನು

"ನಾನೂ ಅದನ್ನು ಬಲ್ಲೆನೆಂದು ತೋರುತ್ತದೆ. ಇಲ್ಲಿಂದ ಹೊರಟು ಹೋಗುವುದರೊಳಗಾಗಿ ಅವನು ಒಂದನ್ನು ಹೊಂದಿಸಿಕೊಳ್ಳಲೇಬೇಕಾಗಿದೆ—ಏಕೆಂದರೆ, ಅವನು ಯೋಗ್ಯ ರೀತಿಯಲ್ಲಿ ವಿಮುಕ್ತನಾಗಲಿದ್ದಾನೆ, ಅವನ ವ್ಯವಹಾರದಲ್ಲಿ ಲೋಪಗಳಿರಲೇ ಬಾರದು." ಎಂದ ಟಾಮ್.

ನಾನೂ ಜಿಮ್ಮನು ಇಟ್ಟಿಗೆಯ ಚೂರೊಂದನ್ನು ತಂದಿಟ್ಟುಕೊಂಡೆವು. ಜಿಮ್ ತನ್ನ ಹಿತ್ತಾಳೆ ಮೋಂಬತ್ತಿ ಹಿಡಿಯನ್ನೂ ನಾನು ನನ್ನ ಚಮಚವನ್ನೂ, ಲೇಖನಿಗಳನ್ನಾಗಿ ಮಾಡಿಕೊಳ್ಳುವುದಕ್ಕಾಗಿ, ಅದರ ಮೇಲೆ ತೀಡುತ್ತಿದ್ದೆವು, ಆಗ ಟಾಮ್ ಬಿರುದು-ಬಾವಲಿಗಳ ಬಗೆಗೆ ಯೋಚನೆ ಮಾಡುತ್ತಿದ್ದ. ಕ್ರಮೇಣ ಅವನಿಗೆ ಹಲವಾರು ಸೊಗಸಾದ ಉಪಾಯಗಳು ಹೊಳೆದವು; ಅವುಗಳಲ್ಲಿ ಯಾವುದನ್ನು ಎತ್ತಿಕೊಳ್ಳುವುದೆಂದು ಅವನಿಗೊಂದು ಸಮಸ್ಯೆಯಾಗಿತ್ತು. ಅವುಗಳಲ್ಲಿ ಒಂದಂತೂ ಅವನಿಗೆ ಬಲುಮೆಚ್ಚಾಯಿತು; ಅದನ್ನೆ ಅನುಸರಿಸುವುದಾಗಿ ನಿರ್ಧರಿಸಿದ, ಅವನು ಹೇಳಿದ:

"ನಾವು ತಯಾರಿಸುವ ಗುರಾಣಿ ಹೀಗಿರುತ್ತದೆ: ಅದನ್ನು ಹಿಡಿದವನ ಬಲಗಡೆಗಿರುವ ಅದರ ಕೆಳಭಾಗದಲ್ಲಿ ಚಿನ್ನದ ಪಟ್ಟಿ ಇರುತ್ತದೆ, ಆ ಪಟ್ಟಿ ಗುರಾಣಿಯ ಬಲ ಮೇಲ್ತುದಿಯಿಂದ ಎಡ ಕೆಳತುದಿಯ ಹತ್ತಿರಕ್ಕೆ ಹಾದುಬರುತ್ತದೆ, ಗುರಾಣಿಯ ಕೇಂದ್ರದಲ್ಲೊಂದು ಕಪ್ಪುಕೆಂಪು ಬೆರೆತ ಬಣ್ಣದ ಹಿಪ್ಸನೇರಿಳೆಯ ಹಣ್ಣಿರುತ್ತದೆ,—ಅಲ್ಲಿ ಹಾದು ಹೋಗುವ ಅಡ್ಡಪಟ್ಟಿಗಳೂ ಇರುತ್ತವೆ; ಗುರಾಣಿಯ ಮೇಲಿನ ಲಾಂಛನಗಳೆಲ್ಲದರ ಸಾಮಾನ್ಯ ಪ್ರತಿನಿಧಿಯಾಗಿ ಹಿಂಗಾಲೂರಿ ತಲೆಯೆತ್ತಿದ್ದ ನಾಯಿಯೊಂದು ಮಲಗಿರುತ್ತದೆ; ಆ ನಾಯಿಯ ಕಾಲಿನ ಕೆಳಗೆ ಹಾಕಿರುವ ಸರಪಳಿ 'ಕೋಟೆಯ ಮೇಲಿನ ಕೈಪಿಡಿಗೋಡೆ ಯಾಕಾರದಲ್ಲಿರುತ್ತದೆ, ದಾಸ್ಯಸೂಚಕವಾಗಿ; ಕಿರುದೆರೆಗಳ ಪಂಕ್ತಿಯನ್ನು ಕೊರೆದಿರುವಂಥ ಅದರ ಮೇಲುಭಾಗದಲ್ಲಿ ತಲೆಕೆಳಗಾದ V–ಆಕಾರದ ವಕ್ರರೇಖೆ ಹಸಿರು ಬಣ್ಣದ್ದಾಗಿರುತ್ತದೆ; ನೀಲಿಯ ಹರಹಿನಲ್ಲಿ ತಲೆಕೆಳಗಾದ ಚಿಕ್ಕ ಚಿಕ್ಕ ಕಮಾನುಗಳಿಂದಾದ ಮೂರು ರೇಖೆಗಳು ಇರುತ್ತವೆ. ಕೆತ್ತಿದ ಕ್ರಕಚರೇಖೆಯ ಮೇಲೆ ಮಂಡಿಯೂರಿ ತಲೆಯೆತ್ತಿ ನಾಭೀಬಿಂದುಗಳನ್ನು ಚೆಲ್ಲಿದಂತಿರುತ್ತದೆ. ಶಿರಸ್ತ್ರಾಣದ ಮೇಲಿರುವ ಶಿರಾಭರಣದಲ್ಲಿರುವ ಓಡುಕುಳಿ ಕಪ್ಪು ನೀಗ್ರೊ ತನ್ನ ಹೆಗಲ ಮೇಲೆ ಪಾಪಮಯವಾದ ಕೋಲೊಂದರ ಮೇಲೆ ತನ್ನ ಹೊರೆಯೊಂದನ್ನು ಕಟ್ಟಿಕೊಂಡಿರುತ್ತಾನೆ. ಗುರಾಣಿಯು

ಇಕ್ಕೆಲದ ಬೆಂಬಲದಂತಿರುವ ಆಕೃತಿಗಳಿಗೆ ಬದಲಾಗಿ ಎರಡು ಊರ್ಧ್ವ ರಕ್ತರೇಖೆಗಳು,– ನಾವು ಮತ್ತು ನೀನು! ಅದರ ಅಡಿಯಲ್ಲೊಂದು ಧ್ಯೇಯವಾಕ್ಯ: "Maggiore fretta, Minor atto" ನಾನು ಅದನ್ನು ಒಂದು ಗ್ರಂಥದಿಂದ ಆರಿಸಿ ತಂದಿದ್ದೇನೆ; ಅರ್ಥವಿಷ್ಟೇ: ಹೆಚ್ಚು ಆತುರ, ಕಡಮೆ ವೇಗ"

"ಅಬ್ಬಬ್ಬ! ಧ್ಯೇಯವಾಕ್ಯವಿರಲಿ, ಉಳಿದುದರ ಅರ್ಥವೇನು?" ಎಂದೆ ನಾನು.

"ಅದನ್ನೆಲ್ಲಾ ಯೋಚಿಸುತ್ತ ಕೂರಲು ನಮಗೀಗ ಸಮಯವಿಲ್ಲ; ನಾವದನ್ನು ಮಾಡಬೇಕು ಇಲ್ಲ, ತೊಲಗಿಹೋಗಬೇಕು" ಎಂದನವನು.

"ಎಲ್ಲವೂ ಬೇಡ, ಅದರಲ್ಲಿ ಸ್ವಲ್ಪವನ್ನಾದರೂ ಹೇಳು. ಕೇಂದ್ರವೆಂದರೇನು?"

"ಕೇಂದ್ರ—ಕೇಂದ್ರವೆಂದರೆ—ನಿನಗದು ಗೊತ್ತಾಗಬೇಕಾಗಿಲ್ಲ, ಬಿಡು. ಅವನು ಅದಕ್ಕೆ ಬಂದಾಗ ನಾನವನಿಗೆ ಅದನ್ನು ರಚಿಸುವ ವಿಧಾನವನ್ನು ತೋರಿಸುತ್ತೇನೆ"

"ಹಣ್ಣು! ಟಾಮ್ ನೀನದನ್ನು ಇನ್ನೊಬ್ಬರಿಗೂ ಹೇಳಬಹುದಾಗಿದೆ. 'ಪಾಪ ಮಯವಾದ ಕೋಲು' ಎಂದರೇನು?"

"ಓ ನನಗದು ತಿಳಿಯದು. ಏನಾಗಲಿ. ಅದು ಅವನಿಗೆ ಅಗತ್ಯ. ಬಿರುದಾಂಕಿತರೆಲ್ಲರೂ ಅದನ್ನು ಇಟ್ಟುಕೊಂಡಿರುತ್ತಾರೆ."

ಅದು ಅವನ ರೀತಿಗೆ ಒಪ್ಪುವಂತಿತ್ತು. ನಿಮಗೆ ಏನನ್ನಾದರೂ ವಿವರಿಸುತ್ತಲೇ ಇರಲಿಲ್ಲ. ಒಂದು ವಾರದ ಕಾಲ ನೀವು ಅವನನ್ನು ಚಂಡಿಸಿ ಕೇಳಿದರೂ, ಫಲ ಅಷ್ಟೇ.

ಅವನು ಬಿರುದು-ಬಾವಲಿಯ ಯೋಜನೆಯನ್ನು ಕಾರ್ಯರೂಪಕ್ಕೆ ತಂದದ್ದಾಯಿತು; ಇನ್ನು ಅದರಲ್ಲಿ ಉಳಿದಿದ್ದು ಒಂದೇ ಕೆಲಸ—ದುಃಖಪೂರ್ಣ ಸಂದೇಶವೊಂದನ್ನು ಅಣಿ ಮಾಡಿಕೊಳ್ಳುವುದು. ಅವರೆಲ್ಲರಂತೆಯೂ ಜಿಮ್ ತಾನೂ ಒಂದು ಅಂಥಾದ್ದನ್ನು ಇಟ್ಟು ಕೊಂಡಿರಬೇಕೆಂದು ಅವನು ತೀರ್ಮಾನಿಸಿದ್ದ, ಅದಕ್ಕಾಗಿ ಅವನು ಅನೇಕ ಸಂದೇಶಗಳನ್ನು ಪಟ್ಟಿ ಮಾಡಿದ. ಅವುಗಳನ್ನು ಕಾಗದದ ಮೇಲೆ ಬರೆದು ಗಟ್ಟಿಯಾಗಿ ಓದಿದ. ಅವು ಹೀಗಿದವು :—

1 ಇಲ್ಲೊಬ್ಬ ಸೆರೆಯಾಳಿನ ಎದೆಯೊಡೆದು ಹೋಯಿತು.

2 ಇಲ್ಲೊಬ್ಬ ಬಡಪಾಯಿ ಸೆರೆಯಾಳು ಇಡೀಲೋಕದಿಂದಲೂ, ಕಳೆಯಿಂದಲೂ ಪರಿತ್ಯಕ್ತನಾಗಿ ತನ್ನ ದುಃಖಮಯ ಜೀವನದುದ್ದಕ್ಕೂ ಸವೆದು ಹೋದನು.

3 ಇಲ್ಲೊಂದು ಏಕಾಕಿ ಹೃದಯ ಒಡೆದುಹೋಯಿತು, ಕೊರಗಿಕೃಶವಾಗಿ ಹೋದ ಚೇತನ ಮೂವತ್ತೇಳು ವರುಷಗಳ ಒಂಟಿ ಸೆರೆಯನ್ನನುಭವಿಸಿ ಚಿರಶಾಂತಿ ಪಡೆಯಿತು.

4 ಮನೆಗೆಟ್ಟು ಕಳೆಯುಲಿದ ಗುಣಾಢ್ಯ ಅಪರಿಚಿತನೊಬ್ಬನು—ಹದಿ

ನಾಲ್ಕನೆಯ ಲೂಯಿಯ ಅನೌರಸ ಪುತ್ರನವನು—ಮೂವತ್ತೇಳು ವರುಷಗಳ ಕಠಿನ ಸೆರೆಯನ್ನನುಭವಿಸಿ ಧ್ವಂಸವಾದನು.

ಅದನ್ನು ಓದುತ್ತಿರಬೇಕಾದರೆ ಟಾಮನ ಕೊರಲು ಕಂಪಿಸುತ್ತಿತ್ತು : ಅವನು ಇನ್ನೇನು ಕುಸಿದು ಬೀಳುವುದರಲ್ಲಿದ್ದ. ಗೋಡೆ·ಗೀಚಿದಾಗಿ ಅವುಗಳಲ್ಲಿ ಜಿಮ್ಮನಿಗೆ ಯಾವುದನ್ನು ಕಳಿಸಕೊಡಬೇಕೆಂಬುದೇ ಅವನಿಗೆ ತೋರಲಿಲ್ಲ. ಅವೆಲ್ಲವೂ ಚೆನ್ನಾಗಿಯೇ ಇದ್ದವು. ಆದ್ದರಿಂದ ಅವುಗಳೆಲ್ಲವನ್ನೂ ಗೋಡೆಯಮೇಲೆ ಕೊರೆದು ಹಾಕುವಂತೆ ಜಿಮ್ಮನಿಗೆ ಸಲಹೆ ಮಾಡುವುದಾಗಿ ತೀರ್ಮಾನಿಸಿದ. ಅಷ್ಟನ್ನೂ ತಾನು ಮೊಳೆಯಿಂದ ದಿಮ್ಮಿಗಳ ಮೇಲೆ ಕೊರೆಯಬೇಕಾದರೆ ತನಗೆ ಕಡೆಯ ಪಕ್ಷ ಒಂದು ವರುಷವಾದರೂ ಹಿಡಿಯುವುದೆಂದೂ, ತನಗೆ ಅಕ್ಷರಜ್ಞಾನವೇ ಇಲ್ಲವೆಂದೂ ಜಿಮ್ ಹೇಳಿದ. ಆದರೆ ತಾನು ಆ ಅಕ್ಷರಗಳ ಅಚ್ಚುಗಳನ್ನು ಮಾಡಿಕೊಡುವುದಾಗಿಯೂ, ಆಮೇಲೆ ಜಿಮ್ಮನ ಪಾಲಿಗೆ ಉಳಿಯುವ ಕೆಲಸವೆಂದರೆ ಆ ರೇಖೆಗಳನ್ನು ಅನುಸರಿಸುವುದಷ್ಟೇ ಎಂದು ಟಾಮ್ ಹೇಳಿದ ; ಒಡನೆಯೇ ಅದಕ್ಕೆ ಸೇರಿಸಿ ಹೇಳಿದ ;

"ಹಾಗೇ ಯೋಚನೆ ಮಾಡಿದರೆ, ಆ ದಿಮ್ಮಿಗಳು ಕೆಲಸಕ್ಕೆ ಬರುವುದಿಲ್ಲ, ಏಕೆಂದರೆ ಹಿಂದಣ ಸೆರೆಯಾಳುಗಳ ಕತ್ತಲೆ-ಕೋಣೆಗಳಿಗೆ ದಿಮ್ಮಿ—ಗೋಡೆಗಳಿರಲಿಲ್ಲ, ನಾವು ಸಂದೇಶಗಳನ್ನು ಬಂಡೆಯ ಮೇಲೆ ಕೊರೆಯಬೇಕು. ನಾವೀಗ ಒಂದು ಬಂಡೆಯನ್ನು ತರಬೇಕಾಗಿದೆ"

ದಿಮ್ಮಿಗಳಿಗಿಂತ ಬಂಡೆ ಬಲು ಕೆಟ್ಟದೆಂದನು ಜಿಮ್ : ಆ ಸಂದೇಶವನ್ನು ಕೊರೆಯುವುದಕ್ಕೆ ತನಗೆ ಅತಿ ದೀರ್ಘಕಾಲ ಹಿಡಿಯುವುದೆಂದೂ, ತಾನು ಎಂದಿಗೂ ಹೊರಗೆ ಬರುವಂತೆಯೇ ಇಲ್ಲವೆಂದೂ ಹೇಳಿದ, ಅದಕ್ಕೆ ಟಾಮ್ ಅವನ ಸಹಾಯಕ್ಕೆ ನನ್ನನ್ನು ಬಿಡುವುದಾಗಿ ತಿಳಿಸಿದ ; ಆಮೇಲೆ ನಾನೂ ಜಿಮ್ಮನೂ ಲೇಖನಿಗಳನ್ನು ತಯಾರಿಸುತ್ತಿದ್ದ ಕೆಲಸ ಎಲ್ಲಿಗೆ ಬಂದೆಂದು ವೀಕ್ಷಿಸಿದನು, ಅದು ಬಲು ಬೇಸರ ತರುವ ಕಷ್ಟದ ಕೆಲಸವಾಗಿದ್ದುದಲ್ಲದೆ, ಬೇಗ ಬೇಗ ಸಾಗುತ್ತಲೂ ಇರಲಿಲ್ಲ, ನನ್ನ ಕೈ-ಗಾಯಗಳು ಮಾಯುವುದಕ್ಕೆ ಅದು ಅವಕಾಶ ಕೊಡಲಿಲ್ಲ, ನಾವು ಆ ದಿಕ್ಕಿನಲ್ಲಿ ಹೆಚ್ಚಿನ ಪ್ರಗತಿಯನ್ನು ಸಾಧಿಸಿದಂತೆ ನಮಗೆ ತೋರಲಿಲ್ಲ. ಆಗ ಟಾಮ್ ಹೇಳಿದ :

"ಅದನ್ನು ಹೇಗೆ ಮಾಡಬೇಕೆಂಬುದು ನನಗೆ ಗೊತ್ತು. ಹೇಗಿದ್ದರೂ ಬಿರುದು-ಬಾವಲಿಯ ಸಲುವಾಗಿ ಮತ್ತು ದುಃಖಪೂರ್ಣ ಶಾಸನ ಸಲುವಾಗಿ ನಮಗೊಂದು ಬಂಡೆ ಬೇಕಾಗಿದೆ ; ನಾವು ಒಂದೇ ಕಲ್ಲಿನಿಂದ ಎರಡು ಹಕ್ಕಿಗಳನ್ನು ಕೊಲ್ಲಬಲ್ಲೆವು. ಅಲ್ಲಿ ಗಾಣದ ಹತ್ತಿರ ಒಂದು ದೊಡ್ಡ ಬೀಸುವ ಕಲ್ಲಿದೆ. ನಾವು ಅದನ್ನು ಮೆತ್ತಗೆ ಎಗರಿಸೋಣ. ಅದರ ಮೇಲೆಯೇ ಅವುಗಳನ್ನು ಕೊರೆಯೋಣ, ಮತ್ತು ನಮ್ಮ ಲೇಖನಿಗಳನ್ನು ಗರಗಸವನ್ನೂ ಮಸೆದು ಮಾಡಿಕೊಳ್ಳೋಣ."

ಪುಗಸಟ್ಟೆಯ ಮಾತಲ್ಲ ಅದು; ಆ ಬೀಸುವ ಕಲ್ಲೂ ಅಷ್ಟೇ. ಆದರೂ ನಾವ ದಕ್ಕೆ ಪ್ರಯತ್ನ ಮಾಡುವುದಾಗಿ ನಿರ್ಧರಿಸಿದವು. ಆಗಿನ್ನೂ ಮಧ್ಯರಾತ್ರಿಯಾಗಿರಲಿಲ್ಲ, ನಾವು ಗಾಣದೆಡೆಗೆ ನಡೆದು. ಅದನ್ನು ಮನೆಯ ಬಳಿಗೆ ಉರುಳಿಸಿಕೊಂಡು ಬರಲು ಹೆಣಗಿದೆವು. ಅದು ಪರ್ವತವನ್ನು ಸಾಗಿಸುವಷ್ಟೇ ಸುಲಭದ ಕೆಲಸವಾಗಿತ್ತು.

ಕೆಲವು ಸಲವಂತೂ ನಾವೇನು ಮಾಡಿದರೂ ಅದು ನಮ್ಮ ಮೇಲೆ ಬೀಳದಂತೆ ಮಾಡುವುದು ನಮಗೆ ಸಾಧ್ಯವೇ ಆಗುತ್ತಿರಲಿಲ್ಲ; ಪ್ರತಿಸಲವೂ ಅದು ನಮ್ಮನು ಪುಡಿ ಪುಡಿಮಾಡುವುದರ ಹತ್ತಿರ ಹತ್ತಿರಕ್ಕೆ ಬರುತ್ತಿತ್ತು. ಈ ಕೆಲಸ ಮುಗಿಯುವುದರೊಳ ಗಾಗಿ ಅದು ನಮ್ಮಲ್ಲೊಬ್ಬನನ್ನು ಆಹುತಿ ತೆಗೆದುಕೊಂಡು ಬಿಡುತ್ತದೆಂದು ಟಾಮ್ ಹೇಳಿದ. ನಾವದನ್ನು ಅರ್ಧದಾರಿಗೆ ತಂದೆವು; ಅಷ್ಟಕ್ಕೆ ನಾವು ಪೂರಾ ಸುಸ್ತಾಗಿದ್ದೆವು ಬೆವರಿನಿಂದ ನೆನೆದು ಹೋಗಿದ್ದೆವು ಈ ಶ್ರಮ ನಿಷ್ಫಲವೆಂದು ನಮಗೆ ತೋರಿತು ನಾವು ಹೋಗಿ ಜಿಮ್ಮನನ್ನು ಕರೆದುಕೊಂಡು ಬರಬೇಕಾಯಿತು. ಆಗ ಜಿಮ್ ತನ್ನ ಮಂಚವನ್ನೆತ್ತಿ, ಅದರ ಕಾಲಿನ ಸರಪಳಿಯನ್ನು ಬಿಚ್ಚಿ ತನ್ನ ಕೊರಳಿನ ಸುತ್ತಲೂ ಅದನ್ನು ಸುತ್ತಿಕೊಂಡನು, ಸುರಂಗ ಮಾರ್ಗವಾಗಿ ಈಚೆಗೆ ಬಂದೆವು. ನಾನೂ ಜಿಮ್ಮನೂ ಆ ಬೀಸುವ ಕಲ್ಲನ್ನು ಹಿಡಿದು ಲೀಲಾಜಾಲವಾಗಿ ತಳ್ಳಿಕೊಂಡು ಹೋದೆವು. ಟಾಮು, ಮೇಲ್ವಿಚಾರಣೆ ನಡೆಸುತ್ತಿದ್ದ. ಇಂಥಾ ಮೇಲ್ವಿಚಾರಣೆಯಲ್ಲಿ ಅವನು ನಾನು ನೋಡಿದ ಎಲ್ಲಾ ಹುಡುಗರನು ಮೀರಿಸಿದ್ದ; ಸಮಸ್ತ ಕೆಲಸಗಳನ್ನೂ ಮಾಡುವ ವಿಧಾನ ಅವನಿಗೆ ಗೊತ್ತಿತ್ತು.

ನಾವು ಕೊರೆದಿದ್ದ ಸುರಂಗ ಎಷ್ಟೇ ದೊಡ್ಡದಾಗಿದ್ದರೂ ಒಂದು ಬೀಸುವಕಲ್ಲು ತೂರುವಷ್ಟು ದೊಡ್ಡದಾಗಿರಲಿಲ್ಲ ಅದು. ಆದ್ದರಿಂದ ಜಿಮ್ ಪಿಕಾಸಿಯಿಂದ ಇನ್ನಷ್ಟು ಅಗೆದು ಸಾಕಷ್ಟು ದೊಡ್ಡದು ಮಾಡಿದನು. ಆಮೇಲೆ ಟಾಮ್ ಅದರ ಮೇಲೆ ಮೊಳೆ ಯಿಂದ ಎಲ್ಲಾ ವಿವರಗಳನ್ನೂ ಗುರುತು ಮಾಡಿದನು; ಸುತ್ತಿಗೆಗೆ ಬದಲು ಪಡಸಾಲೆ ಯಲ್ಲಿದ್ದ ಹಳೆಯ ಸಾಮಾನಿನ ರಾಶಿಯಿಂದ ತೆಗೆದು ಗಡಾರಿಯನ್ನೂ, ಉಳಿಗೆ ಬದಲು ಮೊಳೆಯನ್ನೂ ಕೊಟ್ಟು ಅವನನ್ನು ಆ ಕೆಲಸಕ್ಕೆ ತೊಡಗಿಸಿದನು; ಮತ್ತು ಅವನ ಮೊಂಬತ್ತಿ ಪೂರ್ತಿ ಉರಿದು ಹೋಗುವವರಗೂ ಕೆಲಸಮಾಡುತ್ತಿದ್ದು ಆಮೇಲೆ ಹೋಗಿ ಮಲಗಬಹುದೆಂದೂ ಹೇಳಿದನು. ಬಳಿಕ ನಾವು ಹುಲ್ಲುಹಾಸಿಗೆಯ ಕೆಳಗೆ ಬಚ್ಚಿಟ್ಟು ಅದರ ಮೇಲೆ ಮಲಗಬೇಕೆಂದೂ ಹೇಳಿದನು. ಬಳಿಕ ನಾವು ಅವನ ಸರಪಳಿಯನ್ನು ಮಂಚದ ಕಾಲಿಗೆ ಮತ್ತೆ ಬಿಗಿದು ಮಲಗಿಕೊಳ್ಳುವುದರಲ್ಲಿದ್ದೆವು. ಆಗ ಟಾಮುನಿಗೆ ಇನ್ನೇನೊ ಹೊಳೆಯಿತು; ಆದ್ದರಿಂದ ಕೇಳಿದ :

"ಇಲ್ಲಿ ನಿನ್ನ ಬಳಿ ಜೇಡಗಳೇನಾದರೂ ಇವೆಯೆ, ಜಿಮ್ ?"

"ಇಲ್ಲ ನನ್ನ ಪುಣ್ಯಕ್ಕೆ ಇಲ್ಲ, ಮಿ. ಟಾಮ್,"

“ಹಾಗಾದರೆ ನಿನಗೆ ಕೆಲವನ್ನು ತಂದುಕೊಡುತ್ತೇವೆ,”

“ನಿನಗೆ ಕೈಮುಗಿಯುತ್ತೇನೆ, ಮಗು, ನನಗೆ ಒಂದೂ ಬೇಡ. ನನಗೆ ಅವುಗಳನ್ನು ಕಂಡರೇ ಭಯ. ನನಗೆ ಅವುಗಳಿಗಿಂತ ಗದ್ದಲದ ಹಾವೇ ಮೇಲೆನಿಸುತ್ತದೆ,”

ಟಾಮ್ ಒಂದೆರಡು ನಿಮಿಷಕಾಲ ಯೋಚನೆಮಾಡಿ, ಹೇಳಿದ:

“ಅದೊಂದು ಬೇಷಾದ ಸಲಹೆ, ಹಿಂದೆ ಹಾಗೆ ಮಾಡಿದ್ದರೆಂದು ನನ್ನೆಣಿಕೆ; ಅದನ್ನು ಮಾಡಿರಲೇಬೇಕು; ಅದು ಸಮರ್ಥನೀಯವೇ, ಹೌದು; ಅದೊಂದು ಭಲಾರೆ ಒಳ್ಳೆಯ ಸಲಹೆ. ನೀನು ಅದನ್ನು ಇಟ್ಟುಕೊಳ್ಳುವುದೆಲ್ಲಿ?”

“ಏನನ್ನ ಮಿ. ಟಾಮ್?”

“ಏಕೆ,—ಗದ್ದಲದ ಹಾವನ್ನ.”

“ಅಯ್ಯೋ ನನ್ನ ಬಾಳಿನ ಪುಣ್ಯವೆ! ಮಿ. ಟಾಮ್, ಇಲ್ಲಿಗೆ ಒಂದೇ ಒಂದು ಗದ್ದಲದ ಹಾವು ಎಂದಾದರೂ ಬಂದಿದ್ದೇ ಆದರೆ ನಾನು ಖಂಡಿತವಾಗಿಯೂ ತಲೆ ಮುಂದಾಗಿ ನುಗ್ಗಿ ಆ ದಿಮ್ಮಿ ಗೋಡೆಯನ್ನುರುಳಿಸಿ ಓಡುತ್ತೇನೆ.”

“ಹಾಗಲ್ಲ, ಜಿಮ್, ಸ್ವಲ್ಪ ಕಾಲವಾದಮೇಲೆ ನೀನದನ್ನು ಕಂಡರೆ ಅಂಜಲೆಡೆಯಿರಲಿಲ್ಲ, ನೀನದನ್ನು ಪಳಗಿಸಬಹುದು!”

“ಅದನ್ನು ಪಳಗಿಸುವುದು!”

“ಹೌದು-ಬಲುಸುಲಭ. ಪ್ರೀತಿಸಿದರೆ ಮುದ್ದುಮಾಡಿದರೆ ಯಾವ ಪ್ರಾಣಿಯೂ ಕೃತಜ್ಞವಾಗಿರುತ್ತದೆ. ತಮ್ಮನ್ನು ಮುದ್ದಿಸುವವರನ್ನು ಅವು ನೋಯಿಸುವುದಿರಲಿ, ನೋಯಿಸುವ ಯೋಚನೆಯನ್ನು ಕೂಡ ಮಾಡುವುದಿಲ್ಲ, ಯಾವ ಪುಸ್ತಕವನ್ನಾದರೂ ತೆರೆದು ನೋಡು; ಅಲ್ಲಿ ಹಾಗೆಯೇ ಬರೆದಿದೆ. ಒಂದುಸಲ ಪ್ರಯತ್ನಿಸಿ ನೋಡು ನೀನು-ನಾನು ಕೇಳುವುದು ಅಷ್ಟನ್ನೇ ಎರಡುಮೂರು ದಿನಗಳ ಮಟ್ಟಿಗೆ ಸುಮ್ಮನೆ ಹಾಗೆಮಾಡಿ ನೋಡು. ಸ್ವಲ್ಪ ಕಾಲದಲ್ಲೇ ಅದು ನಿನ್ನನ್ನು ಪ್ರೀತಿಸುವಂತೆ ಮಾಡಿಕೊಳ್ಳಬಹುದು. ಅದು ನಿನ್ನೊಂದಿಗೆ ಮಲಗುತ್ತದೆ; ನಿನ್ನನ್ನು ಬಿಟ್ಟು ಒಂದು ಅರಗಳಿಗೆಯೂ ಇರುವುದಿಲ್ಲ. ನೀನದನ್ನು ಹಿಡಿದು ನಿನ್ನ ಕೊರಳಸುತ್ತ ಸುತ್ತಿಕೊಂಡು ಅದರ ತಲೆಯನ್ನು ನಿನ್ನ ಬಾಯೊಳಗಿಟ್ಟುಕೊಂಡರೂ ಅದು ಸುಮ್ಮನಿರುತ್ತದೆ.”

“ನಿನ್ನ ದಮ್ಮಯ್ಯ ಮಿ. ಟಾಮ್—ಹಾಗೆ ಹೇಳಬೇಡ! ಅದನ್ನು ನಾನು ತಡೆದುಕೊಳ್ಳಲಾರೆ! ನನ್ನಮೇಲಿನ ಒಲವಿನಿಂದಲೇ ಅದು ತನ್ನ ತಲೆಯನ್ನು ನನ್ನ ಬಾಯೊಳಗಿಟ್ಟುಕೊಳ್ಳುವುದಕ್ಕೆ ಅವಕಾಶ ಕೊಡುತ್ತದೆ ಎಂದೆಯಲ್ಲವೆ? ನನ್ನ ಬಾಯಿಂದ ಆ ಕೇಳಿಕೆ ಹೊರಡಬೇಕಾದರೆ ಅದು ಅನೇಕಾನೇಕ ವರ್ಷಗಳವರೆಗೆ ಕಾದಿರಬೇಕಾಗುವುದೆಂದು ನನ್ನ ಭಾವನೆ. ಅದಕ್ಕಿಂತ ಹೆಚ್ಚಾಗಿ, ಅದುನನ್ನ ಪಕ್ಕದಲ್ಲಿ ಮಲಗುವುದಂತೂ ನನಗೆ ಸುತರಾಂ ಇಷ್ಟವಿಲ್ಲ”

"ಜಿಮ್, ನೀನು ಇಷ್ಟು ದಡ್ಡನಾಗಬಾರದು, ಸೆರೆಯಾಳಾದವನು ಯಾವುದಾದರೊಂದು ಸಾಕುಪ್ರಾಣಿಯನ್ನಿಟ್ಟುಕೊಂಡಿರುವುದು ಅತ್ಯಗತ್ಯ, ಯಾರೂ ಇದುವರೆಗೆ ಒಂದು ಗದ್ದಲದ ಹಾವನ್ನು ಸಾಕಲುಯತ್ನಿಸದೆ ಹೋಗಿದ್ದರೆ. ಒಳ್ಳೆಯದೇ ಆಯಿತು, ನಿನ್ನ ಜೀವನವನ್ನುಳಿಸಿಕೊಳ್ಳಲು ನೀನು ಯೋಚಿಸಬಹುದಾದ ಇತರ ಮಾರ್ಗಗಳನ್ನು ಬಿಟ್ಟು ಈ ಮಾರ್ಗವನ್ನು ಪ್ರಯತ್ನಿಸಿದ ಮೊತ್ತಮೊದಲಿಗನೆನಿಸಿಕೊಳ್ಳುವ ಅತಿಶಯಕೀರ್ತಿ ನಿನ್ನದಾಗುತ್ತದೆ."

"ಇಲ್ಲ, ಮಿ. ಟಾಮ್, ನನಗೆ ಅಂಥಾ ಕೀರ್ತಿ ಬೇಕಾಗಿಯೇ ಇಲ್ಲ, ಹಾವುಬಂದು ಜಿಮ್ಮನ ಗಲ್ಲವನ್ನು ಕಚ್ಚಿಹಾಕಿದಮೇಲೆ ಕೀರ್ತಿ ಎಲ್ಲಿಂದ ಬಂತು? ಇಲ್ಲ ಸ್ವಾಮಿ ನನಗಂಥಾ ಕೆಲಸಗಳೇ ಬೇಕಾಗಿಲ್ಲ."

"ಅದು ಹೋಗಲಿ, ನೀನು ಪ್ರಯತ್ನವನ್ನೂ ಮಾಡಲಾರೆಯಾ? ಪ್ರಯತ್ನಮಾಡು ಎಂದು ಮಾತ್ರ ನಾನು ಕೇಳಿಕೊಂಡೆ—ಅದು ಫಲಿಸದಿದ್ದರೆ ನೀನನ್ನನ್ನು ಮುಂಬರಿಸಬೇಕಾದ್ದಿಲ್ಲ."

"ಆದರೆ ನಾನು ಅದನ್ನು ಪಳಗಿಸಲು ಯತ್ನಿಸುತ್ತಿದ್ದಾಗಲೇ ಹಾವು ನನ್ನನ್ನು ಕಚ್ಚಿದರೆ ಕಷ್ಟವೆಲ್ಲಾ ಮುಗಿದೇ ಹೋಯಿತು. ಮಿ. ಟಾಮ್, ಅನುಚಿತವಲ್ಲದ ಎಂಥಾ ಕೆಲಸಕ್ಕಾದರೂ ಕೈಹಚ್ಚಲು ನಾನು ಸಿದ್ಧವಾಗಿದ್ದೇನೆ; ಆದರೆ ನೀನೂ ಹಕ್ಕನೂ ಪಳಗಿಸುವುದಕ್ಕಾಗಿ ನನಗಾಗಿ ಒಂದು ಗದ್ದಲದ ಹಾವನ್ನು ಇಲ್ಲಿಗೆ ತಂದಿದ್ದೇ ಆದರೆ, ನಾನು ಈ ಸ್ಥಳವನ್ನೇ ಬಿಟ್ಟು ಹೊರಟುಹೋಗುತ್ತೇನೆ; ಅದಂತೂ ಖಂಡಿತ."

"ಸರಿ ಹಾಗಾದರೆ, ಹೋಗಲಿ ಬಿಡು; ಹೋಗಲಿ ಬಿಡು, ನೀನು ಅಷ್ಟು ಮೊಂಡನಾದರೆ, ನಾವು ನಿನಗೆ ಕೆಲವು ಕಟ್ಟುಹಾವುಗಳನ್ನು ತಂದುಕೊಡುತ್ತೇವೆ. ಎಂದು ಅವುಗಳ ಬಾಲಕ್ಕೆ ಕೆಲವು ಗುಂಡಿಗಳನ್ನು ಕಟ್ಟಿ ಅವು ಗದ್ದಲದ ಹಾವೆಂದು ಪ್ರಚುರಪಡಿಸಿಕೊಳ್ಳಬಹುದು. ಅದು ಸಾಕಾದೀತು ಎಂದು ನನ್ನೆಣಿಕೆ."

"ಅವುಗಳನ್ನೇನೋ ನಾನು ಸಹಿಸಬಲ್ಲೆ, ಮಿ. ಟಾಮ್. ಆದರೆ ಅವು ಇಲ್ಲದಿದ್ದರೂ ನಾನು ಬದುಕಬಲ್ಲೆ. ಅದನ್ನು ಮಾತ್ರ ನಾನು ಹೇಳುತ್ತೇನೆ. ಸೆರೆಯೊಳಗೆ ಇಷ್ಟೆಲ್ಲ ಕಷ್ಟಕಾರ್ಪಣ್ಯಗಳೊದಗುತ್ತವೆಂದು ನಾನೆಂದೂ ತಿಳಿದಿರಲಿಲ್ಲ.

"ಹೌದು ಸರಿ-ದಾರಿ ಹಿಡಿದ ಸೆರೆಯೊಳಗೆ ಎಂದೂ ಹಾಗೆಯೇ. ಇಲ್ಲಿ ಇಲಿಗಳೇನಾದರೂ ಇವೆಯೋ ?"

"ಇಲ್ಲ, ಸ್ವಾಮಿ, ಒಂದನ್ನೂ ನಾನು ಕಂಡಿಲ್ಲ."

"ಹಾಗಾದರೆ ನಾವು ಕೆಲವು ಇಲಿಗಳನ್ನು ನಿನಗೆ ಒದಗಿಸುತ್ತೇವೆ."

"ಏಕೆ, ಮಿ. ಟಾಮ್, ನನಗೆ ಇಲಿಗಳ ಸಹವಾಸವೇ ಬೇಕಾಗಿಲ್ಲ. ಮನುಷ್ಯನಾದವನಿಗೆ ಅವುಗಳಿಂದ ಆಗುವಷ್ಟು ತೊಂದರೆ ಇನ್ನೊಂದು ಪ್ರಾಣಿಯಿಂದಾಗುವುದಿಲ್ಲ; ಅವನ ಮೈಮೇಲೆ ಸರಸರ ಹರಿದಾಡುತ್ತವೆ; ಅವನಿಗೆ ನಿದ್ದೆಬಂತು ಎನ್ನುವ ಸಮಯ

ದಲ್ಲಿ ಅವನ ಕಾಲುಗಳನ್ನು ಕಚ್ಚುತ್ತವೆ. ಇದು ನಾನು ಕಂಡ ವಿಷಯ. ನಾನು ಯಾವೊಂದು ಪ್ರಾಣಿಯನ್ನಾದರೂ ಸಾಕಲೇಬೇಕೆನ್ನುವುದಾದರೆ ನನಗೆ ಕಟ್ಟುಹಾವುಗಳನ್ನೇ ತಂದುಕೊಡಿ–ಇಲಿಗಳು ಮಾತ್ರ ಬೇಡ, ಸ್ವಾಮಿ; ನನಗೆ ಇಲಿಗಳಿಂದ ಆಗಬೇಕಾದ್ದೇನೂ ಇಲ್ಲ."

"ಹಾಗೆ ಹೇಳಬೇಡ, ಜಿಮ್. ನೀನು ಇಲಿಗಳನ್ನೂ ಇಟ್ಟುಕೊಳ್ಳುವುದಗತ್ಯ. ಅವರು ಹಾಗೆಯೇ ಮಾಡುತ್ತಿದ್ದರು. ಈ ವಿಚಾರದಲ್ಲಿ ನೀನು ರಂಪುತೆಗೆಯಬೇಡ ಇಲಿಗಳನ್ನಿಟ್ಟುಕೊಳ್ಳದ ಸೆರೆಯಾಳುಗಳು ಎಂದೂ ಇರಲಿಲ್ಲ; ಅವುಗಳನ್ನು ಪಳಗಿಸುತ್ತಿದ್ದರು, ಮುದ್ದು ಮಾಡುತ್ತಿದ್ದರು; ಅವುಗಳಿಗೆ ಚೇಷ್ಟೆಗಳನ್ನು ಕಲಿಸುತ್ತಿದ್ದರು. ಮತ್ತು ಅವು ನೊಣಗಳಂತೆಯೇ ಸ್ನೇಹಪ್ರಿಯವಾಗುತ್ತಿದ್ದವು. ನೀನು ಅವುಗಳ ಮುಂದೆ ವಾದ್ಯ ನುಡಿಸಬೇಕು ನಿನ್ನ ಬಳಿ ವಾದ್ಯ-ನುಡಿಸಲು ಏನಾದರೂ ಇದೆಯೋ ?"

"ಒಂದು ಒರಟು ಬಾಚಣಿಗೆ, ಒಂದು ಚೂರು ಕಾಗದ, ಮತ್ತು ಒಂದು ಯಹೂದಿ ಸಾರಂಗಿ—ಇವು ವಿನಾ ನನ್ನ ಬಳಿ ಏನೂ ಇಲ್ಲ. ಯಹೂದಿ-ಸಾರಂಗಿ ಅವುಗಳಿಗೆ ಹಿಡಿಸುವುದಿಲ್ಲವೆಂದು ನನ್ನೆಣಿಕೆ."

"ಇಲ್ಲ ಅದು ರುಚಿಸುತ್ತದೆ. ಅದು ಯಾವ ಬಗೆಯ ಸಂಗೀತವೆನ್ನುವುದರ ತಂಟೆಗೇ ಅವು ಹೋಗುವುದಿಲ್ಲ. ಯಹೂದಿ ಸಾರಂಗಿಯೇ ಇಲಿಗೆ ಬೇಕಾದಷ್ಟಾಯಿತು. ಪ್ರಾಣಿವರ್ಗಕ್ಕೆಲ್ಲ ಸಂಗೀತ ಇಷ್ಟವಾದದ್ದು—ಸೆರೆಮನೆಯಲ್ಲಂತೂ ಅವುಗಳಿಗೆ ಅದರದೇ ಗೀಳು. ಅವು ಅತಿಯಾಗಿ ಮೆಚ್ಚುವುದು ಶೋಕ-ಸಂಗೀತವನ್ನೇ. ಯಹೂದಿ—ಸಾರಂಗಿಯಿಂದಂತೂ ನಿನಗ ಬೇರೆ ರೀತಿಯದು ಸಾಧ್ಯವೇ ಇಲ್ಲ. ಇಲಿಗಳಿಗೆ ಅದರಲ್ಲಿ ತುಂಬಾ ಆಸಕ್ತಿ ಅದರ ಧ್ವನಿ ಕಿವಿಗೆ ಬಿದ್ದಕೂಡಲೇ ನಿನಗೇನಾಗಿದೆಯೋ ಎಂದು ನೋಡಲು ಅವು ಹೊರಗೆ ಬರುತ್ತವೆ. ನೀನು ಚೆನ್ನಾಗಿದ್ದೀಯೋ, ಬಲು ಅನುಕೂಲ ಸ್ಥಿತಿಯಲ್ಲಿದ್ದೀಯೆ. ಎನ್ನು, ಮಲಗುವುದಕ್ಕೆ ಮುಂಚೆಯೋ ಬೆಳಕು ಹರಿಯುವ ಹೊತ್ತಿಗೋ ಹಾಸುಗೆಯ ಮೇಲೆ ಕುಳಿತು ನಿನ್ನ ಯಹೂದಿ-ಸಾರಂಗಿಯನ್ನು ನುಡಿಸುವ ಆಸೆಯಾಯಿತು ನಿನಗೆ ಎನ್ನು ; ಆಗ ನೀನು "ಕಡೆಯ ಕೊಂಡಿ ಕಳೆದು ಹೋಯಿತು" ಎನ್ನುವ ಹಾಡನ್ನು ನುಡಿಸು. ಇಲಿ ಆ ಹಾಡಿಗೆ ವಶವಾಗುವಷ್ಟು ಬೇಗ ಬೇರೆಯದಕ್ಕೂ ಆಗುವುದಿಲ್ಲ. ನೀನು ಎರಡೇ ನಿಮಿಷ ಆ ಹಾಡನ್ನು ನುಡಿಸು : ಇಲಿ, ಹಾವು ಜೇಡ, ಎಲ್ಲವೂ ನಿನ್ನ ಬಗೆಗೆ ವ್ಯಸನಗೊಂಡು, ಬಳಿಗೆ ಬಂದು ನಿನಗೆ ಮುತ್ತಿಗೆ ಹಾಕಿ ಸರಸವಾಡ ತೊಡಗುತ್ತವೆ.

"ಹೌದು ಮಿ. ಟಾಮ್, ಅವೇನೋ ಹಾಗೆ ಮಾಡಿಯಾವೆಂದು ನನಗನ್ನಿಸುತ್ತದೆ. ಆದರೆ ಆಗ ಜಿಮ್ಮನ ಗತಿ ಏನಾಗಿರಬೇಕು ? ನಿನ್ನ ಮನಸ್ಸಿನಲ್ಲಿರುವುದೇ ನನಗೆ ಅರ್ಥವಾಗುವುದಿಲ್ಲ. ವಿಧಿಯೇ ಇಲ್ಲದಿದ್ದರೆ, ನಾನದನ್ನು ಮಾಡುವುದಾಗುತ್ತದೆ.

ನನಗೆ ತೋರುತ್ತದೆ : ಆ ಪ್ರಾಣಿಗಳನ್ನು ತೃಪ್ತಿಪಡಿಸಿ ಅವು ಮನೆಯೊಳಗೆ ತಂಟೆಮಾಡದಂತೆ ನೋಡಿಕೊಳ್ಳುವುದು ಮೇಲು."

"ಟಾಮ್ ಬೇರೆ ಉಪಾಯವೇನಾದರೂ ಇದೆಯೇ ಎಂದು ಹುಡುಕುತ್ತಲಿದ್ದ ; ಆಮೇಲೆ ಹೇಳಿದ :

"ಒಂದು ವಿಷಯ ಮರೆತು ಹೋಗಿತ್ತು,—ನೀನಿಲ್ಲೊಂದು ಹೂಗಿಡವನ್ನು ಬೆಳೆಸಬಲ್ಲೆಯಾ ?"

"ಅದು ನನಗೆ ತಿಳಿಯದು, ಮಾಡಿಯೇನೆಂದು ತೋರುತ್ತದೆ. ಆದರೆ ಬೆಳಕು ಸಾಲದು ಇಲ್ಲಿ. ನನಗದರಿಂದ ಪ್ರಯೋಜನವೂ ಇಲ್ಲ ; ಮತ್ತು ಅದು ಪಡುವ ಕಷ್ಟವನ್ನು ನೋಡುವುದಕ್ಕಾಗುವುದಿಲ್ಲ."

"ಸರಿ, ನೀನದನ್ನು ಪ್ರಯತ್ನಿಸಿ ನೋಡು. ಬೇರೆ ಸೆರೆಯಾಳುಗಳು ಹಾಗೆ ಮಾಡಿದ್ದಾರೆ."

"ದೊಡ್ಡದಾದ ಕೊತ್ತಿ—ಬಾಲದಂತಿರುವ ಮುಲ್ಲಿನ್ ಸಸಿಯನ್ನು ಇಲ್ಲಿ ಬೆಳೆಸಬಹುದೆಂದು ನನಗೆ ತೋರುತ್ತದೆ ; ಆದರೆ ಅದಕ್ಕೆ ಪಟ್ಟಶ್ರಮದಲ್ಲಿ ಅರ್ಧಕ್ಕೂ ಅದು ಅರ್ಹವಲ್ಲ, ಮಿ. ಟಾಮ್"

"ನೀನು ಹಾಗೆ ನಂಬಬೇಡ; ನಿನಗೆ ಸಣ್ಣದೊಂದನ್ನು ತಂದುಕೊಡುತ್ತೇವೆ. ನೀನದನ್ನು ಆ ಮೂಲೆಯಲ್ಲಿ ನಟ್ಟು ಬೆಳಸು. ಅದನ್ನು ನೀನು 'ಮುಲ್ಲಿನ್' ಅನ್ನಬಾರದು—'ಪಿಚಿಯೋಲ' ಎನ್ನು, ಸೆರೆಯಲ್ಲಿ ಬೆಳೆಯುವಾಗ ಅದಕ್ಕೆ ಇದೇ ಸರಿಯಾದ ಹೆಸರು. ಅದಕ್ಕೆ ನೀನು ಎರೆಯಬೇಕಾಗಿರುವುದು ನೀರನ್ನಲ್ಲ ಕಣ್ಣೀರನ್ನು."

"ಅಷ್ಟೇಕೆ, ನನ್ನ ಬಳಿ ಬೇಕಾದಷ್ಟು ಚಿಲುಮೆ-ನೀರಿದೆ, ಮಿ. ಟಾಮ್."

"ನಿನಗೆ ಚಿಲುಮೆ-ನೀರಲ್ಲ ಬೇಕಾಗಿರುವುದು, ನಿನ್ನ ಕಣ್ಣೀರು ಅವರೆಲ್ಲರೂ ಮಾಡುವುದು ಹಾಗೆಯೇ"

"ಇದೇನು ಹೀಗೆ ಹೇಳುತ್ತಿಯೆ ಮಿ ಟಾಮ್ ! ಇನ್ನೊಬ್ಬ ಅದನ್ನು ಕಣ್ಣೀರಿನಿಂದ ಬೆಳಸುತ್ತಿರುವಾಗಲೇ ಅದನ್ನು ನಾನು ಚಿಲುಮೆ-ನೀರಿನಿಂದ ಬೆಳಸಬಲ್ಲೆನೆಂದು ನನ್ನೆಣಿಕೆ."

"ನನ್ನ ಸಲಹೆ ಅದಲ್ಲ : ನಾನದನ್ನು ಕಣ್ಣೀರಿನಿಂದಲೇ ಬೆಳಸಬೇಕು."

"ಅದು ನನ್ನ ಕೈಗೆ ಬಂದಾಗಲೇ ಸತ್ತುಹೋಗುತ್ತದೆ, ಮಿ. ಟಾಮ್, ಖಂಡಿತವಾಗಿ ಸಾಯುತ್ತದೆ ; ಏಕೆಂದರೆ ನಾನು ಅಳುವುದೇ ಇಲ್ಲ."

ಟಾಮನಿಗೆ ಇದೊಂದು ಸಮಸ್ಯೆಯಾಯಿತು. ಅವನು ಹಾಗೆಯೇ ಯೋಚನೆ ಮಾಡಿ ಜಿಮ್ ಕಣ್ಣಿಗೆ ಈರುಳ್ಳಿಯನ್ನು ಹಿಂಡಿಕೊಂಡು ಆದಷ್ಟು ಕಣ್ಣೀರನ್ನು ಸುರಿಸಲಿ ಎಂದ ; ತಾನು ನೀಗ್ರೊಗಳ ವಠಾರಕ್ಕೆ ಹೋಗಿ ಒಂದನ್ನು ತರುವುದಾಗಿಯೂ, ಬೆಳಗಾಗ ಅವರು ಜಿಮ್ಮನಿಗೆ ಕಳಿಸುವ ಕಾಫಿಪಾತ್ರೆಯಲ್ಲಿ ಮುಳುಗಿಸುವುದಾಗಿಯೂ ಮಾತು

ಕೊಟ್ಟ; ಜಿಮ್ಮನೋ ಅದಕ್ಕೆ ಬದಲಾಗಿ ತನ್ನ ಕಾಫಿಯಲ್ಲಿ ಒಂದಿಷ್ಟು ತಂಬಾಕನ್ನು ಹಾಕಿದರೆ ಇನ್ನೂ ಕ್ಷೇಮವೆಂದ. ಯಾವ ಸೆರೆಯಾಳಿಗಾದರೂ ಹೆಚ್ಚು ಕಷ್ಟವನ್ನು ಚಿಂತೆಯನ್ನೂ ಹೊಣೆಗಾರಿಕೆಯನ್ನೂ ತಂದು ಹಾಕಿದ್ದ ತನ್ನ ಸದ್ಯದ ಕರ್ತವ್ಯಗಳಾದ ಲೇಖನಿ, ಶಿಲಾಲೇಖನ, ದಿನಚರಿಗಳ ಜತೆಗೆ ಹೀಗೆ ಈರುಳ್ಳಿಯನ್ನು ಕಣ್ಣಿಗೆ ಹಿಂಡಿಕೊಂಡು ಕಣ್ಣೀರನ್ನು ತಂದುಕೊಳ್ಳುವುದು, ಮುಲ್ಲಿನ್-ಸಸಿಯನ್ನು ಬೆಳೆಸುವುದು, ಇಲಿಗಳಿಗಾಗಿ ಯಹೂದಿ-ಸಾರಂಗಿಯನ್ನು ನುಡಿಸುವುದು, ಹಾವು ಜೇಡ ಮುಂತಾದುವನ್ನು ಮುದ್ದಿಸಿ ಉಬ್ಬಿಸುವುದು ಮೊದಲಾದ ಮುಜುಗರದ ಕೆಲಸಗಳನ್ನು ತಾನು ಮಾಡಬೇಕಾಗಿ ಬಂದದ್ದಕ್ಕಾಗಿ ಜಿಮ್ ಇವುಗಳಲ್ಲಿ ಪ್ರತಿಯೊಂದರಲ್ಲೂ ತಪ್ಪುಗಳನ್ನು ಕಾಣುತ್ತ ಹೋದದ್ದರಿಂದ ಟಾಮನ ಸಹನೆಯುಷ್ಟೂ ಕಳೆದುಹೋಗಿತ್ತು, ಲೋಕಪ್ರಸಿದ್ಧಿಯನ್ನು ಗಳಿಸಲು ಈ ಪ್ರಪಂಚದಲ್ಲಿ ಎಂದಾಗಲಿ ಯಾವ ಸೆರೆಯಾಳಿಗಾಗಲೀ ಇದ್ದುದಕ್ಕಿಂತ ಅಮೋಘತರವಾದ ಅವಕಾಶ ತನಗಿರುವುದನ್ನು ಜಿಮ್ ಅರಿತುಕೊಳ್ಳುವಷ್ಟು ಜಾಣನಾಗಲಿಲ್ಲವೆಂದೂ, ತನ್ನ ಶ್ರಮವೆಲ್ಲ ವ್ಯರ್ಥವಾದಂತೆಯೇ ಎಂದೂ ಟಾಮ್ ನೊಂದು ನುಡಿದ. ಜಿಮ್ ಆ ಮಾತನ್ನು ಕೇಳಿ ತಾನು ಹಾಗೆ ಮಾಡಿದ್ದಕ್ಕಾಗಿ ಪಶ್ಚಾತ್ತಾಪ ಪಟ್ಟು, ಇನ್ನು ಮುಂದೆ ಎಂದೂ ಹಾಗೆ ಮಾಡುವುದಿಲ್ಲವೆಂದ. ಬಳಿಕ ಟಾಮನೂ ನಾನೂ ಮಲಗಲು ಹೋದೆವು.

## ೩೯

ಬೆಳಗಾಗ ನಾವು ಹಳ್ಳಿಗೆ ಹೋದೆವು, ತಂತಿಯ 'ಇಲಿಯ ಬೋನು' ಒಂದನ್ನು ಕೊಂಡು ಮನೆಗೆ ತಂದೆವು, ಭರ್ಜರಿಯಾ 'ಇಲಿಯ ಬಿಲ'ವೊಂದರ ಬಾಯನ್ನು ಬಿಡಿಸಿದೆವು ; ಸುಮಾರು ಅರ್ಧ ಗಂಟೆಯೊಳಗಾಗಿ ಹದಿನೈದು ಅತಿಧೂರ್ತ ಮೂಷಿಕಗಳನ್ನು ಹಿಡಿದೆವು. ಅದನ್ನು ಕೊಂಡುಹೋಗಿ ಸ್ಯಾಲಿ ಚಿಕ್ಕಮ್ಮನ ಮಂಚದ ಕೆಳಗೆ ಸುರಕ್ಷಿತವಾದೆಡೆಯಲ್ಲಿ ಇರಿಸಿದೆವು. ಆದರೆ ನಾವು ಜೇಡಗಳನ್ನು ಸಂಗ್ರಹಿಸಲು ಹೋಗಿದ್ದಾಗ ಪುಟ್ಟ ಥಾಮಸ್ ಫ್ರಾಂಕ್ಲಿನ್ ಬೆನ್ಜಮಿನ್ ಜೆಫರ್ಸನ್ ಎಲೆಕ್ಸಾಂಡರ್ ಫೈಲ್ಪ್ಸ್ ಅದನ್ನು ಕಂಡು ಇಲಿಗಳು ಹೊರಗೆ ಬರುತ್ತವೆಯೋ ಎಂಬುದನ್ನು ಪರೀಕ್ಷಿಸಲೋಸುಗ ಅದರ ಬಾಗಿಲನ್ನು ತೆರೆದನು. ಅವು ಹೊರಗೆ ಬಂದೇ ಬಿಟ್ಟವು. ಬಳಿಕ ಸ್ಯಾಲಿ ಚಿಕ್ಕಮ್ಮ ಅಲ್ಲಿಗೆ ಬಂದಳು ; ನಾವು ಹಿಂತಿರುಗಿದಾಗ, ಅವಳು ಮಂಚದ ಮೇಲೆ ನಿಂತುಕೊಂಡು

ಬಾರೀ ಗದ್ದಲ ಮಾಡುತ್ತಿದ್ದಳು; ಇಲಿಗಳೂ, ಅವಳು ಸುಮ್ಮನಿರುವುದಕ್ಕೇ ಎಡ ಗೊಡದೆ, ಯಥಾಶಕ್ತಿ ತಮ್ಮ ಕೈಲಾದ್ದನ್ನು ಮಾಡುತ್ತಿದ್ದವು. ಅವಳು ನಮ್ಮನ್ನು ಹಿಡಿದುಕೊಂಡು ದೊಣ್ಣೆಯಿಂದ ಚೆನ್ನಾಗಿ ಥಳಿಸಿದರು. ನಾವು ಮತ್ತೆ ಹದಿನೈದು, ಹದಿನಾರನ್ನು ಹಿಡಿಯುವುದಕ್ಕೆ ಸುಮಾರು ಎರಡುಗಂಟೆಗಳ ಕಾಲ ಕಾಯಬೇಕಾಯಿತು; ಬಡಕಲು ತರಲೆ ಇಲಿಮರಿಗಳು, ನೋಡುವುದಕ್ಕೂ ಅಷ್ಟು ಚೆನ್ನಾಗಿರಲಿಲ್ಲ ಅವು; ಏಕೆಂದರೆ ಆ ಹಿಂಡಿನಲ್ಲ ಉತ್ಕೃಷ್ಟವಾಗಿದ್ದವಷ್ಟೂ ಮೊದಲ ಬೇಟೆಯಲ್ಲಿ ಬಂದುಹೋಗಿದ್ದವು ಮೊದಲ ಬೇಟೆಯಲ್ಲಿ ನಾವು ಹಿಡಿದ ಇಲಿಗಳಿಗಿಂತ ಪ್ರಿಯಂಕರವಾದ ಮೂಷಿಕ ವೃಂದವನ್ನು ನಾನೆಂದೂ ನೋಡಿಲ್ಲ.

ಆಯ್ಕೆಮಾಡಿದ ಜೇಡಗಳ, ಕೀಟಗಳ, ಕಪ್ಪೆಗಳ ಮತ್ತು ಕಂಬಳಿಹುಳುಗಳ ಮತ್ತು ಒಂದಲ್ಲ ಒಂದರ ಅಪೂರ್ವ ನಿಧಿಯೇ ನಮಗೆ ಸಿಕ್ಕಿತು. ನಮಗೊಂದು ಹೆಜ್ಜೇನಿನ ಗೂಡು ಬೇಕೆನಿಸಿತ್ತು, ಆದರೆ ಸಿಕ್ಕಲಿಲ್ಲ ಇಡೀ ಸಂಸಾರವೇ ಗೂಡೊಳಗಿತ್ತು. ನಾವು ಪ್ರಯತ್ನವನ್ನು ಕೂಡಲೇ ಬಿಟ್ಟುಕೊಡಲಿಲ್ಲ; ಆದಷ್ಟು ಹೊತ್ತು ನಾವು ಅವುಗಳೊಂದಿಗೇ ಹೋರಾಡುತ್ತಿದ್ದೆವು; ಏಕೆಂದರೆ ಅವುಗಳಿಗೆ ನಮ್ಮಿಂದ ಸುಸ್ತಾಗಬೇಕು, ಇಲ್ಲವಾದರೆ ನಮ್ಮನ್ನು ಅವು ಸುಸ್ತುಮಾಡುತ್ತವೆ ಎಂದು ತಿಳಿದಿದ್ದೆವು; ಎರಡು ನಿಯದೇ ಆಯಿತು. ನಾವು ಇಲ್ಲಲ್ಲಿ ಮುಲಾಮನ್ನು ಹಚ್ಚಿಕೊಂಡೆವು. ಸ್ವಲ್ಪ ಹೊತ್ತಿನಲ್ಲಿ ಎಲ್ಲವೂ ಸುಮಾರಾಗಿ ಸರಿಹೋಯಿತು. ಆದರೆ ನಮಗೆ ನೇರವಾಗಿ ಕುಳಿತುಕೊಳ್ಳುವುದಕ್ಕಾಗಲಿಲ್ಲ. ಆಮೇಲೆ ನಾವು ಹಾವುಗಳನ್ನು ಹಿಡಿಯಲು ಹೊರಟೆವು; ಒಂದೆರಡು ಡಜನ್ ಹಾವುಗಳನ್ನೂ, ಮನೆ-ಹಾವುಗಳನ್ನೂ ಹಿಡಿದೆವು, ಚೀಲದಲ್ಲಿ ಹಾಕಿಕೊಂಡೆವು. ಅದನ್ನು ತಂದು ನಮ್ಮ ಕೊಠಡಿಯಲ್ಲಿಟ್ಟುಕೊಂಡೆವು. ಅಷ್ಟು ಹೊತ್ತಿಗೆ ರಾತ್ರಿಯಊಟದ ಸಮಯವಾಗಿತ್ತು. ನಮ್ಮಿಂದ ಒಂದು ಸಡಗರದ ದಿನದ ಪ್ರಾಮಾಣಿಕ ಕೆಲಸ ಯಶಸ್ವಿಯಾಗಿ ನಡೆದಿತ್ತು. ನಮಗೆ ಹಸಿವಾಗಿತ್ತೋ?—ಓ, ಇಲ್ಲ, ಆಗಿರಲಿಲ್ಲವೆಂದು ನನ್ನೆಣಿಕೆ. ನಾವು ಮತ್ತೆ ಬಂದು ನೋಡಿದಾಗ ಒಂದು ಸುಡುಗಾಡು ಹಾವೂ ಅಲ್ಲಿರಲಿಲ್ಲ—ನಾವು ಚೀಲದ ಬಾಯನ್ನು ಸರಿಯಾಗಿ ಕಟ್ಟಿರಲಿಲ್ಲ, ಅವು ಹೇಗೋ ಮಾಡಿಕೊಂಡು ಹೊರಟುಹೋಗಿದ್ದವು. ಅದೇನಂಥಾ ಪ್ರಮಾದವಾಗಲಿಲ್ಲ, ಏಕೆಂದರೆ ಅವು ಅಲ್ಲೇ ಎಲ್ಲೋ ಸೇರಿಕೊಂಡಿದ್ದವು, ಅಷ್ಟೆ, ಅವುಗಳಲ್ಲಿ ಕೆಲವನ್ನಾದರೂ ಮತ್ತೆ ಹಿಡಿದು ತರಬಹುದೆಂದುಕೊಂಡೆವು. ಅಲ್ಲದೆ. ಕೆಲವು ದಿನಗಳೀಚೆಗೆ ಆ ಮನೆಯಲ್ಲಿ ಹಾವುಗಳ ಅಭಾವವೇ ವಾಸ್ತವವಾಗಿಯೂ ಇರಲಿಲ್ಲ. ಅವು ಜಂತಿಗಳಿಂದ ಅಲ್ಲಿಂದ ಇಲ್ಲಿಂದ ಪದೇ ಪದೇ ಉದುರುವುದನ್ನು ನೀವು ನೋಡಬಹುದಾಗಿತ್ತು; ಬಹುಮಟ್ಟಿಗೆ ನೀವು ಅವುಗಳನ್ನಪೇಕ್ಷಿಸದ ಸಮಯಗಳಲ್ಲೇ ಅವು ಸಾಮಾನ್ಯವಾಗಿ ನಿಮ್ಮತಟ್ಟೆಯೊಳಗೋ, ನಿಮ್ಮ ಕತ್ತಿನ ಹಿಂದೆಯೋ ಬಂದಿಳಿಯುತ್ತಿದ್ದವು. ಅಲ್ಲದೆ ಅವು ಗೆರೆಗೆರೆಯಾತ ಸುಂದರವಾಗಿದ್ದವು ಅಂಥವು ಹತ್ತುಲಕ್ಷವಿದ್ದರೂ ಯಾವ ತೊಂದರೆಯೂ ಇಲ್ಲ. ಅವು ಹಾಗಿದ್ದರೂ,

ಹೇಗಿದ್ದರೂ—ಸಾಲಿ ಚಿಕ್ಕಮ್ಮನಿಗೆ ಒಂದೇ ; ಎಷ್ಟು ಒಳ್ಳೆಯ ತಳಿಯ ಹಾವನ್ನೂ ಹೇಯವಾಗಿ ಕಾಣುತ್ತಿದ್ದಳು ; ನೀವು ಏನೇನು ಮಾಡಿದರೂ ಅವುಗಳನ್ನು ಕಂಡರೇ ಆರಳಿಗಾಗದು. ಅವುಗಳಲ್ಲೊಂದು ಅವಳ ಮೇಲೆ ಯಾವಾಗ ಬಿದ್ದರೂ ಅವಳು ಮಾಡುತ್ತಿದ್ದ ಕೆಲಸವೊಂದೇ ತಾನು ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಎದ್ದು ಹೋಗುತ್ತಿದ್ದಳು. ಅಂಥಾ ಹೆಂಗಸನ್ನು ನಾನೆಲ್ಲಿಯೂ ಕಂಡಿಲ್ಲ. ಅವಳ ಬೊಬ್ಬೆಯನ್ನು ನೀವು ಜೆರಿಕೋವಿನಲ್ಲಿದ್ದರೂ ಕೇಳುವುದು ಸಾಧ್ಯವಿತ್ತು. ನೀವು ಅವುಗಳಲ್ಲೊಂದನ್ನು ಅವಳ ಕೈಯಲ್ಲಿ ಇಕ್ಕಳದಿಂದ ಕೂಡ ಹಿಡಿಸುವುದು ಸಾಧ್ಯವಿರಲಿಲ್ಲ. ಅವಳು ಮಲಗಿ ಮಗ್ಗಲಾದಾಗ ತನ್ನ ಹಾಸುಗೆಯಲ್ಲಿ ಒಂದು ಹಾವಿರುವುದನ್ನು ಕಂಡಿದ್ದಲ್ಲಿ ಜೋರಾಗಿ ಕೂಗೆಬ್ಬಿಸುತ್ತಿದ್ದಳು, ಮನೆಗೆ ಮನೆಯೇ ಹೊತ್ತಿ ಉರಿಯುತ್ತಿದೆ ಎನಿಸುವಂತೆ. ಆ ಮುದುಕನನ್ನು ಎಬ್ಬಿಸಿ ಅವನ ನೆಮ್ಮದಿಯನ್ನು ಕಲಕಿಬಿಡುತ್ತಿದ್ದಳು; ಅವನಿಗಂತೂ ಹಾವುಗಳ ಸೃಷ್ಟಿಯೇ ಆಗದಿದ್ದರೆ ಬಲು ಒಳ್ಳೆಯದಿತ್ತು ಎನಿಸುತ್ತಿತ್ತು, ಅವನು ಹಾಗೆಯೇ ಹೇಳುತ್ತಿದ್ದ. ಅಷ್ಟೇಕೆ, ಕಟ್ಟಕಡೆಯ ಹಾವನ್ನೂ ಮನೆಯಿಂದಾಚೆಗೆ ಹೊಡೆನಟ್ಟಿ ಒಂದುವಾರ ಕಳೆದಿದ್ದರೂ ಅವಳ ಅಬ್ಬರ ಮುಗಿಯುವಂತಿರಲಿಲ್ಲ. ಸಾಲಿ ಚಿಕ್ಕಮ್ಮ ಏನನ್ನೋ ಯೋಚಿಸುತ್ತ ಕುಳಿತಿದ್ದಾಗ ನೀವು ಅವಳ ಕೊರಳಿನ ಹಿಂಭಾಗವನ್ನು ಒಂದು ಹಕ್ಕಿ-ಗರಿಯಿಂದ ಮುಟ್ಟಿದ್ದರೂ ಅವಳು ಪಕ್ಕಕೆ ಹಾರುತ್ತಿದ್ದಳು. ಇದು ಬಲು ವಿಚಿತ್ರವಾಗಿತ್ತು, ಹೆಂಗಸರೆಲ್ಲಾ ಹಾಗೆಯೇ ಎಂದ ಟಾಮ್, ಏಕೋ ಏನೋ ಅವರ ರಚನೆಯೇ ಹಾಗೆ, ಎಂದನವನು.

ನಮ್ಮ ಒಂದೊಂದು ಹಾವು ಈಚೆಗೆ ಹರಿದು, ಅವಳ ದಾರಿಗೆ ಅಡ್ಡಬಂದಾಗಲೂ ನಮಗೆ ಹೊಡೆತ ಬೀಳುತ್ತಿತ್ತು; ಮತ್ತು ಇಲ್ಲಿಗೆ ನಾವು ಹಾವುಗಳನ್ನು ತಂದುಹಾಕುವುದಾದರೆ ನಮಗೆ ಆಗುವ ಸೇವೆಗೆ ಹೋಲಿಸಿದಲ್ಲಿ ಈ ಹೊಡೆತಗಳು ಹೊಡೆತಗಳೇ ಅಲ್ಲವೆನ್ನುವುದು ಅವಳ ಭಾವನೆಯಾಗಿತ್ತು. ಈ ಹೊಡೆತಗಳು ಅಷ್ಟು ಬಲವಲ್ಲವಾದ್ದರಿಂದ. ನಾನು ಅವುಗಳನ್ನು ಲಕ್ಷ್ಯಮಾಡಲಿಲ್ಲ; ಇನ್ನೊಂದು ಕಂತೆ ಹಾವುಗಳನ್ನು ಹಿಡಿಯಲು ನಾವು ಎಷ್ಟು ಕಷ್ಟಪಡಬೇಕಾಗುತ್ತದೆ ಎಂಬುದೊಂದೇ ನನ್ನ ಕೊರಗು ಆದರೂ ನಾವು ಹಾವುಗಳನ್ನೂ, ಉಳಿದವನ್ನೂ ಮತ್ತೆ ಒಳಕ್ಕೆ ತಂದುಹಾಕಿದೆವು. ಅವುಗಳೆಲ್ಲವೂ ಗಾನದಿಂಪಿಗೆ ಮುತ್ತಿಗೆಹಾಕಿ ಜಿಮ್ಮನನ್ನು ಹಿಡಿಯಲು ತೊಡಗುತ್ತಿರುವ ಸಮಯದಲ್ಲಿ ಅವನ ಕೋಣೆಯಷ್ಟು ಆನಂದದಾಯಕವಾದ ಇನ್ನೊಂದು ಸ್ಥಳವನ್ನೇ ನೀವು ನೋಡಲಾರಿರಿ. ಜಿಮ್ಮನಿಗೆ ಜೇಡಗಳನ್ನು ಕಂಡರಾಗದು; ಜೇಡಗಳಿಗೆ ಜಿಮ್ಮನನ್ನು ಕಂಡರಾಗದು; ಆದ್ದರಿಂದ ಅವು ಸಮಯಂಕಾದು ಅವನಿಗೆ ಬಲುಕಾಲ ಕೊಡುತ್ತಿದ್ದವು. ತನಗೆ ಈ ಇಲಿಗಳ ಮತ್ತು ಹಾವುಗಳ ಮತ್ತು ಬೀಸುವ ಕಲ್ಲಿನ ದೆಸೆಯಿಂದ, ಮಲಗಲು ಹಾಸುಗೆಯಲ್ಲಿ ಸ್ಥಳವೇ ಇಲ್ಲವಾಗಿದೆ ಎಂದನು ಜಿಮ್; ಏಕೆಂದರೆ ಅದು ಅಷ್ಟು ಚಟುವಟಿಕೆಗಳನ್ನೊಳಕೊಂಡಿತ್ತು, ಅದರೊಳಗಿದ್ದ ಪ್ರಾಣಿಗಳೆಲ್ಲವೂ ಏಕಕಾಲದಲ್ಲಿ ಮಲಗಿ

ನಿದ್ರಿಸುತ್ತಿರಲಿಲ್ಲ, ಸರದಿಯ ಪ್ರಕಾರ ಮಲಗುತ್ತಿದ್ದವು—ಹಾವುಗಳು ಮಲಗಿದ್ದಾಗ ಇಲಿಗಳು ಮೇಲೆ ಬಂದು ಕಾವಲುಕೂರುತ್ತಿದ್ದವು; ಇಲಿಗಳು ಒಳಗಿದ್ದಾಗ, ಹಾವುಗಳು ಹೊರಗೆಬಂದು ಕಾವಲುಕೂರುತ್ತಿದ್ದವು. ಹೇಗೆ ಸದಾಕಾಲದಲ್ಲೂ ಒಂದು ತಂಡ, ಅವನಿಗೆ ಪ್ರತಿಕೂಲವಾಗಿ, ಅವನ ಕೆಳಗಿರುತ್ತಿತ್ತು; ಇನ್ನೊಂದು ತಂಡ ಅವನಮೇಲೆ ನಾಟ್ಯಕಟ್ಟುತ್ತಿತ್ತು; ಬೇರೆಸ್ಥಳಕ್ಕೆಂದು ಎದ್ದು ಹೊರಟರೆ, ಅವನು ದಾಟುತ್ತಿರುವ ವೇಳೆಯಲ್ಲಿ ಜೇಡಗಳು ಅವನಮೇಲೆ ಬೀಳಲು ಸಮಯ ಕಾಯುತ್ತಿದ್ದವು. ಈಸಲವೇನಾದರೂ ಇಲ್ಲಿಂದ ಕದಲುವುದಾದರೆ ಇನ್ನು ಮುಂದೆಂದೂ, ಸಂಬಳಕ್ಕಾಗಿ ಕೂಡ, ತಾನು ಸೆರೆಯೊಳಗಾಗುವುದಿಲ್ಲವೆಂದುಕೊಂಡ ಜಿಮ್.

ಸರಿ ಮೂರುವಾರಗಗಳ ಕೊನೆಯೊಳಗಾಗಿ ಎಲ್ಲವೂ ಸುವ್ಯವಸ್ಥಿತವಾಗಿತ್ತು. ಮುಂಚಿತವಾಗಿಯೇ ಪರಟನ್ನು 'ಉಬ್ಬುವ ರೊಟ್ಟಿ'ಯಲ್ಲಿಟ್ಟು ಕಳಿಸಿಕೊಡಲಾಯಿತು; ಇಲಿಬಂದು ತನ್ನನ್ನು ಕಚ್ಚಿದ ಪ್ರತಿಸಲವೂ ಜಿಮ್ ಮಲಗುವನೆದ್ದು, ಮಸಿ ಇನ್ನೂ ಹೊಸತಾಗಿರುವಾಗಲೇ ತನ್ನ ದಿನಚರಿಯಲ್ಲಿ ಒಂದು ಪಕ್ತಿಯನ್ನು ಬರೆಯುತ್ತಿದ್ದನು; ಲೇಖನಿಗಳು ತಯಾರಾಗಿದ್ದವು, ಸಂದೇಶಗಳು ಮುಂತಾದವುಗಳೆಲ್ಲವನ್ನೂ ಬೀಸುವ ಕಲ್ಲಿನಮೇಲೆ ಕೆತ್ತಲಾಯಿತು; ಮಂಚದ ಕಾಲು ಎರಡುತುಂಡಾಗಿತ್ತು, ನಾವು ಮರದ ಹೊಟ್ಟೆಲ್ಲವನ್ನು ತಿಂದುಹಾಕಿದ್ದೆವು, ಹಾಗೆ ಮಾಡಿದ್ದರ ಫಲವಾಗಿ ನಮಗೆ ಮಹಾ ಭಯಂಕರವಾದ ಹೊಟ್ಟೆನೋವು ಒದಗಿತ್ತು, ನಾವೆಲ್ಲರೂ ಸತ್ತುಹೋಗುತ್ತೇವೆ ಎಂದು ತಿಳಿದಿದ್ದೆವು; ಆದರೆ ಸಾಯಲಿಲ್ಲ. ಅದರಂಥ ಅರಗಿಸಿಕೊಳ್ಳಲಾಗದ ಮರದ ಹೊಟ್ಟನ್ನೇ ನಾನು ಕಂಡಿಲ್ಲ; ಟಾಮನೂ ಹಾಗೆಯೇ ಹೇಳಿದ; ಆದರೆ ನಾನು ಹೇಳುತ್ತಿದ್ದಂತೆ. ನಾವು ಎಲ್ಲಾ ಕೆಲಸಗಳನ್ನೂ ಕಡೆಗೂ ಮಾಡಿ ಮುಗಿಸಿದ್ದೆವು. ನಮ್ಮೆಲ್ಲರಿಗೂ ಬಲು ಸುಸ್ತಾಗಿ ಹೋಗಿತ್ತು: ನಮ್ಮೆಲ್ಲರಿಗಿಂದ ಹೆಚ್ಚಾಗಿ ಜಿಮ್ಮನಿಗೆ. ಅಲ್ಲಿಗೆಬಂದು ತಮ್ಮ ಓಡುಕುಳಿ ನೀಗ್ರೋವನ್ನು ಕೊಡೊಯ್ಯಬಹುದೆಂದು ಆ ಮುದುಕ ಆರ್ಲಿಯನ್ಸಿನ ಕೆಳಗಣ ಒಂದು ವ್ಯವಸಾಯಕ್ಷೇತ್ರಕ್ಕೆ ಎರಡುಬಾರಿ ಬರೆದುಕಳಿಸಿದ್ದನು ಅವನಿಗೆ ಉತ್ತರ ಬಂದಿರಲಿಲ್ಲ; ಏಕೆಂದರೆ ಆ ಹೆಸರಿನ ವ್ಯವಸಾಯಕ್ಷೇತ್ರವೇ ಇರಲಿಲ್ಲ. ಆದ್ದರಿಂದ ತಾನು ಸೇಂಟ್ ಲೂಯಿ ಮತ್ತು ನ್ಯೂ ಆರ್ಲಿಯನ್ಸ್‌ನಗರಗಳ ಪತ್ರಿಕೆಗಳಲ್ಲಿ ಜಿಮ್ಮನ ಬಗೆಗೆ ಪ್ರಕಟನೆ ಹೊರಡಿಸುವುದಾಗಿ ತೀರ್ಮಾನಿಸಿದ್ದನು. ಅವನು ನ್ಯೂ ಆರ್ಲಿಯನ್ಸ್ ಪತ್ರಿಕೆಗಳ ಮಾತೆತ್ತಿದ್ದೇತಡ, ನನ್ನ ಮೈಯೊಳಗೆ ಚಳಿ ನಡುಕಹುಟ್ಟಿತು, ನಾವಿನ್ನು ತಡಮಾಡಲೇ ಬಾರದೆಂದು ನನಗೆ ತೋರಿತು. ಆಗ ಟಾಮ್, 'ಈಗ ಅನಾಮಿಕಪತ್ರಗಳಿಗೆ ವೇಳೆಯೊದಗಿದೆ' ಎಂದನು

"ಏನವು ?" ಎಂದೆ ನಾನು.

"ಏನೋ ನಡೆಯಲಿದೆ ಎಂದು ಜನರಿಗೆ ಕೊಡುವ ಮುನ್ನೆಚ್ಚರಿಕೆಗಳು. ಅದರ

ವಿಧಾನ ಒಂದೊಂದು ಸಲವೂ ಬೇರೆಯಾಗಿರುತ್ತದೆ. ದುರ್ಗದ ಅಧಿಪತಿಗೆ ಮುನ್ನೆಚ್ಚರಿಕೆ ನೀಡುವವರು ಯಾರಾದರೊಬ್ಬರು ಇದ್ದೇ ಇರುತ್ತಾರೆ. ಟೂಲರೀಸಿನಿಂದ ಪಾರಾಗಲಿದ್ದ ಹದಿನಾರನೆಯ ಲೂಯಿಗೆ ದಾಸಿಯೊಬ್ಬಳು ಹಾಗೆ ನೆರವಾದಳು. ಅದು ಬಲು ಒಳ್ಳೆಯ ವಿಧಾನ; ಅನಾಮಿಕ ಪತ್ರಗಳೂ ಹಾಗೆಯೇ. ನಾವು ಎರಡು ವಿಧಾನಗಳನ್ನೂ ಅನುಸರಿಸೋಣ. ಮತ್ತು ಸೆರೆಯಾಳಿನ ತಾಯಿ ಅವನೊಂದಿಗೆ ತನ್ನ ಉಡುಪನ್ನು ಅದಲು ಬದಲು ಮಾಡಿಕೊಳ್ಳುವುದೂ ರೂಢಿಯಲ್ಲಿದೆ. ಅವಳು ಒಳಗೇ ಉಳಿಯುತ್ತಾಳೆ, ಅವನು ಅವಳ ಉಡುಪನ್ನು ಧರಿಸಿ ನುಣಚಿಕೊಳ್ಳುತ್ತಾನೆ. ನಾವು ಅವನ್ನೂ ಮಾಡೋಣ."

"ಆದರೆ ಇಲ್ಲಿ ನೋಡು ಟಾಮ್, ಏನೋ ನಡೆಯಲಿದೆ ಎಂದು ನಾವು ಯಾರಿಗಾದರೂ ಏಕೆ ಮುನ್ನೆಚ್ಚರಿಕೆ ಕೊಡಬೇಕು? ಅವರೇ ಸ್ವತಃ ಹುಡುಕಿಕೊಳ್ಳಲಿ-ಅದು ಅವರ ತಲೆ-ಪಾಡು."

"ನನಗೆ ಗೊತ್ತದು; ಆದರೆ ನೀನು ಅವರನ್ನು ನೆಚ್ಚುವಂತಿಲ್ಲ. ಅವರು ಮೊದಲಿನಿಂದಲೂ ಮಾಡುತ್ತಿರುವುದೇ ಹಾಗೆ—ಎಲ್ಲಾ ಕೆಲಸಗಳನ್ನೂ ನಮಗೇ ಬಿಟ್ಟುಕೊಟ್ಟಿದ್ದಾರೆ, ಯಾವುದನ್ನೂ ಗಮನಕ್ಕೆ ತಂದುಕೊಳ್ಳದಿರುವ ಮತ್ತು ನಿರಾಂತಕವಾಗಿರುವ ಹೆಡ್ಡರಿವರು. ಆದ್ದರಿಂದ ನಾವು ಎಚ್ಚರಿಕೆ ಕೊಡದೆ ಹೋದಲ್ಲಿ ನಮ್ಮ ಕಾರ್ಯಾಚರಣೆಯಲ್ಲಿ ತಲೆಹಾಕುವವರು ಯಾರೂ ಇರುವುದಿಲ್ಲ, ಆದ್ದರಿಂದ ಈ ವಿಮೋಚನೆ, ನಾವು ಇಷ್ಟೆಲ್ಲ ಕಷ್ಟಪಟ್ಟು ಹಿಂಸೆಯನ್ನನುಭವಿಸಿದ್ದರೂ, ಸಂಸೂತ್ರವಾಗಿ ಸಪ್ಪೆಯಾಗಿ ನಡೆದು ಹೋಗುತ್ತದೆ, ವ್ಯರ್ಥವಾಗುತ್ತದೆ—ಅದಕ್ಕೆ ಎಷ್ಟೂ ಕೀರ್ತಿಬಾರದು."

"ನನ್ನನ್ನು ಕೇಳಿದರೆ, ಟಾಮ್, ಅದೇ ನನಗಿಷ್ಟವಾದ ಮಾರ್ಗ." ಅವನು ತುಂಬಾ ಜಿಗುಪ್ಸೆಗೊಂಡು ಹೇಳಿದ : "ಮಣ್ಣು !" ನಾನು ಹೇಳಿದೆ :

"ನನ್ನ ಆಕ್ಷೇಪಣೆ ಏನೂ ಇಲ್ಲ. ನಿನಗೆ ಯಾವುದು ಅನುಕೂಲವೋ ನನಗೂ ಅದೇ ಅನುಕೂಲವೆನ್ನುತ್ತೇನೆ. ಆ ದಾಸಿಯ ಬಗೆಗೆ ನೀನು ಏನು ಮಾಡಲಿರುವೆ ?"

"ನೀನು ಅವಳ ಪಾತ್ರವನ್ನು ಧರಿಸುವೆ, ಇರುಳು ತುಂಬಿದ ಮೇಲೆ ನೀನು ಅಲ್ಲಿಗೆ ಹೋಗಿ ನೀಗ್ರೋ ಹುಡುಗಿಯ ಲಂಗವನ್ನು ಕದಿಯಬೇಕು."

"ಬೇಡ, ಟಾಮ್, ಮರುದಿನ ಬೆಳಗಾಗುವ ಹೊತ್ತಿಗೇ ಅದರಿಂದ ತೊಂದರೆಯುಂಟಾಗುತ್ತದೆ, ಇನ್ನೂ ಒಂದು ಕಾರಣ : ಅವಳಿಗಿರುವುದೇ ಆ ಒಂದು ಲಂಗವೇನೋ !"

"ನನಗೆ ಗೊತ್ತಿದೆ; ಆದರೆ ನೀನು ಅನಾಮಿಕಪತ್ರವನ್ನು ಒಯ್ದು ಮುಂಬಾಗಿಲ ಕೆಳಗೆ ನೂಕಿ ಬಂದು ಬಿಡುವುದಕ್ಕೆ ಹದಿನೈದುನಿಮಿಷಗಳಿಗಿಂತ ಹೆಚ್ಚುಕಾಲ ಹಿಡಿಯುವುದಿಲ್ಲ."

"ಸರಿ ಹಾಗಾದರೆ, ನಾನದನ್ನು ಮಾಡಿಬಿಡುತ್ತೇನೆ; ಅದನ್ನು ನಾನು ನನ್ನ ಉಡಂಪಿನಲ್ಲೇ ಬಚ್ಚಿಟ್ಟುಕೊಂಡು ಹೋಗುವುದೂ ಅಷ್ಟೇ ಸೌಕರ್ಯವಾದುದು."

"ಆಗ ನೀನು ದಾಸಿಯಂತೆ ಕಾಣುವುದಿಲ್ಲ, ಅಲ್ಲವೆ ?"

"ಹಾಗಲ್ಲ, ನಾನು ಹೇಗೆ ಕಾಣಿಸುವೆನೆಂಬುದನ್ನು ನೋಡುವುದಕ್ಕೆ ಅಲ್ಲಿ ಯಾರೂ ಇರುವುದಿಲ್ಲವಲ್ಲ !"

"ಅದಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ. ಯಾರು ನೋಡುತ್ತಾರೆ, ಯಾರು ನೋಡುವುದಿಲ್ಲ ಎನ್ನುವುದನ್ನು ತಲೆಗೇ ಹಚ್ಚಿಕೊಳ್ಳಬಾರದು ನಾವು. ನಮ್ಮ ಕರ್ತವ್ಯವನ್ನು ನಾವು ಮಾಡುವುದೇ ನಮಗೆ ಧರ್ಮ. ನಿನಗೆ ನೇಮನಿಷ್ಠೆ ಯಾವುದೂ ಇಲ್ಲವೆ ?"

"ಆಗಲಿ, ನಾನೇನನ್ನೂ ಹೇಳುತ್ತಿಲ್ಲ. ನಾನೀಗ ಹೆಣ್ಣಾಳು. ಜಿಮ್ಮನ ತಾಯಿ ಯಾರು?"

"ನಾನವನ ತಾಯಿ. ನಾನು ಸಾಲಿ ಚಿಕ್ಕಮ್ಮನ ಮೇಲಂಗಿಯನ್ನು ಕದ್ದು ತರುತ್ತೇನೆ."

"ಹಾಗಾದರೆ, ನಾನೂ ಜಿಮ್ಮನೂ ಸೆರೆಕೋಣೆಯನ್ನು ಬಿಡುವಾಗ ನೀನಿಲ್ಲಿಯೇ ಉಳಿದಿರಬೇಕಾಗುತ್ತದೆ."

"ಹೆಚ್ಚು ಹೊತ್ತು ಉಳಿಯುವ ಅಗತ್ಯವಿಲ್ಲ. ನಾನು ಜಿಮ್ಮನ ಉಡುಪಿನೊಳಕ್ಕೆ ಒಣಹುಲ್ಲನ್ನು ತುಂಬಿ, ಮಾರುವೇಷದ ಅವನ ತಾಯಿಯ ಪ್ರತಿನಿಧಿಯಾಗಿ, ಅದನ್ನು ಅವನ ಹಾಸುಗೆಯಮೇಲೆ ಮಲಗಿಸುತ್ತೇನೆ. ಜಿಮ್ ನನ್ನಿಂದ ಆ ನಿಗ್ರೋ ಹೆಂಗಸಿನ ಮೇಲಂಗಿಯನ್ನು ತೆಗೆದುಕೊಂಡು ಧರಿಸುತ್ತಾನೆ. ನಾವು ಮೂವರೂ ಒಟ್ಟಿಗೆ ತಪ್ಪಿಸಿಕೊಂಡು ಹೋಗೋಣ. ಪ್ರತಿಷ್ಠಿತನಾದ ಸೆರೆಯಾಳು ನುಣುಚಿಕೊಂಡು ಹೋದರೆ ಅದನ್ನು 'ತಪ್ಪಿಸಿಕೊಂಡು ಹೋಗುವುದು' ಎನ್ನುವುದು ವಾಡಿಕೆ. ನಿದರ್ಶನಕ್ಕಾಗಿ, ರಾಜನೊಬ್ಬನು ಸೆರೆಯಿಂದ ನುಣುಚಿಕೊಂಡರೆ ಅದನ್ನು ಹಾಗೆಯೇ ಕರೆಯುತ್ತಾರೆ. ರಾಜನ ಮಗನ ಮಾತಿಗೆ ಬಂದರೂ ಹಾಗೆಯೇ: ಅವನು ಅನೌರಸನಾಗಿರಲಿ ಸಹಜವದಲ್ಲ ಅನ್ಯವಿಧಾನದಲ್ಲಿ ಹುಟ್ಟಿದವನಾಗಿರಲಿ ಯಾವ ಭೇದವನ್ನು ಮಾಡುವುದಿಲ್ಲ."

ಬಳಿಕ ಟಾಮ್ ಅನಾಮಿಕಪತ್ರವೊಂದನ್ನು ಬರೆದ. ನಾನು ನೀಗ್ರೋ ಹುಡುಗಿಯೊಬ್ಬಳ ಲಂಗವನ್ನು ಅದೇರಾತ್ರಿ ಕದ್ದು ಧರಿಸಿದೆ ; ಆ ಪತ್ರವನ್ನು ಒಯ್ದು ಟಾಮ್ ನನಗೆ ಹೇಳಿದ್ದ ಹಾಗೆಯೇ, ಮುಂಬಾಗಿಲ ಕೆಳಗಣ ಸಂದಿಯಲ್ಲಿ ಒಳಕ್ಕೆ ನೂಕಿದೆ. ಅದರಲ್ಲಿ ಹೀಗೆ ಬರೆದಿತ್ತು :

"ಜಾಗರೂಕರಾಗಿರಿ. ತೊಂದರೆ ಸಂಭವಿಸಲಿದೆ. ಜಾಗರೂಕವಾದ ಕಾವಲನ್ನು ಏರ್ಪಡಿಸಿಕೊಳ್ಳಿ.

ಅಜ್ಞಾತ ಮಿತ್ರ.

ಮೂರನೆಯ ರಾತ್ರಿ ಟಾಮ್ ಮುಂಬಾಗಿಲಮೇಲೆ ತಲೆಬುರುಡೆಯು ಮತ್ತು ಅಡ್ಡ ಮೂಳೆಗಳ ಚಿತ್ರವೊಂದನ್ನು ರಕ್ತದಲ್ಲಿ ಬರೆದನು. ಅದರ ಮುಂದಿನ ರಾತ್ರಿ ಹಿಂಬಾಗಿಲ ಮೇಲೆ ಅದೇ ರೀತಿಯಲ್ಲಿ ಶವದ ಪೆಟ್ಟಿಗೆಯೊಂದನ್ನು ಚಿತ್ರಿಸಿದನು, ಮನೆಯವರಿಗಾದ ಭಯ ಅಷ್ಟಿಷ್ಟಲ್ಲ. ಮನೆಯಲ್ಲಿ ಎಲ್ಲಾ ಪದಾರ್ಥಗಳ ಹಿಂದೆಯೂ ಹಾಸುಗೆಗಳ ಕೆಳಗೂ ಎಲ್ಲೆಲ್ಲೂ ಗಾಳಿಯಲ್ಲಿ ದೆವ್ವಗಳೇ ಕಂಪಿಸುತ್ತಿದ್ದು ಇಡೀ ಮನೆಯೇ ದೆವ್ವಗಳಿಂದ ತುಂಬಿ ಹೋಗಿದ್ದರೂ ಅವರಿಗೆ ಇಷ್ಟು ಭಯವಾಗುತ್ತಿರಲಿಲ್ಲವೇನೋ ! ಕದ ಮುಚ್ಚಿದ ಸದ್ದಾದರೆ ಸಾಲಿಚಿಕ್ಕಮ್ಮ ಧಿಗ್ಗನೆ ಎದ್ದುನಿಲ್ಲುತ್ತಿದ್ದಳು, 'ಔಕ್!' ಎನ್ನುತ್ತಿದ್ದಳು; ಏನಾದರೂ ಕೆಳಗೆ ಬಿದ್ದರೆ, ಎಗರಿನಿಂತು "ಔಕ್!"ಎನ್ನುತ್ತಿದ್ದಳು. ಅವಳು ಬೇರೆಕಡೆಗೆ ನೋಡುತ್ತಿದ್ದಾಗ, ನೀವು ಅವಳನ್ನು ಮುಟ್ಟಿದರೆ ಅವಳು ಹಾಗೆಯೇ ಮಾಡುತ್ತಿದ್ದಳು. ಅವಳು ಎತ್ತಲೂ ತಿರುಗಿ ನೋಡಲಾರಳು, ಎಲ್ಲೂ ಸಮಾಧಾನ ಬಾರದು, ಏಕೆಂದರೆ ಪ್ರತಿ ಸಲವೂ ತನ್ನ ಹಿಂದೆಯೇ ಏನೋ ನಿಂತಿರುವುದಾಗಿ ಅವಳು ಭಾವಿಸಿದ್ದಳು-ಆದ್ದರಿಂದ ಅವಳು ಯಾವಾಗಲೂ ಥಟ್ಟನೆ ತಿರುಗಿನೋಡಿ "ಔಕ್!" ಎನ್ನುತ್ತಿದ್ದಳು, ಮತ್ತು ಪೂರ್ತಿ ತಿರುಗುವುದರೊಳಗೆ ಅವಳು ಮತ್ತೆ ಹಿಂದಿರುಗಿ ಹಾಗೆಯೇ ಹೇಳುತ್ತಿದ್ದಳು. ಅವಳಿಗೆ ಹಾಸುಗೆಯಮೇಲೆ ಮಲಗುವುದಕ್ಕೆ ಭಯ; ಕುಳಿತಿರುವುದಕ್ಕೂ ಧೈರ್ಯವಿಲ್ಲ, ನಮ್ಮ ಯೋಜನೆ ತುಂಬಾ ಪರಿಣಾಮಕಾರಿಯಾಗಿತ್ತು. ಇದಕ್ಕಿಂತಲೂ ಯಶಸ್ವಿಯಾಗಿ ಕಾರ್ಯಗತವಾದ ಯಾವುದನ್ನೂ ತಾನು ನೋಡಿಯೇ ಇಲ್ಲವೆಂದನು ಟಾಮ್; ನಾವು ಸರಿಯಾದ ರೀತಿಯಲ್ಲಿ ಅದನ್ನು ಮಾಡಿದ್ದೇವೆನ್ನುವುದನ್ನು ಅವೇ ತೋರಿಸುತ್ತಿದೆ ಎಂದನವನು.

ಈಗ ನಾವು ಮಹತ್ವಪೂರ್ಣವಾದ ಘಟ್ಟಕ್ಕೆ ಕಾಲಿಡುತ್ತೇವೆ ಎಂದನವನು. ಮರುದಿನ ಬೆಳಗಾಗ ಸೂರ್ಯೋದಯಕ್ಕೆ ಮುನ್ನವೇ ನಾವು ಇನ್ನೊಂದು ಪತ್ರವನ್ನು ಸಿದ್ಧಪಡಿಸಿದೆವು. ರಾತ್ರಿಯೂಟದವೇಳೆಯಲ್ಲಿ ಅವರು, ಮನೆಯ ಎರಡುಬಾಗಿಲುಗಳಿಗೂ ನೀಗ್ರೋ ಒಬ್ಬನನ್ನು ಇಡೀರಾತ್ರಿ ಕಾಯುವುದಕ್ಕೆ ನೇಮಿಸಿದ್ದುದಾಗಿ ಹೇಳಿದ್ದರಿಂದ, ಈ ಪತ್ರವನ್ನು ಏನುಮಾಡಬೇಕೆಂಬುದೇ ಹೊಳೆಯಲಿಲ್ಲ. ಟಾಮ್ ಮಿಂಚುಕಂಬಿಯನ್ನು ಹಿಡಿದು ಕೆಳಗಿಳಿದುಹೋಗಿ ಸುತ್ತಲೂ ವೀಕ್ಷಿಸಿದನು. ಹಿಂಬಾಗಿಲಬಳಿಯಲ್ಲಿದ್ದ ನೀಗ್ರೋ ನಿದ್ದೆಮಾಡುತ್ತಿದ್ದನು. ಟಾಮ್ ಆ ಪತ್ರವನ್ನು ಅವನ ಕುತ್ತಿಗೆಯ ಹಿಂದೆ ಸಿಕ್ಕಿಸಿ ಹೊರಟುಬಂದ. ಈ ಪತ್ರದಲ್ಲಿ ಹೀಗೆ ಬರೆದಿತ್ತು :

ನನ್ನನ್ನುಬಿಟ್ಟುಕೊಡಬೇಡಿ, ನಾನು ನಿಮ್ಮ ಮಿತ್ರನಾಗಿರಲಪೇಕ್ಷಿಸುತ್ತೇನೆ, ಈ ರಾತ್ರಿ ಇಂಡಿಯನ್ನರ ಸೀಮೆಯಿಂದ ಜೀವದ ಮೇಲೆ ಪರಿವೆಯಿಲ್ಲದ ಕೊಲೆಗಡುಕರ ಗುಂಪೊಂದು ಬಂದು ನಿಮ್ಮ ಓಡುಕುಳಿ ನೀಗ್ರೋವನ್ನು ಅಪಹರಿಸಿಕೊಂಡು ಹೋಗಲಿದೆ. ಅವರು ನಿಮ್ಮನ್ನು ಬೆದರಿಸಿ ನೀವು ಮನೆಯಲ್ಲಿಯೇ ಇರುವಂತೆಯೂ ತಮಗೆ ನಿಮ್ಮಿಂದ ತೊಂದರೆಯಾಗದಂತೆಯೂ ಮಾಡಲು ಹವಣಿಸುತ್ತಿದ್ದಾರೆ, ನಾನೂ ಆ ಗುಂಪಿನಲ್ಲೊಬ್ಬ;

ಆದರೆ ನನಗೆ ಧರ್ಮಶ್ರದ್ಧೆಯಿದೆ, ಆ ಗುಂಪನ್ನು ತ್ಯಜಿಸುವ ಮತ್ತು ಪ್ರಾಮಾಣಿಕಜೀವನವನ್ನು ನಡಸುವ ಇಷ್ಟವಿದೆ. ಆದ್ದರಿಂದ ಅವರ ಘೋರಕುತಂತ್ರವನ್ನು ಬಯಲು ಮಾಡುತ್ತೇನೆ. ಅವರು ಸರಿಯಾಗಿ ಮಧ್ಯರಾತ್ರಿಯ ಹೊತ್ತಿಗೆ ಕಳ್ಳ ಬೀಗದೆಸಳಿನೊಂದಿಗೆ ಉತ್ತರದ ಕಡೆಯಿಂದ ಬೇಲಿಯುದ್ದಕ್ಕೂ ನುಸುಳಿ ಬಂದು ಆನೀಗ್ರೋವನ್ನು ಹಿಡಿಯಲು ಅವನಿರುವ ಕುಟೀರವನ್ನು ಪ್ರವೇಶಿಸುತ್ತಾರೆ. ನಾನು ಅಲ್ಲಿಗೆ ಸ್ವಲ್ಪ ಹತ್ತಿರದಲ್ಲೇ ಇರಬೇಕೆಂದೂ ಅಪಾಯವೇನಾದರೂ ಕಾಣಿಸಿಕೊಂಡರೆ ನಾನು ತಗಡಿನ ಕೊಂಬನ್ನೂದಕೆಂದೂ ವಿಧಾಯಕವಾಗಿದೆ. ಬದಲಾಗಿ ನಾನು ಕುರಿಯಂತೆ "ಬ್ಯಾ' ಎಂದರಚುತ್ತೇನೆ: ಕೊಂಬನ್ನೂದುವುದಿಲ್ಲ. ಆಗ ಅವರು ಅವನ ಸರಪಳಿಗಳನ್ನು ಬಿಚ್ಚುತ್ತಲಿರುವಾಗ ನೀವು ಸದ್ದು ಮಾಡದೆ ಅಲ್ಲಿಗೆ ಬಂದು, ಅವರು ಒಳಗಿರುವಂತೆಯೇ ಮೊದಲು ಕುಟೀರದ ಬಾಗಿಲಿಗೆ ಬೀಗ ಹಾಕಿಕೊಳ್ಳಿ; ನಿಮಗೆ ಬಿಡುವಾದಾಗ ಅವರನ್ನು ಕೊಲ್ಲಬಹುದು. ನಾನು ಈಗ ಹೇಳಿರುವಂತಲ್ಲದೆ ಬೇರೆ ಏನನ್ನೂ ನೀವು ಮಾಡುವುದಕ್ಕೆ ಹೋಗಬೇಡಿ. ಹಾಗೇನಾದರೂ ಮಾಡಿದ್ದೇ ಆದರೆ, ಅವರಿಗೆ ಅನುಮಾನ ಬಂದು ಅಸಾಧ್ಯಗೊಂದಲವೆಬ್ಬಿಸಿಯಾರು. ನಾನು ಸತ್ಕಾರ್ಯವೊಂದನ್ನು ಮಾಡಿರುವೆನೆಂಬ ಅರಿವನ್ನಲ್ಲದೆ ನಾನು ಇನ್ನಾವ ಬಹುಮಾನವನ್ನೂ ಅಪೇಕ್ಷಿಸುವುದಿಲ್ಲ.

ಅಜ್ಞಾನ ಮಿತ್ರ.

## ೪೦

ಬೆಳಗಿನ ಉಪಹಾರದ ತರುವಾಯ ನಾವು ಬಲುಗೆಲುವಾಗಿದ್ದೆವು, ಬುತ್ತಿ ಕಟ್ಟಿಕೊಂಡು ನನ್ನ ಕಿರುದೋಣಿಯನ್ನೊಯ್ದು ನದಿಯಲ್ಲಿ ಮೀನು ಹಿಡಿಯುತ್ತಾ ಅಡ್ಡಾಡಿ ಆನಂದವಾಗಿ ಕಾಲಕಳೆದೆವು, ನಮ್ಮ ತೆಪ್ಪದ ಬಳಿಗೆ ಹೋಗಿ ನಡೆದೆವು; ಹೋಗಿ ನೋಡಿದೆವು; ಅದು ಸುಸ್ಥಿತಿಯಲ್ಲಿತ್ತು. ರಾತ್ರಿಯೂಟದ ಹೊತ್ತು ಮೀರಿ ಮನೆಗೆ ಬಂದೆವು. ಮನೆಯವರೆಲ್ಲರೂ ತುಂಬಾ ಗಾಬರಿಗೊಂಡು ಚಿಂತಾಕ್ರಾಂತರಾಗಿರುವುದನ್ನು ಕಂಡೆವು; ಅವರಿಗೆ ತಾವು ನಿಂತಿರುವುದು ತಮ್ಮ ಕಾಲಿನ ಮೇಲೋ ತಲೆಯ ಮೇಲೋ ಎಂಬುದರ ಅರಿವೇ ಇರಲಿಲ್ಲ. ಊಟ ಮುಗಿದ ನಿಮಿಷವೇ ನಾವು ನಮ್ಮ ಹಾಸುಗೆಗಳಿಗೆ ಸೇರಿ ಕೊಳ್ಳಬೇಕೆಂದು ಅವರು ಒತ್ತಾಯ ಪಡಿಸಿದರು. ಅದಕ್ಕೆ ಕಾರಣವನ್ನು ಹೇಳರು, ತೊಂದರೆ ಎಂಥುದೆಂದು ತಿಳಿಸರು. ಹೊಸ ಪತ್ರದ ಬಗೆಗೆ ಅವರು ಒಂದು ಚಕಾರ

ವನ್ನೂ ಎತ್ತಲಿಲ್ಲ. ಅದು ಅಗತ್ಯವೂ ಆಗಿರಲಿಲ್ಲ ; ಏಕೆಂದರೆ ಅದರ ಬಗೆಗೆ ಅವರಲ್ಲಿ ಯಾರಿಗಾದರೂ ತಿಳಿದಿದ್ದಷ್ಟು ನಮಗೂ ತಿಳಿದಿತ್ತು. ನಾವು ಮಹಡಿಯ ಮೆಟ್ಟಿಲು ಅರ್ಧದಲ್ಲಿದ್ದೆವು ; ಅವಳು ನಮ್ಮ ಕಡೆಗೆ ಬೆನ್ನತಿರುಗಿಸಿದ್ದಳು. ನಾವು ಮೆಲ್ಲಗೆ ನೆಲ ಮಾಳಿಗೆಯ ಬಡುವಿಗೆ ಕದ್ದಿಳಿದು, ಸಾಕಷ್ಟು ಊಣಿಸನ್ನು ನಮ್ಮ ಕೊಠಡಿಗೆ ಒಯ್ದು ಇಟ್ಟುಕೊಂಡೆವು. ಬಳಿಕ ಮಲಗಿಕೊಂಡೆವು. ಹನ್ನೊಂದುವರೆಯ ಹೊತ್ತಿಗೆ ಎದ್ದೆವು. ಟಾಮ್ ತಾನು ಕದ್ದು ತಂದಿದ್ದ ಸಾಲಿ ಚಿಕ್ಕಮ್ಮನ ಉಡುಪನ್ನು ಧರಿಸಿ ಊಟಕ್ಕೆ ಮೊದಲು ಮಾಡಿದನು. ಅವನು ಕೇಳಿದ :

"ಬೆಣ್ಣೆ ಎಲ್ಲಿ ?"

"ಒಂದಿಷ್ಟು ಬೆಣ್ಣೆಯನ್ನು ರೊಟ್ಟಿಯ ಚೂರಿನ ಮೇಲೆ ಹರಡಿದ್ದೆ" ಎಂದೆ ನಾನು.

"ನೀನದನ್ನು ಹಾಗೆಯೇ ಹರಡಿದ್ದೆ ನಿಜ, ಆಗ—ಈಗಿಲ್ಲಿ ಅದಿಲ್ಲ."

"ಅದಿಲ್ಲದೆಯೂ ನಾವು ಮುಂದೆ ಸಾಗಬಹುದು." ಎಂದೆ ನಾನು.

"ಅದಿಲ್ಲದ್ದರೂ ನಾವು ಮುಂದೆ ಸಾಗಬಲ್ಲೆವು ; ಮತ್ತೆ ನೆಲಮಾಳಿಗೆಗೆ ಇಳಿದು ಅದನ್ನು ತಾ. ಆಮೇಲೆ 'ಮಿಂಚುಕಂಬಿ' ಹಿಡಿದು ಕೆಳಗಿಳಿದು ಹೋಗಿ ಬಂದುಬಿಡು. ನಾನು ಮುಂದಾಗಿ ಹೋಗಿ ಜಿಮ್ಮನ ಉಡುಪಿಗೆ ಒಣಹುಲ್ಲನ್ನು ಭರ್ತಿಮಾಡಿ ಮಾರು ವೇಷದ ಅವನ ತಾಯಿಯನ್ನು ಅದು ಪ್ರತಿನಿಧಿಸುವಂತೆ ಅಣಿಗೊಳಿಸಿ, ಕುರಿಯಂತೆ 'ಬ್ಯಾ' ಎನ್ನಲುಸಿದ್ಧವಾಗಿರುತ್ತೇನೆ ; ನೀನಲ್ಲಿಗೆ ಬಂದಕೂಡಲೇ ಹೊರಟು ಬಿಡೋಣ."

ಸರಿ, ಅವನು ಹಾಗೆ ಹೊರಟುಹೋದ, ನಾನು ಹೀಗೆ ನೆಲಮಾಳಿಗೆಗೆ ಇಳಿದೆ. ಒಂದು ಮುಷ್ಟಿಯ ಗಾತ್ರದ ಬೆಣ್ಣೆ ನಾನದನ್ನು ಬಿಟ್ಟಲ್ಲಿಯೇ ಇತ್ತು. ಬೆಣ್ಣೆಯ ಸಮೇತ ನಾನು ಆ ರೊಟ್ಟಿಯ ಚೂರನ್ನು ಎತ್ತಿಕೊಂಡೆ, ನನ್ನ ಕೈದೀಪವನಾರಿಸಿದೆ, ಬಲು ಮೆಲ್ಲಗೆ ಕಳ್ಳ ಹೆಜ್ಜೆಯಿಡುತ್ತ ಮಹಡಿಗೆ ಹತ್ತಿದೆ, ಮೊದಲನೆಯ ಅಂತಸ್ತಿಗೆ ಕ್ಷೇಮ ದಿಂದ ತಲುಪಿದೆ. ಆಗ ಅಲ್ಲಿಗೆ ಬರುತ್ತಿದ್ದಳು ಮೋಂಬತ್ತಿಯ ಕುಡಿಬೆಳಕಿನೊಂದಿಗೆ ಸಾಲಿ ಚಿಕ್ಕಮ್ಮ ! ನನ್ನ ಕೈಯಲ್ಲಿದ್ದುದನು ನನ್ನ ಟೋಪಿಯೊಳಗೆ ತುರುಕಿದೆ ; ಟೋಪಿ ಯನ್ನು ಬಿಗಿಯಾಗಿ ತಲೆಗೇರಿಸಿದೆ. ಮರುಕ್ಷಣವೇ ಅವಳು ನನ್ನನ್ನು ನೋಡಿದಳು : ಕೇಳಿದಳು :

"ನೀನು ನೆಲಮಾಳಿಗೆಗೆ ಹೋಗಿದ್ದೆಯಾ ?"

"ಹೌದು, ಚಿಕ್ಕಮ್ಮ."

"ನೀನು ಅಲ್ಲೇನು ಮಾಡುತ್ತಿದ್ದೆ ?"

"ಏನಿಲ್ಲ ಚಿಕ್ಕಮ್ಮ."

"ಏನೂ ಇಲ್ಲ !"

"ಇಲ್ಲ ಚಿಕ್ಕಮ್ಮ."

"ಹಾಗಾದರೆ ರಾತ್ರಿ ಈ ಹೊತ್ತಿನಲ್ಲಿ ನಿನ್ನನ್ನು ಅಲ್ಲಿಗೆ ಎಳೆದೊಯ್ದ ಕಾರಣ ಯಾವುದು ?"

"ನನಗೆ ಗೊತ್ತಿಲ್ಲ ಚಿಕ್ಕಮ್ಮ."

"ನಿನಗೆ ಗೊತ್ತಿಲ್ಲ ? ನನಗೆ ಆ ರೀತಿಯಲ್ಲಿ ಉತ್ತರ ಕೊಡಬಾರದು ನೀನು ಟಾಮ್, ನೀನು ಅಲ್ಲಿಗೆ ಇಳಿದು ಹೋಗಿ ಮಾಡುತ್ತಿದ್ದದ್ದೇನು ಎನ್ನುವುದು ನನಗೆ ತಿಳಿಯಬೇಕಾಗಿದೆ."

"ನಾನೇನೂ ಮಾಡಲಿಲ್ಲ, ಸಾಲಿ ಚಿಕ್ಕಮ್ಮ ; ನಾನಂಥಾದ್ದನ್ನು ಮಾಡಿದ್ದರೆ ದೇವರು ನೋಡಿಕೊಳ್ಳಲಿ."

ಅಲ್ಲಿಗವಳು ನನ್ನನ್ನು ಬಿಟ್ಟುಬಿಡುವಳು ಎಂದುಕೊಂಡಿದ್ದೆ ; ಸಾಮಾನ್ಯವಾಗಿ ಅವಳು ಮಾಡುತ್ತಿದ್ದುದೇ ಹಾಗೆ. ಆದರೆ, ಹಲವಾರು ವಿಚಿತ್ರ ಘಟನೆಗಳು ನಡೆಯುತ್ತಿದ್ದಂತೆ ತೋರುತ್ತದೆ ; ಆದ್ದರಿಂದ ಅಳತೆಗೋಲಿನ ಹಾಗೆಯೇ ನೇರವಲ್ಲದ ಸಣ್ಣಪುಟ್ಟ ವಿಷಯಗಳಿಗೆಲ್ಲ ತುಂಬಾ ಚೆದರುತ್ತಿದ್ದಳು. ಅವಳು ಖಡಾ ಖಂಡಿತವಾಗಿ ಹೇಳಿದಳು ;

"ಈಗ ನೀನು ಆ ದಿವಾನ-ಖಾನೆಗೆ ಹೀಗೆಯೇ ನಡೆದು ನಾನು ಬರುವವರೆಗೂ ಅಲ್ಲಿಯೇ ಇರಬೇಕು. ನೀನು ಮಾಡಲೇಬಾರದ ಯಾವ ಕೆಲಸಕ್ಕೋ ಕೈಹಾಕಿರುವಂತಿದೆ. ನಿನ್ನನ್ನು ಮುಂದಕ್ಕೆ ಹೋಗಗೊಡುವ ಮುನ್ನ ನಾನು ಅದೇನೆಂಬುದನ್ನು ಪತ್ತೆಮಾಡಲೇಬೇಕಾಗಿದೆ."

ಸರಿ, ಅವಳು ಹೊರಟುಹೋದಳು. ನಾನು ಬಾಗಿಲನ್ನು ತೆರೆದು ದಿವಾನ-ಖಾನೆಗೆ ನಡೆದೆ. ಆಶ್ಚರ್ಯ ! ಅಲ್ಲೊಂದು ಭಾರೀ ಗುಂಪು ಸೇರಿತ್ತು. ಹದಿನೈದು ಮಂದಿ ರೈತರಿದ್ದರು ಪ್ರತಿಯೊಬ್ಬನ ಕೈಯಲ್ಲೂ ಒಂದೊಂದು ಕೋವಿ. ನನಗೆ ಬಲು ಆತಂಕವಾಯಿತು ; ಕುರ್ಚಿಯೊಂದರಲ್ಲಿ ಕುಸಿದು ಕುಳಿತೆ. ಅವರು ಸುತ್ತಲೂ ಕುಳಿತಿದ್ದರು, ಅವರಲ್ಲಿ ಕೆಲವರು ಮೆಲುದನಿಯಲ್ಲಿ ಸ್ವಲ್ಪ ಸ್ವಲ್ಪ ಮಾತಾಡುತ್ತಿದ್ದರು ; ಎಲ್ಲರೂ ವ್ಯಾಕುಲಭರಿತರಾಗಿ ಧೃತಿಗೆಟ್ಟಿದ್ದರೂ ಅದನ್ನು ಮರೆಮಾಚಲು ಯತ್ನಿಸುತ್ತಿದ್ದರು. ಅವರ ಮನಸ್ಸಿನ ನಿಜಸ್ಥಿತಿ ನನಗೆ ತಿಳಿದಿತ್ತು ; ಏಕೆಂದರೆ ಅವರು ಪದೇ ಪದೇ ತಮ್ಮ ಟೋಪಿಗಳನ್ನು ಎತ್ತುತ್ತಿದ್ದರು, ಇಳಿಸುತ್ತಿದ್ದರು ; ತಲೆಕೆರೆದುಕೊಳ್ಳುತ್ತಿದ್ದರು ; ಈ ಕುರ್ಚಿಯಿಂದ ಆ ಕುರ್ಚಿಗೆ, ಅಲ್ಲಿಂದಿಲ್ಲಿಗೆ ಬಂದು ಕೂರುತ್ತಿದ್ದರು ; ತಮ್ಮ ಗುಂಡಿಗಳನ್ನು ತಡವರಿಸಿಸುತ್ತಿದ್ದರು. ನನಗೆ ತಾನೆ ಮನಸ್ಸು ನೆಮ್ಮದಿಯಾಗಿತ್ತೆ ? ಆದರೂ ನಾನು ನನ್ನ ಟೋಪಿಯನ್ನು ಎತ್ತಲೇ ಇಲ್ಲ.

ಸಾಲಿ ಚಿಕ್ಕಮ್ಮ ಅಲ್ಲಿಗೆ ಬಂದು, ನನ್ನನ್ನು ತರಾಟೆಗೆ ತೆಗೆದುಕೊಂಡು, ಇಷ್ಟವಾದರೆ ನನ್ನನ್ನು ಚೆನ್ನಾಗಿ ಥಳಿಸಿ ಕಳಿಸಿ ಬಿಡುತ್ತಾಳೆ, ಆಮೇಲೆ ನಾನು ಟಾಮನ ಬಳಿಗೆ ಹೋಗಿ ನಾವು ಮಾಡಿದ ಕೆಲಸ ಮಿತಿಮೀರಿ ಎಲ್ಲಿಗೆ ಬಂತೆಂಬುದನ್ನೂ ನಾವೇ ಹೋಗಿ

ಎಂಥಾ ಪ್ರಮಾದಕರವಾದ ಹೆದ್ದುಂಬಿಯ ಗೂಡಿನಂಥ ಅಪಾಯಕ್ಕೆ ಸಿಕ್ಕಿಬಿದ್ದವನೆಂಬುದನ್ನೂ ತಿಳಿಸಬಹುದು, ಎಂದುಕೊಂಡಿದ್ದೆ ; ನಾವು ಹೀಗೆ ಇಲ್ಲಲ್ಲಿ ಅರಿಯಂದೆ ತಲೆಹಾಕುವುದನ್ನು ಇನ್ನಾದರೂ ನಿಲ್ಲಿಸಿ, ಈ ಮಂದಿ ಸಹನೆಗೆಟ್ಟು ನಮ್ಮ ಮೇಲೆರಗಿ ಬರುವಷ್ಟರೊಳಗಾಗಿ, ಜಿಮ್ಮನನ್ನೂ ಕಟ್ಟಿಕೊಂಡು ಇಲ್ಲಿಂದ ಕಾಲ್ತೆಗೆಯೋಣವೆಂದು ಅವನಿಗೆ ಹೇಳಬೇಕೆಂದುಕೊಂಡಿದ್ದೆ.

ಕಟ್ಟಕಡೆಗೆ ಅವಳು ಬಂದಳು. ನನ್ನನ್ನು ತನಿಖೆಮಾಡತೊಡಗಿದಳು, ನಾನವಳಿಗೆ ಥಟ್ಟನೆ ಉತ್ತರ ಕೊಡಲಾಗಲಿಲ್ಲ, ನಾನು ಕಾಲಿನ ಮೇಲೆ ನಿಂತಿದ್ದೇನೋ ತಲೆಯ ಮೇಲೆ ನಿಂತಿದ್ದೇನೋ ಎನ್ನುವುದೇ ನನಗೆ ತೋರಲಿಲ್ಲ; ಏಕೆಂದರೆ, ಈ ಮಂದಿ ಎಷ್ಟು ವ್ಯಾಕುಲಗೊಂಡಿದ್ದರೆಂದರೆ, ಅವರಲ್ಲಿ ಕೆಲವು ತತ್-ಕ್ಷಣವೇ ಹೊರಟು ಆ ದುಸ್ಸಾಹಸಿಗಳನ್ನು ಹಿಡಿದು ಹಾಕುವುದಾಗಿಯೂ, ನಡುರಾತ್ರಿಗೆ ಇನ್ನು ಕೆಲವೇ ನಿಮಿಷಗಳು ಕೂಡ ಉಳಿದಿಲ್ಲವೆಂದೂ ಹೇಳಿಕೊಳ್ಳುತ್ತಿದ್ದರು ; ಇನ್ನು ಕೆಲವರು ಅವರನ್ನು ತಡೆಹಿಡಿದು, ಕುರಿ-ಸನ್ನೆಗೆ ಕಾಯಬೇಕೆನ್ನುತ್ತಿದ್ದರು ; ಇತ್ತ ಸಾಲಿ ಚಿಕ್ಕಮ್ಮ ಪ್ರಶ್ನೆಗಳನ್ನು ಕುಟ್ಟಿ ಪಾರಿಸುತ್ತಲೇ ಇದ್ದಳು, ನನಗೆ ನ್ಯೆನಡುಕ ಹುಟ್ಟಿ ನನ್ನ ಕಥೆಯೇ ಮುಗಿಯಿತೆನ್ನುವಷ್ಟು ಹೆದರಿಕೆಯಾಗಿತ್ತು. ಒಳಮನೆಯಲ್ಲಿ ಸೆಕೆ ಏರುತ್ತಿತ್ತು ; ಬೆಣ್ಣೆ ಕರಗಿ ಕರಗಿ ನನ್ನ ಕುತ್ತಿಗೆಯ ಮೇಲೂ ಕಿವಿಗಳ ಹಿಂದೆಯೂ ಇಳಿಯತೊಡಗಿತು. ಕ್ಷಿಪ್ರದಲ್ಲೇ ಆ ಮಂದಿಯೊಳಗೊಬ್ಬ "ನನ್ನನ್ನು ಕೇಳಿದರೆ, ಈಗಲೇ ನಾವು ಮೊದಲೇ ಹೋಗಿ ಕುಟೀರದೊಳಗೆ ಸೇರಿಕೊಂಡು ಅವರು ಬಂದಾಗ ಹಿಡಿಯಬೇಕೆನ್ನುತ್ತೇನೆ" ಎಂದ. ಈ ಮಾತನ್ನು ಕೇಳಿ ನನ್ನ ಜಂಘಾಬಲ ಉಡುಗಿ ಹೋದಂತಾಯಿತು ; ಬೆಣ್ಣೆ ಧಾರಾಕಾರವಾಗಿ ಹಣೆಯ ಮೇಲಿಳಿಯತೊಡಗಿತು. ಸಾಲಿ ಚಿಕ್ಕಮ್ಮ ಅದನ್ನು ಕಂಡಳು. ಅವಳ ಮುಖ ಹಚ್ಚಡದಂತೆ ಬಿಳಿಚಿತು. ಅವಳು ಹೇಳಿದಳು :—

"ಅಯ್ಯೋ ನನ್ನ ಕರ್ಮವೆ ! ಈ ಮಗುವಿಗೆ ಏನಾಗಿದೆಯೋ ಕಾಣೆನಲ್ಲ ! ಇದಕ್ಕೆ ಮೆದುಳಿನ ಜ್ವರ ಬಂದಿದೆ ಎನ್ನುವುದು ನೀವು ಈ ಭೂಮಿಯ ಮೇಲೆ ಹುಟ್ಟಿದ್ದೀರಿ ಎನ್ನುವಷ್ಟೇ ನಿಜ ; ಅದು ನೆತ್ತಿಯಿಂದ ಉಕ್ಕಿ ಹರಿಯುತ್ತಿದೆ !"

ಅದನ್ನು ನೋಡುವುದಕ್ಕಾಗಿ ಎಲ್ಲರೂ ನುಗ್ಗಿ ಬಂದರು ; ಅವಳು ನನ್ನ ಟೋಪಿಯನ್ನು ಕಿತ್ತೆಸೆದಳು. ರೊಟ್ಟಿಯೂ ಉಳಿದಷ್ಟು ಬೆಣ್ಣೆಯೂ ಈಚೆಗೆ ಬಂದವು. ಅವಳು ನನ್ನನ್ನು ಬರಸೆಳೆದಪ್ಪಿ ಹೇಳಿದಳು :

"ಅಯ್ಯೋ. ನೀನೆಂಥಾ ಕೆಲಸಕೊಟ್ಟೆ ! ಸದ್ಯ, ಏನಾಗಿಬಿಟ್ಟಿತ್ತೋ ಎಂದಿದ್ದ ನಾನು ಈಗ ನನ್ನ ಮನಸ್ಸು ಹಗುರವಾಯಿತು ; ಏಕೆಂದರೆ ವಿಧಿ ನಮಗೆ ನಮಗೆ ವಿರೋಧವಾಗಿದೆ, ಅನರ್ಥ ಸೋನೆಯಂತೆ ಹನಿಯಿಸಿ, ಹುಚ್ಚು-ಮಳೆಯಾಗಿ ಸುರಿಯುತ್ತದೆ. ನಿನ್ನ ತಲೆಯಿಂದ ಸುರಿಯುತ್ತಿದ್ದ ಅದನ್ನು ಕಂಡಾಗ ನೀನು ನಮ್ಮ ಕೈಬಿಟ್ಟುಹೋದೆ. ಎಂದುಕೊಂಡೆ ನಾನು. ಅದರ ಬಣ್ಣ ಮುಂತಾದವು ನಿನ್ನ ಮೆದುಳಿನ ಹಾಗೆಯೇ

ಇರುವುದು ಕಂಡುಬಂತು.—ಅಯ್ಯೋ ನನ್ನ ಕಂದಾ! ನೀನು ಉಗ್ರಾಣಕ್ಕೆ ಇಳಿದಿದ್ದುದು ಇದಕ್ಕಾಗಿ ಮಾತ್ರ ಎಂದು ನೀನು ಮೊದಲೇ ನನಗೆ ಹೇಳಲಿಲ್ಲವೇಕೆ? ಹೇಳದಿದ್ದರೆ, ನಾನು ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಈಗ ಓಡಿಹೋಗಿ ಮಲಗಿಕೋ. ಬೆಳಗಾಗುವವರೆಗೂ ನೀನು ನನಗೆ ಮುಖವನ್ನೇ ತೋರಿಸಕೂಡದು!"

ನಾನು ತತ್-ಕ್ಷಣವೇ ಮಹಡಿಗೆ ಹಾರಿದೆ; ಕೂಡಲೇ 'ಮಿಂಚು ಕಂಬಿ'ಯನ್ನು ಹಿಡಿದು ಕೆಳಗಿಳಿದು ಪಡಸಾಲೆ ಬಳಿಗೆ ನೆಳಲುಬೆಳಕಿನ ಹಸೆಗಳನ್ನು ದಾಟಿಕೊಂಡು ಹೋದೆ. ನನ್ನ ಬಾಯಿಂದ ಮಾತೇ ಹೊರಡದಷ್ಟು ಆತಂಕವಾಗಿತ್ತು. ಆದರೂ ಆದಷ್ಟು ಬೇಗ ನಾನು ಟಾಮನಿಗೆ ನಡೆದುದೆಲ್ಲವನ್ನೂ ತಿಳಿಸಿದೆ; ಒಂದು ನಿಮಿಷಕಾಲವೂ ನಾವಿನ್ನು ತಡಮಾಡುವಂತಿಲ್ಲವೆಂದೂ ತತ್-ಕ್ಷಣವೇ ಕಾರ್ಯ ಸಾಧಿಸಬೇಕೆಂದೂ,—ಕೋವಿ ಹಿಡಿದ ಮಂದಿ ಆ ಮನೆಯಲ್ಲಿ ಗುಂಪು ಸೇರಿದ್ದಾರೆಂದ ಹೇಳಿದೆ.

ಅವನ ಕಣ್ಣು ಜ್ವಲಿಸಿತು; ಅವನು ಹೇಳಿದ :

"ಬೇಡ!—ಹಾಗಿದೆಯೇನು? ಇದು ಪ್ರಚಂಡ ಘಟನೆ ಅಲ್ಲವೆ! ಅದಿರಲಿ ಹಕ್, ನಾವು ಇದನ್ನೇ ಇನ್ನೊಂದು ಸಲ ಮಾಡಿದರೆ, ಇನ್ನೂರು ಮಂದಿಯನ್ನು ಗುಂಪು ಸೇರಿಸ ದಿದ್ದರೆ ಕೇಳು! ನಾವು ನಮ್ಮ ಕಾರ್ಯವನ್ನು ಮುಂದಕ್ಕೆ ಹಾಕವುದಾದರೆ—"

"ತ್ವರೆ! ತ್ವರೆ! ಜಿಮ್ ಎಲ್ಲಿ?" ಎಂದೆ ನಾನು,

"ನಿನ್ನ ಮೊಣಕೈ ಬಳಿಯೇ; ಕೈನೀಡಿದರೆ ನೀನು ಅವನನ್ನು ಸೋಕಬಲ್ಲೆ. ಅವನು ಉಡುಪನ್ನು ಹಾಕಿಕೊಂಡಿದ್ದಾನೆ, ಎಲ್ಲವೂ ಸಿದ್ಧವಾಗಿದೆ, ನಾವೀಗ ಜಾರಿ-ಕೊಂಡು ಕುರಿ-ಸನ್ನೆಯನ್ನು ಪ್ರಯೋಗಿಸೋಣ."

ಆದರೆ ಆ ಸಮಯಕ್ಕೆ ನಮಗೆ ಕುಟೀರದ ಬಾಗಿಲೆಡೆಗೆ ಬರುತ್ತಿದ್ದ ಜನರ ಹೆಜ್ಜೆ-ಸಪ್ಪಳ ಕೇಳಿಸಿತು. : ಅವರು ಅಗಣಿಯನ್ನು ತಡವರಿಸುತ್ತಿರುವುದೂ ಕೇಳಿಸಿತು : ಮತ್ತು ಅವರಲ್ಲೊಬ್ಬ ಹೀಗೆನ್ನುತ್ತಿದ್ದುದೂ ನನ್ನ ಕಿವಿಗೆ ಬಿತ್ತು.

"ನಾನು ಹೇಳಲಿಲ್ಲವೆ, ಇಷ್ಟು ಮುಂಚೆ ಬಂದದ್ದು ಸರಿಹೋಯಿತು, ಅವರನ್ನು ಬಂದಿಲ್ಲ.—ಬಾಗಿಲಿಗೆ ಹಾಕಿದ ಬೀಗ ಹಾಗೆಯೇ ಇದೆ. ನಾನೀಗ ನಿಮ್ಮಲ್ಲಿ ಕೆಲವರನ್ನು ಒಳಗೆ ಕೂಡಿ ಕುಟೀರದ ಬಾಗಿಲಿಗೆ ಬೀಗ ಬಿಗಿಯುತ್ತೇನೆ, ಅವರು ಬರುವತನಕ ಕತ್ತಲೆ ಯಲ್ಲಿ ಕಾದಿರಿ; ಬಂದಕೂಡಲೆ ಅವರನ್ನು ಕೊಂದುಹಾಕಿ ಉಳಿದವರು ಈ ಸುತ್ತಮುತ್ತ ಹರಡಿಕೊಂಡು ಅವರ ಹೆಜ್ಜೆ ಸದ್ದು ಕಿವಿಗೆ ಬಿದ್ದಕೂಡಲೆ ತಿಳಿಸಿ."

ಇವರು ಒಳಗೆ ಬಂದರು; ಒಳಗೆಲ್ಲ ಕತ್ತಲೆಯಾದುದರಿಂದ ಅವರ ಕಣ್ಣಿಗೆ ನಾವು ಬೀಳಲಿಲ್ಲ, ನಾವು ಮಂಚದ ಕೆಳಗೆ ತೂರಿಕೊಳ್ಳುತ್ತಿರುವ ಸಮಯದಲ್ಲಿ ಅವರು ನಮ್ಮನ್ನು ಇನ್ನೇನು ತುಳಿಯುವುದರಲ್ಲಿದ್ದರು. ಆದರೂ ನಾವು ಸುರಕ್ಷಿತವಾಗಿ ನುಣುಚಿ ಕೊಂಡು ಸದ್ದಿಲ್ಲದೆ ಬಲುಬೇಗ ಸುರಂಗದ ಮಾರ್ಗವಾಗಿ ಮೊದಲು ಜಿಮ್, ಬಳಿಕ ನಾನು, ಕಡೆಯಲ್ಲಿ ಟಾಮ್—ಹೀಗೆ ಟಾಮನ ಪೂರ್ವನಿರ್ದೇಶದಂತೆ ಹೊರಬಿದ್ದೆವು.

ನಾವೀಗ ಪಡಸಾಲೆಯಲ್ಲಿದ್ದೆವು ; ಹೊರಗೆ ಸಮೀಪದಲ್ಲೇ ಜನರ ಓಡಾಟ ನಮ್ಮ ಕಿವಿಗೆ ಬಿತ್ತು. ನಾವು ಬಾಗಿಲಬಳಿಗೆ ತೆವಳಿಕೊಂಡು ಹೋದೆವು ; ಟಾಮ್ ನನ್ನನ್ನು ಅಲ್ಲೇ ತಡೆದ ; ಬಿರುಕಿನಲ್ಲಿ ಕಣ್ಣಿಟ್ಟು ನೋಡಿದ ; ಹೊರಗೆ ಕತ್ತಲಾದುದರಿಂದ ಯಾವುದೂ ಸ್ಪಷ್ಟವಾಗಿ ಗೋಚರಿಸಲಿಲ್ಲ ; ಹೆಜ್ಜೆಗಳು ಮುಂದುವರಿಸುವುದನ್ನು ತಾನು ಆಲಿಸುವುದಾಗಿಯೂ, ತಾನು ಮೊಣಕೈಯಿಂದ ನೂಕಿದಾಗ ಜಿಮ್ ಮೊದಲು ನುಣುಚಿಕೊಳ್ಳಬೇಕೆಂದೂ ಕಡೆಯಲ್ಲಿ ತಾನು ಹೊರಬರುವುದಾಗಿ ಹೇಳಿದ. ಅದಕ್ಕಾಗಿ ಅವನು ಬಾಗಿಲ ಬಿರುಕಿಗೆ ಭದ್ರವಾಗಿ ಕಿವಿಯಿಟ್ಟು ಕೇಳಿದ, ಕೇಳಿದ. ಕೇಳಿದ ; ಅಷ್ಟು ಹೊತ್ತೂ ಹೊರಗೆ ಹೆಜ್ಜೆಗಳು ನೆಲವನ್ನು ಹೆರೆಯುತ್ತಲಿದ್ದವು : ಕಟ್ಟಕಡೆಗೆ ಅವನು ನಮ್ಮನ್ನು ತಿವಿದನು ; ನಾವು ಉಸಿರು ಹಿಡಿದುಕೊಂಡು ತಲೆಬಾಗಿ, ತುಟಿಪಿಟಕ್ಕೆನ್ನದೆ ನಿಶ್ಶಬ್ದವಾಗಿ ರೆಡ್ ಇಂಡಿಯನ್ನರ ಸಾಲಿನಂತೆ ಬೇಲಿಯ ಕಡೆಗೆ ನುಸುಳಿಕೊಂಡೆವು. ನಾನೂ ಜಿಮ್ಮನೂ ಸರಾಗವಾಗಿ ದಾಟಿದೆವು. ಆದರೆ ಟಾಮನ ಷರಾಯಿ ಬೇಲಿಯ ಮೇಲಿನ ಮುಳ್ಳು ಕೋಲಿಗೆ ಸಿಕ್ಕಿಕೊಂಡಿತು. ಆಗ ತನ್ನ ಕಡೆಗೇ ಹೆಜ್ಜೆಗಳು ಬರುತ್ತಿರುವುದು ಅವನಿಗೆ ಕೇಳಿಸಿತು. ಅವನು ಸಿಕ್ಕನ್ನು ಬಿಡಿಸಿಕೊಳ್ಳಬೇಕಾಯಿತು ; ಆ ಅವಸರದಲ್ಲಿ ಕೋಲು ಮುರಿದುಬಿದ್ದ ಸದ್ದಾಯಿತು. ಅವನು ನಾವಿದ್ದ ಬಳಿಗೆ ಧುಮುಕಿ ಬರುತ್ತಿರುವಾಗ ಯಾರೋ ಕೂಗಿಕೊಂಡರು :

"ಯಾರದು ? ಉತ್ತರಕೊಡು, ಇಲ್ಲವಾದರೆ ಗುಂಡಿಟ್ಟು ಕೊಲ್ಲುತ್ತೇವೆ" ನಾವು ಉತ್ತರಕೊಡಲಿಲ್ಲ ; ದೂರ ದೂರಕ್ಕೆ ಹೆಜ್ಜೆಹಾಕುತ್ತಾ ದೌಡಾಯಿಸಿದೆವು. ಆಗ ನಮ್ಮ ಹಿಂದೆಯೇ ಅವರು ನುಗ್ಗಿದರು ; ಒಡನೆಯೇ ಬಾಂಗ್, ಬಾಂಗ್, ಬಾಂಗ್,– ಗುಂಡುಗಳು ನಮ್ಮ ಮೈಗೆ ಸೋಕುವಂತೆಯೇ ಸ್ವಿಷ್ಷೆಂದು ಹಾದು ಹೋದವು. ಅವರ ಕೂಗು ನಮ್ಮ ಕಿವಿಗೆ ಬಿತ್ತು :

"ಅವರು ಇಲ್ಲೇ ಇದ್ದಾರೆ! ನದಿಯ ಕಡೆಗೆ ಪರಾರಿಯಾಗುತ್ತಿದ್ದಾರೆ ! ಅವರನ್ನು ಬೆನ್ನಟ್ಟಿಹೋಗಿ, ಹುಡುಗರಾ, ನಾಯಿಗಳನ್ನು ಬಿಚ್ಚಿ ಅಟ್ಟಿ !"

ಅವರು ಒಮ್ಮೊನೆಯಾಗಿ ನಮ್ಮ ಬಳಿಗೇ ಬರುತ್ತಿದ್ದರು. ಅವರು ಪಾದರಕ್ಷೆಗಳನ್ನು ಧರಿಸಿದ್ದರಿಂದಲೂ, ಕಿರುಚುತ್ತಲಿದ್ದರಿಂದಲೂ ಇತ್ತ ಬರುವುದು ನಮ್ಮ ಕಿವಿಗೆ ಬೀಳುತ್ತಿತ್ತು ; ನಾವಾದರೊ ಪಾದರಕ್ಷೆಗಳನ್ನು ಹಾಕಿಕೊಂಡಿರಲೂ ಇಲ್ಲ. ನಾವು ಗಾಣಕ್ಕೆ ಹೋಗುವ ದಾರಿ ಹಿಡಿದಿದ್ದೆವು ; ಅವರು ನಮ್ಮ ಸಮೀಪಕ್ಕೆ ಬಂದಾಗ, ನಾವು ಪೊದೆಗೆ ತೂರಿ ಅಡಗಿಕೊಂಡೆವು ; ಅವರು ಆ ಸ್ಥಳದಾಚೆಗೆ ದಾಟಿ ಹೋಗುವವರೆಗೂ ಸುಮ್ಮನಿದ್ದುಬಿಟ್ಟೆವು ; ಆಮೇಲೆ ಅವರ ಹಿಂದೆಯೇ ಹೋದೆವು. ಕಳ್ಳರನ್ನು ದೂರಕ್ಕೆ ಅಟ್ಟದಿರಲೆಂದು, ಅವರು ನಾಯಿಗಳನ್ನು ಕಟ್ಟಿಹಾಕಿದ್ದರು, ಆದರೆ ಅಷ್ಟು ಹೊತ್ತಿಗೆ ಯಾರೋ ಅವುಗಳನ್ನು ಬಿಚ್ಚಿ ಅಟ್ಟಿದರು. ಒಂದು ಲಕ್ಷ ಮಂದಿಗೆ ತಲೆ ಚಿಟ್ಟುಹಿಡಿಸುವಂಥ ಅಸಾಧ್ಯಗದ್ದಲವೆಬ್ಬಿಸುತ್ತಾ ಅವು ನುಗ್ಗಿಬಂದವು. ನಮ್ಮ ನಾಯಿಗಳವು ;

ಆದ್ದರಿಂದ ನಾವು ಇದ್ದ ಬಳಿಯೇ ಕದಲದೆ ನಿಂತೆವು. ಅಲ್ಲಿರುವವರು ನಾವೇ ಬೇರೆಯವರಲ್ಲ ಎನ್ನುವುದು ತಿಳಿದು ಅವು ಸ್ವಲ್ಪವೂ ಕೆರಳದೆ, ಪರಸ್ಪರ ಕುಶಲ ಪ್ರಶ್ನೆ ಹಾಕಿದಂತೆ ಮಾಡಿ, ಅಲ್ಲಿಗೆ ದೂರದಲ್ಲಿ ಕೂಗುತ್ತ ಬಗೆ ಬಗೆಯಾಗಿ ಸದ್ದು ಮಾಡುತ್ತಾ ಚಲಿಸುತ್ತಿದ್ದ ಮುಂದಿಯೆಡೆಗೆ ಶರವೇಗದಿಂದ ಧಾವಿಸಿದವು. ಬಳಿಕ ನಾವು ಅವುಗಳ ಹಿಂದೆಯೇ ಓಡಿ ಗಾಣದ ಬಳಿಗೆ ಬಂದೆವು, ಅಲ್ಲಿಂದ ಪೊದೆಗಳ ಮರೆಯಲ್ಲಿಯೇ ಮುಂಬರಿದು ನಮ್ಮ ಕಿರು ದೋಣಿಯಿದ್ದ ನೆಲೆಗೆ ತಲುಪಿದೆವು. ಅದರೊಳಕ್ಕೆ ಧುಮುಕಿ ಬದುಕಿದೆಯಾ ಬಡ ಜೀವವೇ ಎನ್ನುತ್ತಾ, ಅಗತ್ಯವಾದುದಕ್ಕಿಂತ ಹೆಚ್ಚಿಗೆ ಒಂದು ಮಾತನ್ನೂ ಆಡದೆ, ನದಿಯ ಮಧ್ಯಕ್ಕೆ ಸೇರಿದೆವು. ಆಮೇಲೆ ನಾವು ಸುಲಭವಾಗಿ ನಿರಾತಂಕವಾಗಿ ನಮ್ಮ ತೆಪ್ಪವಿದ್ದ ದ್ವೀಪದೆಡೆಗೆ ತಿರುಗಿದೆವು: ದಡದ ಮೇಲೂ ಕೆಳಗೂ ಅವರ ಮಾಡುತ್ತಿದ್ದ ಗದ್ದಲವೂ ಕರ್ಕಶನಾದವೂ ನಮಗೆ ಕೇಳಿಬರುತ್ತಲೇ ಇತ್ತು: ಬಲುದೂರ ಸಾಗಿದಮೇಲೆ ಅವು ಮಬ್ಬಾಗಿ ಕ್ರಮೇಣ ಅಡಗಿದವು. ನಾವು ತೆಪ್ಪದ ಮೇಲೆ ಕಾಲಿಟ್ಟಾಗ ನಾನು ಹೇಳಿದೆ:

"ಜಿಮ್, ನೀನೀಗ ಮತ್ತೆ ಸ್ವತಂತ್ರನಾಗಿದ್ದೀಯೆ—ಇನ್ನೆಂದೂ ನೀನು ಗುಲಾಮನಾಗವುದಿಲ್ಲವೆಂದು ನಾನು ಆಣೆಯಿಡುತ್ತೇನೆ"

"ಮಾಡಿದ ಕೆಲಸ ಬಲು ಪಸಂದಾಗಿತ್ತು, ಹಕ್, ಅದಕ್ಕಾಗಿ ಹೂಡಿದ ಯೋಜನೆಯೂ ರಮ್ಯವಾಗಿತ್ತು; ಅನುಸರಿಸಿದ ಮಾರ್ಗವೂ ಹಾಗೆಯೇ ಇತ್ತು. ಅದಕ್ಕಿಂತ ಜಟಿಲತರವೂ ಆಕರ್ಷಕವೂ ಆದ ಇನ್ನೊಂದು ಯೋಜನೆಯನ್ನೇ ಯಾರೂ ಯೋಚಿಸಲರಿಯರು."

ನಮಗಾದ ಸಂತೋಷ ಅಷ್ಟಿಷ್ಟಲ್ಲ, ಟಾಮ್‌ನಿಗಂತೂ ಪರಮಾನಂದವಾಯಿತು; ಏಕೆಂದರೆ ಅವನ ಮೀನಖಂಡದಲ್ಲಿ ಒಂದು ಗುಂಡು ಹೊಕ್ಕಿತ್ತು.

ಅದು ನಮಗೆ ತಿಳಿದ ಬಳಿಕ ನನ್ನ ಮತ್ತು ಜಿಮ್ಮನ ಮನಸ್ಸು ಹಿಂದಿನಷ್ಟು ಗೆಲುವಾಗಿರಲಿಲ್ಲ. ಅವನಿಗೆ ತುಂಬಾ ನೋವಾಗಿತ್ತು, ರಕ್ತ ಸುರಿಯುತ್ತಿತ್ತು. ಆದ್ದರಿಂದ ಅವನನ್ನು ಗೂಡಾರದಲ್ಲಿ ಮಲಗಿಸಿದೆವು; ಅವನ ಗಾಯಕ್ಕೆ ಸುತ್ತುಪಟ್ಟಿ ಕಟ್ಟಲು ಡ್ಯೂಕನ ಅಂಗಿಯೊಂದನ್ನು ಹರಿದೆವು

"ಆ ಪಟ್ಟಿಗಳನ್ನು ನನಗೆ ಕೊಡಿ; ನಾನೇ ಅದನ್ನು ಕಟ್ಟಿಕೊಳ್ಳಬಲ್ಲೆ. ಸುಮ್ಮನೆ ನಿಲ್ಲಬೇಡಿ; ಅತ್ತಿತ್ತ ಧಾವಿಸಿ ಮಾಡಬೇಡಿ; ನಾವು ಯಶಸ್ವಿಯಾಗಿ ತಪ್ಪಿಸಿಕೊಂಡು ಬಂದೆವೆನ್ನುವ ಗುಂಗಿನಲ್ಲೇ ಇರಬೇಡಿ; ತೆಪ್ಪವನ್ನು ಬಿಚ್ಚಿ ಜೋರಾಗಿ ನಡೆಸಿ ನಾವು ಈ ಕೆಲಸವನ್ನು ಎಷ್ಟು ಪರಿಷ್ಕಾರವಾಗಿ ಮಾಡಿದ್ದೇವೆ!—ಮಾಡಿದ್ದೇವೆ ನಿಜ. ಹದಿನಾರನೆಯ ಲೂಯಿಯ ಕಾರ್ಯವಿಧಾನದಲ್ಲಿ ನಾವೆಲ್ಲರೂ ಪಳಗಿದ್ದರಾಗಿತ್ತು; ಆಗ ಅವನ ಜೀವನ ಚರಿತ್ರೆಯಲ್ಲಿ ಬರೆದಿರುವ "ಸೇಂಟ್ ಲೂಯಿಯ ಕುಮಾರನೇ, ಸ್ವರ್ಗಕ್ಕೇರು" ಎನ್ನುವುದಕ್ಕೇ ಎಡೆಯಿರುತ್ತಿರಲಿಲ್ಲ ಇಲ್ಲ, ಸ್ವಾಮಿ, ಅವನನ್ನು ಸರಹದ್ದಿನಾಚೆಗೆ

ತೊಲಗಿಸುತ್ತಿದ್ದೆವು.—ನಾವು ಅವನಿಗೆ ಅದನ್ನೇ ಮಾಡುತ್ತಿದ್ದೆವು ; ಬಲು ನಿರಾಯಾಸವಾಗಿ ಮಾಡುತ್ತಿದ್ದೆವು. ಈಗ ತೆಪ್ಪವನ್ನು ಜಿತವಾಗಿ ನಡೆಸಿ,—ತ್ವರೆಯಿಂದ ನಡೆಸಿ."

ಆದರೆ ನಾನು ಜಿಮ್ಮನೂ ಮಾತಾಡಿಕೊಳ್ಳುತ್ತಿದ್ದೆವು, ಆಲೋಚಿಸುತ್ತಿದ್ದೆವು. ಒಂದು ನಿಮಿಷ ಆಲೋಚಿಸಿದ ಮೇಲೆ, ನಾನು ಹೇಳಿದೆ :

"ಅದನ್ನು ಹೇಳಿಬಿಡು, ಜಿಮ್"

ಆಗ ಅವನು ಹೇಳಿದ :

"ಸರಿ ಹಾಗಾದರೆ, ನನಗೆ ಹೇಗೆ ಕಾಣುತ್ತಿದೆ, ಹಕ್, ಇವನೇ ಒಂದುವೇಳೆ ಸೆರೆಯಿಂದ ಬಿಡುಗಡೆ ಹೊಂದಬೇಕಾಗಿದ್ದ ಮನುಷ್ಯನಾಗಿದ್ದರೂ ಅವರಲ್ಲಿ ಒಬ್ಬನಿಗೆ ಗುಂಡಿನೇಟು ಬಿದ್ದಿದ್ದರೆ, 'ಮುಂದೆ ಹೋಗಿ ನನ್ನನ್ನು ಬದುಕಿಸಿ ಇವನನ್ನು ಬದುಕಿಸುವ ಸಲುವಾಗಿ ವೈದ್ಯನನ್ನು ಕರೆಯದಿದ್ದರೂ ಆಗುತ್ತದೆ' ಎನ್ನುತ್ತಿದ್ದನೆ ? ಅದು ಟಾಮ್ ಸಾಯರನ ರೀತಿಯೇ ? ಅವನು ಹಾಗೆ ಹೇಳುತ್ತಿದ್ದನೆ ? ಅವನು ಖಂಡಿತವಾಗಿಯೂ ಹಾಗೆ ಹೇಳುತ್ತಿರಲಿಲ್ಲ. ಹಾಗಿರುವಾಗ ಈ ಜಿಮ್ಮ ಹಾಗೆ ಹೇಳಿಯಾನೆ? ಇಲ್ಲ, ಸ್ವಾಮಿ, ವೈದ್ಯನೊಬ್ಬ ಇಲ್ಲಿಗೆ ಬಾರದಿದ್ದರೆ, ನಾನು ಈ ಸ್ಥಳದಿಂದ ಒಂದು ಹೆಜ್ಜೆಯಷ್ಟೂ ಮುಂದೆ ತೆಪ್ಪವನ್ನು ನಡೆಸೆನು, ಹೀಗೆಯೇ ನಲವತ್ತು ವರುಷ ಕಳೆದರೂ ಸರಿಯೆ !"

ಅಂತರಂಗದಲ್ಲಿ ಅವನು ಬಿಳಿಯನೆಂದು ನನಗೆ ತಿಳಿದಿತ್ತು, ಅವನು ಹಾಗೆಯೇ ಹೇಳಿಯಾನೆಂದು ನಾನು ನಿರೀಕ್ಷಿಸಿದ್ದೆ. ಈಗ ಎಲ್ಲವೂ ಸರಿಹೋಯಿತು ವೈದ್ಯನೊಬ್ಬನನ್ನು ಇಲ್ಲಿಗೆ ಕರೆತರುವುದಾಗಿ ನಾನು ಟಾಮನಿಗೆ ಹೇಳಿದೆ. ಅವನು ಬಲು ತಂಟೆ ಮಾಡಿದ ; ನಾನು ಜಿಮ್ಮನಿಗೂ ಅದಕ್ಕೆ ಕದಲಲಿಲ್ಲ, ಜಗ್ಗಲಿಲ್ಲ. ಆಗ ಅವನು ತಾನೇ ತೆವಳಿಕೊಂಡು ಹೋಗಿ ತೆಪ್ಪದ ಕಣಿಕೆಯನ್ನು ಬಿಚ್ಚುವುದರಲ್ಲಿದ್ದ; ಅದರಿಂದ ಏನೂ ಪ್ರಯೋಜನವಾಗಲಿಲ್ಲ.

ನಾನು ಕಿರುದೋಣಿಯನ್ನು ಸಜ್ಜುಗೊಳಿಸುತ್ತಿರಬೇಕಾದರೆ ಅವನು ಹೇಳಿದ :

"ಸರಿ ಹಾಗಾದರೆ ; ನೀನು ಹೋಗಲೇಕಾಗಿದ್ದರೆ, ಹಳ್ಳಿಗೆ ಹೋದ ಮೇಲೆ ನೀನು ಏನು ಮಾಡಬೇಕೆಂದು ಹೇಳುತ್ತೇನೆ, ಬಾಗಿಲು ಹಾಕಿಕೋ ; ವೈದ್ಯನ ಕಣ್ಣುಗಳಿಗೆ ಬಟ್ಟೆಕಟ್ಟು ; ಸತ್ತರೂ ಬಾಯಿ ಬಿಡುವುದಿಲ್ಲವೆಂದು ಅವನಿಂದ ಪ್ರಮಾಣ ಮಾಡಿಸಿಕೋ ; ಅವನ ಕೈಗೆ ಚಿನ್ನದ ನಾಣ್ಯಗಳ ಥೈಲಿಯೊಂದನ್ನು ಹಾಕು ಬಳಿಕ ಅವನನ್ನು ಸಂದಿಗೊಂದಿಗಳ ಮಾರ್ಗವಾಗಿ ಉದ್ದಕ್ಕೂ ಕತ್ತಲೆಯಲ್ಲಿ ನಡೆಸಿಕೊಂಡು ಬಾ; ಅವನನ್ನು ಶೋಧಿಸಿನೋಡು ; ಅವನ ಜೇಬಿನಲ್ಲಿರುವ ಸೀಮೇಸುಣ್ಣವನ್ನು ಕಸಿದುಕೋ; ಅವನನ್ನು ಮತ್ತೆ ಹಳ್ಳಿಗೆ ಹಿಂದಿರುಗಿಸುವ ತನಕ ಅದನ್ನು ಅವನಿಗೆ ಹಿಂದಿರುಗಿಸಬೇಡ, ಇಲ್ಲದಿದ್ದರೆ ಅವನು ಇದನ್ನು ಮತ್ತೆ ಕಂಡುಹಿಡಿಯಲು ಅನುಕೂಲಿಸುವಂತೆ ಈ ತೆಪ್ಪದ ಮೇಲೆ ಸೀಮೆಯಸುಣ್ಣದಿಂದ ಗುರುತು ಮಾಡಿಯಾನು. ಅವರೆಲ್ಲರೂ ಮಾಡುವುದು ಹಾಗೆಯೇ,"

ಹಾಗೆಯೇ ಮಾಡುವುದಾಗಿ ನಾನು ಹೇಳಿದೆ; ಅಲ್ಲಿಂದ ಹೊರಟೆ: ಜಿಮ್ ಕಾಡಿನಲ್ಲೇ ಹುದುಗಿಕೊಂಡಿದ್ದು ಆ ವೈದ್ಯ ಇಲ್ಲಿಗೆ ಬರುವುದನೂ ಇಲ್ಲಿಂದ ಹಿಂದಿರುಗುವುದನ್ನೂ ಕಾದು ನೋಡುತ್ತಿರಬೇಕೆಂದು ನಿರ್ಧರಿಸಲಾಗಿತ್ತು.

## ೪೧

ಆ ವೈದ್ಯ ಮುದುಕ. ಅವನನ್ನು ಎಬ್ಬಿಸಿದೆ. ಅವನು ಬಲು ಒಳ್ಳೆಯವ, ದಯಾಪರ ಎಂದು ತೋರಿಬಂತು. ನಾನು ಅವನಿಗೆ ಹೇಳಿದೆ: ನಿನ್ನೆ ಅಪರಾಹ್ನ ಸಮಯದಲ್ಲಿ ನಾನೂ ನನ್ನ ಸೋದರನೂ ಸ್ಪ್ಯಾನಿಷ್ ದ್ವೀಪದ ಅನ್ವೇಷಣೆಗಾಗಿ ಹೋಗಿದ್ದೆವು; ಅಲ್ಲಿ ನಮಗೆ ಸಿಕ್ಕಿದ ತೆಪ್ಪವೊಂದರ ಮೇಲೆ ಬಿಡದಿ ಮಾಡಿಕೊಂಡಿದೆವು; ಆಗ ಸುಮಾರು ಮಧ್ಯರಾತ್ರಿಯಲ್ಲಿ ಅವನು ತನ್ನ ಕನಸಿನಲ್ಲಿ ಝಾಡಿಸಿ ಒದೆದಿರಬೇಕು; ಆದರಿಂದ ಹಾರಿದ ಗುಂಡು ಅವನ ಕಾಲಿಗೆ ಹೊಕ್ಕಿದೆ; ನೀವು ಅಲ್ಲಿಗೆ ಬರಬೇಕೆಂದು ಅದನ್ನು ಸರಿಪಡಿಸಬೇಕೆಂದೂ ನಮ್ಮ ಅಪೇಕ್ಷೆ; ನೀವು ಇದರ ವಿಚಾರದಲ್ಲಿ ಮಾತೆತ್ತಲೇ ಬಾರದು; ಬೇರೆ ಯಾರಿಗೂ ಇದನ್ನು ಹೇಳಬಾರದು, ಏಕೆಂದರೆ ನಾವು ಈ ಸಂಜೆ ಮನೆಗೆ ಹಿಂದಿರುಗಿ ಮನೆಮಂದಿಗೆಲ್ಲಾ ಅಚ್ಚರಿಯನ್ನುಂಟು ಮಾಡಬೇಕೆಂದಿದ್ದೇವೆ, ಎಂದು. ಅವನು "ನಿಮ್ಮ ಮನೆಯವರು ಯಾರು ?" ಎಂದ.

"ಅಲ್ಲಿ ಈಚೆಗಿರುವ ಫೆಲ್ಪ್ಸರ ಮನೆಯವರು."

"ಓಹ್" ಎಂದವನು. ನಿಮಿಷ ಬಿಟ್ಟು ಕೇಳಿದ:

"ಅವನಿಗೆ ಗುಂಡು ತಗಲಿದ್ದು ಹೇಗೆ ಎಂದೆ ?"

"ಅವನಿಗೊಂದು ಕನಸು ಬಿತ್ತು. ಅದು ಅವನ ಕಡೆಗೆ ಗುಂಡು ಹಾರಿತು." ಎಂದೆ

"ವಿಚಿತ್ರವಾದ ಕನಸು ಎಂದನವನು.

ಅವನು ತನ್ನ ಲಾಂದ್ರವನ್ನು ಹಚ್ಚಿಕೊಂಡ, ತನ್ನ ಕೈ-ಚೀಲವನ್ನು ಎತ್ತಿಕೊಂಡ. ನಾವು ಹೊರಟೆವು. ಆದರೆ ಕಿರುದೋಣಿಯನ್ನು ಕಂಡಾಗ ಅವನ ಮನಸ್ಸಿಗೆ ಏಕೋ ಸರಿಹೋಗಲಿಲ್ಲ,—ಅದು ಒಬ್ಬನಿಗೆ ದೊಡ್ಡದು, ಇಬ್ಬರಿಗೆ ಸಾಲದು, ಎಂದು ಸಂಶಯ ಪಟ್ಟ. ನಾನು ಹೇಳಿದೆ:

"ಓ ನೀವು ಹೆದರಬೇಕಾದ್ದಿಲ್ಲ; ಅದು ನಮ್ಮ ಮೂವರನ್ನು ಸಾಕಷ್ಟು ಸುರಕ್ಷಿತವಾಗಿ ಒಯ್ದಿದೆ."

"ಯಾವ ಮೂವರು ?"

"ಅದೇ ನಾನು ಮತ್ತು ಸಿಡ್, ಮತ್ತು—ಮತ್ತು—ಮತ್ತು ಆ ಬಂದೂಕಗಳು. ಅಷ್ಟೇ ನನ್ನ ಮಾತಿಗೆ ಅರ್ಥ."

"ಓಹ್" ಎಂದನವನು,

ಆದರೆ ಅವನು ಕಿರುದೋಣಿಯ ಹಿಂದಿನ ತುದಿಯಮೇಲೆ ಹೆಜ್ಜೆಯೂರಿ, ಅಲು ಗಾಡಿಸಿ, ತಲೆಯಲ್ಲಾಡಿಸಿ ಅದಕ್ಕಿಂತ ದೊಡ್ಡದೊಂದನ್ನು ಹುಡುಕಿತರುವುದಾಗಿ ಹೇಳಿದ. ಆದರೆ ಅವುಗಳಿಗೆಲ್ಲ ಬೀಗ ಹಾಕಿದ್ದರು, ಸರಪಳಿಯಿಂದ ಬಿಗಿದಿದ್ದರು; ಆದ್ದರಿಂದ ಅವನು ನನ್ನ ಕಿರುದೋಣಿಗೆ ಹತ್ತಿಕೊಂಡು, ತಾನು ಹಿಂದಿರುಗುವವರೆಗೂ ನಾನು ಕಾದಿರಬೇಕೆಂದೂ, ಇಲ್ಲವೇ ಸುತ್ತಮುತ್ತ ದೊಡ್ಡದೊಂದು ದೋಣಿಗಾಗಿ ಹುಡುಕಬೇಕು, ಇಲ್ಲವಾದರೆ ಮನೆಗೆ ಹೋಗಿ—ಬೇಕಾದರೆ—ಮನೆಮಂದಿಯೆಲ್ಲ ತಮಗೆ ಒದಗಲಿರುವ ಆಚ್ಚರಿಯನ್ನು ಎದುರುಗೊಳ್ಳಲು ಸಿದ್ಧವಾಗಿರುವಂತೆ ಮಾಡಬೇಕೆಂದೂ, ನನಗ ಸೂಚಿಸಿದನು. ಅದಕ್ಕೆ ನಾನು ಒಪ್ಪುವುದಿಲ್ಲವೆಂದೆ ; ತೆಪ್ಪವನ್ನು ಎಲ್ಲಿ ಹುಡುಕ ಬೇಕೆಂಬುದನ್ನು ತಿಳಿಸಿದೆ, ಬಳಿಕ ಅವನು ಹೊರಟುಹೋದ.

ಆ ಕ್ಷಣವೇ ನನಗೊಂದು ಯೋಚನೆ ಹೊಳೆಯಿತೆಂದು ನಾನಂದುಕೊಂಡೆ. ಒಂದುವೇಳೆ, ನಾಣ್ಣುಡಿಯಿರುವಹಾಗೆ, 'ಕುರಿಯ ಬಾಲ ಮೂರು ಸಲ ಅಲ್ಲಾಡುವುದ ರೊಳಗಾಗಿ' ಆ ಕಾಲವನ್ನು ಸರಿಪಡಿಸುವುದು ಅವನಿಂದ ಆಗದೆ ಹೋದರೆ ? ಅವನಿಗೆ ಅದಕ್ಕೆ ಮೂರು ನಾಲ್ಕು ದಿವಸಗಳೇ ಹಿಡಿದರೆ ? ನಾವು ಮಾಡುವುದೇನು ?—ಅವನು ನಮ್ಮ ರಹಸ್ಯವನ್ನು ಬಯಲುಮಾಡುವತನಕ ಅಲ್ಲಿಯೋ ಕಾದಿರಬೇಕೆ? ಇಲ್ಲ, ಸ್ವಾಮಿ ; ಆಗ ನಾನು ಮಾಡಲೇಕಾದುದೇನೆಂಬುದು ನನಗೆ ತಿಳಿದಿದೆ, ನಾನು ಕಾದಿರುತ್ತೇನೆ ; ಮತ್ತು ಅವನು ಹಿಂದಿರುಗಿದಾಗ ತಾನು ಮತ್ತೊಮ್ಮೆ ಅಲ್ಲಿಗೆ ಹೋಗುವ ಕೆಲಸವಿದೆ ಎನ್ನುವುದಾ ದರೆ, ಅಲ್ಲಿಗೆ ನಾನು ಈಜಿಕೊಂಡಾದರೂ ಹೋಗಿ ಬಿಡುತ್ತೇನೆ; ನಾವು ಅವನನ್ನು ಒಡಿದು ಕಟ್ಟಿಹಾಕುತ್ತೇವೆ, ಸ್ಥಾನಬದ್ಧನನ್ನಾಗಿ ಮಾಡುತ್ತೇವೆ ; ನದಿಯ ಮೇಲೆಯೇ ಅವನನ್ನು ಸಾಗಿಸಿಕೊಂಡು ಹೋಗುತ್ತೇವೆ, ಟಾಮನ ಚಿಕಿತ್ಸೆ ಪೂರೈಸಿದ ಮೇಲೆ ಅರ್ಹವಾದದ್ದನ್ನು, ಅಥವಾ ನಮ್ಮಲ್ಲಿರುವುದೆಲ್ಲವನ್ನು ಕೊಟ್ಟು ಅವನು ದಡವನ್ನು ಸೇರಿಕೊಳ್ಳಲು ಅವಕಾಶ ಕೊಡುತ್ತೇವೆ.

ಬಳಿಕ ನಾನು ಸ್ವಲ್ಪ ನಿದ್ದೆಮಾಡೋಣ ಎಂದು ದಿಮ್ಮಿರಾಶಿಯ ಹಿಂಬದಿಗೆ ನುಸುಳಿದೆ ನನಗೆ ಮತ್ತೆ ಎಚ್ಚರವಾದಾಗ ಸೂರ್ಯ ನನ್ನ ನೆತ್ತಿಯ ಮೇಲಕ್ಕೆ ಬಂದಿದ್ದ. ನಾನು ಥಟ್ಟನೆ ಎದ್ದು ಹಾರಿದೆ ; ವೈದ್ಯನ ಮನೆಯ ಬಳಿಗೆ ಧಾವಿಸಿದೆ. ಅವನು ರಾತ್ರಿಯ ಒಂದು ಹೊತ್ತಿನಲ್ಲಿ ಎಲ್ಲಿಗೋ ಹೋದುದಾಗಿಯೂ ಇನ್ನೂ ಮನೆಗೆ ಹಿಂದಿರುಗಿಲ್ಲ ವೆಂದೂ ಅವರು ಹೇಳಿದರು. ಸರಿ, ಟಾಮನ ಅದೃಷ್ಟ ನೆಟ್ಟಗಿಲ್ಲ ಎಂದುಕೊಂಡು

ನೇರವಾಗಿ ದ್ವೀಪದತ್ತ ಹೊರಡಲು ನಿರ್ಧರಿಸಿದೆ; ಮುಂದಕ್ಕೆ ಹೆಜ್ಜೆ ಹಾಕಿದೆ, ಮೂಲೆಯನ್ನು ತಿರುಗಿದೆ; ಆಗ ನಾನಿನ್ನೇನು ಸೈಲಾಸ್ ಚಿಕ್ಕಪ್ಪನ ಹೊಟ್ಟೆಗೇ ಡಿಕ್ಕಿ ಹೊಡೆಯುವುದರಲ್ಲಿದ್ದೆ! ಅವನು ಕೇಳಿದ :

"ಏ ಟಾಮ್, ಇಷ್ಟು ಹೊತ್ತು ನೀನೆಲ್ಲಿಗೆ ಹೋಗಿದ್ದೆ, ಪಟಿಂಗ?"

"ನಾನೆಲ್ಲಿಗೂ ಹೋಗಿರಲಿಲ್ಲ ನಾನೂ ಸಿಡ್ಡನೂ ಓಡಂಕುಳಿ ನೀಗ್ರೋವನ್ನು ಹುಡುಕುತ್ತಲಿದೆವು. ಅಷ್ಟೇ," ಎಂದೆ ನಾನು.

"ನೀನೆಲ್ಲಿಗೇ ಹೋಗಿದ್ದರೂ ನಿನ್ನ ಚಿಕ್ಕಮ್ಮ ಬಲು ಪೇಚಾಡುತ್ತಿದಾಳೆ,"

"ಅದಕ್ಕೆ ಕಾರಣವಿಲ್ಲ. ನಾವಿಬ್ಬರೂ ಕ್ಷೇಮವಾಗಿಯೇ ಇದ್ದೇವೆ, ನಾವು ಆ ಮಂದಿಯನ್ನೂ ನಾಯಿಗಳನ್ನೂ ಹಿಂಬಾಲಿಸಿದೆವು; ಆದರೆ ಅವರು ನಮ್ಮನ್ನು ಹಿಂದೆ ಬೀಳಿಸಿ ಓಡಿದರು, ನಮ್ಮ ಕೈಗೆ ಅವರು ಸಿಕ್ಕಲಿಲ್ಲ. ಅವರ ದನಿ ನದಿಯಮೇಲಿಂದ ನಮಗೆ ಕೇಳಿಸಿದ ಹಾಗೆ ಆಯಿತು. ಆದ್ದರಿಂದ ನಾವು ಕಿರುದೋಣಿಯೊಂದನ್ನು ಹತ್ತಿ ಅವರನ್ನು ಬೆನ್ನಟ್ಟಿ ಹೋದೆವು. ನಮಗೆ ಅವರ ಸುಳಿವೇ ಸಿಕ್ಕಲಿಲ್ಲ. ಹೀಗಾದ ಮೇಲೆ ನಾವು ನದಿಯ ಮೇಲು ದಡದ ಉದಕ್ಕೂ ನಿಧಾನವಾಗಿ, ನಮ್ಮ ರಟ್ಟೆ ಬಿದ್ದು ಸುಸ್ತಾಗುವ ತನಕ, ದೋಣಿಯನ್ನು ಮೀಟಿಕೊಂಡು ಬಂದೆವು. ಆಮೇಲೆ ಕಿರುದೋಣಿಯನ್ನು ಕಟ್ಟುಹಾಕಿ ಮಲಗಿಬಿಟ್ಟೆವು; ಈಚೆಗೆ ಕೇವಲ ಒಂದು ಗಂಟೆಯ ಕೆಳಗೆ ನಮಗೆ ಎಚ್ಚರವಾಯಿತು, ಬಳಿಕ ಸುದ್ದಿಯನ್ನು ಸಂಗ್ರಹಿಸುವುದಕ್ಕಾಗಿ ನಾವಿಲ್ಲಿಗೆ ಕಿರುದೋಣಿಯನ್ನು ಮೀಟಿಕೊಂಡುಬಂದೆವು. ಈಗಲೂ ಟಾಮ್, ಕಿವಿಗೆ ಏನಾದರೂ ಸುದ್ದಿ ಬರುತ್ತದೆಯೇ ನೋಡೋಣವೆಂದು ಅಂಚೆಮನೆಯಲ್ಲೇ ಇದ್ದಾನೆ. ಅವನನ್ನು ಅಲ್ಲಿಯೇ ಬಿಟ್ಟು, ತಿನ್ನಲು ಏನನ್ನಾದರೂ ಒಯ್ಯೋಣವೆಂದು ನಾನು ಹೊರಟಿದ್ದೇನೆ. ಆಮೇಲೆ ನಾವಿಬ್ಬರೂ ಮನೆಗೆ ಬರುತ್ತೇವೆ."

ಸರಿ, ನಾವಿಬ್ಬರೂ ಸಿಡ್ಡನನ್ನು ಕಾಣುವುದಕ್ಕಾಗಿ ಅಂಚೆ-ಮನೆಯ ಬಳಿಗೆ ಹೋದೆವು. ಆದರೆ ನಾನು ಮೊದಲೆ ಅನುಮಾನಿಸಿದಂತೆ, ಅವನು ಅಲ್ಲಿರಲಿಲ್ಲ. ಬಳಿಕ ಮುದುಕ ಅಂಚೆ-ಮನೆಯಿಂದ ಪತ್ರವೊಂದನ್ನು ತಂದ, ನಾವು ಇನ್ನೂ ಹೆಚ್ಚು ಹೊತ್ತು ಕಾದೆವು; ಸಿಡ್ ಬರಲೇ ಇಲ್ಲ. ಆಗ ಆ ಮುದುಕ, ಸಿಡ್ ಎಲ್ಲೆಲ್ಲೋ ಅಲೆದಾಡಿಕೊಂಡು ಮನೆಗೆ ನಡೆದಾದರೂ ಬರಲಿ ಕಿರುದೋಣಿಯಲ್ಲಾದರೂ ಬರಲಿ,— ನಡಿ, ನಾವು ಕುದುರೆಯೇರಿ ಮನೆ ಹೋಗಿ ಬಿಡೋಣ, ಎಂದ. ನಾನೇನು ಮಾಡಿದರೂ ನನ್ನನ್ನು ಬಿಟ್ಟುಹೋಗುವುದಕ್ಕೆ ಅವನು ಒಪ್ಪಲೇ ಇಲ್ಲ.

ಅದು ನಡೆಯದ ಕೆಲಸವೆಂದೂ, ನಾನು ತನ್ನೊಂದಿಗೆ ಮನೆಗೆ ಬಂದೇ ತೀರಬೇಕೆಂದೂ, ನಾವು ಸುರಕ್ಷಿತವಾಗಿರುವುದನ್ನು ಸಾಲಿ ಚಿಕ್ಕಮ್ಮ ಕಣ್ಣಾರೆ ಕಾಣಬೇಕೆಂದೂ ಅವನು ಒತ್ತಾಯಮಾಡಿದ.

ನಾವು ಮನೆಗೆ ಬಂದಾಗ ನನ್ನನು ಕಂಡು ಸಾಲಿ ಚಿಕ್ಕಮ್ಮನಿಗೆ ಆದ ಸಂತೋಷ ವನ್ನು ಹೇಳತೀರದು. ಅವಳಿಗೆ ನಗೆಯೂ ಅಳುವೂ ಜತೆಜತೆಯಾಗಿ ಬಂದವು ನನ್ನನ್ನು ಸೆಳೆದಪ್ಪಿಕೊಂಡಳು ; ತನ್ನದೇ ಆದ ಹೊಡೆತವನ್ನೂ ಕೊಟ್ಟಳು ; ಅವೇನಂಥಾ ಕಳಪೆ ಯದಾಗಿರಲಿಲ್ಲ. ಸಿಪ್ ಮನೆಗೆ ಬಂದರೆ ಅವನಿಗೂ ಇದೇ ಸೇವೆಯೋ, ಎಂದಳು

ಮಧ್ಯಾಹ್ನದೂಟಕ್ಕಾಗಿ ಬಂದಿದ್ದ ರೈತರಿಂದಲೂ ರೈತರ ಮಡದಿಯರಿಂದಲೂ ಮನೆ ತುಂಬಿಹೋಗಿತ್ತು ; ಇನ್ನಂಥಾ ಕೋಲಾಹಲವನ್ನೇ ಯಾರೂ ಕೇಳಿಲ್ಲವೇನೋ ! ಮುದುಕಿ ಮಿಸೆಸ್ ಹಾಚ್ಕಿನ್ಸಳಂಥ ಬಾಯಾಳಿಯೇ ಇಲ್ಲ. ಅವಳು ಹೇಳಿದಳು :

"ನೋಡು, ಫೆಲ್ಪ್ಸ್-ಅಕ್ಕ, ನಾನು ಅಲ್ಲಿರುವ ಆ ಕುಟೀರವನ್ನು ಜಲಶಿಲಾಂತರ ಮಾಡಿದ್ದೇನೆ ಆ ನೀಗ್ರೋ ಹುಚ್ಚನೆಂದು ತೋರುತ್ತದೆ. ನಾನು ಡಾಮ್ರೆಲ್-ಅಕ್ಕ ನಿಗೆ ಹೇಳಿದೆ—ನಾನು ಹೇಳಲಿಲ್ಲವೆ, ಡಾಮ್ರೆಲ್-ಅಕ್ಕ ?– ನಾನನ್ನೋದು, ಅವನೊಬ್ಬ ಹುಚ್ಚ, ನಾನನ್ನೊದು—ನಾನು ಹೇಳಿದ್ದೂ ಆ ಮಾತನ್ನೇ ನಾನು ಹೇಳಿದ್ದನ್ನು ನೀವೆ ಲ್ಲರೂ ಕೇಳಿದ್ದೀರಿ. ಅವನೊಬ್ಬ ಹುಚ್ಚ, ನಾನನ್ನೋದು—ಎಲ್ಲಾ ಅದನ್ನೇ ಸಮರ್ಥಿ ಸುತ್ತೇವೆ. ಅಲ್ಲಿರುವ ಆ ಬೀಸುವಕಲ್ಲನ್ನೇ ನೋಡಿ, ನಾನನ್ನೋದು. ಬುದ್ಧಿ ನೆಟ್ಟಗಿ ರುವ ಯಾವ ಪ್ರಾಣಿಯಾಗಲೀ ಆ ಬೀಸುವಕಲ್ಲಿನ ಮೇಲೆ ಹುಚ್ಚು ಹುಚ್ಚಾಗಿ ಅವನ್ನೆಲ್ಲಾ ಕೊರೆಯುತ್ತಿದ್ದನೆಂದು ನನಗೆ ನೀವು ಹೇಳಬಯಸುವಿರೇನು ? ನಾನನ್ನೊದು—ಇಲ್ಲಿ ಇಂಥಾಇಂಥಾ ಮನುಷ್ಯ ಎದೆಯೊಡೆದು ಸತ್ತುಹೋದ; ಇಲ್ಲಿ ಇಂಥಾ ಇಂಥಾ ಮನುಷ್ಯ ಮೂವತ್ತೇಳು ವರುಷಕಾಲ ಬಾಳನ್ನು ಹೊರೆದ ಮುಂತಾದುವನ್ನು - ಅದ್ಯಾಯವನೋ ಲೂಯಿಯ ಅನೌರಸ ಪುತ್ರ ಮುಂತಾದ ಕೊನೆಯೇ ಇಲ್ಲದ ಅಬದ್ಧವನ್ನು ಕುರಿತು ಅವನು ಶುದ್ಧ ಹುಚ್ಚ, ನಾನನ್ನೋದು, ನಾನು ಮೊದಲಲ್ಲಿ ಹೇಳುವುದೂ ಅದನ್ನೇ, ಮಧ್ಯದಲ್ಲಿ ಹೇಳುಂದದೂ ಅದನ್ನೇ, ಕಡೆಗೆ ಸರ್ವಕಾಲಕ್ಕೂ ನಾನು ಹೇಳುವುದು ಅದನ್ನೇ ಆ ನೀಗ್ರೋ ಒಬ್ಬ ಹುಚ್ಚ-ನೆಬೊಕೂಡ್ನೀಜರನಷ್ಟು ಹುಚ್ಚು ಅವನು, ನಾನನ್ನೋದು."

"ಆ ಹರಿದ ಬಟ್ಟೆಯಿಂದ ಮಾಡಿದ ಏಣಿಯನ್ನು ನೋಡು, ಹಾಚ್ಕಿಸ್-ಅಕ್ಕ ಯಾವ ಪುರುಷಾರ್ಥ ಸಾಧನೆಗಾಗಿ ಅವನಿಗೆ ಅದು ಬೇಕಾಗಿಬಂತು ?" ಎಂದಳು ಮುದುಕಿ ಮಿಸೆಸ್ ಡಾಮ್ರೆಲ್.

"ಅದೇ ಮಾತನ್ನೇ ನಾನೀಗ ಕ್ಷಣದ ಹಿಂದೆ ಅಟ್ಟರ್-ಬ್ಯಾಕ್-ಅಕ್ಕನಿಗೆ ಹೇಳುತ್ತಿ ದ್ದುದು, ಬೇಕಾದರೆ ಅವಳನ್ನೇ ಕೇಳು, ಅವಳೇ ಹೇಳುತ್ತಾಳೆ. ಆ-ಆ-ಅವಳು ಆ ನೂಲೇಣಿಯನ್ನು ನೋಡು ಎಂದಳು ; ನಾನನ್ನೊದು, ಹೌದು, ನೀನೇ ಅದನ್ನು ನೋಡು , ನಾನನ್ನೋದು - ಅವನಿಗೆ ಅದರಿಂದ ಆಗಬೇಕಾದ್ದೇನಿತ್ತು ? ನಾನನ್ನೊದು. ಆ-ಆ-ಅವಳು, ಹಾಚ್ಕಿಸ್-ಅಕ್ಕ, ಆ-ಆ-ಅವಳು—"

"ಆದರೆ ಆ ಬೀಸುವಕಲ್ಲನ್ನು ಅಲ್ಲಿಗೆ ಸಾಗಿಸುವುದು ಅವರಿಗೆ ಸಾಧ್ಯವಾದದ್ದಾದರೂ ಹೇಗೆ ? ಮತ್ತು ಆ ಸುರಂಗವನ್ನು ಯಾರೋ ಕೊರೆದರು ? ಮತ್ತು ಯಾರು—"

"ನನ್ನ ಮಾತುಗಳೇ ಅವೂ ಕೂಡ, ಪೆನ್ರಾಡ್-ಅಣ್ಣ. ನಾನು ಹೇಳುತ್ತಾ ಇದ್ದೆ ಎಲ್ಲಿ, ಆ ಕಾಕಂಬಿಯ ತಟ್ಟೆಯನ್ನು ಇಲ್ಲಿಗೆ ಕಳಿಸು—ನಾನು ಡನ್ಲಾಪ್‌ಅಕ್ಕನಿಗೆ ಈಗ ತಾನೇ ಹೇಳುತ್ತಾ ಇದ್ದೆ ; ಆ ಬೀಸುವಕಲ್ಲನ್ನು ತಂದದ್ದಾದರೂ ಹೇಗೆ ? ನಾನನ್ನೊದು ಬೇರೆಯವರ ಸಹಾಯವಿಲ್ಲದೆ—ಇದನ್ನು ಮುಖ್ಯವಾಗಿ ನೆನಪಿಡಬೇಕು—ಬೇರೆಯವರ ಸಹಾಯವಿಲ್ಲದೆ! ಸ್ವಾರಸ್ಯವಿರುವುದೇ ಅಲ್ಲಿ. ನನಗದನ್ನೆಲ್ಲ ಹೇಳಬೇಡ, ನಾನನ್ನೋದು; ಸಹಾಯವಿತ್ತು, ನಾನನ್ನೊದು ; ಯಥೇಚ್ಛವಾಗಿ ಸಹಾಯವಿತ್ತು, ನಾನನ್ನೊದು ; ಆ ನೀಗ್ರೋವಿಗೆ ಹನ್ನೆರಡು ಮಂದಿಯಾದರೂ ನೆರವಾಗಿದ್ದರು, ಈ ಊರಿನಲ್ಲಿರುವ ಕಟ್ಟಕಡೆಯ ನೀಗ್ರೋವನ್ನೂ ನಾವು ಶಿಕ್ಷಿಸಬೇಕೆಂದು ನನ್ನ ಅಭಿಪ್ರಾಯವಿದೆ ; ಆದರೆ ಮೊದಲು ಅದನ್ನು ಮಾಡಿದವರುಯಾರೆಂಬುದನ್ನು ನಾವು ಪತ್ತೆಮಾಡಬೇಕು, ನಾನನ್ನೊದು ; ಇಷ್ಟರ ಜೊತೆಗೆ, ನಾನನ್ನೊದು—"

"ಹನ್ನೆರಡು ಮಂದಿ ಎಂದೆಯ ? ನಡದಿರುವ ಈ ಇಷ್ಟು ಕೆಲಸಗಳನ್ನೂ ಮಾಡುವುದು ನಲವತ್ತು ಮಂದಿಗೂ ಸಾಧ್ಯವಿಲ್ಲದ ಮಾತು. ಆ ಕೈ ಚಾಕು, ಗರಗಸ ಮೊದಲಾದುವನ್ನು ನೋಡಿ, ಎಷ್ಟು ಶ್ರಮಸಾಧ್ಯವಾದ ಕೆಲಸ ಅದು. ಅವುಗಳನ್ನು ಪಯೋಗಿಸಿ ಕೊಯ್ದು ಹಾಕಿರುವ ಮಂಚದ ಕಾಲನ್ನು ನೋಡು,—ಅದೊಂದೇ ಆರು ಮಂದಿಗೆ ಒಂದು ವಾರದ ಕೆಲಸವಾದೀತು. ಹುಲ್ಲುತುಂಬಿ ಮಂಚದ ಮೇಲೆ ಮಲಗಿಸಿದ್ದ ಆ ನೀಗ್ರೋ ಆಕೃತಿಯನ್ನು ನೋಡಿ. ಮತ್ತೂ ನೋಡು ಆ—"

"ನೀನು ಅದನ್ನೂ ಹೇಳಿಬಿಡು, ಹೈಟವರ್-ಅಣ್ಣ. ಸಾಕ್ಷಾತ್ ಫೆಲ್ಪ್ಸ್-ಅಣ್ಣನಿಗೇ ನಾನು ಅದನ್ನೇ ಹೇಳುತ್ತಿದ್ದುದು. ನೋಡು, ನಿನಗೇನು ತೋರುತ್ತದೆ, ಹಾಚ್ಕಿಸ್ ಅಕ್ಕ ? ನೋಡು ನಿನಗೇನು ತೋರುತ್ತದೆ, ಫೆಲ್ಪ್ಸ್-ಅಣ್ಣ ? ನೋಡು, ಅದನ್ನು ಯೋಚಿಸಿ. ಕೊಯ್ದಿದ್ದ ಮಂಚದ ಕಾಲಿನ ವಿಷಯವನ್ನು ಪರ್ಯಾಲೋಚಿಸಿ, ನೋಡಿ, ಅದನ್ನು ಯೋಚನೆ ಮಾಡಿ ನಾನ್ನನೋದು. ಅದು ತನ್ನ ಕಾಲನ್ನು ತಾನೇ ಹಾಗೆ ಕೊಯ್ದುಕೊಳ್ಳಲಿಲ್ಲ, ನೋಡಿ ಯಾರೋ ಅದನ್ನು ಕೊಯ್ದಿರಬೇಕು, ನಾನನ್ನೋದು. ನನ್ನ ಅಭಿಪ್ರಾಯ ಅದು ; ಬೇಕಾದರೆ ಇಟ್ಟುಕೊಳ್ಳಿ, ಬೇಡವಾದರೆ ಬಿಡಿ; ಆದನ್ನು ನೀವು ಅಲಕ್ಷ್ಯದಿಂದ ಕಾಣಬಹುದು. ಹೇಗಿದ್ದರೂ ಸರಿಯೆ, ಅದು, ನನ್ನ ಅಭಿಪ್ರಾಯ, ನಾನನ್ನೋದು. ಅದಕ್ಕಿಂತ ಉತ್ತಮವಾದುದನ್ನು ಬೇರೊಬ್ಬರು ಸೂಚಿಸುವುದಾದರೆ, ಅವರು ಹಾಗೆಯೇ ಮಾಡಿಕೊಳ್ಳಲಿ, ನಾನನ್ನೊದು, ಅಷ್ಟೇ. ಡನ್-ಲಪ್-ಅಕ್ಕನಿಗೆ ನಾನು ಹೇಳುವುದು. ನಾನನ್ನೊದು—"

"ಫೆಲ್ಪ್ಸ್-ಅಕ್ಕ, ಅಷ್ಟೆಲ್ಲಾ ಕೆಲಸಗಳನ್ನೂ ಸಾಧಿಸಬೇಕಾದರೆ ನೀಗ್ರೋಗಳ ಒಂದು ಗುಂಪೇ ನಾಲ್ಕುವಾರಗಳವರೆಗೆ ಪ್ರತಿರಾತ್ರಿಯೂ ದುಡಿದಿರಬೇಕು, ಇಲ್ಲದಿದ್ದರೆ ನನ್ನ ಮೂಗು ಮೂರು ತುಂಡುಮಾಡಿ. ಆ ಷರಟನ್ನು ನೋಡು—ಅದರ ಪ್ರತಿ ಅಂಗುಲವೂ ಗುಪ್ತವಾದ ಯಾವುದೋ ಆಫ್ರಿಕನ್‌ಲಿಪಿಯ ರಕ್ತಚಿತ್ರಗಳಿಂದ ತುಂಬಿ

ಹೋಗಿದೆ. ಒಂದು ತೆಪ್ಪ-ಭರ್ತಿ ಜನ ಹಗಲಿರುಳೆನ್ನದೆ ಅದಕ್ಕಾಗಿ ಅವಿಶ್ರಾಂತವಾಗಿ ದುಡಿದಿರಬೇಕು. ಅದನ್ನು ಯಾರಾದರೂ ಓದಿ ಹೇಳುವುದಾದರೆ ನಾನು ಎರಡು ಡಾಲರುಗಳನ್ನು ಕೊಟ್ಟೇನು ; ಅದನ್ನು ಬರೆವ ನೀಗ್ರೋಗಳಿಗಾದರೆ ಅವರನ್ನು ಹಿಡಿದು ಸದೆಬಡಿದೇನು—ತನಕ."

"ಅವನ ನೆರವಿಗೆ ಬಂದ ಜನರು ಎನ್ನುವೆಯ ಮಾರ್ಪಲ್ಸ್ ಅಣ್ಣ! ಹೌದು, ಕೆಲವು ದಿನಗಳೀಚೆಗೆ ನೀವೆಲ್ಲರೂ ಇಲ್ಲೇ ವಾಸಮಾಡುತ್ತಿದ್ದರೆ ನೀವು ಹಾಗೆಯೇ ಯೋಚಿಸುತ್ತಿದ್ದಿರೆಂದು ನನ್ನೆಣಿಕೆ. ಅವರು ತಮ್ಮ ಕೈಗೆ ಸಿಕ್ಕಿದ್ದೆಲ್ಲವನ್ನೂ ಲಪಟಾಯಿಸಿದ್ದಾರೆ—ನಾವು ಸದಾಕಾಲವೂ ಕಾಯುತ್ತಿದ್ದರೆ ಕೂಡ ; ಹೇಗಿದೆ ನೋಡು! ತಂತಿಯ ಮೇಲಿದ್ದ ಪರಟನು ಹಾಗೆಯೇ ಎಗರಿಸಿದರು ! ನೂಲೇಣಿಯ ನಿರ್ಮಾಣಕ್ಕಾಗಿ ಅವರು ಬಳಸಿದ ಹಚ್ಚಡವೋ ಅದನ್ನವರು ಎಷ್ಟು ಸಲ ಕದಿಯಲಿಲ್ಲ ಎಂಬುದನ್ನು ಹೇಳುವುದೇ ಸಾಧ್ಯವಿಲ್ಲ. ಅವುಗಳ ಜತೆಗೆ, ಹಿಟ್ಟು, ಮೋಂಬತ್ತಿಗಳು, ಮೋಂಬತ್ತಿ-ಹಿಡಿಗಳು, ಚಮಚಗಳು, ಮತ್ತು ಪ್ರಾಚೀನವಾದ ತಾಟು, ಮತ್ತು ನನಗೆ ಈಗ ಮರೆತು ಹೋಗಿರುವ ಇತರ ಸಾವಿರಾರು ಪದಾರ್ಥಗಳು ಮತ್ತು ನನ್ನ ಹೊಸ ಹತ್ತಿಬಟ್ಟೆಯುಡುಪು ; ನಾನು ಸೈಲಾಸ್, ಟಾಮ್ ಮತ್ತು ಸಿಡ್ ಎಲ್ಲರೂ, ನಾನು ನಿಮಗೆ ಹೇಳುತ್ತಿದ್ದಂತೆ, ಸದಾಕಾಲದಲ್ಲಿಯೂ ಹಗಲಿರುಳೆನ್ನದೆ ಕಾಯುತ್ತಿದ್ದರೂ ನಮಗೆ ಕಡೆಗೆ ಅದರು ಸಿಕ್ಕಿದಿದ್ದರೆ ಹೋಗಲಿ, ಅವರ ಒಂದು ತಲೆಗೂದಲಾಗಲೀ, ಇಣಿಕು ನೋಟವಾಗಲೀ ಸದ್ದಾಗಲೀ ಸಿಕ್ಕಬೇಕಿಲ್ಲ! ಈಗ ಕಡೆಯ ನಿಮಿಷದಲ್ಲಿ ಅವರು ನಮಗೆ ಎಂಥಾ ಕೆಲಸ ಕೊಟ್ಟರು ನೋಡಿ ; ಅವರು ನಮ್ಮ ಮೂಗಿನ ಕೆಳಗೇ ನುಸಿದುಹೋಗಿ ನಮ್ಮನ್ನು ನಗೆಗೀಡು ಮಾಡಿ, ಕೇವಲ ನಮ್ಮವರನ್ನು ಮಾತ್ರವಲ್ಲ, ಇಡೀ ರೆಡ್-ಇಂಡಿಯನ್ ಸೀಮೆಯ ಚೋರರನ್ನು ನಗೆ-ಗೀಡು ಮಾಡಿ ಆ ನೀಗ್ರೋವನ್ನು ಉಂಡೆಯಾಗಿ ಸುರಕ್ಷಿತವಾಗಿ ಅಪಹರಿಸಿಕೊಂಡು ಹೋಗಿದ್ದಾರೆ ; ಅದೂ ಎಂಥಾ ವೇಳೆಯಲ್ಲಿ—ಹದಿನಾರು ಜನರೂ ಇಪ್ಪತ್ತೆರಡು ನಾಯಿಗಳೂ ತಮ್ಮ ಹಿಮ್ಮಡಿಯ ಹಿಂದೆಯೇ ಎರಗಿ ಬರುತ್ತಿರುವ ಸಮಯದಲ್ಲೇ ! ನಾನು ಹೇಳುತ್ತೇನೆ, ನಾನು ಕೇಳಿದ ಯಾವ ಸಾಹಸ ಕೃತ್ಯವನ್ನೂ ಇದು ಮೀರಿಸಿದುದಾಗಿದೆ. ಭೂತಗಳೂ ಇದಕ್ಕಿಂತ ಉತ್ತಮವಾಗಿ ಇಷ್ಟೊಂದು ಜಾಣ್ಮೆಯಿಂದ ಹೀಗೆ ಮಾಡಲಾರವು. ಅವರೆಲ್ಲರೂ ಭೂತಗಳೇ ಆಗಿರಬೇಕೆಂದು ನನ್ನೆಣಿಕೆ ಏಕೆಂದರೆ, ನಮ್ಮ ನಾಯಿಗಳ ವಿಷಯ ನಿಮಗೆ ಗೊತ್ತು, ಅವುಗಳನ್ನು ಮೀರಿಸಿದ ನಾಯಿಗಳೇ ಇಲ್ಲ: ಸರಿ, ಈ ನಾಯಿಗಳು ಅವರು ತುಳಿದ ದಾರಿಗೇ ಹೋಗಲಿಲ್ಲಿ ! ನಿಮಗೆ ಸಾಧ್ಯವಾದರೆ ನೀವದನ್ನು ನನಗೆ ವಿವರಿಸಿ!-ನಿಮ್ಮಲ್ಲಿ ಯಾರಾದರೂ ಸರಿಯೇ!"

"ಹೌದು, ಇದು ನಿಜಕ್ಕೂ ಪರಮಾಶ್ಚರ್ಯವೇ—"

"ಧರ್ಮಸಾಕ್ಷಿಯಾಗಿ, ನಾನೆಂದೂ—"

"ನನಗೆ ನೆರವಾಗಿ, ನಾನೆಂದಿಗೂ ನು—"

"ಮನೆಯೊಳಗಿನ ಕಳ್ಳರು ಮತ್ತು —"

"ನಾನೇಥಾ—ಯಲ್ಲಿ ವಾಸಿಸುವುದಕ್ಕೆ ಅಂಜುತ್ತಿದ್ದೆ."

"ಬದುಕಲು ಅಂಜಿಕೆ !-ಇಷ್ಟೇಕೆ, ರಿಜ್ವೇ-ಅಕ್ಕ ನನಗೆ ಮಲಗುವುದಕ್ಕೆ ಹೋದರೆ ಭಯ, ಏಳಲು ಭಯ, ಒರಗಿಕೊಳ್ಳಲೂ ಭಯ, ಕೂರಲೂ ಭಯ. ಇಷ್ಟೇಕೆ, ಅವರು—ವನ್ನೇ ಕದ್ದು ಬಿಡುತ್ತಿದ್ದರು ಹೋದ ರಾತ್ರಿ ನಟ್ಟಿರುಳು ಸಮಯ ಬಂದಾಗ ನಾನು ಯಾವಬಗೆಯ ಆತಂಕದಲ್ಲಿ ತೊಳಲುತ್ತಿದ್ದೆನೆಂಬುದನ್ನು ನೀವುಊಹಿಸಿಕೊಳ್ಳಬಲ್ಲಿರಿ ಅವರು ನಮ್ಮ ಸಂಸಾರದಲ್ಲಿ ಕೆಲವರನ್ನು ಕದಿಯುವರೆಂಬ ಭೀತಿ ನನಗೆ ಬಾರದೆ ಹೋಗಿದ್ದರೆ ಕೇಳಿ ! ನನ್ನ ವಿವೇಚನೆಯನ್ನೇ ಪೂರ್ಣವಾಗಿ ಕಳೆದುಕೊಂಡಿದ್ದ ಒಂದು ದುರವಸ್ಥೆಗೆ ಇಳಿದುಹೋಗಿದ್ದೆ. ಹಗಲ ಹೊತ್ತಿನಲ್ಲಿ ಈಗ ಅದು ತಿಳಿಗೇಡಿತನವೆಂದು ತೋರುತ್ತದೆ; ಅದರೆ ಆಗ ನಾನೇ ನನ್ನ ಮನಸ್ಸಿನಲ್ಲಿ ಅಂದುಕೊಂಡೆ ; ದೂರದಲ್ಲಿ ಮಹಡಿಯ ಮೇಲಿನ ಒಂಟಿಕೋಣೆಯಲ್ಲಿ ನಮ್ಮವರಿಬ್ಬರು ಮುದ್ದು ಹುಡುಗರು ಮಲಗಿದ್ದಾರೆ ಎಂದು ನಾನು ಪ್ರಮಾಣಮಾಡಿ ಹೇಳುತ್ತೇನೆ, ನನಗೆ ಎಷ್ಟು ಆತಂಕವಾಯಿತು ಎಂದರೆ, ನಾನೇ ಅವರ ಕೋಣೆಯ ಬಳಿಗೆ ತೆವಳಿಕೊಂಡು ಹೋಗಿ ಅದರ ಬಾಗಿಲಿಗೆ ಬೀಗಹಾಕಿಕೊಂಡು ಬಂದೆ ! ಹಾಗೆ ಮಾಡಿದೆ. ಯಾರಾದರೂ ಮಾಡುತ್ತಿದ್ದುದು ಹಾಗೆಯೇ ತಾನೆ ! ಏಕೆಂದರೆ, ನಿಮಗೆ ಆ ಬಗೆಯ ಅಂಜಿಕೆಯುಂಟಾದಾಗ, ಅದು ಬೆಳೆಯುತ್ತ ಹೋಗಿ ಪರಿಸ್ಥಿತಿ ಉದ್ದಕ್ಕೂ ಕೆಡುತ್ತಬಂದು, ಬುದ್ಧಿಗೆ ಮಂಕು ಕವಿದು, ಬಗೆಬಗೆಯಾದ ಹುಚ್ಚು ಕೆಲಸಗಳಿಗೆ ನೀವು ತೊಡಗುತ್ತೀರಿ ; ಕ್ರಮೇಣ ನಿಮ್ಮೊಳಗೆ ನೀವೇ ಯೋಚನೆ ಮಾಡುತ್ತೀರಿ ; ನಾನೇ ಆ ಹುಡುಗನಾಗಿದ್ದರೆ, ಅಲ್ಲಿ ದೂರದಲ್ಲಿ ಹಾಗೇ ಮಲಗಿದ್ದರೆ, ಬಾಗಿಲಿಗೆ ಬೀಗವನ್ನು ಹಾಕಿರದಿದ್ದರೆ, ಮತ್ತು ಆಗ ನೀನು—" ಅವಳು ಮಾತನ್ನು ನಿಲ್ಲಿಸಿದಳು : ಅವಳು ಅಚ್ಚರಿಗೊಂಡಂತೆ ಕಂಡು ಬಂತು. ಬಳಿಕ ತನ್ನ ಮುಖವನ್ನು ಸುತ್ತಲೂ ಹಾಗೆಯೇ ತಿರುಗಿಸುತ್ತ ಬಂದಳು ; ನನ್ನನ್ನು ಕಂಡಾಗ ಅವಳ ಕಣ್ಣು ಮಿಂಚಿತು ;— ನಾನು ಎದ್ದು ಹೊರಟು ಹೋದೆ.

ನಾನು ಸ್ವಲ್ಪ ದೂರಗೆ ಹೋಗಿ ನಿಂತು, ಮನಸ್ಸಿನಲ್ಲೇ ವಿಷಯವನ್ನು ಚರ್ಚಿಸಿ ಕೊಂಡರೆ, ಆಗ ನಾನು 'ಈ ದಿನ ಬೆಳಗಾಗ ನಾವು ಆ ಕೋಣೆಯಲ್ಲಿರದೆ ಹೋದುದಕ್ಕೆ' ಸರಿಯಾದ ವಿವರಣೆಯನ್ನು ಹೊಂದಿಸಿಕೊಳ್ಳಬಹುದು ಎಂದುಕೊಂಡೆ. ಆದ್ದರಿಂದ ನಾನು ಹಾಗೆ ಮಾಡಿದೆ. ಆದರೆ ಹೆಚ್ಚು ದೂರ ಹೋಗುವಷ್ಟು ಧೈರ್ಯವಿರಲಿಲ್ಲ ನನಗೆ: ಏಕೆಂದರೆ ಅವಳು ನನ್ನನ್ನು ಕರೆಸಿಕೊಳ್ಳುತ್ತಿದ್ದಳು. ಮಧ್ಯಾಹ್ನ ಕಳೆದ ಮೇಲೆ ಬಂದಿದ್ದವರೆಲ್ಲರೂ ಹೊರಟುಹೋದ ತರುವಾಯ ಒಳಗೆ ಬಂದು, ಗದ್ದಲವೂ ಬಂದೂಕದ ಸಿಡಿತವೂ ನನ್ನನ್ನು ಎಚ್ಚರಗೊಳಿಸಿದವೆಂದೂ, ಬಾಗಿಲಿಗೆ ಬೀಗ ಹಾಕಿದ್ದುದರಿಂದಲೂ, ತಮಾಷೆ ನೋಡುವ ಅಪೇಕ್ಷೆ ನಮಗಾದುದರಿಂದಲೂ , ನಾನೂ ಸಿಡ್ಡನೂ ಮಿಂಚು-ಕಂಬಿಯಿಂದ ಕೆಳಗಿಳಿದೆವೆಂದೂ, ನಮ್ಮಿಬ್ಬರಿಗೂ ಸ್ವಲ್ಪಗಾಯವಾಯಿತೆಂದೂ, ನಾವು ಮುಂದೆಂದೂ

ಇಂಥಾ ಕೆಲಸಕ್ಕೆ ಕೈ ಹಾಕುವುದಿಲ್ಲವೆಂದೂ ಅವಳಲ್ಲಿ ಹೇಳಿಕೊಂಡೆ. ಹಾಗೆಮಾತಾಡುತ್ತಾ ಹೋಗಿ, ನಾನು ಸೈಲಾಸ್-ಚಿಕ್ಕಪ್ಪನಿಗೆ ಮೊದಲೇ ತಿಳಿಸಿದ್ದ ಎಲ್ಲವನ್ನೂ ವರದಿಮಾಡಿದೆ. ತಾನು ನಮ್ಮನ್ನು ಕ್ಷಮಿಸುವುದಾಗಿಯೂ, ನಾವು ಮಾಡಿದ ಕೆಲಸ ಸ್ವಲ್ಪಮಟ್ಟಿಗೆ ಸಮರ್ಥನೀಯವಾಗಿದ್ದುದಲ್ಲದೆ ನಮ್ಮ ಹುಡುಗ ಬುದ್ಧಿಗೆ ಅನುಗುಣವಾಗಿರುವುದು ಯಾರಿಗೂ ಸ್ಪಷ್ಟವಿರುವುದಾಗಿಯೂ ಏಕೆಂದರೆ ತನಗೆ ತಿಳಿದ ಮಟ್ಟಿಗೆ ಎಲ್ಲಾ ಹುಡುಗರೂ ಬಹುಮಟ್ಟಿಗೆ ದುಡುಕುವರೆಂದೂ ಅವಳು ಹೇಳಿದಳು. ನಾವು ಹಾಗೆ ಮಾಡಿದ್ದರಿಂದ ಅಪಾಯವೇನೂ ಸಂಭವಿಸಿರಲಿಲ್ಲವಾದ್ದರಿಂದ ನಾವು ಜೀವಸಹಿತ, ಸುರಕ್ಷಿತವಾಗಿದ್ದು ಅವಳ ಕೈಮೀರಿ ಹೋಗದಿರುವುದಕ್ಕಾಗಿ ಕೃತಜ್ಞತೆಯನ್ನು ವ್ಯಕ್ತಪಡಿಸಿದಳು ; ಆಗಿ ಹೋದುದಕ್ಕಾಗಿ ಸದ್ಯ, ಸಿಟ್ಟಿಗೊಳ್ಳಲಿಲ್ಲವಲ್ಲ, ಅಷ್ಟು ಸಾಕು. ಅವಳು ನನ್ನನ್ನು ಹಿಡಿದು ಮುತ್ತಿಟ್ಟಳು, ತಲೆಯ ಮೇಲೆ ಮೆಲ್ಲಗೆ ತಟ್ಟಿದಳು; ಆಮೇಲೆ ಒಂದು ರೀತಿಯ ಧ್ಯಾನಾವಸ್ಥೆಯಲ್ಲಿ ಮುಳುಗಿ ಹೋದಳು. ತತ್-ಕ್ಷಣವೇ ಎಗರಿ ನಿಂತು ಕೇಳಿದಳು ;

"ಇದೇನು ಮತ್ತೆ, ರಾತ್ರಿ ಹೊತ್ತುಮೀರಿತು, ಸಿಡ್ ಇನ್ನೂ ಬಗಲಿಲ್ಲ. ಆ ಹುಡುಗನಿಗೇನಾಯಿತು?"

ನನಗೊಂದು ಅವಕಾಶ ಸಿಕ್ಕಿತು; ನಾನು ತಟ್ಟನೆ ನಿಂತು ಹೇಳಿದೆ;

"ನಾನೀಗಲೇ ಊರೊಳಕ್ಕೆ ಹೋಗಿ ಅವನನ್ನು ಕರೆದುಕೊಂಡು ಬರುತ್ತೇನೆ."

"ಇಲ್ಲ ನೀನು ಹೋಗಕೂಡದು. ನೀನಿಲ್ಲೇ ಕದಲದೆ ಇದ್ದುಬಿಡಬೇಕು. ಒಂದೊಂದು ಸಲಕ್ಕೆ ಒಬ್ಬನನ್ನು ಕಳೆದುಕೊಂಡರೇ ಸಾಕು, ರಾತ್ರಿಯೂಟದ ಹೊತ್ತಿಗೂ ಅವನು ಬಾರದೆ ಹೋದರೆ, ನಿಮ್ಮ ಚಿಕ್ಕಪ್ಪ ಹೋಗಿ ಅವನನ್ನು ಹುಡುಕಿಕೊಂಡು ಬರಲಿ,"

ಸರಿ, ರಾತ್ರಿಯೂಟದ ವೇಳೆಗೂ ಅವನು ಬರಲಿಲ್ಲ. ಆದ್ದರಿಂದ ಕೈಗೆ ನೀರುಬಿದ್ದ ತತ್-ಕ್ಷಣವೇ ಚಿಕ್ಕಪ್ಪ ಹೊರಗೆ ಹೊರಟ.

ರಾತ್ರಿ ಸುಮಾರು ಹತ್ತುಗಂಟೆಯ ಹೊತ್ತಿಗೆ ಅವನು ಹಿಂತಿರುಗಿದ; ಅವನಮುಖ ಗೆಲುವಾಗಿರಲಿಲ್ಲ ; ಟಾಮ್ ಎಲ್ಲಿ ಹೋದನೆಂಬುದು ಅವನಿಗೆ ತಿಳಿದಿರಲಿಲ್ಲ. ಸಾಲಿ ಚಿಕ್ಕಮ್ಮನಿಗೆ ತುಂಬಾ ಆತಂಕವಾಗಿತ್ತು. ಹುಡುಗರು ಹುಡುಗರೇ ಬೆಳಗಾಗುವ ಹೊತ್ತಿಗೆ ಅವನು ಕ್ಷೇಮವಾಗಿ ಸುರಕ್ಷಿತವಾಗಿ ಮನೆಗೆ ಬರುವುದನ್ನು ನೀನೇ ನೋಡುವೆ, ಈ ಕೊರಗಿಗೆ ಕಾರಣವಿಲ್ಲ, ಎಂದು ಸೈಲಾಸ್ ಚಿಕ್ಕಪ್ಪ ಅವಳಿಗೆ ಸಮಾಧಾನ ಹೇಳಿದ, ಅವಳು ಅಷ್ಟಕ್ಕೇ ತೃಪ್ತಿಗೊಳ್ಳಬೇಕಾಯಿತು, ಆದರೂ ಅವಳು ಅವನಿಗಾಗಿ ಕಾದು ಕೂರುವುದಾಗಿಯೂ ಅವನ ಕಣ್ಣಿಗೆ ಬೀಳಲೆಂದು ಒಂದು ದೀಪವನ್ನು ರಾತ್ರಿಯೆಲ್ಲಾ ಉರಿಸುತ್ತಿರುವುದಾಗಿಯೂ ಅವಳು ಹೇಳಿದಳು.

ಬಳಿಕ ನಾನು ಮಲಗಲು ಹೋದಾಗ ಅವಳು ಮೋಂಬತ್ತಿ-ದೀಪ ಹಿಡಿದು ನನ್ನೊಂದಿಗೆ ಬಂದಳು. ನನ್ನನ್ನು ಕೋಣೆಯೊಳಕ್ಕೆ ಎಳೆದಳು. ನನ್ನನ್ನು ಅವಳು ಎಷ್ಟು

ವಾತ್ಸಲ್ಯದಿಂದ ಕಂಡಳು ಎಂದರೆ, ನನ್ನ ಸಣ್ಣತನ ನನಗೆ ತೋರಿತು, ಅವಳ ಮುಖಭಾವ ಲೋಕನಕ್ಕೂ ನಾನು ಅರ್ಹನಲ್ಲವೆಂದು ತೋರಿತು. ಅವಳು ಹಾಸುಗೆಯಮೇಲೆ ಕುಳಿತು ನನ್ನೊಂದಿಗೆ ತುಂಬಾಹೊತ್ತು ಮಾತಾಡುತ್ತಿದ್ದಳು. ಸಿಡ್ ಎಂಥಾ ಸೊಗಸಾದ ಹುಡುಗ ಎಂದಳು, ಅವನ ವಿಷಯವಾಗಿ ಮಾತಾಡುವುದನ್ನೇ ನಿಲ್ಲಿಸಿದಳು. ನನ್ನನ್ನು ಮೇಲಿಂದ ಮೇಲೆ ಕೇಳುತ್ತಲೇ ಇದ್ದಳು ; ಅವನು ತಪ್ಪಿಸಿಕೊಂಡನೆ, ಗಾಯಗೊಂಡನ್ನೆ ಮುಳುಗಿಹೋದನೆ, ಅಥವಾ ಅವನು ಸತ್ತೋ ನರಳುತ್ತಲೋ ಎಲ್ಲಾದರೂ ಬಿದ್ದಿರುವನೆ—ನನಗೆ ಹೇಗೆ ತೋರುತ್ತದೆ, ಎಂದು. ಅವನ ಶುಶ್ರೂಷೆಗೆ ತಾನು ಅವನ ಬಳಿಯಲ್ಲಿಲ್ಲವಲ್ಲ ಎಂದು ನೊಂದುಕೊಂಡಳು, ಕಣ್ಣೀರು ಸದ್ದಿಲ್ಲದೆ ಧಾರಾಕಾರವಾಗಿ ಸುರಿಯುತ್ತಿತ್ತು. ಅವನು ಕ್ಷೇಮವಾಗಿರುವುದಾಗಿಯೂ, ಬೆಳಗಾಗ ಅವನು ಮನೆಗೆ ಹಿಂತಿರುಗುವುದು ಖಂಡಿತವೆಂದೂ ನಾನು ಹೇಳುತ್ತಿದ್ದೆ. ಅವಳು ನನ್ನ ಕೈಯನ್ನು ಹಿಸುಕಲೂ ನನಗೆ ಮುತ್ತಿಡಲೂ ಬರುತ್ತಿದ್ದಳು, ಆ ಮಾತನ್ನು ಮತ್ತೆ ಹೇಳು ಎನ್ನುತ್ತಿದ್ದಳು, ಅವಳಿಗೆ ಅಷ್ಟು ಸಂಕಟವಾಗಿತ್ತು. ಅಲ್ಲಿಂದ ಹೊರಟು ಬಿಡುವ ಸಮಯದಲ್ಲಿ ಅವಳು ನಟ್ಟದಿಟ್ಟಿಯಿಂದ ನನ್ನನ್ನು ನೋಡಿ ಮೃದುವಾಗಿ ಹೇಳಿದಳು;

"ಬಾಗಿಲಿಗೆ ಬೀಗಹಾಕುವುದಿಲ್ಲ, ಟಾಮ್, ಮತ್ತು ಕಿಟಕಿಯೂ, ಮಿಂಚು ಕಂಬಿಯೂ ಅಲ್ಲೇ ಇವೆ. ಆದರೆ ನೀನು ಒಳ್ಳೆಯವನೆನಿಸಿಕೊಳ್ಳಬೇಕು ಹಾಗೆ ಮಾಡುವೆಯಷ್ಟೆ? ಹೊರಟು ಹೋಗುವುದಿಲ್ಲವಷ್ಟೆ? ನೋಡು ನನಗಾಗಿ." ಟಾಮನ ಸ್ಥಿತಿಯನ್ನು ವಿಚಾರಿಸಿಕೊಳ್ಳುವುದಕ್ಕಾಗಿ ನಾನು ತತ್‌ಕ್ಷಣವೇ ಹೊರಡಲೇಬೇಕೆನ್ನುವುದು ನನಗೆ ಚೆನ್ನಾಗಿ ಗೊತ್ತಿತ್ತು. ಹೊರಟುಬಿಡಬೇಕೆಂದೇ ನನಗೆ ಅನಿಸಿತ್ತು; ಅದಾದ ಬಳಿಕ, ನನಗೆ ರಾಜ್ಯಗಳನ್ನೇ ಕೊಟ್ಟಿದ್ದರೂ, ನಾನು ಹೊರಟು ಹೋಗುತ್ತಿರಲಿಲ್ಲ

ನನ್ನ ಮನಸ್ಸಿನಲ್ಲಿ ಒಂದು ಕಡೆ ಅವಳು, ಇನ್ನೊಂದು ಕಡೆ ಟಾಮ್ ತುಯ್ಯುತ್ತಿದ್ದರು; ನನ್ನ ಮನಸ್ಸು ಪ್ರಕ್ಷುಬ್ಧವಾಗಿತ್ತು, ನಿದ್ದೆ ಬಾರದು. ನಾನು ರಾತ್ರಿಯಲ್ಲಿ ಎರಡು ಸಲ ಕಂಬಿಹಿಡಿದು ಕೆಳಗಿಳಿದು ಹೊರಟುಹೋಗಿದ್ದೆ. ಮನೆಯ ಮುಂಭಾಗದಲ್ಲಿ ಕದ್ದು ನಿಂತು ನೋಡಿದ್ದೆ. ಅವಳು ಕಿಟಕಿಯಲ್ಲಿ ಉರಿಯುತ್ತಿದ್ದ ಮೋಂಬತ್ತಿಯ ಬೆಳಕಿನಲ್ಲಿ, ಹನಿತುಂಬಿದ ಕಣ್ಣುಗಳನ್ನು ಆ ದಾರಿಯ ಕಡೆಗೇ ತಿರುಗಿಸಿದ್ದುದನ್ನು ನಾನು ಕಂಡೆ. ಅವಳ ಸಲುವಾಗಿ ಏನಾದರೂ ಮಾಡೋಣವೇ, ಮಾಡಿದ್ದರಾಗಿತ್ತು, ಎಂದುಕೊಂಡೆ. ಹಾಗೆ ಮಾಡುವುದು ನನ್ನಿಂದ ಸಾಧ್ಯವಾಗಲಿಲ್ಲ. ನಾನು ಮಾಡಬಹುದಾಗಿದ್ದುದೊಂದೇ! ಅವಳಿಗೆ ನೋವನ್ನು ತರುವ ಯಾವುದನ್ನೂ ಇನ್ನು ಮುಂದೆ ನಾನು ಮಾಡೆನು. ಎಂದು ಪ್ರತಿಜ್ಞೆ ಮಾಡುವುದು. ಮೂರನೆಯ ಸಲ ಅರುಣೋದಯದ ಹೊತ್ತಿಗೆ ನನಗೆ ಎಚ್ಚರವಾಯಿತು ನಾನು ಇಳಿದು ಈಚೆಗೆ ಬಂದು ಬಿಟ್ಟೆ. ಅವಳು ಇನ್ನೂ ಅಲ್ಲಿಯೇ ಕುಳಿತಿದ್ದಳು. ಅವಳು ಹಚ್ಚಿದ್ದ ಮೋಂಬತ್ತಿ ಮುಗಿದುಹೋಗುವುದರಲ್ಲಿತ್ತು. ಅವಳ ಮುದಿಯ ಬಿಳಿ ತಲೆ ಅವಳ ಕೈಮೇಲೆಯೇ ನೆಲಸಿತ್ತು, ಅವಳಿಗೆ ನಿದ್ದೆ ಬಂದಿತ್ತು.

## ೪೨

ಬೆಳಗಿನ ಉಪಹಾರಕ್ಕೆ ಮುನ್ನವೇ ಆ ಮುದುಕ ಮತ್ತೆ ಊರೊಳಗೆ ಹೋಗಿ ಬಂದಿದ್ದ; ಟಾಮನ ನೆಲೆ ಅವನಿಗೆ ತಿಳಿಯಲೇ ಇಲ್ಲ. ಆವರಿಬ್ಬರೂ ಮೇಜಿನ ಮುಂದೆ, ಸದ್ದು ಮಾಡದೆ, ಚಿಂತಾಕ್ರಾಂತರಾಗಿ ಆಲೋಚಿಸುತ್ತಾ ಕುಳಿತುಬಿಟ್ಟರು. ಅವರ ಕಾಫಿ ತಣ್ಣಗಾಗಿತ್ತು; ಅವರು ಯಾವುದನ್ನೂ ಬಾಯಿಗೆ ಹಾಕಿಕೊಂಡೇ ಇರಲಿಲ್ಲ. ಆಮೇಲೆ ಮುದುಕ ಕೇಳಿದ :

"ನಾನು ನಿನಗೆ ಆ ಕಾಗದವನ್ನು ಕೊಟ್ಟೆನೆ?"

"ಯಾವ ಕಾಗದ ?"

"ನಿನ್ನೆ ದಿನ ನನಗೆ ಅಂಚೆ ಕಚೇರಿಯಿಂದ ಬಂತಲ್ಲ, ಅದನ್ನು."

"ಇಲ್ಲ, ನೀನು ನನಗೆ ಯಾವ ಕಾಗದವನ್ನೂ ಕೊಡಲಿಲ್ಲವಲ್ಲ."

"ಹಾಗಾದರೆ. ನಾನದನ್ನು ಮರೆತುಬಿಟ್ಟಿರಬೇಕು." ಅವನು ತನ್ನ ಜೇಬನ್ನು ಶೋಧಿಸಿ ನೋಡಿದ; ಸರ್ರನೆ ಒಳಗೆ ಹೋಗಿ, ಅದನ್ನು ತಾನು ಎಲ್ಲಿರಿಸಿದ್ದನೋ ಅಲ್ಲಿಂದ ತೆಗೆದುಕೊಂಡು ಬಂದು ಅವಳಿಗೆ ಕೊಟ್ಟ. ಅವಳು ಹೇಳಿದಳು:

"ಏನು ಇದು ಸೇಂಟ್ ಪೀಟರ್ಸ್‌ಬರ್ಗಿನಿಂದ ಬಂದಿದೆ–ಅಕ್ಕನಿಂದ.

ಸ್ವಲ್ಪ ಹೊರಗೆ ಹೋಗಿ ಸುತ್ತಾಡಿ ಬರುವುದರಿಂದ ನನಗೆ ಅನುಕೂಲವಾದೀತು ಎಂದುಕೊಂಡೆ; ಆದರೆ ನಾನು ಕದಲಲಾಗಲಿಲ್ಲ. ಆದರೆ ತಾನು ಅದನ್ನು ಒಡೆದು ಓದುವುದರೊಳಗಾಗಿ, ಕೆಳಗೆ ಬೀಳಿಸಿ ಅವಳು ಓಡಿಹೋದಳು—ಯಾವುದನ್ನೋ ಕಂಡು. ನಾನು ಹಾಗೆಯೇ ಮಾಡಿದೆ, ನಮ್ಮ ಕಣ್ಣಿಗೆ ಬಿದ್ದದ್ದು ಇದು; ಹಾಸುಗೆಯ ಮೇಲೆ ಮಲಗಿರುವ ಟಾಮ್‌ಸಾಯರ್; ಮತ್ತೆ ಆ ಮುದಿ ವೈದ್ಯ; ಮತ್ತು ಅವಳ ಉಡುಪಿನಲ್ಲಿರುವ ಜಿಮ್, ಅವನ ಎರಡೂ ಕೈಗಳನ್ನು ಹಿಂದಕ್ಕೆ ಎಳೆದು ಕಟ್ಟಲಾಗಿತ್ತು; ಮತ್ತು ಜನರ ದೊಡ್ಡ ಗುಂಪು. ಆ ಕಾಗದವನ್ನು ನಾನು ನನ್ನ ಕೈಗೆ ಮೊದಲು ಯಾವುದು ಸಿಕ್ಕಿತೋ ಅದರ ಹಿಂದೆ ಬಚ್ಚಿಟ್ಟೆ; ಮುನ್ನುಗ್ಗಿದೆ, ಅವಳು ಟಾಮನ ಮೇಲೆ ಬಿದ್ದು ಹೊರಳಿ ಅಳುತ್ತಾ ಹೇಳಿದಳು:

"ಓಹ್ ಇವನು ಸತ್ತಿದ್ದಾನೆ, ಇವನು ಸತ್ತಿದ್ದಾನೆ, ಇವನು ಸತ್ತಿದ್ದಾನೆ ಎನ್ನುವುದು ನನಗೆ ಗೊತ್ತು !"

ಟಾಮ್ ತನ್ನ ತಲೆಯನ್ನು ಕೊಂಚ ಓರೆಮಾಡಿದ; ಏನನ್ನೋ ಗೊಣಗಿದ, ಅದರಿಂದ ಅವನ ಬುದ್ಧಿ ನೆಟ್ಟಗಿದೆ ಎಂಬುದು ಮಾತ್ರ ತಿಳಿಯುತ್ತಿತ್ತು; ಅವಳು ತನ್ನ ಕೈಗಳನ್ನು ಮೇಲೆತ್ತಿ ಹೇಳಿದಳು:

"ಅವನು ಬದುಕಿದ್ದಾನೆ, ದೇವರ ಕೃಪೆ! ಅದು ಸಾಕು!"

ಸರಕ್ಕನೆ ಅವನಿಂದ ಮತ್ತೊಂದನ್ನು ಕಸಿದುಕೊಂಡು ಹಾರಿ, ದಾರಿಯುದ್ದಕ್ಕೂ ಎಡಬಲದ ನೀಗ್ರೋಗಳಿಗೂ ಇತರರಿಗೂ ಗಡ-ಬಡ ಆಜ್ಞೆ ಮಾಡುತ್ತಾ, ಹಾಸುಗೆಯನ್ನು ಅಣಿಗೊಳಿಸಲು ಮನೆಗೆ ಓಡಿದಳು.

ಅಲ್ಲಿ ಸೇರಿದ್ದ ಜನರು ಜಿಮ್ಮನಿಗೆ ಏನು ಮಾಡಲಿರುವರೆಂಬುದನ್ನೇ ನಾನು ವೀಕ್ಷಿಸುತ್ತಾ ಅವರನ್ನು ಹಿಂಬಾಲಿಸಿದೆ; ಮುದಿ ವೈದ್ಯನೂ ಸೈಲಾಸ್-ಚಿಕ್ಕಪ್ಪನೂ ಟಾಮನ ಹಿಂದೆ ಮನೆಗೆ ಹೋದರು ಅವರಿಗೆ ತುಂಬಾ ಕೋಪ ಬಂದಿತ್ತು. ಅವರಲ್ಲಿ ಕೆಲವರು ಜಿಮ್ಮನನ್ನು ಗಲ್ಲಿಗೇರಿಸಬೇಕೆಂದರು; ಹಾಗೆ ಮಾಡಿದಲ್ಲಿ ಸುತ್ತಮುತ್ತಣ ನೀಗ್ರೋಗಳಿಗೆಲ್ಲ ಪಾಠ ಕಲಿಸಿದಂತಾಗುವುದೆಂದೂ, ಅವರು ಜಿಮ್ ಮಾಡಿದಂತೆ ಮುಂದೆಂದೂ ಓಡಿಹೋಗಲು ಯತ್ನಿಸುವುದಿಲ್ಲವೆಂದೂ, ದೊಂಬಿಯೆಬ್ಬಿಸುವುದಿಲ್ಲವೆಂದೂ, ಇಡೀ ಒಂದು ಸಂಸಾರವನ್ನೇ ಅಹರ್ನಿಶಿ ಮೃತ್ಯು ಭೀತಿಯಲ್ಲಿಡುವುದಿಲ್ಲವೆಂದೂ ಅಭಿಪ್ರಾಯ ಪಟ್ಟರು. ಆದರೆ ಇನ್ನು ಕೆಲವರು, ಹಾಗೆ ಮಾಡಬೇಡಿ ಸ್ವಲ್ಪವೂ ಸರಿಯಾದುದಲ್ಲ, ಅವನು ನಮಗೆ ಸೇರಿದ ನೀಗ್ರೋವಲ್ಲ, ಅವನ ಯಜಮಾನ ಇಲ್ಲಿಗೆ ಬಂದು ನಮ್ಮಿಂದ ದಂಡ ತೆರಿಸುವುದು ಖಂಡಿತ ಎಂದರು. ಈ ಮಾತಿನಿಂದ ಪರಿಸ್ಥಿತಿ ಸ್ವಲ್ಪ ಶಾಂತವಾಯಿತು; ಅಪರಾಧಿಯಾದ ನೀಗ್ರೋವನ್ನು ಗಲ್ಲಿಗೇರಿಸುವುದೆಂದರೆ ಎಂದೂ ಬಲು ಕಾತುರರಾಗಿರುವ ಜನರೇ ಯಾವ ನೀಗ್ರೋವನ್ನು ತಾವು ದಂಡಿಸಿ ತೃಪ್ತಿ ಹೊಂದಿದರೋ ಅವನ ಸಲುವಾಗಿ ದಂಡ ತೆರಲು ಎಂದೂ ಕಾತುರರಾಗುವುದಿಲ್ಲ.

ಅವರು ಜಿಮ್ಮನನ್ನು ಬೇಕಾದಷ್ಟು ಬೈದರು; ಕ್ಷಣಕ್ಕೊಮ್ಮೆ ಅವನ ತಲೆಯ ಮೇಲೆ ಮೊಟ್ಟಿದರು; ಆದರೆ ಜಿಮ್ ಒಂದು ಮಾತನ್ನೂ ಆಡಲಿಲ್ಲ; ನನ್ನ ಪರಿಚಯ ತನಗಿರುವುದನ್ನು ತೋರ್ಪಡಿಸಿಕೊಳ್ಳಲಿಲ್ಲ. ಅವರು ಅವನನ್ನು ಹಿಂದಿನ ಅದೇ ಕುಟೀರಕ್ಕೆ ಒಯ್ದರು; ಅವನ ಸ್ವಂತ ಉಡುಪನ್ನು ಅವನಿಗೆ ತೊಡಿಸಿದರು; ಮತ್ತೆ ಸರಪಳಿಯಿಂದ ಅವನನ್ನು ಬಂಧಿಸಿದರು—ಈ ಸಲ ಮಂಚದ ಕಾಲಿಗೆ ಅಲ್ಲ, ಆದರೆ ಕೆಳದಿಮ್ಮಿಗೆ ಹೊಡೆದ ಕೊಂಡಿ-ಮೊಳೆಗೆ; ಅವನ ಕೈಗಳನ್ನೂ ಕಾಲುಗಳನ್ನೂ ಸರಪಳಿಯಿಂದ ಕಟ್ಟಿಹಾಕಿದರು; ಮತ್ತು ಇದಾದ ಮೇಲೆ ಅವನ ಯಜಮಾನ ಬರುವವರೆಗೂ, ಇಲ್ಲವೇ, ಅವನ ನಿರ್ದಿಷ್ಟ ಕಾಲಾವಧಿಯೊಳಗೇ ಇಲ್ಲಿಗೆ ಬಂದಿಲ್ಲದಿರುವುದರಿಂದಲೂ ಮತ್ತು ನಮ್ಮ ಸ್ಥಳವಂದಿಗನಾಗದಿರುವುದರಿಂದ ಅವನನ್ನು ಹರಾಜಿಗೆ ಹಾಕುವವರೆಗೂ, ತಿನ್ನಲು ರೊಟ್ಟಿ ಕುಡಿಯಲು ನೀರು—ಇವೆರಡರ ವಿನಾ ಮತ್ತೇನನ್ನೂ ಕೊಡಕೂಡದು ಎಂದರು. ಪ್ರತಿರಾತ್ರಿಯಲ್ಲೂ ಬಂದೂಕಧಾರಿಗಳಾದ ರೈತರಿಬ್ಬರು ಕುಟೀರವನ್ನು ಕಾಯುತ್ತಿರಬೇಕೆಂದೂ, ಹಗಲಹೊತ್ತಿನಲ್ಲಿ ಅದರ ಬಾಗಿಲಿಗೆ ದೊಡ್ಡ ನಾಯಿಯೊಂದನ್ನು ಕಟ್ಟಿರಬೇಕೆಂದೂ ಸೂಚಿಸಿದರು. ಈ ಹೊತ್ತಿಗೆ ಅವರು ತಾವು ಬಂದ ಕೆಲಸವನ್ನು ಮುಗಿಸಿಕೊಂಡಿದ್ದರು; ಅವನನ್ನು ಬೈಯುತ್ತಾ ಬೆದರುತ್ತಿದ್ದರು. ಆಗ ಆ ಮುದಿ ವೈದ್ಯ ಬಂದು ನೋಡಿ, ಹೇಳಿದ :

"ಅವನ ಬಗೆಗೆ ನೀವು ಅನಗತ್ಯ ಕಠಿನತೆಯಿಂದ ನಡೆದುಕೊಳ್ಳಬೇಡಿ ಏಕೆಂದರೆ ಈ ನೀಗ್ರೋ ಕೆಟ್ಟವನಲ್ಲ. ಈ ಹುಡುಗನಿರುವುದನ್ನು ನಾನು ಪತ್ತೆ ಹಚ್ಚಿದ ಸ್ಥಳಕ್ಕೆ ಹೋದಾಗ, ಇನ್ನೊಬ್ಬರ ನೆರವಿಲ್ಲದೆ ನಾನು ಗುಂಡನ್ನು ಕೊಯ್ದು ತೆಗೆಯುವುದು ಸಾಧ್ಯವೆನಿಸಲಿಲ್ಲ. ಅವನನ್ನು ಅಲ್ಲೇ ಬಿಟ್ಟು ಹೋಗಿ ಯಾರನ್ನಾದರೂ ಕರೆದುಕೊಂಡು ಬರೋಣವೆಂದರೆ, ಅವನ ಪರಿಸ್ಥಿತಿ ಅನುಕೂಲವಾಗಿರಲಿಲ್ಲ. ಬರಬರುತ್ತ ಅವನ ಪರಿಸ್ಥಿತಿ ಕೆಡುತ್ತಾ ಬಂತು ; ತನ್ನ ಚಿತ್ತಸ್ವಾಸ್ಥ್ಯವನ್ನೇ ಅವನು ಕಳೆದುಕೊಂಡ. ಆಮೇಲೆ ನನ್ನನ್ನು ಅವನು ತನ್ನ ಬಳಿಗೇ ಸೇರಗೊಡಲಿಲ್ಲ. ತನ್ನ ತೆಪ್ಪವನ್ನು ನಾನು ಸೀಮೆಸುಣ್ಣದಿಂದ ಗುರುತಿಸುವುದಾದರೆ ನನ್ನನ್ನು ಕೊಂದು ಬಿಡುವುದಾಗಿ ಹುಂತಾಗಿ ಮುಗಿವಿಲ್ಲದ ಹುಚ್ಚು ಮಾತಿಗೆ ಮೊದಲು ಮಾಡಿದನು. ಅವನಿಗೆ ನಾನು ಏನನ್ನೂ ಮಾಡುವುದು ಸಾಧ್ಯವಿಲ್ಲವೆಂದು ನನಗೆ ತೋರಿತು. ಇನ್ನೊಬ್ಬನ ನೆರವು ಬೇಕೆ ಬೇಕು ಎಂದುಕೊಂಡೆ. ನಾನು ಹಾಗೆ ಹೇಳುತ್ತಿದ್ದಂತೆಯೇ ಈ ನೀಗ್ರೋ ಎಲ್ಲಿಂದಲೋ ತೆವಳಿಕೊಂಡು ಬಂದು ತಾನು ಸಹಾಯ ಮಾಡುವುದಾಗಿ ನುಡಿದ, ಹಾಗೆಯೇ ಮಾಡಿದ, ಬಲು ಸೊಗಸಾಗಿ ಮಾಡಿದ. ಅವನೊಬ್ಬ ಓಡುಕುಳಿ ನೀಗ್ರೋ ಇರಬೇಕೆಂದೇ ನನಗೆ ಹೊಳೆಯಿತು. ಆದರೂ ಮಾಡುವುದೇನಿತ್ತು ! ಉಳಿದ ಹಗಲನ್ನೂ ಇಡೀ ರಾತ್ರಿಯನ್ನೂ ನಾನು ಅಲ್ಲಿಯೇ ಜತೆಯಲ್ಲೇ ಕಳೆಯಬೇಕಾಗಿತ್ತಲ್ಲವೆ ? ನಾನೆಂಥಾ ಇಕ್ಕಟ್ಟಿಗೆ ಸಿಕ್ಕಿಬಿದ್ದೆ. ಎಂದು ಹೇಳಬೇಕೆ ! ನಾನು ಶೀತರೋಗಿಗಳಿಬ್ಬರನ್ನು ನೋಡಿಬರಬೇಕಾಗಿತ್ತು, ಊರಿಗೆ ಬಂದು ಅವರನ್ನು ನೋಡಲಪೇಕ್ಷಿಸಿದೆ ; ಆದರೆ ನನಗೆ ಅಷ್ಟು ಧೈರ್ಯಬರಲಿಲ್ಲ ನೀಗ್ರೋ ತಪ್ಪಿಸಿಕೊಂಡು ಹೋದಾನೆಂದು ನನ್ನ ಮೇಲೆ ತಪ್ಪು ಹೊರಿಸಿಯಾರೆಂದು ನಾನು ಅಂಜಿದೆ. ಆದರೂ ನೆರವಿಗೆ ಕರೆಯೋಣವೆಂದರೆ ಯಾವ ಲಘುನೌಕೆಯೂ ಸಾಕಷ್ಟು ಹತ್ತಿರ ಬರಲೇ ಇಲ್ಲ. ಮರುದಿನ ಬೆಳಕು ಮೂಡುವ ತನಕ ನಾನಲ್ಲಿಯೇ ಭದ್ರವಾಗಿ ಕಚ್ಚಿಕೊಂಡಿರಬೇಕಾಯಿತು ; ಇವನಿಗಿಂತಲೂ ಹೆಚ್ಚು ಶ್ರದ್ಧಾಭಕ್ತಿಗಳಿಂದ ಉಪಚಾರ ಮಾಡುವ ನೀಗ್ರೋವನ್ನೇ ನಾನು ಕಂಡಿಲ್ಲ. ಈ ಕೆಲಸಕ್ಕೆ ತೊಡಗಿದ್ದರಿಂದ ತನ್ನ ಸ್ವಾತಂತ್ರವನ್ನೇ ಕಳೆದುಕೊಳ್ಳುವ ಅಪಾಯವಿತ್ತು. ತಾನೂ ಪೂರಾ ದಣಿದು ಹೋಗಿದ್ದ : ಮತ್ತು ತಾನೊಬ್ಬನೇ ಶಕ್ತಿ ಮೀರಿ ದುಡಿಯಬೇಕಾಗಿ ಬಂದದ್ದನು ನಾನು ಸ್ಪಷ್ಟವಾಗಿಯೇ ಕಂಡೆ. ಆ ಕಾರಣದಿಂದ ನಾನೂ ಈ ನೀಗ್ರೋವನ್ನು ಮೆಚ್ಚಿಕೊಂಡೆ, ಮಹನೀಯರೇ, ನಾನು ನಿಮಗೆ ಹೇಳುತ್ತೇನೆ : ಇಂಥ ಒಬ್ಬ ನೀಗ್ರೋ ಒಂದು ಸಾವಿರ ಬೆಲೆ ಬಾಳುತ್ತಾನೆ, ನಮ್ಮ ಕರುಣೆಗೆ ಪಾತ್ರನಾಗುತ್ತಾನೆ. ನನಗೆ ಬೇಕಾದ ಸೌಕರ್ಯವಷ್ಟೂ ಒದಗಿತ್ತು ; ಹುಡುಗ ತನ್ನ ಮನೆಯಲ್ಲೇ ಇದ್ದರೆ ಹೇಗೋ ಹಾಗೆ– ಬಹುಶಃ ಅದಕ್ಕಿಂತ ಮೇಲಾಗಿ ಎಂದೇನು, ಏಕೆಂದರೆ ಅದು ಪ್ರಶಾಂತವಾಗಿತ್ತು– ಸುಖವಾಗಿದ್ದ. ನಾನೆಂಥಾ ಪರಿಸ್ಥಿತಿಯಲ್ಲಿದ್ದೆನೆಂದರೆ, ಅವರಿಬ್ಬರೂ ನನ್ನ ಕೈಯಲ್ಲೇ ಇದ್ದರು ಮತ್ತು ಮರುದಿನ ಸೂರ್ಯೋದಯದ ತನಕ ನಾನವರ ಜತೆಯಲ್ಲೇ ಇರಬೇಕಾಗಿ

ಬಂದಿತ್ತು. ಆಮೇಲೆ ಲಘುನೌಕೆಯೊಂದರಲ್ಲಿ ಕೆಲವರು ಅದೃಷ್ಟವಶಾತ್ ಅಲ್ಲಿಗೆ ಬಂದರು; ಈ ನೀಗ್ರೋ ತನ್ನ ಹುಲ್ಲು-ಹಾಸುಗೆಯ ಪಕ್ಕದಲ್ಲಿ ತನ್ನ ಮಂಡಿಗಳ ನಡುವೆ ತಲೆಯಿಟ್ಟುಕೊಂಡು ಕುಳಿತಿದ್ದ. ನಾನು ಸದ್ದಿಲ್ಲದೆ ಅವರಿಗೆ ಸನ್ನೆಮಾಡಿದೆ. ಅವರು ಮೆಲ್ಲಗೆ ಬಂದು ಅವನನ್ನು—ಏನಾಗುತ್ತಿದೆ ಎನ್ನುವುದು ಅವನಿಗೆ ತಿಳಿಯುವ ಮೊದಲೇ ಹಿಡಿದುಕೊಂಡು ಹೋಗಿ ಕಟ್ಟಿಹಾಕಿದರು. ಅವನು ನಮಗೆ ಸ್ವಲ್ಪವೂ ತೊಂದರೆ ಮಾಡಲಿಲ್ಲ. ಹುಡುಗನೂ ನಿದ್ರೆಯ ಮತ್ತಿನಲ್ಲಿದ್ದುದರಿಂದ ನಾವು ಹುಟ್ಟುಗಳನ್ನು ಮುಸುಕಿನೊಳಗಿಟ್ಟು, ತೆಪ್ಪವನ್ನು ಮೇಲೆದಕ್ಕೆ ಒಯ್ದು. ಮೆಲ್ಲಗೆ ಸದ್ದಿಲ್ಲದೆ ಸಾಗಿಸಿದೆವು. ನೀಗ್ರೋ ಮೊದಲಿನಿಂದಲೂ ಸ್ವಲ್ಪವಾದರೂ ತಂಟೆ ತಕರಾರು ಮಾಡಲಿಲ್ಲ. ಮಹನೀಯರೆ, ಈ ನೀಗ್ರೋ ಕೆಟ್ಟವನಲ್ಲವೇ ಅಲ್ಲ, ನನಗೆ ಹಾಗೆ ತೋರುತ್ತದೆ."

ಮುದಿಯೊಳಗೊಬ್ಬ ಹೇಳಿದ :

"ಹಾಗಾದರೆ ಅದು ಬಲು ಒಳ್ಳೆಯದೆಂದೇ ನಾನೂ ಹೇಳಬೇಕಾಗಿದೆ, ವೈದ್ಯರೆ"

ಬಳಿಕ ಉಳಿದವರೂ ಉಪಶಾಂತರಾದರು; ಜಿಮ್ಮನಿಗೆ ಅಷ್ಟು ಉಪಕಾರ ಮಾಡಿದ್ದಕ್ಕಾಗಿ ನಾನು ಆ ಮುದಿವೈದ್ಯನಿಗೆ ತುಂಬಾ ಕೃತಜ್ಞತೆಯನ್ನು ಮನಸ್ಸಿನಲ್ಲೇ ಅರ್ಪಿಸಿದೆ. ಅವನ ಬಗೆಗೆ ನಾನೂ ಮಾಡಿಕೊಂಡಿದ್ದ ನಿರ್ಧಾರಕ್ಕೆ ಅದು ಅನುಗುಣವಾಗಿಯೇ ಇತ್ತೆಂದು ನನಗೆ ಸಂತೋಷವಾಯಿತು; ಏಕೆಂದರೆ ಪ್ರಥಮ ದರ್ಶನದಲ್ಲೇ ಅವನ ಹೃದಯ ಬಲು ಒಳ್ಳೆಯದೆಂದೂ, ಅವನು ಒಳ್ಳೆಯ ಮನುಷ್ಯನೆಂದೂ ನಾನು ತೀರ್ಮಾನಿಸಿದ್ದೆ. ಬಳಿಕ ಅವರೆಲ್ಲರೂ ಜಿಮ್ ಬಲು ಯೋಗ್ಯ ರೀತಿಯಲ್ಲಿ ನಡೆದುಕೊಂಡನೆಂದು, ಅದನ್ನು ಕೊಂಚ ಗಮನಕ್ಕೆ ತಂದುಕೊಂಡು ಬಹುಮಾನಿಸುವುದಕ್ಕೆ ಅವನು ಅರ್ಹನೆಂದೂ ಒಪ್ಪಿಕೊಂಡರು. ಎಲ್ಲರೂ ಆ ಕ್ಷಣವೇ ತಾವು ಇನ್ನುಮೇಲೆ ಅವನನ್ನು ದೂಷಿಸುವುದಿಲ್ಲವೆಂದು ಬಿಚ್ಚುಮನಸ್ಸಿನಿಂದ ಮಾತುಕೊಟ್ಟರು.

ಆಮೇಲೆ ಹೊರಗೆ ಬಂದರು; ಅವನನ್ನು ಕೂಡಿ ಬೀಗಹಾಕಿದರು. ಅವನಿಗೆ ಬಿಗಿದಿದ್ದ ಸರಪಳಿಗಳಲ್ಲಿ ಒಂದೆರಡನ್ನಾದರೂ ತೆಗೆದು ಹಾಕಿಬಿಡಿ ಎನ್ನುವರೋನೋ, ಅವನಿಗೆ ಗೊತ್ತುಮಾಡಿದ್ದ ರೊಟ್ಟಿ ನೀರುಗಳ ಜತೆಗೆ ಒಂದಿಷ್ಟು ಮಾಂಸವನ್ನೂ ಸೊಪ್ಪನ್ನೂ ಕೊಡಬಹುದು ಎನ್ನುವರೇನೋ ಎಂದು ನಾನು ಆಸೆ ಪಟ್ಟಿದ್ದೆ. ಅವರು ಹಾಗೆ ಯೋಚಿಸಲೇ ಇಲ್ಲ, ಮತ್ತು ಈ ವಿಷಯದಲ್ಲಿ ನಾನು ಬಾಯಿ ಹಾಕುವುದು ಸರ್ವಥಾ ಸರಿಯಲ್ಲವೆಂದು ನನಗೆ ತೋರಿತು. ನನ್ನ ಮುಂದಿರುವ ಸಮಸ್ಯಾತರಂಗಗಳನ್ನು ಗೆದ್ದಮೇಲೆ—ಅಂದರೆ, ಓಡುಕುಳಿ ನೀಗ್ರೋವಿನ ಅನ್ವೇಷಣೆಗಾಗಿ ಆ ದರಿದ್ರರಾತ್ರಿಯಲ್ಲಿ ನಾವಿಬ್ಬರೂ ಹೊರಟಿದ್ದಾಗ ನಡೆದ ಸಂಗತಿಯನ್ನು ನಾನು ವರದಿ ಮಾಡುವ ಕಾಲದಲ್ಲಿ ಸಿಡ್ಡನಿಗೆ ಗುಂಡಿನೇಟು ತಗಲಿದ್ದನ್ನು ತಿಳಿಸಲು ಮರೆತು ಹೋದುದಕ್ಕೆ ವಿವರಣೆಗಳನ್ನು ಅಣಿಗೊಳಿಸಿಕೊಂಡು ಸಾಲಿ-ಚಿಕ್ಕಮ್ಮನಿಗೆ ಅದಷ್ಟು ಬೇಗ, ಆ ವೈದ್ಯ ಹೇಳಿದ ಕಥೆಯನ್ನು ಮುಟ್ಟಿಸುವುದಾಗಿ ನನ್ನ ಮನಸ್ಸಿನಲ್ಲಿ ಮಾಡಿಕೊಂಡೆ.

ನನಗೆ ಯಥೇಚ್ಛವಾದ ಕಾಲಾವಕಾಶವಿತ್ತು. ಹಗಲೂ ಇರುಳೂ ಸಾಲಿ-ಚಿಕ್ಕಮ್ಮ ರೋಗಿಗಳಿಗೆ ಮೀಸಲಾಗಿದ್ದ ಕೋಣೆಯಲ್ಲೇ ಇರುತ್ತಿದ್ದಳು. ಸೈಲಾಸ್ ಚಿಕ್ಕಪ್ಪ ಅತ್ತಿತ್ತ ಸುಳಿದಾಡುವುದು ನನ್ನ ಕಣ್ಣಿಗೆ ಬಿದ್ದಿತೆಂದರೆ ನಾನು ನುಣುಚಿಕೊಳ್ಳುತ್ತಿದೆ.

ಮರುದಿನ ಬೆಳಗಾಗ ಟಾಮ್ ಬಹುಮಟ್ಟಿಗೆ ಚೇತರಿಸಿಕೊಂಡಿರುವನೆಂದು ನನಗೆ ತಿಳಿಯಿತು. ಸಾಲಿ–ಚಿಕ್ಕಮ್ಮ ಒಂದು ಗಳಿಗೆ ಕಣ್ಣು ಮುಚ್ಚೋಣವೆಂದು ಹೋಗಿದ್ದಾಳೆಂದು ಹೇಳಿದರು. ಆಗ ನಾನು ಅವನ ಕೋಣೆಗೆ ಮೆತ್ತಗೆ ಹೋದೆ, ಅವನು ಎಚ್ಚರಗೊಂಡಿರುವಂತೆ ಕಂಡು ಬಂದರೆ ನಾವು ಇಡೀ ಸಂಸಾರಕ್ಕೆ ಮೆಚ್ಚಿಕೆಯಾಗುವಂಥ ಕಟ್ಟುಕಥೆಯೊಂದನ್ನು ಸಿದ್ಧಪಡಿಸೋಣ ಎಂದುಕೊಂಡೆ. ಆದರೆ ಅವನಿಗೆ ನಿದ್ದೆ ಬಂದಿತ್ತು; ಪ್ರಶಾಂತವಾಗಿ ಮಲಗಿ ನಿದ್ದೆ ಮಾಡುತ್ತಿದ್ದ. ಮೊದಲು ಇಲ್ಲಿಗೆ ಬಂದಾಗ ಇದ್ದ ಜ್ವಾಲಾಮುಖವಲ್ಲ ಅದು; ಮುಖ ಬಿಳಿಚಿತ್ತು. ನಾನು ಪಕ್ಕದಲ್ಲಿ ಕುಳಿತು, ಎಬ್ಬಿಸಲು ಪ್ರಯತ್ನಿಸಿದೆ. ಸುಮಾರು ಅರ್ಧಗಂಟೆಯೊಳಗಾಗಿ ಸಾಲಿ ಚಿಕ್ಕಮ್ಮ ಅಲ್ಲಿಗೆ ಬಂದಳು. ನಾನಲ್ಲಿ ಗೂಟ ಹೊಡೆದ ಹಾಗೆ ಕುಳಿತೆ! ಸದ್ದು ಮಾಡಕೂಡದೆಂದು ಅವಳು ನನಗೆ ಕೈಸನ್ನೆ ಮಾಡಿದಳು. ನನ್ನ ಪಕ್ಕದಲ್ಲಿ ಕುಳಿತಳು; ಪಿಸುಮಾತನಾಡಲಾರಂಭಿಸಿದಳು. ಅವನ ಸ್ಥಿತಿ ಅತ್ಯುತ್ತಮವಾಗಿರುವುದು ಸ್ಪಷ್ಟವಾಗಿದೆಯೆಂದೂ ಬಲು ಹೊತ್ತಿನಿಂದಲೂ ಅವನು ಹಾಗೆಯೇ ನಿದ್ದೆಮಾಡುತ್ತಿರುವನೆಂದೂ. ದಿನದಿನಕ್ಕೆ ಅವನು ನೆಮ್ಮದಿಯಾಗಿ ಸ್ವಸ್ಥವಾಗುತ್ತಿರುವಂತೆ ಕಂಡುಬರುತ್ತಿದೆಯೆಂದೂ, ಅವನು ಸ್ವಸ್ಥಚಿತ್ತನಾಗಿ ಎಚ್ಚರಗೊಳ್ಳುವುದು ಖಂಡಿತವೆಂದೂ ಹೇಳಿದಳು.

ಸರಿ, ನಾವು ಹಾಗೆಯೇ ಅಲ್ಲಿ ಕಾದು ಕುಳಿತೆವು, ಸ್ವಲ ಹೊತ್ತಿನಲ್ಲೇ ಅವನು ಮೈಕೈ ಅಲ್ಲಾಡಿಸಿದ, ತನ್ನಷ್ಟಕ್ಕೆ ತಾನು ಸಹಜವಾಗಿ ಕಣ್ಣುಬಿಟ್ಟ, ಸುತ್ತಲೂ ನೋಡಿದ. ಬಳಿಕ ಕೇಳಿದ:

"ಏ! –ಇದೇನು ನಾನು ಮನೆಯಲ್ಲಿದ್ದೇನೆ! ಅದು ಹೇಗೆ? ತೆಪ್ಪವೆಲ್ಲಿ?"

"ಅದು ಸುರಕ್ಷಿತವಾಗಿದೆ," ಎಂದೆ ನಾನು.

"ಮತ್ತು ಜಿಮ್?"

"ಅವನೂ ಸುರಕ್ಷಿತವಾಗಿದ್ದಾನೆ" ಎಂದೆ ನಾನು; ಆ ಮಾತಿನ ಹಿಂದೆ ಅಷ್ಟೇನೂ ಎದೆಗಾರಿಕೆ ಇರಲಿಲ್ಲ. ಅವನು ಅದನ್ನು ಗಮನಿಸದೆ, ಹೇಳಿದ

"ಚೆನ್ನಾಯ್ತು! ಭೇಷಾಯ್ತು ಈಗ ನಾವೆಲ್ಲರೂ ಸರಿಯಾಗಿ ಸುರಕ್ಷಿತವಾಗಿದ್ದೇವೆ, ಚಿಕ್ಕಿಗೆ ನೀನು ಹೇಳಿದೆಯಾ?"

ನಾನು ಹೌದು ಎನ್ನಬೇಕು, ಅವಳು ಬಾಯಿ ಹಾಕಿದಳು:

"ಯಾವ ವಿಷಯ, ಸಿಡ್?"

"ಯಾವುದೇನು, ನಾವು ಇಡೀ ಕಾರ್ಯವನ್ನು ಹೇಗೆ ಸಾಧಿಸಿದೆವು ಎಂಬುದನ್ನು"

"ಯಾವ ಇಡೀ ಕಾರ್ಯ?"

"ಯಾವುದೇನು ಇಡೀ ಕಾರ್ಯವನ್ನು. ಅಂದಿರುವುದೊಂದೇ: ಓಡುಕುಳಿ ನೀಗ್ರೋವನ್ನು ನಾವು—ನಾನು ಮತ್ತು ಟಾಮ್ ಬಿಡುಗಡೆ ಮಾಡಿದ ವಿಧಾನ."

"ಅಯ್ಯೋ ದೇವರೆ! ಓಡುಕುಳಿ ನೀಗ್ರೋ—ಈ ಮಗು ಆಡುತ್ತಿರುವ ಮಾತೇನು! ಅಯ್ಯೊ, ಅಯ್ಯೊ, ಮತ್ತೆ ಇವನ ಬುದ್ಧಿ ಕೆಟ್ಟಿತು!"

"ಇಲ್ಲ, ನನ್ನ ಬುದ್ಧಿಯೇನೂ ಕೆಟ್ಟಿಲ್ಲ. ನಾನು ಏನೇನು ಮಾತಾಡುತ್ತಾ ಇದ್ದೇನೆ ಅನ್ನುವುದು ನನಗೆ ಗೊತ್ತಿದೆ. ನಾವು ಅವನನ್ನು ಸ್ವತಂತ್ರಗೊಳಿಸಿದುದು ಸತ್ಯ-ನಾನು ಮತ್ತು ಟಾಮ್. ಅದಕ್ಕಾಗಿ ಸಮಯ ಕಾದೆವು; ಅದನ್ನು ಮಾಡಿಬಿಟ್ಟೆವು. ನಾವದನ್ನು ಪರಿಷ್ಕಾರವಾಗಿಯೇ ಮಾಡಿದೆವು." ಅವನಿಗೆ ಮಾತಿಗೆ ಮೊದಲು ಮಾಡುವ ಅವಕಾಶ ಸಿಕ್ಕಿತ್ತು; ಅವಳು ನನ್ನನ್ನು ತಡೆಯಲಿಲ್ಲ; ಸುಮ್ಮನೆ ಕುಳಿತು ದುರುಗುಟ್ಟಿಕೊಂಡು ನೋಡುತ್ತಲೇ ಅವನು ಮಾಡಲಿ ಎಂದುಕೊಂಡಳು. ನಾನು ನಡುವೆ ತಲೆ ಹಾಕುವುದು ನಿಷ್ಫಲವೆಂದು ನನಗೆ ತೋರಿತು. "ಇದೇನು, ಚಿಕ್ಕಿ, ಹೀಗೆನ್ನುವೆ, ಅದಕ್ಕಾಗಿ ನಾವು ಎಷ್ಟು ಕೆಲಸ ಮಾಡಬೇಕಾಯಿತು—ಪ್ರತಿರಾತ್ರಿಯೂ ಗಂಟೆ ಗಟ್ಟಲೆ ಅನೇಕ ವಾರಗಳವರೆಗೆ, ನೀವೆಲ್ಲರೂ ಮಲಗಿ ನಿದ್ರಿಸುತ್ತಿದ್ದಾಗ! ನಾವು ಮೊಂಬತ್ತಿಗಳನ್ನೂ ಹಚ್ಚಡವನ್ನೂ, ಪರಟನ್ನೂ, ನಿನ್ನ ಉಡುಪನ್ನೂ, ಚಮಚಗಳನ್ನೂ, ತಗಡಿನ ತಟ್ಟೆಗಳನ್ನೂ, ಕೈಚಾಕುಗಳನ್ನೂ, ತಾಟನ್ನೂ, ಬೀಸುವಕಲ್ಲನ್ನೂ, ಹಿಟ್ಟನ್ನೂ-ಇದೇನು ಮುಗಿಯುವ ಪಟ್ಟಿಯೆ?—ಎಲ್ಲವನ್ನೂ ಕದಿಯಬೇಕಾಗಿ ಬಂತು; ಗರಗಸಗಳನ್ನೂ, ಲೇಖನಿಗಳನ್ನೂ, ಶಿಲಾಸಂದೇಶಗಳನ್ನೂ-ಇಂಥವು ಒಂದಲ್ಲ ಇನ್ನೊಂದನ್ನು-ತಯಾರಿಸುವುದು ಎಂಥಾ ಅಸಾಧ್ಯವಾದ ಕೆಲಸವೆನ್ನುವುದು ನಿನಗೆ ತಿಳಿಯಲಾರದು. ಆ ಮೋಜಿನ ಕೆಲಸದಲ್ಲಿ ಅರ್ಧದಷ್ಟನ್ನೂ ನೀನು ಗ್ರಹಿಸಿಕೊಳ್ಳಲಾರೆ. ನಾವು ಶವದ ಪೆಟ್ಟಿಗೆಗಳು ಮುಂತಾದವುಗಳ ಚಿತ್ರಗಳನ್ನು ಬರೆಯಬೇಕಾಯಿತು; ಕಳ್ಳರಿಂದ ಬಂದಿರುವಂತೆ ತೋರುವ ಅನಾಮಿಕ ಪತ್ರಗಳನ್ನು ನಿರ್ಮಿಸಬೇಕಾಯಿತು; ಮಿಂಚು-ಕಂಬಿಯನ್ನು ಹತ್ತಿ ಇಳಿದು ಮಾಡಬೇಕಾಯಿತು; ಕುಟೀರದೊಳಕ್ಕೆ ಸುರಂಗವನ್ನು ತೋಡಬೇಕಾಯಿತು; ನೂಲೇಣಿಯನ್ನು ಮಾಡಿ ಅದನ್ನು ಉಬ್ಬುವ ರೊಟ್ಟಿಯೊಳಗಿಟ್ಟು ಬೇಯಿಸಿ ಕಳಿಸಬೇಕಾಯಿತು; ಅಗತ್ಯವಾದ ಉಪಕರಣಗಳನ್ನೂ ಚಮಚಗಳನ್ನೂ ನಿನ್ನ ಮುಂಕವಚದ ಜೇಬಿನಲ್ಲಿಟ್ಟು ಅಲ್ಲಿಗೆ ಕಳಿಸಬೇಕಾಯಿತು-"

"ಅಯ್ಯೋ ನನ್ನ ಪುಣ್ಯವೆ!"

"—ಮತ್ತು ಜಿಮ್ಮನಿಗೆ ಜತೆಗಾರರಾಗಿರಲು, ನಾವು ಕುಟೀರಕ್ಕೆ ಇಲಿಗಳನ್ನೂ ಹಾವುಗಳನ್ನೂ ಇನ್ನೂ ಅನೇಕ ಪ್ರಾಣಿಗಳನ್ನೂ ತುಂಬಬೇಕಾಯಿತು; ಟೋಪಿಯೊಳಗೆ ಬೆಣ್ಣೆಯುಂಡೆಯನ್ನಿಟ್ಟುಕೊಂಡಿದ್ದ ಟಾಮನನ್ನು ನೀನು ಬಲು ಹೊತ್ತು ಇಲ್ಲೇ ನಿಲ್ಲಿಸಿಕೊಳ್ಳುವುದರ ಮೂಲಕ ಇಡೀ ಏರ್ಪಾಡನ್ನೇ ಹಾಳುಮಾಡುವುದರಲ್ಲಿದ್ದೆ; ಏಕೆಂದರೆ ನಾವು ಕುಟೀರದಿಂದ ಕಾಲ್ತೆಗೆಯುವ ಮುನ್ನವೇ ಅಲ್ಲಿಗೆ ಜನ ಬಂದುಬಿಟ್ಟರು, ನಾವು ಅವ

ಸರಪಟ್ಟು ಓಡಬೇಕಾಯಿತು; ಅವರಿಗೆ ನಮ್ಮ ಹೆಜ್ಜೆಸಪ್ಪುಳ ಕೇಳಿಸಿತು, ನಮ್ಮ ಮೇಲೆ ಎರಗಿಬಂದರು, ನನಗೆ ಸಲ್ಲಬೇಕಾದದ್ದು ಸಂದಿತು. ಅವರಿಗೆ ನಾವು ದಾರಿಬಿಟ್ಟು ಸರಿದೆವು. ಆಮೇಲೆ ನಾಯಿಂಗಳನ್ನು ಅಟ್ಟಿದರು; ಅವು ನಮ್ಮಲ್ಲಿ ಯಾವ ಆಸಕ್ತಿಯನ್ನೂ ವಹಿಸದೆ ಹೆಚ್ಚು ಗದ್ದಲವಿದ್ದ ಕಡೆಗೆ ಹೊರಟುಹೋದೆವು, ನಾವು ನಮ್ಮ ಕಿರುದೋಣಿಗೆ ಬಂದು ಸೇರಿಕೊಂಡೆವು; ತೆಪ್ಪವನ್ನು ತಲಪಿದೆವು. ನಾವೆಲ್ಲರೂ ಸುರಕ್ಷಿತವಾದೆವು. ಜಿಮ್ ಬಿಡುಗಡೆ ಹೊಂದಿದ್ದ, ಇಷ್ಟನ್ನೂ ನಾವು ನಾವೇ ಮಾಡಿಬಿಟ್ಟೆವು, ಅದು ಅದ್ಭುತವಲ್ಲವೆ, ಚಿಕ್ಕಿ ?"

"ನಾವಿಂಥಾದ್ದನ್ನು ನಾನು ಹುಟ್ಟಿದಂದಿನಿಂದಲೂ ಕೇಳಿಯೇ ಇಲ್ಲ, ಹಾಗೇ ? ಇಷ್ಟೆಲ್ಲಾ ತೊಂದರೆ ಮಾಡುತ್ತಿರುವವರು, ಎಲ್ಲರ ಬುದ್ಧಿಶಕ್ತಿಯನ್ನೂ ಒಳಹೊರಗು ಮಾಡಿದವರು, ನಮ್ಮೆಲ್ಲರನ್ನೂ ಮೃತ್ಯುಭೀತಿಗೆ ಒಡ್ಡಿದವರು ನೀವೇ ಎಳೆಯ ಪಟಿಂಗರಾ ನೀವೇ ! ನನಗೂ ಅಂಥ ಒಂದು ಯೋಚನೆ ಹೊಳೆದಿದೆ ; ನಿಮ್ಮ ಜೀವವನ್ನೇ ಹಿಂಡಿ ತೆಗೆಯಬೇಕೆಂದಿದ್ದೇನೆ. ಈ ಕ್ಷಣವೇ, ಇರುಳಿರುಳೂ ನಾನಿಲ್ಲಿ ಕಾದಿರುವುದು—ಅಗಲಿ, ಎಲವೋ ಪೋಕರಿ, ನೀನು ಪೂರ್ತಿಗುಣ ಹೊಂದಿದ ಮೇಲೆ, ತಾಳು, ನಿಮ್ಮಿಬ್ಬರಿಗೂ ಭೂತ ಬಿಡಿಸುತ್ತೇನೆ!"

ಆದರೆ ಟಾಮನ ಹೆಮ್ಮೆ ಅಸಾಧ್ಯವಾಗಿತ್ತು, ಅವನಿಗೆ ಪರಮಾನಂದವಾಗಿತ್ತು, ಅವನು ತಡೆದುಕೊಳ್ಳುವುದಕ್ಕೇ ಸಾಧ್ಯವಾಗಲಿಲ್ಲ.....ಅವನ ನಾಲಗೆ ನಿರರ್ಗಳವಾಗಿ ನುಗುತ್ತಲೇ ಇತ್ತು; ಅವಳು ನಡುನಡುವೆ ಬಾಯಿಹಾಕುತ್ತಿದ್ದಳು ಉದ್ದಕ್ಕೂ ಬೆಂಕಿಯನ್ನೇ ಕಕ್ಕುತ್ತಿದ್ದಳು, ಬೆಕ್ಕುಗಳ ಸಭೆಯಂತೆ ಇಬ್ಬರೂ ಏಕಕಾಲದಲ್ಲಿ ಮಾತಾಡುತ್ತಿದ್ದರು. ಅವಳು ಹೇಳಿದಳು ;

"ಈಸಲಕ್ಕೆ ನೀನು ಅದರಿಂದ ಎಷ್ಟು ಆನಂದಪಡಬಹುದಾಗಿತ್ತೋ ಅಷ್ಟನ್ನೂ ಪಟ್ಟಿದ್ದಾಯಿತು ಅಲ್ಲವೆ?-ನೀನು ಮತ್ತೆ ಅವನ ಸುದ್ದಿಗೆ ಹೋಗಿ ನನ್ನ ಕೈಗೆ ಸಿಕ್ಕಿಬಿದ್ದೆಯಾದರೆ, ನೆನಪಿರಲಿ—"

"ಯಾರಿಗೆ ಸುದ್ದಿಗೆ ಎಂದೆ?" ಎಂದ ಟಾಮ್,-ಕಿರುನಗೆಯನ್ನು ತೊರೆದು. ಆಶ್ಚರ್ಯಗೊಂಡಂತೆ,

"ಇನ್ನು ಯಾರು? ಅದೇ, ಆ ಓಡು ಕುಳಿ ನೀಗ್ರೋವಿನ, ಅಷ್ಟೆ, ಯಾರೆಂದು ತಿಳಿದಿದ್ದೆ ?"

ಟಾಮ್ ನನ್ನ ಕಡಗೆ ಬಲು ನಿಷ್ಠುರವಾಗಿ ನೋಡಿ, ಹೇಳಿದ!

"ಟಾಮ್, ಅವನು ಸುರಕ್ಷಿತವಾಗಿದ್ದಾನೆಂದು ನೀನು ಈಗ ಹೇಳಲಿಲ್ಲವೆ? ಅವನು ಹೊರಟುಹೋಗಲಿಲ್ಲವೆ?"

"ಅವನಂತೆ ! ಆ ಓಡುಕುಳಿ ನೀಗ್ರೋವೆ? ಖಂಡಿತವಾಗಿಯೂ ಅವನು ಹೊರಟು ಹೋಗಲಿಲ್ಲ. ಯಾವ ಅಪಾಯವೂ ತಟ್ಟದಂತೆ, ಕ್ಷೇಮವಾಗಿ, ಅವರು ಅವನನ್ನು

ಮತ್ತೆ ಹಿಡಿದು ತಂದಿದ್ದಾರೆ. ಮತ್ತೆ ಅವನು ಆ ಕಂಟೀರದಲ್ಲಿ ನೆಲಸಿದ್ದಾನೆ. ರೊಟ್ಟಿ, ನೀರು-ಇವುಗಳ ಪಥ್ಯದಲ್ಲಿದ್ದಾನೆ; ಕೈಕಾಲಿಗೆಲ್ಲ ಸರಪಳಿ ತೊಡಿಸಿ ಕೊಂಡಿದ್ದಾನೆ ಅವನನ್ನು, ಅವನ ಯಜಮಾನ ಬಂದು ಬಿಡಿಸಿಕೊಂಡುಹೋಗುವ ತನಕ, ಅಥವಾ ಹರಾಜು ಹಾಕುವ ತನಕ ಹಾಗೆಯೇ ಇಡಲಾಗುತ್ತದೆ!"

ಟಾಮ್ ಥಟ್ಟನೆ ಹಾಸಿಗೆಯ ಮೇಲೆ ಎದ್ದು ಕುಳಿತ; ಅವನ ಕಣ್ಣು ಸುಡುತ್ತಿತ್ತು: ಅವನ ಮೂಗಿನ ಹೊಳ್ಳೆಗಳು ಮೀನಿನ ಪುಪ್ಪಸದಂತೆ ತೆರೆದು ಮುಚ್ಚಿ ಮಾಡುತ್ತಿದ್ದವು; ಅವನು ನನ್ನ ಕಡೆಗೆ ತಿರುಗಿ ಕಿರಿಚಿದ :

"ಅವನನ್ನು ಬಂಧಿಸುವ ಹಕ್ಕು ಅವರಿಗಿಲ್ಲ! ಹೊರಡು!—ಒಂದು ನಿಮಿಷ ಕಾಲವೂ ತಡಮಾಡಬೇಡ. ಅವನನ್ನು ಸ್ವತಂತ್ರಗೊಳಿಸು; ಅವನು ಜೀತದಾಳಲ್ಲ: ಈ ಭೂಮಿಯ ಮೇಲಿನ ಇತರ ಜೀವಿಗಳಂತೆಯೇ ಅವನೂ ಸ್ವತಂತ್ರ!"

"ಈ ಮಗು ಆಡುತ್ತಿರುವ ಮಾತಿನ ಅರ್ಥವೇನು?"

"ನಾನು ಒಂದೊಂದು ಮಾತನ್ನೂ ಮನಃಪೂರ್ವಕವಾಗಿ ಆಡುತ್ತಿದ್ದೇನೆ, ಸಾಲಿ-ಚಿಕ್ಕಮ್ಮ. ಬೇರೆಯವರು ಹೋಗದಿದ್ದರೆ ನಾನೇ ಹೊರಡುತ್ತೇನೆ. ನಾನು ಅವನನ್ನು ಅವನ ಬಾಳಿನುದ್ದಕ್ಕೂ ಬಲ್ಲೆ. ಹಾಗೆಯೇ ಈ ಟಾಮುನೂ ಅವನ್ನು ಬಲ್ಲ. ಮುದುಕಿ ಮಿಸ್, ವ್ಯಾಟ್ಸನ್ ಎರಡು ತಿಂಗಳ ಹಿಂದೆ ತೀರಿಕೊಂಡಳು; ನದಿಯ ತೆಂಕಣಕ್ಕಿರುವ ಸೀಮೆಗೆ ಅವನನ್ನು ತಂದು ಮಾರುವುದಕ್ಕೇ ಅವಳು ಹೇಸುತ್ತಿದ್ದಳು, ಮತ್ತು ಹಾಗೆಯೆ ಹೇಳಿಯೂ ಹೇಳಿದಳು,ತನ್ನ ಮರಣ ಶಾಸನದಲ್ಲಿ ಅವನು ಸ್ವತಂತ್ರನೆಂದು ಸಾರಿದ್ದಾಳೆ."

"ಹಾಗೆ ಅವನು ಮೊದಲೇ ಸ್ವತಂತ್ರನಾಗಿದ್ದಲ್ಲಿ,ಯಾವ ಪುರುಷಾರ್ಥಕ್ಕಾಗಿ ನೀನು ಅವನನ್ನು ಮತ್ತೆ ಸ್ವತಂತ್ರಗೊಳಿಸಲು ಇಚ್ಛಿಸಿದೆ?"

"ಅದೀಗ ಸರಿಯಾದ ಪ್ರಶ್ನೆ, ನಾನು ಹಾಗೆ ಹೇಳಲೇಬೇಕು; ಮತ್ತು ಅದು ಹೆಂಗಸಾದವಳಿಗೆ ಒಪ್ಪುವಂತೆಯೇ ಇದೆ. ಏಕೆ? ನಾನದರ ಸಾಹಸವನ್ನು ಸವಿಯಬಯಸಿದೆ: ಕುತ್ತಿಗೆಯ ತನಕ ಬಂದಿದ್ದ ರಕ್ತದ ಮಡುವಿನಲ್ಲಿ ಕಷ್ಟಪಟ್ಟು ನಡೆಯುತ್ತಿದ್ದೆ-ಹಾ! ಇದೇನು! ಪಾಲಿಚಿಕ್ಕಮ್ಮ!"

ಅದೇ ಸಮಯಕ್ಕೆ ಅವಳು, ಉಬ್ಬುವ ರೊಟ್ಟಿಗಳನ್ನು ಸಾಕಷ್ಟು ಸೇವಿಸಿ ಸುಪ್ರೀತಳೂ ಶಾಂತಳೂ ಆದ ದೇವತೆಯಂತೆ ಕಂಗೊಳಿಸುತ್ತಾ ಎಮಗಿಗೆ ಅಲ್ಲೇ ಒಳಬಾಗಿಲಲ್ಲಿ ಬಂದು ನಿಂತಿರದಿದ್ದರೆ, ನಾನು ಭೂಮಿಯ ಮೇಲಿರುವುದೇ ಬೇಡ!

ಸಾಲಿ- ಚಿಕ್ಕಮ್ಮ ಒಡನೆಯೇ ಅವಳ ಬಳಿಗೆ ಹಾರಿದಳು; ಅವಳ ತಲೆಯನ್ನು ಭದ್ರವಾಗಿ ಅಪ್ಪಿಕೊಂಡು ಅವಳ ಹೆಗಲ ಮೇಲೆ ಕಣ್ಣೀರಿಡುತ್ತಿದ್ದಳು. ನನಗೆ ಮಂಚದ ಕೆಳಗೆ ಅನುಕೂಲವಾದ ಸ್ಥಳ ಸಿಕ್ಕಿತು: ಏಕೆಂದರೆ ನಮಗೆ ಬಲು ಇಕ್ಕಟ್ಟಿನ ಸಂದರ್ಭ ಒದಗುವುದರಲ್ಲಿತ್ತು. ಎಂದು ನನಗೆ ತೋರಿತು. ನಾನು ಈಚೆಗೆ ತಲೆಹಾಕದೆ, ಇಣಿಕಿ ನೋಡಿದೆ. ಮರುಕ್ಷಣದಲ್ಲೇ ಟಾಮನ ಪಾಲಿಚಿಕ್ಕಮ್ಮ ಬಿಡಿಸಿಕೊಂಡು, ಟಾಮನಕಡೆಗೆ

ಅವನನ್ನು ನೆಲಕ್ಕೆ ಹಾಕಿ ಅರೆಯುವ ರೀತಿಯಲ್ಲಿ-ತನ್ನ ಕನ್ನಡಕದ ಮೇಲಿನಿಂದ ನೋಡುತ್ತ ನಿಂತಳು. ಬಳಿಕ ಅವಳು ಹೇಳಿದಳು :

"ಹೌದು, ನೀನು ತಲೆಯನ್ನು ಆ ಕಡೆಗೆ ತಿರುಗಿಸಿಕೊಳ್ಳುವುದೇ ಮೇಲು-ಒಂದು ವೇಳೆ ನಾನೇ ನೀನಾಗಿದ್ದರೆ ಹಾಗೆಯೇ ಮಾಡುತ್ತಿದ್ದೆ, ಟಾಮ್"

"ಅಯ್ಯೋ ನನ್ನಕ್ಕ! ಅವನು ಈಗ ಬೇರೆಯವನಾದನೆ ಹೇಗೆ? ಟಾಮನಲ್ಲ ಅವನು; ಸಿಡ್. ಟಾಮ್-ಟಾಮ್, ಟಾಮ್ ಎಲ್ಲಿಗೆ ಹೋದ? ನಿಮಿಷದ ಹಿಂದೆ ಅವನು ಇಲ್ಲೇ ಇದ್ದನಲ್ಲ."

"ನೀನು ಹೇಳುವುದು, ಹಕ್‌ಫಿನ್ ಎಲ್ಲಿ ಎಂದಿರಬೇಕು. ಅದೇ ನಿನ್ನ ಮನಸ್ಸಿನಲ್ಲಿರುವುದು, ಅಲ್ಲವೆ? ಕಂಡೊಡನೆಯೇ ಅವನನ್ನು ಗುರುತಿಸುವುದು ನನಗೆ ಕಷ್ಟವಾದರೆ ನನ್ನ ಟಾಮನಂಥ ಪಟಿಂಗನನ್ನು ನಾನು ಇಷ್ಟು ವರುಷಗಳ ಪರ್ಯಂತ ಬೆಳಸಿದ್ದೇ ವ್ಯರ್ಥವೆಂದು ನನಗೆ ತೋರುತ್ತದೆ. ಅದು ಚೆನ್ನಾಗಿದ್ದೀಯಾ ಎಂದು ಕೇಳುವಷ್ಟೇ ಬಲು ಸುಲಭವಾದದ್ದು. ಮಂಚದ ಕೆಳಗಿನಿಂದ ಈಚೆಗೆ ಬಾಪ್ಪ. ಹಕ್‌ಫಿನ್."

ನಾನು ಹಾಗೆಯೇ ಮಾಡಿದೆ. ಆದರೆ ಅಷ್ಟು ಲವಲವಿಕೆಯಿಂದಲ್ಲ. ಆಗ ಸಾಲಿ ಚಿಕ್ಕಮ್ಮನನ್ನು ನೋಡಬೇಕೆ ! ಸೈಲಾಸ್-ಚಿಕ್ಕಪ್ಪನೊಬ್ಬನನ್ನು ಬಿಟ್ಟರೆ, ನಾನು ಅಷ್ಟರ ಮಟ್ಟಿಗೆ ಪೇಚಿಗೆಸಿಕ್ಕಿಬಿದ್ದ ಇನ್ನೊಬ್ಬರನ್ನು ನೋಡಿಯೇ ಇಲ್ಲ.ಅವನೂ ಆಮೇಲೆ ಬಂದು ನೋಡಿ ದಿಗ್-ಭ್ರಾಂತನಾದ. ನಡೆದುದೆಲ್ಲವನ್ನೂ ಅವನಿಗೆ ಇವರು ಹೇಳಿದರು. ಅವನಿಗೆ ಕುಡುಕನ ಅವಸ್ಥೆಯೊದಗಿತು. ಎನ್ನುತ್ತೀರೋ ಏನೋ, ಹಗಲೆಲ್ಲಾ ಅವನತಲೆಗೆ ಏನೂ ಹಿಡಿಯಲಿಲ್ಲ; ಆ ರಾತ್ರಿ ಅವನು ಪ್ರಾರ್ಥನಾಕೂಟದ ಸೂತ್ರವನ್ನು ಬೋಧಿಸಿದ ಆದರಿಂದ ಅವನಿಗೆ ಭಾರೀಯಶಸ್ಸು ಬಂತು; ಏಕೆಂದರೆ ಇಡೀಪ್ರಪಂಚದಲ್ಲಿನ ಮುದುಕರೆಲ್ಲರಿಗಿಂತಲೂ ಮುದುಕನಾದವನಿಗೆ ಕೂಡ ಅದು ಅರ್ಥವಾಗುವ ಹಾಗಿರಲಿಲ್ಲ. ಆಗ ಟಾಮನ ಚಿಕ್ಕಮ್ಮ ಸಾಲಿ ನಾನು ಯಾರು ಎತ್ತ ಮುಂತಾಗಿ ಎಲ್ಲವನ್ನೂ ಹೊರಗೆಡಹಿದಳು. ಮಿಸೆಸ್ ಫೆಲ್ಪ್ಸ್ ನನ್ನನ್ನು ಟಾಮ್ ಸಾಯರ್ ಎಂದು ಅಂಗೀಕರಿಸಿದಾಗ ನಾನು ಎಂಥಾ ಇಕ್ಕಟ್ಟಿಗೆ ಸಿಕ್ಕಿಬಿದ್ದೆ ಎಂಬುದನ್ನು ನಾನು ಮುಚ್ಚುಮರೆಯಿಲ್ಲದೆ ಹೇಳಿಕೊಳ್ಳಬೇಕಾಯಿತು— ಅದಕ್ಕವಳು "ಓ ಹಾಗೆಯೇ ಮಾಡು, ನನ್ನನ್ನು ಸಾಲಿ ಚಿಕ್ಕಮ್ಮನೆಂದೇ ಕರೆದುಕೋ, ನನಗೆದು ಇಂದಿಗೆ ರೂಢಿಯಾಗಿದೆ, ಬದಲಾವಣೆ ಅನಗತ್ಯ" ಎಂದಳು. ಮತ್ತು ಸಾಲಿ ಚಿಕ್ಕಮ್ಮ ನನ್ನನ್ನು ಟಾಮ್ ಸಾಯರ್ ಎಂದು ನಂಬಿದಾಗ ನಾನದನ್ನು ಸಹಿಸಬೇಕಾಗಿ ಬಂತು ಎಂದೆ ;—ಬೇರೆ ಮಾರ್ಗವೇ ಇರಲಿಲ್ಲ ಮತ್ತು ಅದಕ್ಕೆ ಟಾಮನ ಅಭ್ಯಂತರವಿರದೆಂದೂ ನಾನು ಬಲ್ಲೆ; ಏಕೆಂದರೆ ಅದೇ ಒಂದು ಪರಮ ರಹಸ್ಯವಾಗಿ ಅವನ ಪ್ರಿಯವಾಗುತ್ತಿತ್ತು, ಮತ್ತು ಅದರಿಂದಲೇ ಅವನು ಸಾಹಸ ಕಾರ್ಯವನ್ನು ನಿರ್ಮಾಣ ಮಾಡುತ್ತಿದ್ದ. ಸಂತುಷ್ಟನಾಗುತ್ತಿದ್ದ. ಅದು ಹಾಗೆಯೇ ಆಯಿತು, ಅವನು ಸಿಡ್ಡನೆಂದುಕೊಳ್ಳಲು ಒಪ್ಪಿದ, ನನ್ನ ದಾರಿ ಸುಗಮವಾಗಲು ತನ್ನ ಕೈಲಾದುದನ್ನು ಮಾಡಿಕೊಟ್ಟ

ಮುಂದುಕಿ ಮಿಸ್ ವ್ಯಾಟನ್ ತನ್ನ ಮರಣಶಾಸನದಲ್ಲಿ ಜಿಮ್ಮನನ್ನು ಸ್ವತಂತ್ರಗೊಳಿಸಿದಳೆಂದು ಟಾಮ್ ಹೇಳಿರುವುದು ಸರಿಯೆಂದೂ, ಆ ಕಾರಣದಿಂದ ಟಾಮ್ ಸಾಯರ್ ನೀಗ್ರೋ ಒಬ್ಬನ ಬಿಡುಗಡೆಗಾಗಿ ಇಷ್ಟೆಲ್ಲ ತೊಂದರೆಗಳಿಗೂ ಕ್ಲೇಶಕ್ಕೂ ಒಳಗಾದನೆಂದೂ ಅವನ ಸಾಲಿ-ಚಿಕ್ಕಮ್ಮನೇ ಹೇಳಿದಳು ತನ್ನದೇ ರೀತಿಯಲ್ಲಿ ಹುಟ್ಟಿಬೆಳೆದ ಟಾಮ್ ನೀಗ್ರೋ ಒಬ್ಬನನ್ನು ಸ್ವತಂತ್ರಗೊಳಿಸಲು ಹೇಗೆ ಮನಸ್ಸು ಮಾಡಬಲ್ಲ ಎಂಬುದನ್ನು ಆ ನಿಮಿಷದ ತನಕ ಮತ್ತು ಆ ಮಾತನ್ನು ಕೇಳುವ ತನಕ ನಾನು ನಂಬುತ್ತಲೇ ಇರಲಿಲ್ಲ

ಸರಿ, ಸಾಲಿ-ಚಿಕ್ಕಮ್ಮ ತನಗೆ ಟಾಮನೂ ಸಿಡ್ಡನೂ ಕ್ಷೇಮವಾಗಿ ಸುರಕ್ಷಿತವಾಗಿದ್ದಾರೆ ಎಂದು ಸಾಲಿ ಚಿಕ್ಕಮ್ಮನಿಂದ ಪತ್ರಬಂದಾಗ ಅಂದುಕೊಂಡಿದ್ದಳಂತೆ :

"ಇದು ಹೇಗಿದೆ ನೋಡು. ಯಾರ ಕಣ್ಣಿಗೂ ಬೀಳದೆ ಅವನು ಹೋಗುವುದಾದರೆ ಹೊರಡಲಿ ಎಂದು ನಾನು ಒಪ್ಪಿದೆ ಕೊಟ್ಟಾಗಲೇ ನಾನಿದನ್ನು ನಿರೀಕ್ಷಿಸಬೇಕಾಗಿತ್ತು. ಈಗ ನಾನು ಹೋಗಲೇಬೇಕು ನದಿಯ ಮೇಲೆ ಸಾವಿರದನೂರು ಮೈಲಿಗಳ ದೀರ್ಘ ಪ್ರಯಾಣವನ್ನು ಮಾಡಲೇಬೇಕು. ನಿನ್ನಿಂದ ಯಾವ ಉತ್ತರ ಬರುವುದರ ಸುಳಿವೇ ಇಲ್ಲದಿರಲು ಈ ಪ್ರಾರಬ್ಧ ಈ ಸಲ ಏನು ಮಾಡಿದೆಯೋ, ಏನು ಕಥೆಯೋ ನೋಡಿಕೊಂಡು ಬರೋಣ."

"ನಿನ್ನಿಂದ ನನಗೆ ಯಾವ ಸಮಾಚಾರವೂ ಬರಲೇ ಇಲ್ಲ"

"ನನಗೆ ಆಶ್ಚರ್ಯ ! ಸಿಡ್ ಇಲ್ಲಿಗೆ ಬಂದಿದ್ದಾನೆಂದು ನೀನೇಕೆ ಕಾಗದ ಬರೆದೆ ಎಂದು ಎರಡು ಸಲ ನಿನಗೆ ಪತ್ರ ಹಾಕಿದ್ದೇನೆ"

"ಇಲ್ಲ, ಅಕ್ಕ, ನನಗವು ತಲುಪಿಯೇ ಇಲ್ಲ."

"ಸಾಲಿ-ಚಿಕ್ಕಮ್ಮ ನಿಧಾನವಾಗಿಯೂ ನಿಷ್ಠುರದಾಗಿಯೂ ತಿರುಗಿ ಕೇಳಿದಳು:"

"ಏ, ಟಾಮ್ !"

ಅವನು ಮುಂದ್ದಾಗಿ "ಚಿಕ್ಕಮ್ಮ ಏನದು ?" ಎಂದ.

"ನೀನು ನನಗೆ ಏನು ಅನ್ನಬೇಡ. ಪ್ರಾರಬ್ಧವೇ, ಆ ಪತ್ರಗಳನ್ನು ತಂದು ಕೊಡು."

"ಯಾವ ಪತ್ರಗಳು ?"

"ಅದೇ ಪತ್ರಗಳು, ಇಲ್ಲವಾದರೆ ನಿನಗೆ ತಕ್ಕದ್ದು ಮಾಡಿಯೇನು"

"ಅವು ಪೆಟ್ಟಿಗೆಯಲ್ಲಿವೆ. ಈಗಲೂ ಅಲ್ಲಿವೆ. ಅಂಚೆ-ಮನೆಯಿಂದ ಹೇಗೆ ಬಂದವೋ ಹಾಗೆಯೇ ಅವುಗಳನ್ನು ಅಲ್ಲಿಟ್ಟಿದ್ದೇನೆ ನಾನು ಒಡೆದು ನೋಡಿಲ್ಲ. ಮುಟ್ಟಲೇ ಇಲ್ಲ. ಅವುಗಳಿಂದ ತೊಂದರೆಯಾದೀತೆಂದು ಭಾವಿಸಿದೆ. ನಾನೂ ಹಾಗೂ ಅಂದುಕೊಂಡೆ—ನೀನಂಥಾ ಅವಸರದಲ್ಲೇನೂ ಇರದಿದ್ದರೆ ನಾನು ನಿ—"

"ಹಾಗಲ್ಲ ನಿನಗೆ ಹೊಡೆತ ಬೇಕಾಗಿದೆ ಅನ್ನು, ಅದರಲ್ಲಿ ಅನುಮಾನವೇ ಇಲ್ಲ. ಅಲ್ಲ ನಾನಿಲ್ಲಿಗೆ ಬರುವುದಾಗಿ ತಿಳಿಸಿ ನಾನು ಇನ್ನೊಂದು ಪತ್ರ ಬರೆದೆನೆ,—ಇವನು ಅದನ್ನೂ—"

"ಇಲ್ಲ. ಅದು ನಿನ್ನೆ ತಾನೆ ಬಂತು. ನಾನದನ್ನು ಇನ್ನೂ ಓದಿಲ್ಲ ಅದು ಸರಿಯಾಗಿದೆ ಬಿಡು, ಅದು ನನ್ನಲ್ಲಿದೆ."

ಅದೂ ಅವಳಲ್ಲಿಲ್ಲ ಎನ್ನುವುದಕ್ಕೆ ನಾನು ಬೇಕಾದರೆ ಎರಡು ಡಾಲರುಗಳ ಬಾಜಿ ಕಟ್ಟುತ್ತಿದ್ದೆ. ಆಮೇಲೆ ಹಾಗೆ ಮಾಡದೇ ಹೋದರೂ ಕ್ಷೇಮವೇ ಎಂದುಕೊಂಡೆ ಆದ್ದರಿಂದ ನಾನು ಯಾವ ಮಾತನ್ನೂ ಆಡಲಿಲ್ಲ.

## ಕಡೆಯ ಅಧ್ಯಾಯ

ಬಳಿಕ ಟಾಮ್ ನನಗೆ ಒಂಟಿಯಾಗಿ ಸಿಕ್ಕಿದ ಮೊದಲ ಸಲವೇ ನಾನು ಅವನನ್ನು ಕೇಳಿದೆ, ಅಂದು ನಾವು ಮೂವರೂ ಪಲಾಯನ ಮಾಡಿದ ಸಮಯದಲ್ಲಿ ಅವನ ಮನಸ್ಸಿನಲ್ಲಿದ್ದ ಉದ್ದೇಶವೇನು? ನಮ್ಮ ಪಲಾಯನ ನಿರ್ವಿಘ್ನವಾಗಿ ಸಾಗಿದ್ದರೂ ಮೊದಲೇ ಸ್ವತಂತ್ರನಾಗಿದ್ದ ನೀಗ್ರೋ ಒಬ್ಬನನ್ನು ಸ್ವತಂತ್ರಗೊಳಿಸುವುದು ಯಶಸ್ವಿಯಾಗಿ ಸಾಗಿದ್ದರೆ ಅವನು ಮಾಡಲಪೇಕ್ಷಿಸಿದ್ದ ಕಾರ್ಯವಾದರೂ ಏನು?— ಎಂದು. ಅದಕ್ಕವನು ತಾನು ಮೊದಲಿನಿಂದಲೂ ಹಾಗೆ ಯೋಚಿಸುತ್ತಿದುದಾಗಿಯೂ, ನಾವು ಸುರಕ್ಷಿತವಾಗಿ ಜಿಮ್ಮನನ್ನು ಬಿಡಿಸಿಕೊಂಡ ತರುವಾಯ ಅವನನ್ನು ತೆಪ್ಪದ ಮೇಲೆ ನದಿಯುದ್ದಕ್ಕೂ ಕರೆದೊಯ್ಯುವುದು, ನದೀಮುಖದ ತನಕ ನಮ್ಮ ಸಾಹಸಕಾರ್ಯವನ್ನು ಕೊಂಡುಹೋಗಿ ಕಟ್ಟಿಹಾಕುವುದು, ಆಮೇಲೆ ಅವನಿಗೆ ತಾನು ಸ್ವತಂತ್ರನೆಂಬುದನ್ನು ತಿಳಿಸುವುದು, ಹಬೆ-ದೋಣಿಯೊಂದರಲ್ಲಿ ಅವನನ್ನು ಠೀವಿಯಿಂದ ಕುಳ್ಳಿರಿಸಿಕೊಂಡು ಮನೆಗೆ ಕರೆದುಕೊಂಡು ಹೋಗುವುದು, ಅವನಿಗಾದ ಕಾಲನಷ್ಟಕ್ಕಾಗಿ ಪರಿಹಾರವನ್ನು ತುಂಬಿಕೊಡುವುದು, ಮುಂದಾಗಿ ಬರೆದು ಕಳಿಸಿ ಸುತ್ತಮುತ್ತಣ ಪ್ರದೇಶಗಳಿಂದ ಸಮಸ್ತ ನೀಗ್ರೋಗಳನ್ನೂ ಕರೆಸಿಕೊಂಡು ಅವರೆಲ್ಲರೂ ಸೇರಿ ಕೊಂಬು ಕಹಳೆ ದೀವಟಿಗೆಗಳಿಂದ ಸಡಗರಿಸಿ ಮೆರವಣಿಗೆ ಮಾಡಿಕೊಂಡು ಅವನನ್ನು ಊರಿಗೊಯ್ಯುವಂತೆ ಮಾಡುವುದು,—ಇವು ನಮ್ಮ ಪಾಲಿನ ಕರ್ತವ್ಯವಾಗುತ್ತಿತ್ತು. ಆಗ ಅವನು ವೀರನಾಯಕನಾಗುತ್ತಿದ್ದನು, ನಾವೂ ಆಗುತ್ತಿದ್ದವು ಎಂದನು. ಆದರೆ ನಾನು ಅದೀಗಲೂ ಸುಮಾರು ಹಾಗೆಯೇ ನಡೆದಿದೆ ಎಂದುಕೊಂಡೆ.

ನಾವು ಕ್ಷಣಕಾಲದಲ್ಲಿ ಸರಪಳಿಗಳನ್ನು ಕಿತ್ತೊಗೆದು ಜಿಮ್ಮನನ್ನು ಬಿಡಿಸಿಕೊಂಡೆವು. ಆಗ ಸಾಲಿ-ಚಿಕ್ಕಮ್ಮನೂ, ಸೈಲಾಸ್-ಚಿಕ್ಕಪ್ಪನೂ, ಸಾಲಿ-ಚಿಕ್ಕಮ್ಮನೂ ಅಲ್ಲಿಗೆ ಬಂದು ಟಾಮನಿಗೆ ಆ ವೈದ್ಯ ಚಿಕಿತ್ಸೆ ಮಾಡಿದ ಸಮಯದಲ್ಲಿ ಈ ಜಿಮ್ ಎಷ್ಟರಮಟ್ಟಿಗೆ ಸಹಾಯ ಮಾಡಿದ ಎಂಬುದನ್ನು ಮನಸ್ಸಿಗೆ ತಂದುಕೊಂಡರು. ಅದಕ್ಕಾಗಿ ಜಿಮ್ಮನನ್ನು ಬೇಕಾದಷ್ಟು ಹೊಗಳಿದರು, ತುಂಬಾ ವಿಶ್ವಾಸದಿಂದ ಕಂಡರು, ಅವನು ಬಯಸಿದ್ದೆಲ್ಲವನ್ನೂ ತಂದುಕೊಟ್ಟರು, ಒಂದು ಚೂರು ಕೆಲಸವನ್ನು ಅವನಿಗೆ ಹೇಳದೆ ಅವನು ಆರಾಮವಾಗಿರಲು ಬಿಟ್ಟುಕೊಟ್ಟರು. ನಾವು ಅವನನ್ನು 'ರೋಗಿಗಳಿಗಾಗಿ ಮೀಸಲಾಗಿದ್ದ ಕೋಣೆ'ಗೆ ಕರೆದುಕೊಂಡು ಹೋದೆವು, ಮಹಾ ಮಹಾ ವಿಷಯಗಳನ್ನು ಚರ್ಚಿಸಿದೆವು. ನಮಗೋಸ್ಕರ ಅವನ ಸೆರೆಯಾಳಾಗಿದ್ದು ಸಮಾಧಾನದಿಂದ ತನ್ನ ಪಾಲಿನ ಕೆಲಸಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದಕ್ಕಾಗಿ ಟಾಮ್ ಜಿಮ್ಮನಿಗೆ ನಲವತ್ತು ಡಾಲರುಗಳನ್ನು ಕೊಟ್ಟ. ಅದನ್ನು ನೋಡಿಯೇ ಜಿಮ್ಮನಿಗೆ ಮಹಾನಂದವಾಯಿತು, ಅಲ್ಲೇ ಕುಸಿದು ಹೋದ ; ಹೇಳಿದ ;

"ಈಗ ನೋಡು ನಾನು ನಿನಗೆ ಏನು ಹೇಳಿದ್ದೆ? – ಜಾಕ್ಸನ್ ದ್ವೀಪದಲ್ಲಿದ್ದಾಗ ನಿನಗೆ ನಾನು ಏನು ಹೇಳಿದ್ದೆ ? ನನ್ನೆದೆಯ ಮೇಲೆ ದಟ್ಟವಾಗಿ ಕೂದಲು ಬೆಳೆದಿದೆ, ಅದು ಏನನ್ನು ಸೂಚಿಸುತ್ತದೆ ?–ನಾನು ಒಂದು ಕಾಲದಲ್ಲಿ ಶ್ರೀಮಂತನಾಗಿದ್ದೆ, ಮತ್ತೊಮ್ಮೆ ನಾನು ಶ್ರೀಮಂತನಾಗಲಿರುವೆ ಎಂದಲ್ಲವೆ ನಾನು ನಿನಗೆ ಹೇಳಿದ್ದು ? ಅದು ನಿಜವೇ ಆಯಿತು. ಅದು ಇಕೋ ಇಲ್ಲಿದೆ. ಇಲ್ಲಿದೆ, ಈಗ ನೋಡು ನೀನು ನನಗೆ ಹೇಳಬೇಕಾದುದೇನೂ ಇಲ್ಲ—ಸೂಚನೆಗಳು ಸೂಚನೆಗಳೇ, ನಾನು ಹೇಳುವುದನ್ನು ಗಮನಿಸು. ನಾನು ಮತ್ತೆ ಶ್ರೀಮಂತನಾಗುವೆನೆನ್ನುವುದು ನನಗೆ—ನಾನಿಲ್ಲಿ ಈಗ ನಿಂತಿದ್ದೇನೆ ಎನ್ನುವಷ್ಟೇ ಖಚಿತವಾಗಿ—ಮೊದಲೇ ತಿಳಿದಿತ್ತು."

ಟಾಮ್ ಉದ್ದಕ್ಕೂ ಮಾತಾಡುತ್ತಲೇ ಇದ್ದ. ಬಳಿಕ ಹೇಳಿದ: ನಾವು ಮೂವರು ಇಲ್ಲಿಂದ ಜಾರಿಕೊಳ್ಳೋಣ, ಇಂದಿನ ರಾತ್ರಿಯೋ ಮುಂದಿನ ರಾತ್ರಿಯೋ ; ತಕ್ಕ ಸಂಪರಣೆಯನ್ನು ಒದಗಿಸಿಕೊಳ್ಳೋಣ ; ಒಂದೆರಡು ವಾರಗಳ ಮಟ್ಟಿಗಾದರೂ ಆ ರೆಡ್ ಇಂಡಿಯನ್ ಸೀಮೆಗೆ ಸಾಹಸ ಕಾರ್ಯಾಚರಣೆಗಾಗಿ ಹೊರಟು ಬಿಡೋಣ. ನಾನು ಹೇಳಿದೆ, ಹಾಗೆಯೇ ಆಗಲಿ, ನನಗದು ಒಪ್ಪಿಗೆಯಾಗಿದೆ, ಆದರೆ ಮಾತ್ರ ನನ್ನಲ್ಲಿ ಹಣವಿಲ್ಲ, ನನ್ನ ಮನೆಯಿಂದಲಾದರೂ ಏನನ್ನಾದರೂ ತರಿಸೋಣವೆಂದರೆ ಅದೂ ಸಾಧ್ಯವಿಲ್ಲವೆಂದು ತೋರುತ್ತದೆ; ಏಕೆಂದರೆ ಅಪ್ಪ ಇಷ್ಟರೊಳಗಾಗಿ ಅಲ್ಲಿಗೆ ಹಿಂದಿರುಗಿರಬಹುದು, ನ್ಯಾಯಾಧೀಶ ಥ್ಯಾಚೆರನ ಬಳಿ ಇರುವುದೆಲ್ಲವನ್ನೂ ಹಿರಿದುಕೊಂಡು ಹೋಗಿ ಕುಡಿದು ಕೆಡಿದು ಮುಗಿಸಿರಬೇಕು ಎಂದು ತೋರುತ್ತದೆ.

"ಅದು ಹಾಗೆ ನಡೆದಿಲ್ಲ, ಅಷ್ಟು ಹಣವೂ ಅಲ್ಲೇ ಇದೆ—ಆರು ಸಾವಿರ ಡಾಲರು

ಗಳು ಮತ್ತು ಜತೆಗೆ ಇನ್ನಷ್ಟು. ನಿಮ್ಮಪ್ಪ ಹಿಂದಿರುಗಲೇ ಇಲ್ಲ. ನಾನು ಇಲ್ಲಿಗೆ ಹೊರಡುವ ನಿಮಿಷದವರೆಗೂ ಅವನು ಬಂದಿರಲಿಲ್ಲ,"

ಜಿಮ್ ಬಲು ಗಂಭೀರವಾಗಿ ಹೇಳಿದ :

"ಅವನಿನ್ನು ಹಿಂತಿರುಗುವುದೇ ಇಲ್ಲ, ಹಕ್"

ನಾನು ಕೇಳಿದೆ :

"ಅದೇಕೆ ಜಿಮ್ ?"

"ಏಕೆ–ಗೀಕೆ ಕೇಳಬೇಡ, ಹಕ್, ಅವನಂತೂ ಇನ್ನು ಹಿಂದಿರುಗುವುದಿಲ್ಲ."

ಆದರೂ ನಾನು ಅವನನ್ನು ಕೆದುಕುತ್ತಲೇ ಇದ್ದೆ. ಕಡೆಯಲ್ಲಿ ಅವನು ಹೇಳಿದ,

"ನದಿಯೊಳಗೆ ತೇಲಿ ಬರುತ್ತಿದ್ದ ಆ ಮನೆ ನಿನ್ನ ನೆನಪಿನಲ್ಲಿದೆಯೇ? ಅದರಲ್ಲೊಬ್ಬ ಮನುಷ್ಯನಿದ್ದ, ಅವನಿಗೆ ಮುಸುಕು ಹಾಕಿದ್ದರು. ನಾನಲ್ಲಿಗೆ ಹೋಗಿ ಮುಸುಕು ತೆಗೆದು ಅವನನ್ನು ನೋಡಿದೆ. ನಾನು ನಿನ್ನನ್ನು ಅದರ ಬಳಿಗೆ ಬಿಡದೆ ಹೋದೆ—ಅಲ್ಲವೆ ? ಆದ್ದರಿಂದ ಈಗ ನೀನು ನಿನ್ನ ಹಣವನ್ನು ನಿನಗೆ ಬೇಕಾದಾಗ ಪಡೆಯಬಹುದು. ಏಕೆಂದರೆ ಅದು—ಅವನ ಹಣ !

ಈಗ ಟಾಮ್ ಪೂರ್ತಿ ಗುಣಹೊಂದಿದ್ದ ; ಗಡಿಯಾರದಂತೆ ಆ ಗುಂಡನ್ನು ತನ್ನ ಕೊರಳಿಗೆ ಕಟ್ಟಿಕೊಂಡಿದ್ದ, ಹೊತ್ತೆಷ್ಟಾಯಿತೆನ್ನುವುದು ತಿಳಿಯಲು ಅವನು ಯಾವಾಗಲೂ ಅದನ್ನೇ ನೋಡಿಕೊಳ್ಳುತ್ತಿದ್ದ. ಹೀಗಾಗಿ ಬರೆಯಬೇಕಾದದ್ದು ಇನ್ನೇನೂ ಉಳಿದಿಲ್ಲ ; ನನಗಿದರಿಂದ ಪರಮಾನಂದವಾಗಿದೆ ; ಏಕೆಂದರೆ ಗ್ರಂಥರಚನೆ ಎಂಥಾ ತಾಪತ್ರಯದ ಕೆಲಸವೆನ್ನುವುದು ನನಗೆ ಮೊದಲೇ ಗೊತ್ತಿದ್ದರೆ ನಾನಿದಕ್ಕೆ ಕೈಹಾಕುತ್ತಲೇ ಇರಲಿಲ್ಲ ಮುಂದಂತೂ ಅದಕ್ಕೆ ಕೈಹಾಕುವುದೇ ಇಲ್ಲ. ಆದರೆ ನಾನಿನ್ನೂ ಉಳಿದವರಿಗಿಂತ ಮುಂದಾಗಿ ಆ ಸೀಮೆಗೆ ಹೋಗಬೇಕಾಗಿದೆಯೆಂದು ನನ್ನೆಣಿಕೆ. ಏಕೆಂದರೆ ಸಾಲಿ-ಚಿಕ್ಕಮ್ಮ ನನ್ನನ್ನು ದತ್ತು-ತೆಗೆದುಕೊಳ್ಳಬೇಕೆಂದಿದ್ದಾಳೆ, ನನ್ನನ್ನು ಸುಧಾರಿಸಬೇಕೆಂದಿದ್ದಾಳೆ, ನಾನದನ್ನು ಸಹಿಸಲಾರೆ. ನಾನು ಈ ಹಿಂದೆಯೇ ಅಲ್ಲಿ ಇದ್ದವನು.

ಸಮಾಪ್ತಿ

ನಿಮ್ಮ ನಂಬಿಕೆಗರ್ಹನಾದ

ಹಕ್ ಫಿನ್.

**ಸ್ವಂತ ಗ್ರಂಥ ಭಂಡಾರದ ಯೋಜನೆ :—**

4 ಒಂಭತ್ತು ತಿಂಗಳು ಚಂದಾ ನೀವು ಕಟ್ಟಿದ ತಕ್ಷಣ ಅಂದರೆ ನಮಗೆ 90-00ರೂ. ತಲುಪಿದ ನಂತರ, ಒಂಭತ್ತನೇ ತಿಂಗಳು ನಿಮಗೆ ಮತ್ತೆರಡು ಉಚಿತ ಪುಸ್ತಕ (5-00 ರಷ್ಟು) ಉಚಿತವಾಗಿ ಕೊಡುತ್ತೇವೆ,

5 ಹನ್ನೆರಡನೆ ತಿಂಗಳು ನಮಗೆ ಒಟ್ಟು 120-00 ಸೇರಿದೊಡನೆ ನಿಮಗೆ 10-00 ರೂ;ನ ಬೆಲೆಯ ಪುಸ್ತಕದ ಜೊತೆಗೆ ಪುನಃ 10—00 ನಷ್ಟು ಬೆಲೆಯ 4 ಉಚಿತ ಪುಸ್ತಕಗಳು ದೊರೆಯುತ್ತವೆ,

6 ಒಂದು ವರ್ಷದಲ್ಲಿ ನಿಮಗೆ 120—00 ಬೆಲೆಯ ಪುಸ್ತಕದ ಜೊತೆಗೆ ಉಚಿತ ವಾಗಿ ನೀವಾಗಿ ಆಯ್ಕೆ ಮಾಡುವ ಪುಸ್ತಕ (ಸರಾಸರಿ ತಿಂಗಳಿಗೊಂದರಂತೆ) ದೊರೆಯುತ್ತವೆ+(ಪ್ರಾರಂಭದ ಎರಡು ಉಚಿತ ಪುಸ್ತಕ ಪ್ರತ್ಯೇಕ.)

7 ಸುಲಭದಲ್ಲಿ ಮನೆ ಬಾಗಿಲಿಗೆ ನಿಮಗೆ ಪುಸ್ತಕ ಲಭ್ಯ. ವರ್ಷದಲ್ಲಿ ಒಂದು ಸುಂದರ ಗ್ರಂಥ ಭಂಡಾರ, ರೂಪುಗೊಳ್ಳುತ್ತದೆ.

8 ಪ್ರತಿ ತಿಂಗಳು ನೀವು ತರಿಸುವ 10 ರೂ. ಬೆಲೆಯ ಪುಸ್ತಕ ನಿಮಗೆ ರಿಜಿಸ್ಟರ್ ಅಂಚೆದ್ವಾರ ಕಳುಸ್ತೇವೆ. ಅಂದರೆ ಇದಕ್ಕೆ ಪ್ರತಿ ತಿಂಗಳು ತಗುಲುವ 1-65 ಅಂಚೆ ವೆಚ್ಚ ವರ್ಷ ಪೂರ್ತಿ 20 ರೂ. ನಾವೇ ಭರಿಸುತ್ತೇವೆ.

9 ವರ್ಷದಲ್ಲಿ ನೀವು ಕಟ್ಟುವ 120-00 ರೂ.ಗೆ, ನಿಮಗೆ 120—00 + ಉಚಿತ ಪುಸ್ತಕ 35—00 + ಅಂಚೆ ವೆಚ್ಚ 25—00. ಒಟ್ಟು 180—00 ಸೇರುತ್ತದೆ

* ಕನ್ನಡ ವಾಚಕ ಕೋಟಿಯು ಸ್ವಂತ ವಾಚನಾಲಯ ಹೊಂದಲು ಒಂದು ಅಪೂರ್ವ ಅವಕಾಶ.
* ಮೇ ತಿಂಗಳೊಳಗೆ ಚಂದಾದಾರರಾಗುವ ಸದಸ್ಯರಿಗೆ ಒಂದು ಉಚಿತ ಪುಸ್ತಕ.
* ಸದಸ್ಯತ್ವ ಮಾಡಬಯಸುವ ಪುಸ್ತಕ ವ್ಯಾಪಾರಿಗಳಿಗೆ ಧಾರಾಳ ವಾದ ಕಮೀಷನ್.
* ಸ್ಥಳೀಯ ಪ್ರತಿನಿಧಿಯ ಮೂಲಕ ಚಂದಾ ಪಾವತಿ ಮಾಡಿದವರಿಗೆ ನಮ್ಮಿಂದ ಅಧಿಕೃತ ಪಾವತಿ (ರಸೀತಿ) ದೊರೆತ ನಂತರವೇ. ಸದಸ್ಯತ್ವ ದೊರೆಯುತ್ತದೆ.

## ಸ್ವಂತ ಗ್ರಂಥ ಭಂಡಾರದ ಯೋಜನೆ :—

### ಮಧ್ಯೆ ನೀವು ಚಂದಾ ಕಳ್ಸುವುದನ್ನು ಬಿಟ್ಟರೇನೊ ?

ಭಯವಿಲ್ಲ. ನಿಮಗೆ ನಷ್ಟವೂ ಇಲ್ಲ. ಅದುವರೆಗೆ ನೀವು ಕಳ್ಸಿರುವ ಹಣದ ಸರಿ ಸಮಾನವಾದ ಪುಸ್ತಕ ನಿಮಗೆ ತಲುಪಿರುತ್ತವೆ.

ಮಧ್ಯೆ ಏನಾದರೂ ತೊಂದರೆ ಬಂದು ನೀವು ಚಂದಾ ಹಣ ಕಳ್ಸುವುದನ್ನು ಮರೆತರೆ, ಮಾರನೆ (ಮುಂದಿನ) ತಿಂಗಳು ಎರಡು ತಿಂಗಳ ಹಣ ಸೇರಿಸಿ ಕಳುಹಿಸಬಹುದು.

ಚಂದಾ ಹಣವನ್ನು ನೀವು ಕಳುಹಿಸುವುದನ್ನು ಮರೆತರೆ ಭಯವಿಲ್ಲ. ನಾವು ಆಗಾಗ ನಿಮಗೆ ಜ್ಞಾಪಿಸುತ್ತೇವೆ.

ವರ್ಷ ಪೂರ್ತಿ ಹಣ ಕಟ್ಟದಿದ್ದರೆ, ಹೊಸ ಸದಸ್ಯರಾದಾಗ 5 ರೂ. ಸದಸ್ಯತ್ವ ಪುನಃ ಕೊಡಬೇಕಾಗುತ್ತದೆ.

### ವರ್ಷ ಪೂರ್ತಿ ಚಂದಾ ಕಟ್ಟಿದರೆ

ಇದರಿಂದ ನಿಮಗೆ ಜೀವಮಾನ ವಿಡೀ ಹೆಮ್ಮೆ ಪಡಬಹುದಾದ ಒಂದು ಸ್ವಂತ ಗ್ರಂಥಾಲಯವಾಗುತ್ತದೆ.

ನೀವು ನಮ್ಮಿಂದ ತರಿಸುವ ಅಪೇಕ್ಷಿತ ಇತರೆ ಪುಸ್ತಕಗಳಿಗೆ ಸೇ. 15 ರಂತೆ ಕಮೀಷನ್ ಕೊಡುತ್ತೇವೆ. ಒಂದು ಬಾರಿಗೆ 25 ರೂ. ಮೇಲ್ಪಟ್ಟು ಪುಸ್ತಕ ತರಿಸಿದಾಗ ಅಂಚೆ ವೆಚ್ಚ ನಾವೇ ಭರಿಸುತ್ತೇವೆ.

ಆಗಾಗ ಮುದ್ರಿಸುವ ಪುಸ್ತಕ ಪಟ್ಟಿ ಉಚಿತವಾಗಿ ಕಳ್ಸುತ್ತೇವೆ.

### ಮುಂದಿನ ವರ್ಷಕ್ಕೆ

ಪ್ರಾರಂಭದಲ್ಲಿ 10-00 ರೂ. ಮಾತ್ರ ಕಳುಹಿಸಿ 15—00 ರೂ. ಬೆಲೆಯ ಪುಸ್ತಕ ಪಡೆಯಬಹುದು. ನಂತರದ ತಿಂಗಳುಗಳಲ್ಲಿ ಎಂದಿನಂತೆ ಪ್ರತಿ ತಿಂಗಳು 10—00 ರೂ ಕಳುಹಿಸುತ್ತಾ ಮೂರನೆ ತಿಂಗಳು 5—00 ರೂ. ಉಚಿತ ಪುಸ್ತಕ, ಆರನೆಯ ತಿಂಗಳು 10 - 00 ಉಚಿತ ಪುಸ್ತಕ. ಒಂಭತ್ತನೆಯ ತಿಂಗಳು 5—00 ರೂ. ನ ಉಚಿತ ಪುಸ್ತಕ. ಹನ್ನೆರಡನೆ ತಿಂಗಳು ಪುನಃ 10—00 ರೂ ನ ಉಚಿತ ಪುಸ್ತಕ ಪಡೆಯಬಹುದು—ಸದಸ್ಯತ್ವ ಶುಲ್ಕ ಇಲ್ಲ. ಇದೇ ಹೆಚ್ಚಿನ ಲಾಭ,

## ಹೆಚ್ಚು ಕನ್ನಡಿಗರು ಈ ಯೋಜನೆಯಲ್ಲಿ ಭಾಗವಹಿಸಿದರೆ ?

ಬರುವ ವರ್ಷದಲ್ಲಿ ಇನ್ನಷ್ಟು ಸೌಲಭ್ಯಗಳು. ಪುಸ್ತಕ ಪ್ರಪಂಚದಲ್ಲಿ, ಕಂಡರಿಯಂದ, ಊಹಾತೀತವಾದ, ಹೊಸ ಹೊಸ ಯೋಜನೆಗಳು ಅಧಿಕ ಲಾಭಕರ, ಆಕರ್ಷಕ, ಯೋಜನೆಗಳು.

ಇಂದೇ ಭಾಗವಹಿಸಿ. ನೀವು ಚಂದಾ ಹಣ ಕಳುಹಿಸಿ.

ನಿಮ್ಮ ಸ್ನೇಹಿತರಿಗೂ ವಿಷಯ ಹಂಚಿ, ಸ್ವಂತ ಗ್ರಂಥಾಲಯ ಹೊಂದಲು ಒತ್ತಾಯ ಮಾಡಿ.

ನಿಮ್ಮ ಬಂಧುಗಳಿಗೆ ಉಡುಗೊರೆಯಾಗಿ ಕಳ್ಸಲು ನೀವು ಹಣ ಕಳುಹಿಸಿದರೆ ಅವರ ವಿಳಾಸಕ್ಕೆ ರಿಜಿಸ್ಟರ್ ಅಂಚೆಯಲ್ಲಿ ಕಳ್ಸುತ್ತೇವೆ. ನಿಮಗೆ ಸಂದ್ದಿಯನ್ನು ಮುಟ್ಟಿಸುತ್ತೇವೆ.

ಚಂದಾ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ.



ಸದಸ್ಯತ್ವ ಮಾಡಬಯಸುವ ಏಜಂಟರೂ
ವಿವರಗಳಿಗೆ ಇಂದೇ ಬರೆಯಿರಿ.

ವಿಳಾಸ : ವ್ಯವಸ್ಥಾಪಕರು

**ಮನೆಗೊಂದು ಪುಸ್ತಕ ಭಂಡಾರ**

ತಿಪಟೂರು.

**MANEGONDU PUSTAKA BHANDARA**

TIPTUR—MYSORE STATE

ಪ್ರಮುಖ ಪ್ರಕಾಶನ ಸಂಸ್ಥೆಯಾದ ಸಂದರ್ಶನ ಪ್ರಕಾಶನದ ಸಹಕಾರದಿಂದ ಈ ಯೋಜನೆಯನ್ನು ಯೋಜಿಸಲಾಗಿದೆ.